॥ ಶ್ರೀಃ ॥

# ಭಾರತೀಶ ವಿಲಾಸ

(ಗಿರಿ, ಗುರಿ ಗರಿಗಳು
ಭಾರವೇ ನಿನಗೆ ಭಾರತೀಶಾ)




ವ್ಯಾಖ್ಯಾನಕಾರರು
ಶ್ರೀ ಹರಿದಾಸ ಶಿರೋಮಣಿ
**ಶ್ರೀ ವಿದ್ವಾನ್ ಬಿ. ಸತ್ಯನಾರಾಯಣಾಚಾರ್ಯ**

ಶ್ರೀಸುಯಮಿ ರಾಘವೇಂದ್ರ
ಪ್ರಕಾಶನ ಸಂಖ್ಯೆ- 112

ಶ್ರೀಸುಶೀಲೇಂದ್ರ ವಿಜಯಮಾಲಾ
ಸಂಖ್ಯೆ- 102

**ಕಮಲೇಶಕುಸುಮ-92**

# ಭಾರತೀಶ ವಿಲಾಸ

ಗೌರವ ಸಂಪಾದಕರು

**ರಾಜಾ ಎಸ್. ರಾಜಗೋಪಾಲಾಚಾರ್ಯ**

**ಎಸ್. ಎನ್. ಸುಯಮೀಂದ್ರಾಚಾರ್ಯ**

ಗ್ರಂಥಕರ್ತರು - ವ್ಯಾಖ್ಯಾನಕಾರರು :
ಶ್ರೀಹರಿದಾಸ ಶಿರೋಮಣಿ, ಶ್ರೀ ವ್ಯಾಸದಾಸ ಸಾಹಿತ್ಯ ಭಾಸ್ಕರ,
ಕವಿ ಕುಲಭೂಷಣ

**ಶ್ರೀ ವಿದ್ವಾನ್ ಬಿ. ಸತ್ಯನಾರಾಯಣಾಚಾರ್ಯ(ಕರಿವರದ)**

ಪ್ರಕಾಶಕರು

**ಶ್ರೀ ಸುಯಮೀರಾಘವೇಂದ್ರ ಸಂಶೋಧನ ಕೇಂದ್ರ**

ಸಾಹಿತ್ಯ ಸಾಮ್ರಾಜ್ಯ ಪ್ರಕಾಶನ
ನಂಜನಗೂಡು, ಬೆಂಗಳೂರು
2014

ಗ್ರಂಥ : **ಭಾರತೀಶ ವಿಲಾಸ**

ಗ್ರಂಥಕರ್ತರು : **ಶ್ರೀ ವಿದ್ವಾನ್ ಬಿ. ಸತ್ಯನಾರಾಯಣಾಚಾರ್ಯ**

ಪ್ರಕಾಶಕರು : **ಶ್ರೀಸುಯಮಿರಾಘವೇಂದ್ರ ಸಂಶೋಧನ ಕೇಂದ್ರ**
'ಸಾಧನಾ', ನಂ. 213/ಡಿ, 2ನೇ 'ಬಿ' ಮುಖ್ಯರಸ್ತೆ
2ನೇ 'ಇ' ಅಡ್ಡರಸ್ತೆ, ಗಿರಿನಗರ ಮೊದಲನೆಯ ಹಂತ
ಬೆಂಗಳೂರು–560 085.
ಮೊ. : 99453 48633

ಹಕ್ಕುಗಳು : ಪ್ರಕಾಶಕರು

ಪುಟಗಳು : xv + 296

ಪ್ರಥಮ ಮುದ್ರಣ : 2014

ಬೆಲೆ : 200/– (ಇನ್ನೂರು ರೂಪಾಯಿಗಳು)

ಮುದ್ರಣ : ವಿ.ಎನ್. ಪ್ರಿಂಟರ್ಸ್
ಬೆಂಗಳೂರು

॥ ಶ್ರೀ ಮನ್ಮೂಲರಾಮೋವಿಜಯತೇ ॥ ॥ ಶ್ರೀ ಗುರುರಾಜೋವಿಜಯತೇ ॥

# ಅನುಗ್ರಹ ಸಂದೇಶ

ಶ್ರೀಮತ್ಪರಮಹಂಸೇತ್ಯಾದಿ ಬಿರುದಬೃಂದ ವಿಭೂಷಿತರಾದ ಹಂಸನಾಮಕ ಪ್ರವರ್ತಿತ
ಜ್ಞಾನಪೀಠಾಧ್ಯಕ್ಷರಾದ ಜಗದ್ಗುರು ಶ್ರೀಮನ್ಮಧ್ವಾಚಾರ್ಯರ
ಮೂಲಮಹಾಸಂಸ್ಥಾನಾಧೀಶ್ವರರಾದ ಶ್ರೀರಾಘವೇಂದ್ರಸ್ವಾಮಿಗಳವರ ಮಠದ
ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ 108 ಶ್ರೀ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ 108 ಶ್ರೀ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರಕರಾದ

ಪರಮಪೂಜ್ಯ

## ಶ್ರೀ ಶ್ರೀ 108 ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರು

ಹಾಗೂ

## ಶ್ರೀ ಶ್ರೀಪಾದಂಗಳವರ ವರಕುಮಾರಕ ಉತ್ತರಾಧಿಕಾರಿಗಳಾದ
## ಶ್ರೀ ಶ್ರೀ 108 ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು

ನಮ್ಮ ಪೂರ್ವಿಕ ಗುರುಗಳಾದ ಪರಮಪೂಜ್ಯ 108 ಶ್ರೀ ಶ್ರೀ ಸುಮಮೀಂದ್ರತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮ ಸತ್ಪುತ್ರರಾದ ರಾಜಾ. ಶ್ರೀ ಗುರುರಾಜಾಚಾರ್ಯರ ಮಕ್ಕಳಾದ ಸುಧೀಂದ್ರಾಚಾರ್ಯರಿಗೆ ಮಾಡುವ ನಾರಾಯಣ ಸ್ಮರಣೆಗಳು.

ಶ್ರೀ ಸುಯಮೀ ರಾಘವೇಂದ್ರ ಸಂಶೋಧನ ಕೇಂದ್ರದ ದ್ವಾರ ಈಗಾಗಲೇ ಶ್ರೀಮನ್ಮಧ್ವ ಸಿದ್ಧಾಂತದ ಅನೇಕ ಸದ್ಗ್ರಂಥಗಳನ್ನು ಸಾರಸ್ವತ ಲೋಕಕ್ಕೆ ತಲುಪಿಸಿ ವಿದ್ವಜ್ಜನರಿಗೆ ಉಪಯುಕ್ತವಾಗುವುದಕ್ಕೆ ಕಾರಣರಾಗಿದ್ದೀರಿ.

ಪ್ರಕೃತ ನಿಮ್ಮ ಸಂಸ್ಥೆಯ ವತಿಯಿಂದ ನೀವು ಕೈಗೊಂಡಿರುವ ವಿದ್ವಾನ್ ಬಿ. ಸತ್ಯನಾರಾಯಣಾಚಾರ್ಯರು ರಚಿಸಿರುವ ಶ್ರೀ ಹನುಮ, ಭೀಮ, ಮಧ್ವಾತ್ಮಕ, ಶ್ರೀ ಮುಖ್ಯಪ್ರಾಣದೇವರ ಅಗಮ್ಯ ಮಹಿಮೆಗಳನ್ನು ನಿರೂಪಿಸುವ ಶ್ರೀ ಭಾರತೀಶ ವಿಲಾಸ ಎಂಬ ಕೃತಿಯನ್ನು ಪ್ರಕಾಶನಗೊಳಿಸುತ್ತಿರುವುದು ಅತ್ಯಂತ ಸಂತೋಷದ ವಿಷಯವಾಗಿದೆ. ಸದಾಕಾಲವೂ ಸಾರಸ್ವತಲೋಕದ ಸಾರ್ಥಕ ಸೇವೆಯಲ್ಲಿ ತಮ್ಮನ್ನು ತೊಡಗಿಸಿ ಕೊಂಡಿರುವ ವಿದ್ವಾನ್ ಶ್ರೀ ಬಿ. ಸತ್ಯನಾರಾಯಣಾಚಾರ್ಯರ ಲೇಖನಿಯಿಂದ ಮುಂದೆಯೂ ಇನ್ನೂ ಅನೇಕ ಸದ್ಗ್ರಂಥಗಳು ಹೊರಬರಲಿ ಎಂಬ ಶುಭ ಹಾರೈಕೆಯೊಂದಿಗೆ ಈ ಗ್ರಂಥದ ಪ್ರಕಾಶನ ಕಾರ್ಯವು ಅತ್ಯಂತ ಯಶಸ್ವಿಯಾಗಿ ಮುಂದೆಯೂ ನಿಮ್ಮಿಂದ ಶ್ರೀ ಮನ್ಮಧ್ವಸಿದ್ಧಾಂತದ ಸದ್ಗ್ರಂಥಗಳ ಪ್ರಕಾಶನ ಕಾರ್ಯವು ಅವಿರತವಾಗಿ ಮುಂದುವರಿಸಿ ಕೊಂಡು ಬರುವಂತೆ ಅನುಗ್ರಹಿಸಲಿ ಎಂದು ಅಸ್ಮದುಪಾಸ್ಯ ಮೂರ್ತಿಯಾದ ಶ್ರೀ ಮೂಲ-ರಘುಪತಿವೇದವ್ಯಾಸದೇವರು ತಥಾ ಶ್ರೀಗುರುರಾಜರಲ್ಲಿ ಪ್ರಾರ್ಥಿಸಿ ಫಲಮಂತ್ರಾಕ್ಷತೆಯನ್ನು ಅನುಗ್ರಹಿಸಿ ಆಶೀರ್ವದಿಸಿದ್ದೇವೆ.

**ಇತಿ ನಾರಾಯಣ ಸ್ಮರಣೆಗಳು**

# ಗ್ರಂಥ ಸಮರ್ಪಣೆ

ಶ್ರೀ ಭಾರತೀಶ ವಿಲಾಸ
ಎಂಬ ಗ್ರಂಥರತ್ನವನ್ನು ಶ್ರೀಕ್ಷೇತ್ರ ಮಂತ್ರಾಲಯದಲ್ಲಿ
ಶ್ರೀಮನ್ಮಧ್ವನವಮಿ ಮಂಗಳ ಮಹೋತ್ಸವದ ಸಂಸ್ಮರಣಾರ್ಥವಾಗಿ
ಶ್ರೀ ಸುಯಮೀಂದ್ರಗುರ್ವಂತರ್ಗತ
ಶ್ರೀ ರಾಘವೇಂದ್ರತೀರ್ಥ ಗುರುಸಾರ್ವಭೌಮಾಂತರ್ಗತ
ಶ್ರೀ ಭಾರತಿ ರಮಣ ಮುಖ್ಯ ಪ್ರಾಣಾಂತರ್ಗತ
ಸೀತಾಪತಿ ಶ್ರೀ ಮೂಲರಾಮಚಂದ್ರಾಭಿನ್ನ ಕುಲಸ್ವಾಮಿ
ಪದ್ಮಾವತೀ ಸಮೇತ ಶ್ರೀ ಲಕ್ಷ್ಮೀವೇಂಕಟೇಶ್ವರ ದೇವರ
ಪರಮ ಪಾವನ ಚರಣ ಕಮಲಗಳಿಗೆ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರು
ಹಾಗೂ ಪರಮ ಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು
ಇವರ ಅಮೃತ ಹಸ್ತಗಳಿಂದ
ಸದ್ಭಕ್ತಿ, ಶ್ರದ್ಧಾದರ ನಮನ ಪೂರ್ವಕವಾಗಿ ಸಮರ್ಪಿಸಿ
ಪ್ರಕಾಶಿಸಲ್ಪಟ್ಟಿದೆ.

**ಶ್ರೀ ಮನ್ಮಧ್ವನವಮಿ** **– ರಾಘವೇಂದ್ರವಂಶಿ**
**ಮಂತ್ರಾಲಯ**
ತಾ॥ 08-02-2014

# ಕೃತಜ್ಞತಾ

ಶ್ರೀ ಸುಯಮೀ ರಾಘವೇಂದ್ರ ಸಂಶೋಧನ ಕೇಂದ್ರವು ಶ್ರೀ ಹರಿವಾಯು ರಾಘವೇಂದ್ರ ಗುರು ಸಾರ್ವಭೌಮರ ಪರಮಾನುಗ್ರಹ ಹಾಗೂ ಸಂಸ್ಥೆಯ ಸಾಮ್ರಾಟ್ ಪೋಷಕರುಗಳಾದ ಶ್ರೀಸುಯಮೀಂದ್ರ–ಶ್ರೀಸುಜಯೀಂದ್ರ–ಶ್ರೀಸುಶಮೀಂದ್ರತೀರ್ಥರು ಹಾಗೂ ಅಧುನಾ ಪೀಠವಿರಾಜ ಮಾನರಾದ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರು ಮತ್ತು ಶ್ರೀಶ್ರೀಪಾದಂಗಳವರ ವರಕುಮಾರಕ ಉತ್ತರಾಧಿಕಾರಿಗಳಾದ ಶ್ರೀ ಸುಬುಧೇಂದ್ರ ತೀರ್ಥ ಶ್ರೀಪಾದಂಗಳವರ ಆಶೀರ್ವಾದದ ರಕ್ಷಾಕವಚದ ಬಲದಿಂದ ಶ್ರೀ ಮನ್ಮಧ್ವ ಸಿದ್ಧಾಂತದ ಅನೇಕ ಅಪೂರ್ವ ಅಪ್ರಕಟಿತ ಸದ್ಗ್ರಂಥಗಳನ್ನು ಸಾರಸ್ವತ ಲೋಕಕ್ಕೆ ಪ್ರಕಾಶನಗೊಳಿಸುವ ಮೂಲಕ ತತ್ವಜ್ಞಾನ ಸೇವೆಯಲ್ಲಿ ನಿರಂತರವಾಗಿ ಉದ್ಯುಕ್ತ ವಾಗಿದೆ ಎಂದು ತಿಳಿಸಲು ಹರ್ಷಿಸುತ್ತೇವೆ. ಇಂತಹ ಒಂದು ಜ್ಞಾನಕಾರ್ಯವು ಯಶಸ್ವಿಯಾಗುವುದಕ್ಕೆ ಕಾರಣರಾದ ಶ್ರೀ ಹರಿ ವಾಯು ರಾಘವೇಂದ್ರಗುರುಗಳು ಮತ್ತು ಪೂಜ್ಯ ಶ್ರೀಪಾದಂಗಳವರುಗಳಿಗೆ ನಮ್ಮ ಭಕ್ತಿಪೂರ್ವಕ ವಾದ ಶಿರಃಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇವೆ.

ಗ್ರಂಥಕ್ಕೆ ಅಮೂಲ್ಯವಾದ ಅನುಗ್ರಹ ಸಂದೇಶವನ್ನು ಕರುಣಿಸಿ ಪರಮಾನುಗ್ರಹ ಮಾಡುವುದ ರೊಂದಿಗೆ ಗ್ರಂಥವನ್ನು ಪ್ರಕಾಶನಗೊಳಿಸಿದ ಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರು ಹಾಗೂ ಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರಿಗೆ ನಮ್ಮ ಶಿರಃಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇವೆ.

ನಮ್ಮ ಎಲ್ಲಾ ಜ್ಞಾನಕಾರ್ಯಗಳಿಗೆ ಸರ್ವ ರೀತಿಯ ಸಹಾಯ ಸಹಕಾರಗಳನ್ನು ಒದಗಿಸಿ ಪ್ರೋತ್ಸಾಹಿ ಸುತ್ತಿರುವ ಸಂಸ್ಥೆಯ ರಾಜಪೋಷಕರುಗಳಾದ ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರು ಮತ್ತು ಶ್ರೀ ಎಸ್.ಎನ್. ಸುಯಮೀಂದ್ರಾಚಾರ್ಯರುಗಳಿಗೆ ನಮ್ಮ ಕೃತಜ್ಞತೆಯ ಧನ್ಯವಾದಗಳನ್ನು ಸಲ್ಲಿಸುತ್ತೇವೆ.

ಶ್ರೀ ಹನುಮ – ಭೀಮ – ಮಧ್ವಾತ್ಮಕ ಶ್ರೀ ಮುಖ್ಯಪ್ರಾಣದೇವರ ಅಗಮ್ಯ ಮಹಿಮೆಗಳನ್ನು ನಿರೂಪಿಸುವ ಅಪೂರ್ವ ಗ್ರಂಥವನ್ನು ಕೊಡುಗೆಯಾಗಿ ನೀಡಿರುವ ವ್ಯಾಸದಾಸ ಸಾಹಿತ್ಯದಲ್ಲಿ ಆಳವಾದ ಜ್ಞಾನವನ್ನು ಸಂಪಾದಿಸಿರುವ ಮತ್ತು ನಮ್ಮ ಸಂಸ್ಥೆಯ ವತಿಯಿಂದ ಗ್ರಂಥವನ್ನು ಪ್ರಕಟಿಸಲು ಅನುಮತಿ ಯನ್ನು ನೀಡಿದ ವಿದ್ವಾನ್ ಬಿ. ಸತ್ಯನಾರಾಯಣಾಚಾರ್ಯರಿಗೆ ನಮ್ಮ ವಿಶೇಷ ಕೃತಜ್ಞತೆಯನ್ನು ತಿಳಿಸುತ್ತೇವೆ.

ಈ ಗ್ರಂಥಕ್ಕೆ ಶ್ರೀ ಚತುರ್ವೇದಿ ಟೆಕ್ನಾಲಜೀಸ್‌ನ ಮಾಲೀಕರಾದ ಶ್ರೀಯುತ ಶ್ರೀನಿವಾಸ ಚತುರ್ವೇದಿಯವರು ವಿಶೇಷವಾಗಿ ಸಹಾಯ ಮಾಡಿದ್ದಾರೆ ಮತ್ತು ಶ್ರೀಯುತ ಅನಿಲ್ ಚಿನ್ನ ಭಂಡಾರ್ ರವರು ತಮ್ಮ ತೀರ್ಥರೂಪರಾದ ಮಾತಾ–ಪಿತೃಗಳ ಸವಿನೆನಪಿಗಾಗಿ ಈ ಗ್ರಂಥವನ್ನು ಪ್ರಕಟಿಸಬೇಕೆಂದು ಸಹಾಯ ಒದಗಿಸಿದ್ದಾರೆ. ಇವರೆಲ್ಲರಿಗೂ ಶ್ರೀಹರಿ–ವಾಯು–ರಾಘವೇಂದ್ರ ಗುರುಗಳು ಸನ್ಮಂಗಳವನ್ನು ಕರುಣಿಸಲಿ ಎಂದು ಶ್ರೀರಾಯರಲ್ಲಿ ಪ್ರಾರ್ಥಿಸಿ ನಮ್ಮ ಧನ್ಯವಾದಗಳನ್ನು ತಿಳಿಸುತ್ತೇವೆ.

ಗ್ರಂಥ ಪ್ರಕಾಶನ ಸಮಯದಲ್ಲಿ ನಮ್ಮೊಂದಿಗಿದ್ದು ನಮ್ಮನ್ನು ಹುರಿದುಂಬಿಸಿ ಪ್ರೋತ್ಸಾಹಿಸಿದ ನಮ್ಮ ಹಿರಿಯರು ಕಿರಿಯರಾದಿಯಾಗಿ ಎಲ್ಲಾ ಬಂಧು ಬಾಂಧವರಿಗೆ ಆಭಾರಿಗಳಾಗಿದ್ದೇವೆ.

ಗ್ರಂಥದ ಮುಖಪುಟ ವಿನ್ಯಾಸಗಾರ ಶ್ರೀ ಗುರು, ಅಂದವಾಗಿ ಮುದ್ರಿಸಿಕೊಟ್ಟ ವಿ.ಎಸ್. ಪ್ರಿಂಟರ್ಸ್‌ನ ಶ್ರೀ ಚಲಪತಿ ಇವರೆಲ್ಲರಿಗೂ ಧನ್ಯವಾದಗಳು.

– ರಾಘವೇಂದ್ರವಂಶಿ

# ಮುನ್ನುಡಿ

**ಹರೇರ್ನಾಮೈ ನಾಮೈವ । ನಾಮೈವ ಮಮ ಜೀವನಂ ॥1॥**
**ಕಲೌ ನಾಸ್ತೇವ ನಾಸ್ತೇವ । ನಾಸ್ತೇವ ಗತಿರನ್ಯಥಾ ॥**
**ಕಲುಷ ಚಿತ್ತಾನಾಂ । ಪಾಪ ದ್ರವ್ಯೋಪ ಜೀವನಂ ॥**
**ವಿಧಿ ಕರ್ಮ ವಿಹೀನಾನಾಂ । ಗತಿರ್ಗೋವಿಂದ ಕೀರ್ತನಂ ॥**

ಹೀಗೆ ಕಲಿಯುಗದಲ್ಲಿ ನಿರೂಪಿತವಾಗಿರುವ ಸಾಧನ ಮಾರ್ಗವು ನಾವು ಎಷ್ಟೇ ವಿಧವಾದ ಧರ್ಮಕರ್ಮಗಳನ್ನು ಹರಡಿಕೊಂಡರೂ ಲೋಪವಿಲ್ಲದೆ ಕರ್ಮಕಾಂಡಗಳನ್ನು ನಡೆಸಿಕೊಂಡು ಹೋಗುವುದು ದುಸ್ತರವೇ. ಏನು ಮಾಡಿದರೂ ಒಂದು ಪ್ರಾರ್ಥನೆಯನ್ನಂತೂ ಮಾಡಲೇಬೇಕು. "ನ್ಯೂನಂ ಸಂಪೂರ್ಣತಾಂಯಾತಿ । ಸ್ತದ್ಯೋವಂದೇ ತಮಚ್ಯುತಂ.. ॥ ಯತ್ಕೃತಂತುಮಯಾ ದೇವಂ । ಪರಿಪೂರ್ಣ ತದಸ್ತುಮೇ ॥" ಎಂದು ಭಗವಂತನನ್ನು ಪ್ರಾರ್ಥಿಸಬೇಕು.

ಭಗವಂತನನ್ನು ಸಾಕಲ್ಯೇನ ಕೊಂಡಾಡಲು ರಮಾ ಬ್ರಹ್ಮಾದಿಗಳಿಗೂ ಸಾಧ್ಯವಿಲ್ಲ. ಆದರೆ ಕರುಣಾಮೂರ್ತಿಯಾದ ಶ್ರೀಹರಿಯು ತಾನೇ ಸಂಕುಚಿತನಾಗಿ ಭಕ್ತರ ಮತಿ ಪ್ರಮಾಣಕ್ಕೆ ಪ್ರಾಪ್ತನಾಗುತ್ತಾನೆ." ವ್ಯಾಪಕ ಪರಿ ಚ್ಛನ್ನರೂ ಪದಿತೋರ್ದ ಲೋಕರಿಗೆ" ಎಂದರು ಶ್ರೀ ಜಗನ್ನಾಥ ದಾಸರು.

ಒಂದು ಬ್ರಹ್ಮಾಂಡದಲ್ಲಿ ವ್ಯಾಪ್ತನಾದ ಶ್ರೀಹರಿಗೆ ಸಾದೃಶನಾಗಿ ಬ್ರಹ್ಮಾಂಡ ವಿಗ್ರಹನೆಂದು ಕರೆಸಿರುವ ವಾಯು ದೇವನ ಸ್ಮರಣೆಯು ಶ್ರೀ ಹರಿಯ ಪ್ರೀತಿಗೆ ಕಾರಣವಾಗುತ್ತದೆ. ಶ್ರೀ ವಾಯು ಸ್ಮರಣೆ ರಹಿತವಾದ ಶ್ರೀ ಹರಿಯ ಸೇವೆಯನ್ನು ಶ್ರೀ ಹರಿಯು ಸ್ವೀಕರಿಸುವುದಿಲ್ಲ. ಶ್ರೀಹರಿಯನ್ನು ಮರೆತರೂ, ಶ್ರೀ ವಾಯುವನ್ನು ಸ್ಮರಿಸಿದರೆ ಶ್ರೀವಾಯುವು ತಪ್ಪದೇ ಶ್ರೀ ಹರಿಯ ಜ್ಞಾನವನ್ನು ನೀಡುತ್ತಾನೆ. ಶ್ರೀಹರಿಯ ಬಂಟನೆಂದು ಶ್ರೀವಾಯುವನ್ನು ಸುತ್ತಿಸಿದರೆ ಶ್ರೀ ಹರಿ ವಾಯುಗಳನ್ನು ಸ್ತುತಿಸಿದಂತೆಯೇ ಆಗುತ್ತದೆ.

ಈ ನಿಟ್ಟಿನಲ್ಲಿ ಶ್ರೀ ಹರಿವಾಯುಗಳ ಪ್ರೇರಣೆಯಂತೆ "ಭಾರತೀಶ ವಿಲಾಸ" ವೆಂಬ ಐವತ್ತೊಂದು ನುಡಿಗಳಿಂದ ಯುಕ್ತವಾದ ಈ ಅಕ್ಷರ ಮಾಲಿಕಾ ಸ್ತೋತ್ರವನ್ನು ಬರೆದಿಟ್ಟುಕೊಂಡಿದ್ದೆ. ಇದನ್ನು ಗಮನಿಸಿದ ಪೂಜ್ಯರಾದ ವಿದ್ವಾನ್ ವೇ॥ ಶ್ರೀ ರಾಜಾ ಎಸ್.ಸುಧೀಂದ್ರಾಚಾರ್ಯರು ಹಾಗೂ ಪರಮಪೂಜ್ಯ ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳಾದ ಶ್ರೀ ವೇ॥ ಶ್ರೀ ರಾಜಾ ಎಸ್. ರಾಜ ಗೋಪಾಲಾಚಾರ್ಯರು, ಹಾಗೂ ಶ್ರೀ ಶ್ರೀಗಳದರ ಹೆಚ್ಚುವರಿ ಕಾರ್ಯದರ್ಶಿಗಳಾದ ವೇ॥ ಶ್ರೀರಾಜ ಎಸ್. ಸುಯಮೀಂಪ್ರಾಚಾರ್ಯರ ಗಮನಕ್ಕೂ ತಂದರು. ಈ ಕೃತಿಯ ಬಗ್ಗೆ ಸಂತುಷ್ಟರಾಗಿ ಈ ಆಚಾರ್ಯತ್ರಯರು ಇದನ್ನು ವ್ಯಾಖ್ಯಾನದೊಂದಿಗೆ ಪ್ರಕಟಿಸಲು ಇಷ್ಟಪಟ್ಟುದರ ಫಲವೇ ಈ ಗ್ರಂಥದ ರಹಸ್ಯದ ಬಯಲು. ಈ ಮಹನೀಯರ ಅಭಿಮಾನ ಆಶೀರ್ವಾದಗಳಿಂದ ಇವರ ಮುಖಾಂತರವಾಗಿಯೇ ನನ್ನ ಇತರ ಆರು ಪುಸ್ತಕಗಳು ಪ್ರಕಾಶನವನ್ನು ಕಂಡಿರುತ್ತವೆ.

ಅಪರೋಕ್ಷ ಜ್ಞಾನಿಗಳ ಕೃತಿಗಳನ್ನು ಮಾತ್ರ ಹಾಡಬೇಕು ಎನ್ನುತ್ತಾರೆ. ಕಾರಣ ಇಷ್ಟೆ ಅವರ ಕೃತಿಗಳಲ್ಲಿ ತಪ್ಪುಗಳಿರುವದಿಲ್ಲ, ವ್ಯಾಕರಣ, ಸಿದ್ಧಾಂತ, ಛಂದಸ್ಸು ರಾಗ, ತಾಳಗಳ ನಿರ್ಬಂಧಗಳು ಅತಿಮುಖ್ಯ. ಕಾರ್ಪಣ್ಯಗಳಿಗೆ ಇಲ್ಲಿ ಆಸ್ಪದವು ಇಲ್ಲವೇ ಇಲ್ಲ, ಸ್ವೇಚ್ಛೆಯಾಗಿ ಗೀಚಿದ ಕೃತಿಗಳೇ ವಿದ್ವಾಂಸರ ಅವಹೇಳನಕ್ಕೆ ಕಾರಣವಾಗುತ್ತವೆ. ಆದರೆ ನಿಯಮಾನುಸಾರವಾಗಿ ದೀಕ್ಷಾಬದ್ಧನಾಗಿ ಕೃತಿಗಳನ್ನು ರಚಿಸಬೇಕೆಂದು ಶ್ರೀ ವಿಜಯದಾಸರು ಸಾರಿರುತ್ತಾರೆ. ಪ್ರಾಸಬದ್ಧವಾದ ಕೃತಿಗಳನ್ನು ರಚಿಸಿದರೆ ಶಬ್ದ ಭಂಡಾರವು ವೃದ್ಧಿಸುತ್ತದೆ. ಗಾಯಿತ್ರಿಯನ್ನು ಆಶ್ರೈಸಿಕೊಂಡೇ ಇರುವ ಬ್ರಾಹ್ಮಣರು ಗ್ರಂಥ ರಚನೆಗೆ ಅಧಿಕಾರಿಗಳೇ ಆಗಿದ್ದಾರೆ. ಅದು ಅವರ ಕರ್ತವ್ಯವೂ ಹೌದು. ವರ್ತಮಾನ ಕಾಲದ ಗುರುಗಳ ಗುಣಗಾನವನ್ನು ವರ್ತಮಾನ ಕಾಲದವರಲ್ಲದೆ ಮತ್ಯಾರು ತಾನೇ ಮಾಡುತ್ತಾರೆ? ಶ್ರೀ ಪುರಂದರ ದಾಸರಾದಿಯಾಗಿ ಯಾರನ್ನೂ ಅವರ ಕಾಲದ ಜನರು ಅವರನ್ನು ಅಪರೋಕ್ಷ ಜ್ಞಾನಿಗಳೆಂದು ಕರೆಯಲಿಲ್ಲ, ಕಾಲವೇ ಅವರಿಗೆ ಆ ಪಟ್ಟವನ್ನು ಕಟ್ಟಿತು. ಪರಮಪೂಜ್ಯ ಶ್ರೀ ಶ್ರೀ 1008 ಶ್ರೀ ವಿದ್ಯಾ ಪಯೋಧಿ ತೀರ್ಥ ಶ್ರೀ ಪಾದಂಗಳವರು ಅನುಗ್ರಹಿಸಿ ನೀಡಿದ "ಕರಿವರದ" ಅಂಕಿತದಿಂದ ರಚಿಸಿರುವ ಹಲವಾರು ದೇವರನಾಮಗಳ ಮಧ್ಯದಲ್ಲಿ "ಶ್ರೀ ಭಾರತೀಶ ವಿಲಾಸ" ಎಂಬ ಈ ಕೃತಿಯೂ ಒಂದು. ಇದರ ವ್ಯಾಖ್ಯಾನವೇ ಈ ಗ್ರಂಥ.

ನನ್ನ ಈ ಗ್ರಂಥದ ಬಗ್ಗೆ ನಾನು ಏನನ್ನೂ ಹೇಳಲಾರೆ, ಏನನ್ನಾದರೂ ಹೇಳುವುದಿದ್ದರೆ ಅದನ್ನು ವಾಚಕ ಮಹನೀಯರೇ ಹೇಳಬೇಕು.

ನನ್ನ ಸಕಲ ಕೃತಿಗಳನ್ನು ಪ್ರಕಟಿಸುವಾಗ ಪರಮಾನುಗ್ರಹ ಪೂರ್ವಕವಾಗಿ ಆಶೀರ್ವಚನಗಳನ್ನು ನೀಡುತ್ತಾ ಬಂದು ಉದ್ಧರಿಸುತ್ತಿರುವ ಶ್ರೀ ಶ್ರೀ ಸುಶಮೀಂದ್ರ ತೀರ್ಥ ಶ್ರೀಪಾದಂಗಳವರ ಸ್ಮರಣ ಪೂರ್ವಕವಾಗಿ ಅದೇ ರೀತಿಯಾಗಿ ಹರಿಸಿ ಅನುಗ್ರಹಿಸುತ್ತಿರುವ ಶ್ರೀ ಶ್ರೀ 1008 ಶ್ರೀ ಸುಯತೀಂದ್ರ ತೀರ್ಥ ಶ್ರೀಪಾದಂಗಳವರ ಹಾಗೂ ಅವರ ಕರಕಮಲ ಸಂಜಾತರಾದ ಶ್ರೀ ಶ್ರೀ 1008 ಶ್ರೀ ಸುಬುಧೇಂದ್ರ ತೀರ್ಥ ಶ್ರೀ ಪಾದಂಗಳವರ ಅಡಿದಾವರೆಗಳಿಗೆ ಸಾಸ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಈ ಗ್ರಂಥವನ್ನು ಪ್ರಕಾಶಗೈದ ಪೂರ್ವೋಕ್ತ ಆಚಾರ್ಯತ್ರಯರಿಗೆ, ನಾನು ಪ್ರಮಾಣಗಳನ್ನು ಅರ್ಪಿಸುತ್ತೇನೆ. ಕೊನೆಯದಾಗಿ ಸಾಧನ ಶರೀರ ದಾತೃಗಳಾದ ಶ್ರೀ ಗಿರಿಪುರದ ಜೋಡೀದಾರ ದಂಪತಿಗಳಾದ ದಿ॥ ಶ್ರೀ ರಾಘವೇಂದ್ರಾಚಾರ್ಯ ಹಾಗೂ ಕಮಲಮ್ಮನವರ ಅಡಿಗಳಿಗೆ ಎರಗಿ ಭಕ್ತಸಜ್ಜನಸಂದೋಹಕ್ಕೆ ನನ್ನ ಭಕ್ತಿ ಕುಸುಮಾಂಜಲಿಗನ್ನು ಅರ್ಪಿಸುತ್ತೇನೆ.

ಸಜ್ಜನ ವಿಧೇಯ -

**ಬಿ. ಸತ್ಯನಾರಾಯಣಾಚಾರ್ಯ**

**"ಕರಿವರದ"**

ನಂ 58 ಟಿ.ಪಿ ವೇಣುಗೋಪಾಲ ಲೇಔಟ್

ಆನಂದ ನಗರ ಬೆಂಗಳೂರು - 560 024

**ದೂ. : 080-32712716**

**ಮೊ. : 9620869220**

# ಅನುಕ್ರಮಣಿಕಾ ಪದ್ಯಗಳು

॥ ಪದ ॥ ಸುರರೆಲ್ಲರು ಸೇರಿ। ಶಿರಬಾಗಿದಲ್ಲದೆ ।
ವರವನಿತ್ತರೆ ಇಲ್ಲ । ಪೊರೆ ಎಂದುಲಿದರು॥
ಕುರುಡನು ಇವನೆಂದು। ಸುರವೈರಿಗಳು ತಿಳಿಯೆ ।
ತರುಚರವರನಾದ। ಧರೆಯೊಳು ಮೆರೆಯುತ ॥ ೭ ॥ ೧೭

॥ ಪದ ॥ ನರನವನಾಗೆ ವಾ। ನರ ನಿವನಾಗುತ।
ಉರದೊಳಿಟ್ಟುಕೊಂಡು । ಅರಸುತ ಬಂದು॥
ಚರಣಕೆರಗಿ ಹರಿಯ। ಹರಿಜಗೆ ತೋರಿಸಿ।
ಹರಿಜನ ಭಂಗಿಸಿ। ಶಿರಿವಂತನನು ಮಾಡಿ ॥ ೮ ॥ ೨೦

॥ ಪದ ॥ ಇಂದ್ರಜನಾऽವೇಶ । ದಿಂದ ನಿನ್ನನು ಬಿಡೆ ।
ಇಂದ್ರಾऽವರಜನು । ಹಿಂದಕೆ ಸರಿದ ॥
ಮಂದಸ್ಮಿತನಿಗೆ । ಮಂದಿ ಸಹಾಯ ಬೇಕೆ ।
ಮಂದರ ಮೋಹಿಸಿ। ದಂದದಿ ಚರಿಸುತ ॥ ೯ ॥ ೨೬

॥ ಪದ ॥ ಸಾವಿರ ಸಿಂಧುಭುಕ್। ಸಾವಿರೊಂದಕೆ ಸಲ್ಲ।
ಯಾವ ಜಲಧಿಯದೋ। ದೇವಗೆ ಮೀರಿದ್ದು॥
ಕಾವರ ಕಾವರ। ಕಾವರ ಸದೆಯುತ।
ಮ್ಯಾವ್ಮರಿಯಂದದಿ। ತಾ ಪೊಳ ಪೊಕ್ಕು ॥ ೧೦ ॥ ೩೩

॥ ಪದ ॥ ಅರಿಗಳ ವರ್ಗಕೆ। ಅರಿಯದವಾನಂತೆ।
ಚರಿಸಿದ ಪುರದೊಳು। ಎರಡೊಂದು ಬಾರಿ ॥
ಸರಸಿಜ ಜಾಂಡವ। ಕರದಲಿ ಕಾಂಬುವ ।
ನರಸಿದನೇಕೋ। ಇರುಳಲಿ ಸೀತೆಯ ॥ ೧೧ ॥ ೩೬

॥ ಪದ ॥ ತಾತನ ಸ್ಮರಿಸುತ। ವಾತಾಯನದಿಂದ।
ಮಾತೆ ಇದ್ದಲ್ಲಿಗೆ ಪೋಗಿ। ತಾತರುವಡರಿಸಿ ॥
ನಾಥನ ಮುದ್ರಿಕೆ । ಸೀತಾऽಕೃತಿಗಿತ್ತು॥
ಭೂತಗಣಕೆ ಅದು। ಭೂತನು ತಾನಾಗಿ ॥ ೧೨ ॥ ೩೭

॥ ಪದ ॥ ನಾಮ ಮಾತ್ರಕೆ ದೈತ್ಯ। ಸ್ತೋಮವಳಿಯುತಿರೆ ।
ತಾಮರಗಳ ಕಿತ್ತಿ। ಗುಮ್ಮಲು ಬೇಕೇ ॥
ಮಾರ್ಮಲೆತಕ್ಷನ। ಮರ್ಮ ಭೇದಿಸಿ ಸು ।
ತ್ರಾಮಾರಿ ಶರವ ವಿ । ರಾಮವಗೊಳಿಸುತ ॥ ೧೩ ॥ ೪೦

॥ ಪದ ॥ ಗರುಡ ಭವಾದಿಗಳು। ಅರಿಯದ ಮಹಿಮನು।
ಎರಡೈದು ಶಿರನಿಗೆ। ತೋರಿದನೇಕೋ ॥
ಉರಿಯಿತೆ ವೈಶ್ವಾ । ನರನಿಂದ ಲಂಕೆಯು ।
ಉರಿಸಿದ ಹನುಮನು । ಮರೆಯದೆ ತೇಜದಿ ॥ ೧೪ ॥ ೪೪

॥ ಪದ ॥ ನಿತ್ಯಾಽವಿಯೋಗಿಯೆಂದು । ಭಕ್ತಿಲಿ ತುತಿಪನು ॥
ನೆತ್ತಿ ಭೂಷಣವೆಂತು । ಇತ್ತನೋ ಕಾಣೆ ॥
ಅತ್ತಂತೆ ನಟಿಸಿದ । ನಿತ್ಯಾಽನಂದಾತ್ಮಗೆ ।
ಇತ್ತಮತೆ ನಟಿಸಿದ । ಭೃತ್ಯ ಶೀರೋಮಣಿ ॥ ೧೫ ॥ ೪೬

॥ ಪದ ॥ ಶರಧಿ ಎಂದರೆ ಏನೋ। ಗಿರಿ ಗುಂಡು ಎಂದರೇನೋ ।
ಎರಡೇಳು ಲೋಕವ ಧರಿಸಿದ ಕೂರ್ಮಗೆ ॥
ಧರೆಯೊಳೆಲ್ಲರ ನಿತ್ಯ । ಪೊರಯುತಲಿಹಾಽನಿಲ ।
ಧುರದೊಳು ಗಿರಿ ತಂದು । ಇರಿಸಿದನೇಕೋ ॥ ೧೬ ॥ ೪೭

॥ ಪದ ॥ ಮುತ್ತು ಮಾಣಿಕ್ಯ ಬಿಟ್ಟು । ಒತ್ತಿದ ಪಾದವ ।
ಉತ್ಸಾಹವೆಂಬುದುಂಟೆ । ಸತ್ಯಾಧಿಪತ್ಯಕೆ ॥
ಮುಕ್ತಿ ಯೋಗ್ಯಗೆ ಸಂ । ಪತ್ತನೆ ಪಾಲಿಸಿ ।
ಹತ್ತಿಲಿರುವೆನೆಂದು । ಎತ್ತುತ ಹಸ್ತವ ॥ ೧೭ ॥ ೫೧

॥ ಪದ ॥ ಗರ್ಭಸ್ಥ ಜೀವರ। ನಿರ್ಭಯದಿ ಸಲಹುವ ।
ಉದ್ಭವಸಿದ ಕುಂತಿ । ಗರ್ಭದಲೆಂತೋ ॥
ಬರ್ಬರಗೊಳಿಸುವ । ಕಾರ್ಬೊಗೆಯುಂಡವ ।
ದುರ್ಬುದ್ಧಿ ಇಟ್ಟ ಗರಕೆ । ಮಬ್ಬುಗೊಂಡದ್ದೇಕೋ ॥ ೧೮ ॥ ೫೫

॥ ಪದ ॥ ಬಲ್ಲಿದ ಲೋಕಾಂತ। ದಳ್ಳುರಿ ಎನಿಪಗೆ।
ಕೊಳ್ಳಿ ಬೇಕಾಯಿತೆ । ಕಳ್ಳರ ದಹಿಸಲು॥
ಡೊಳ್ಳೊಡಲೊಳು ಹೆ । ಬೆಳ್ಳಷ್ಟು ಧರಿಸಿಹ ।
ಎಳ್ಳಷ್ಟೆ ನಿಸದೆ । ಬಳ್ಳ ಬಳ್ಳೋದನ ॥ ೧೯ ॥ ೬೧

॥ ಪದ ॥ ಯಾವ ಬಕಾಸುರನ । ತಾ ಪುಡುಗಿಸಿದನೊ ।
ಆವನಿವನಿಗೀಡು । ಭಾವಿಸಿ ನೋಡಲು ॥
ಪಾವನ ಮಾಡಿದ । ಪಾರ್ವನ ಕುಲವನು ।
ತಾ ವರನೆನಿಸುತ । ಪಾವಕ ಜಾತಗೆ ॥ ೨೦ ॥ ೬೦

॥ ಪದ ॥ ಕುಳಿತೆವೆ ಇಕ್ಕಲು। ಅಳಿವುದು ಜಗತ್ರಯ ।
ಖಳನೊಳು ಕಾದೂ । ಬಳಲಿದನೇಕೋ ॥
ಇಳೆಯಾಣ್ಮಾಸೂಯಕೆ । ನಳಿನಾಕ್ಷನಿರುತಿರೆ ।
ಹಳೆಯ ರೂಪಕೆ ನಮಿಸಿ । ಎಳೆತಂದನೇಕೋ ॥ ೨೧ ॥ ೭೯

॥ ಪದ ॥ ಲಕ್ಷ ಮಂತ್ರಾದಿಂದ । ತ್ರ್ಯಕ್ಷ ಪೂಜಿತನಾಗಿ ।
ಅಕ್ಷ ಹೃದಯ ಉಪೇಕ್ಷಿಸಿದ್ದೇಕೋ ॥
ಶಿಕ್ಷಿಸುವನು ದ್ಯೂತಾs। ಪೇಕ್ಷೆಯುಳ್ಳವರನು ।
ಲಕ್ಷ್ಮೀಪತಿದಾಸ । ರಕ್ಷಿಸಿ ಸುಜನರ ॥ ೨೨ ॥ ೧೦೦

॥ ಪದ ॥ ಈರನ ಕಂಡು ಕಿಂ ।ಮ್ಮಿರರೆಂಬುವರುಂಟೆ ।
ನಾರಿ ಬಂದು ಬಳಿ । ಸಾರೆ ನೀರಜ ತಂದ ॥
ಯಾರಿಗೂ ಸೋಲದ । ಧೀರನೆನಿಸಿದವ ।
ನಾರದನಿಗೆ ಸಿಕ್ಕು । ಚೀರಿದನೇಕೋ ॥ ೨೩ ॥ ೧೧೬

॥ ಪದ ॥ ಮಕ್ಕಳಂದದಿ ಜಗ । ಕಿಕ್ಕಿ ಸಲಹುವವ ॥
ಹಕ್ಕಿಗೂಡಿಲಿ ಗುಟ । ಕಿಕ್ಕಿದನೇಕೋ ॥
ಉಕ್ಕಿನ ಕಾಯಕೆ । ದಕ್ಕದು ದಿತಿ ಕುಲ ।
ಹಿಕ್ಕಿಸಿ ಉಟ್ಟು ಬಳೆ । ಇಕ್ಕಿದನೇಕೋ ॥ ೨೪ ॥ ೧೨೫

॥ ಪದ ॥ ವೆಂಕಟೇಶನ ಬಿಟ್ಟು । ಕಿಂಕರರೆಲ್ಲರು ।
ಕಂಕಭಟ್ಟನ ಮುಂದೆ । ಡೊಂಕಿದನೇಕೋ ॥
ಬೆಂಕಿಮಗಳ ಕೂಡೆ । ಕೊಂಕಿ ನಡೆದ ಕೆಟ್ಟ ।
ಅಂಕಿತದವನನು । ಬೆಂಕಿ ಸಖಜ ಸೀಳಿ ॥ ೨೫ ॥ ೧೪೨

॥ ಪದ ॥ ಉದಕದೊಳಡಗಿದ । ಅಧಮನ ಸೆಳೆದು ।
ಗದಾಯುಧದಿಂದಲಿ । ಸದೆಬಡಿಯೇ ॥
ಗದಗದ ನಡುಗಿತು । ಹದಿನೆಂಟಕ್ಷೌಹಿಣೆ ।
ಇದು ಏನು ಅಚ್ಚರಿ । ಗದಾಧರ ದಾಸಗೇ ॥ ೨೬ ॥ ೧೭೧

॥ ಪದ ॥ ಚಂಡ ಪ್ರಚಂಡ ಭೈ । ರುಂಡ ರಾಯರ ಗಂಡ।
ಪಂಡಿತಾಗ್ರಣಿ ಗದಾ । ದಂಡ ಮಾರ್ತಾಂಡ॥
ಪುಂಡರೀಕಾಕ್ಷನಡಿ । ಮಂಡಿತ ಕರದಂಡ ।
ತೊಂಡನೆನಿಪ ಉ । ದ್ದಂಡ ಅಖಂಡ ॥ ೨೭ ॥ ೧೭೬

॥ ಪದ ॥ ಯುದ್ಧದಿ ಸೋತು ವಾ । ಗ್ಯುದ್ಧಕೆ ಹವಣಸಿ ।
ಕ್ಷುದ್ರರೆಲ್ಲರು ಪುಟ್ಟಿ । ತಿದ್ದಿಡಲೂ ॥
ಮಧ್ಯಗೇಹಾಖ್ಯರ । ಲ್ಲು ದ್ಭಸುತ ವೇದ ।
ಸಿದ್ಧ ಪುರಷನೆಂದು । ಸಿದ್ಧವ ಮಾಡುತ ॥ ೨೮ ॥ ೧೮೧

॥ ಪದ ॥ ಉಂಡನು ಖಂಡುಗ । ಬಂಡೆಯನೆತ್ತಿದ ।
ಕುಂಡಲಿ ಎನಿಸಿದ । ಭಂಡನ ಸವರೀ ॥
ಹಿಂಡೊಳಗೊಂದು ಬಾಲ । ಕೊಂಡು ನರಹರಿಯ ।
ಕಂಡು ಬಂದನು ಭಯ। ಗೊಂಡನೆ ಅಲವನು ॥ ೨೯ ॥ ೧೯೪

॥ ಪದ ॥ ನೆನಸಿದ ಕ್ಷಣದಲಿ । ಋಣ ತ್ರಯವಳಿವುದು ।
ಜನಕನ ಋಣಕೆ ತಿಂ। ತ್ರಿಣಿಯು ಬೇಕಾಯಿತೇ ॥
ಜನನಿಯ ಸ್ನಾನಕೆ । ಬಾಣ ಗದಾದಿಗಳ ।
ಮನೆಯ ಮುಂದಿರಿಸಿದ । ಒಣಕಾಷ್ಟ ಚಿಗುರಿಸಿ ॥ ೩೦ ॥ ೨೦೦

॥ ಪದ ॥ ವಾಣೀಶ ಪದವಿಗೆ । ಮಾಣದೇ ಬರುವಂಥ ।
ಮಾಣವನಿವನಿಗೆ । ಪಾಣಿನಿ ಏಕೋ ॥
ಗೇಣರವಿಗೆ ಬಹು । ಜಾಣತನವ ತೋರಿ ।
ಓಣಿಯೊಳಗೆ ದಂಡ । ಪಾಣಿಯಾಗುತಲೀ ॥ ೩೧ ॥ ೨೦೪

॥ ಪದ ॥ ಮಾಯಿಗಳೆಂಬ ಗೋ । ಮಾಯಿ ಸಮೂಹವು ।
ಬಾಯಿ ಮುಚ್ಚಿತು ಮಧ್ವ । ರಾಯನು ಗರ್ಜಿಸೇ ॥
ನ್ಯಾಯವಿವರಣಾದಿ । ಸಾಯಕದಿಂದಲಿ ।
ಹೇಯ ಭಾಷ್ಯಂಗಳ । ಹೊಯ್ಯುತ ಶ್ರೀಘ್ರದಿ ॥ ೩೨ ॥ ೨೧೦

॥ ಪದ ॥ ಈಶ್ವರನಿಂದಲಿ । ಭೂಸುರರನು ಬಿಡಿಸಿ ।
ಓಷಧಿಗಳ ಮಂತ್ರ । ಘೋಷದಿಂ ಫಲಿಸಿ ॥
ಭಾಷ್ಯಗಳೆಂಬ ಪಾರಿ । ತೋಷಕಗಳನೊಯ್ದು ।
ವ್ಯಾಸರಿಗರ್ಪಿಸಿ । ತೋಷವಗೊಳಿಸುತ ॥ ೩೩ ॥ ೨೧೭

॥ ಪದ ॥ ಘನ ಭವ ಸಾಗರವನು ದಾಟಿಸುವಗೆ ।
ಜಾಹ್ನವಿ ತೀರವು । ಕನಲಿಸಿತೇ ॥
ಸನಕಾದಿಗಳ ಹೃ। ದ್ವನರುಹ ಮಿತ್ರಗೆ ।
ವನಜನಾಭಾದ್ಯರು । ಮಣಿದುದಚ್ಚರಿಯೇ ॥ ೩೪ ॥ ೨೧೮

॥ ಪದ ॥ ಬಲ ತೋರಿಸಿದರೆ । ನೆಲ ಕಚ್ಚುವರೆಂದು ।
ಕುಳಿತಲ್ಲೆ ರೋಮವ । ಕೀಳಲು ಹೇಳೀ ॥
ಸುಲಿಯ ಬಂದವರಿಗೆ । ಶಿಲೆಯಂತೆ ತೋರುತ ।
ಶಿಲೆಯನು ಎಡಗೈಲಿ । ಕಳಶದಿ ಸ್ಥಾಪಿಸಿ ॥ ೩೫ । ೨೨೦

॥ ಪದ ॥ ಹುಡುಗನ ಹೆಗಲೇರಿ । ಗುಡಿಸುತ್ತ ತಿರುಗಿದ ।
ಕಡಲುಲಿ ಭಂಗಿಸಿ । ಗುಡುಗಿದ ವೇದವ ॥
ಕಡುಗತ್ತಲೆಯಲಿ । ಅಡಿ ನಖ ತೇಜದಿ ।
ನಡೆಸಿದ ಪಾಠವ । ಬೆಡಗೆನಿಸಲು ಜಗದಿ ॥ ೩೬ ॥ ೨೨೪

॥ ಪದ ॥ ಊರ್ಧ್ವ ಪುಂಡ್ರ ಪಂಚ । ಮುದ್ರೆ ಏಕಾದಶಿ ।
ಕಾದಾಯುಧ ವಿಧಿ । ಭೇದಗಳ ॥
ತಾ ದಯದಿಂದಲಿ । ಸಾಧು ಜನಕೆ ತೋರಿ ।
ಮಾಧವನರ್ಚಿಸಿ । ಬದರಿಗೆ ಪೋಗುತ ॥ ೩೭ ॥ ೨೨೬

॥ ಪದ ॥ ದಣಿದಾರ್ಜಿಸಿದ್ದಲ್ಲ । ಅಣಿಮಾದಿ ಸಿದ್ಧಿಗಳು ।
ಗುಣತ್ರಯದೊಳು ಸತ್ವ । ಗುಣವದು ಪ್ರಚುರ ॥
ಪಣೆಗಣ್ಣ ಗಗನಾಂ । ಗಣ ತುರಗಾದಿಗಳ ।
ಗಣನೆಗೆತಾರನು । ಅನಭಿಮಾನವನು ॥ ೩೮ ॥ ೨೩೬

॥ ಪದ ॥ ತತ್ವೇಶರೆಲ್ಲರ । ಸತ್ವ ಸ್ವರೂಪನು ।
ದ್ಗೀಥನರ್ಚಿಸಿ ಜಯ । ವಿತ್ತನು ಸುರರಿಗೆ ॥
ಹತ್ತೆರಡೊಂದಾರು । ಯುಕ್ತ ಜಪದಿ ತಾ ।
ನೆತ್ತಿಯ ದ್ವಾರಕೆ । ಹತ್ತಿಸಿ ಜೀವರಾ ॥ ೩೯ ॥ ೨೪೦

॥ ಪದ ॥ ನಾಲ್ಕರೊಳೆಂಭ । ತ್ನಾಲ್ಕೆರಡು ಸಾವಿರ ।
ನಾಲ್ಕು ನೂರು ಜಪ । ತಾ ಕುಳಿತು ॥
ನಾಲ್ಕದಿ – ನೆಂಟು ಸಹಸ್ರ । ಓಕುಳಿ ಮಾರ್ಗದಿ ।
ಶ್ರೀಕರನರ್ಚಿಸಿ । ಸಾಕುತ ಸುಜನರ ॥ ೪೦ ॥ ೨೪೫

॥ ಪದ ॥ ಮಾತರಿಶ್ವನೆಂದು । ಆತ್ಮದೊಳಿರುವನು ।
ಸೂತ್ರ ನಾಮದಿ ಲಿಂಗ । ಗಾತ್ರದಲಿಹನು ॥
ಮತ್ತೆ ಸೂಕ್ಷ್ಮದೊಳು । ಉಕ್ತನಾಮದಿ ಮು ।
ಖಾತ್ಮನೆಂದು ಸ್ಥೂಲ । ಕತೃಕದಿರುತಲಿ ॥ ೪೧ ॥ ೨೪೯

॥ ಪದ ॥ ಮಾಯೇಶನನು ಸ್ವ । ಕಾಯದಲರ್ಚಿಸಿ ।
ವಾಯುಪಿತನ ಲಿಂಗ । ಕಾಯದಲೀ ॥
ಛಾಯಶರೀರದಿ । ತಾಯಿ ಶಾಂತಿಪನ ।
ಜಾಯಾ ಪಿತನ ಸ್ಥೂಲ । ಕಾಯದ ಲರ್ಚಿಸಿ ॥ ೪೨ ॥ ೨೫೩

॥ ಪದ ॥ ನಾರಾಯಣನನು । ಸರ್ವತ್ರ ಪವಮಾನ ।
ತೋರಿದನಪರೋಕ್ಷ । ಧೀರರಿಗೇ ॥
ಘೋರ ಪ್ರಹಾರದಿ । ಕ್ರೂರ ಜನಕೆ ಹುಂ ।
ಕಾರದಿ ಲಿಂಗಭಂಗ । ಮಿತ್ರರಿಗೇ ॥ ೪೩ ॥ ೨೫೪

॥ ಪದ ॥ ನಾಗೇಶನ ಮುಖ । ಭಾಗದ ಅವರಿಗೆ ।
ನಾಗ ಕಮಠ ಕೃಕ । ಲಾಗುತಲೀ ॥
ಬೀಗುತ ದೇವದತ್ತ । ಫಲ್ಗುಣ ನಾಮದಿ ।
ನೀಗುತ ಜ್ಞಾನವ । ಕಗ್ಗತ್ತಲೆಯೂಡಿ ॥ ೪೪ ॥ ೨೫೯

॥ ಪದ ॥ ಪ್ರಾಣನು ತಾ ಪಂಚ । ಪ್ರಾಣನು ಆಗಿ ಗೀ ।
ರ್ವಾಣರಿಗೇ ಕ। ಲ್ಯಾಣವನಿತ್ತು ॥
ಪ್ರಾಣ ಅಪಾನ । ವ್ಯಾನ ಉದಾನ ಸ ।
ಮಾನನು ಎಂದು ದಿವ್ಯ । ಜ್ಞಾನವ ಪಾಲಿಸಿ ॥ ೪೫ ॥ ೨೬೧

॥ ಪದ ॥ ಸಂದೇಹವಿಲ್ಲದೆ । ಒಂದು ಬ್ರಹ್ಮಾಂಡದಿ ।
ಸಂದ ರೂಪಂಗಳಿ । ಗೊಂದಿಸುತಾ ॥
ಇಂದಿರೆಗಿಂತಲಿ । ಒಂದು ಕೋಟಿ ಗುಣ ।
ದಿಂದಲಿ ಅವರನು । ಎಂದು ಸಜಾತಿಲಿ ॥ ೪೭ ॥ ೨೬೭

॥ ಪದ ॥ ಲಕ್ಷಿ ಸದಲೆ ಸರ್ವ । ಭಕ್ಷಕನನು ಬಿಟ್ಟು ।
ಲಕ್ಷ್ಮೀ ಪತಿಯನು । ಅರ್ಚಿಸಲು ॥
ರಾಕ್ಷಸರೊಯ್ವರು । ಕೊಚ್ಚಿ ದ್ವಿಷೋಡಶ ।
ಲಕ್ಷಣ ಗಾತ್ರನು । ಪೇಕ್ಷೆ ಸಲ್ಲದು ಎಂದು ॥ ೪೮ ॥ ೨೭೫

॥ ಪದ ॥ ಪ್ರಾಣೋಹ ಪಿತಾ । ಪ್ರಾಣೋ ಮಾತಾ ।
ಪ್ರಾಣೋ ಭ್ರಾತಾ । ಪ್ರಾಣೋ ಬ್ರಾಹ್ಮಣ ॥
ಪ್ರಾಣನು ರವಿಯೊಳು । ರಾಣಿಯು ಚಂದ್ರನೊಳು ।
ಠಾಣವ ಗೈದು । ಪ್ರಾಣಗಳುದಿಸಲು ॥ ೪೯ ॥ ೨೭೮

॥ ಪದ ॥ ನಾರಿಗಿರೀಧಾರಿ । ಮೂರವತಾರೀ ।
ಕ್ರೂರ ಕುಠಾರೀ । ಗರಳಪಹಾರೀ ॥
ಪರ ಉಪಕಾರೀ । ಹರಿಯಂತೆ ತೋರೀ ।
ಚರಿಸಿದನೀಪರಿ । ಧೊರೆಕೃಪೆ ಕೋರೀ ॥೫೦॥ ೨೮೩

॥ ಪದ ॥ ಕರಿವರದನ ಭಕ್ತ । ಶಿರೋಮಣಿ ಚರಿತೆಯು ।
ಸುರರಿಗೆ ಸರಿ ಚಿಪ್ಪ । ಗಿರಿಯಪ್ಪಂದಯದಿ ॥
ಬರೆದಿಟ್ಟುಕೊಂಡೆನಷ್ಟೆ । ದುರಿತೋಪಶಮನಕೆ ।
ಅರಣ್ಯಕಪ್ಪಾದಶ । ವರಗ್ರಂಥಗಳಲಿ ॥ ೫೧ ॥ ಶ್ರೀಃ ॥ ೨೮೫

ಸಾಮ್ರಾಟ್ ಪೋಷಕರು



ಶ್ರೀ ಸುಜಯೀಂದ್ರತೀರ್ಥರು

# ಸಾಮ್ರಾಟ್ ಪೋಷಕರು



ಶ್ರೀ ಸುಶಮೀಂದ್ರತೀರ್ಥರು

# ಸಾಮ್ರಾಟ್ ಪೋಷಕರು



ಅಧುನಾಪೀಠ ವಿರಾಜಮಾನರು

## ಶ್ರೀ ಸುಯತೀಂದ್ರತೀರ್ಥರು

# ಗ್ರಂಥ ಸಹಾಯಕರು



ಶ್ರೀ ಚಿನ್ನಭಂಡಾರ ಶೇಷಗಿರಿರಾಯರು ಹಾಗೂ
ಶ್ರೀಮತಿ ಪ್ರೇಮಲೀಲಾ ದಂಪತಿಗಳು

ಶ್ರೀಯುತ ಚಿನ್ನಬಂಡಾರ ಶೇಷಗಿರಿರಾಯರು ಎಲೆಮರೆಯ ಕಾಯಿಯಂತೆ 74 (1925-98) ವರ್ಷಗಳ ಸಾತ್ವಿಕಜೀವನ ನಡೆಸಿ, ಶುಭ್ರ, ಸರಳ, ಪ್ರಾಮಾಣಿಕತೆಯನ್ನು ಅಕ್ಷರಶಃ ನಡೆ-ನುಡಿಯಲ್ಲಿ ಮೆರೆದವರು. ಮಲೆನಾಡಿನಲ್ಲಿ ಹುಟ್ಟಿ ಬೆಳೆದ ಶ್ರೀಯುತರು 35 ವರ್ಷಗಳ ಕಾಲ ಉಪಾಧ್ಯಾಯರಾಗಿ, ಸಾವಿರಾರು ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸಿದ್ದಲ್ಲದೇ, ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲೂ ಸೇವೆ ಸಲ್ಲಿಸಿದ್ದರು. ಕುಮಾರವ್ಯಾಸನ ಭಾರತವನ್ನು ತಮ್ಮ ಕಾವ್ಯ ವಾಚನದ ಮೂಲಕ ನೂರಾರು ಹಳ್ಳಿಗಳಲ್ಲಿ ಪ್ರಚುರಪಡಿಸಿದ್ದವರು. ಗಾಂಧೀಜಿ ಯವರಿಂದ ಪ್ರಭಾವಿತರಾಗಿದ್ದ ಇವರು, ಸಾಂಪ್ರದಾಯಿಕ ಉಡುಗೆ-ತೊಡುಗೆಯನ್ನೇ ಕೊನೆಯವರೆಗೂ ಧರಿಸಿದ್ದಲ್ಲದೇ, ಕಂದಾಯ ಇಲಾಖೆಲ್ಲಿ ಅಪ್ರಾಮಾಣಿಕತೆ ಸುಳಿಯುತ್ತಿದೆ ಎಂಬ ಕಾರಣಕ್ಕೆ, ಆ ಉದ್ಯೋಗವನ್ನೇ ಧಿಕ್ಕರಿಸಿ, ಶಾಲಾ ಮಾಸ್ತರರಾದರು;ತಮ್ಮದೇ ಶಿಷ್ಯರೊಬ್ಬರು ನಾಡಿನ ಮುಖ್ಯಮಂತ್ರಿಯಾಗಿ, ತಮ್ಮ ಮಾಸ್ತರಿಗಾಗಿಏನನ್ನಾದರೂ ಸಹಾಯ ಮಾಡುವ ಇಚ್ಛೆ ವ್ಯಕ್ತಪಡಿಸಿದಾಗಲೂ ನಯವಾಗಿಯೇ ನಿರಾಕರಿಸಿದವರು;ತಮ್ಮ ಮನೆಯಲ್ಲಿಅಪ್ಪಟ ಮಾಧ್ವ ಸಂಪ್ರದಾಯಸ್ಥರಾಗಿದ್ದರಾಯರು, ಶಾಲೆಯಲ್ಲಿಅತ್ಯಂತಅನುಕರಣೀಯ ವ್ಯಕ್ತಿಯಾಗಿದ್ದರು. ಗಾಂಧೀಜಯಂತಿ ಮತ್ತುರಾಷ್ಟ್ರೀಯ ಆಚರಣೆಗಳಂದು, ಭಗವದ್ಗೀತೆಯ ಶ್ಲೋಕಗಳ ಜತೆಗೇ, ಇನ್ನಿತರ ಧರ್ಮಗಳ ಪಂಕ್ತಿಗಳನ್ನೂ ಉಲ್ಲೇಖಿಸುತ್ತಿದ್ದರು. ಕೆಲವಾರು ವರ್ಷಗಳ ಕಾಲ ಶ್ರೀ.ಶ್ರೀ.ವಿಶ್ವೇಶತೀರ್ಥ ಶ್ರೀಪಾದಂಗಳವರ ವಿದ್ಯಾಪೀಠದಲ್ಲಿ ಸೇವೆ ಸಲ್ಲಿಸಿದ್ದರು.ಸಂಗೀತದಲ್ಲಿಯೂ ಪಾಂಡಿತ್ಯವನ್ನು ಹೊಂದಿದ್ದ ಶ್ರೀಯುತರು, ತಮ್ಮ 50ನೇ ವಯಸ್ಸಿನಲ್ಲಿ ವೀಣಾ ವಾದನವನ್ನುಕಲಿತಿದ್ದರು.ಇವರಅರ್ಧಾಂಗಿಯಾದ ಶ್ರೀಮತಿ ಪ್ರೇಮಲೀಲಾರವರು ಶ್ರೀಯುತರಿಗೆ ಅನುರೂಪರಾಗಿ ಬದುಕಿನ ಪ್ರತೀ ಹೆಜ್ಜೆಯಲ್ಲೂಜತೆಯಾಗಿ50 ವರ್ಷಗಳಗೂ ಮೀರಿದಆದರ್ಶ-ಅರ್ಥಪೂರ್ಣದಾಂಪತ್ಯ ನಡೆಸಿದ್ದರು.

# ಭಾರತೀಶ ವಿಲಾಸ

**ಲೇಖಕರು ವೇ॥ ಶ್ರೀ.ಬಿ. ಸತ್ಯನಾರಾಯಣಾಚಾರ್ಯ**
ನಂ. 13(37/ಸಿ) 1ನೇ ಮುಖ್ಯರಸ್ತೆ,
ಎಸ್.ಬಿ.ಎಂ.ಕಾಲೋನಿ
ಆನಂದನಗರ, ಬೆಂಗಳೂರು – 24.
ದೂರವಾಣಿ 32712716

## ಪೀಠಿಕೆ

**ಪ್ರಥಮೋ ಹನುಮನ್ನಾಮ। ದ್ವಿತೀಯೋ ಭೀಮಏವಚ॥**
**ಪೂರ್ಣಪ್ರಜ್ಞ ತೃತೀಯಸ್ತು। ಭಗವತ್ಕಾರ್ಯ ಸಾಧಕಃ॥**

ಜೀವರಾಶಿಗಳ ಉದ್ಧಾರಾರ್ಥವಾಗಿ ಶ್ರೀಹರಿಯು ಬ್ರಹಾಂಡವನ್ನು ಸೃಷ್ಟಿ ಮಾಡಿ ಈ ಬ್ರಹ್ಮಾಂಡದಲ್ಲಿ ಜೀವರ ಸಾಧನಕ್ಕೆ ಅನುಕೂಲಕರಗಳಾದ ಚತುರವಿಂಶತಿ ತತ್ವಗಳನ್ನೂ ಆ ತತ್ವಗಳಿಗೆ ಅಭಿಮಾನಿಗಳಾದ ಚತುರವಿಂಶತಿ ತತ್ವದೇವತೆಗಳನ್ನೂ ಆಸೃಜ್ಯಾವಸ್ಥೆಯಿಂದ ತಂದು, ಪರಸ್ಪರ ಸಂಬಂಧವನ್ನು ಕಲ್ಪಿಸಿ, ತಾನು ಸರ್ವಾಂತರ್ಯಾಮಿಯಾಗಿ, ಸರ್ವಕರ್ತನಾಗಿ ಜೀವರಿಂದ ಸಾಧನವನ್ನು ಮಾಡಿಸುತ್ತಾನೆ. ಈ ಇಪ್ಪತ್ತು ನಾಲ್ಕು ತತ್ವಗಳೆಂದರೆ ಪಂಚ ಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು, ಪಂಚ ತನ್ಮಾತಗಳೂ, ಪಂಚ ಭೂತಗಳೂ ಹಾಗೂ ಮಹತ್ತತ್ವ ಅಹಂಕಾರ ತತ್ವ, ಮನಸ್ತತ್ವ ಮತ್ತು ಅವ್ಯಕ್ತ ತತ್ವಗಳಾಗಿವೆ. ಈ ಎಲ್ಲಾ ತತ್ವಂಗಳ ಅಂಶಗಳು ಜೀವ ರಾಶಿಯ ದೇಹದಲ್ಲಿ ಸಂಯುಕ್ತವಾಗಿದ್ದು ಈ ತತ್ವಗಳಿಗೆ ಅಭಿಮಾನಿಗಳು ಅಂಶದಿಂದ ತಮ್ಮ ತಮ್ಮ ತತ್ವ ಕಾರ್ಯಗಳನ್ನು ನಿರ್ವಹಿಸುತ್ತ ಜೀವರ ಉದ್ಧಾರಾರ್ಥವಾದ ಭಗವತ್ಸೇವೆಯನ್ನು ಸದಾಕಾಲವೂ (ಮೋಕ್ಷಪರ್ಯಂತವಾಗಿ) ಮಾಡುತ್ತಾರೆ. ಇದರಲ್ಲಿ ಅಚಿಂತ್ಯಾದ್ಭುತವಾದ ತತ್ವವೆಂದರೆ ಪರಮಾತ್ಮ ತತ್ವ. ಈತನ ತರುವಾಯ ಅವ್ಯಾಕೃತ ತತ್ವವು ಇದಕ್ಕೆ ಅಭಿಮಾನಿಯು ಮಹಾಲಕ್ಷ್ಮೀದೇವಿಯು ಇವರ ತರುವಾಯದಲ್ಲಿ ಬರುವ ತತ್ವ ಮತ್ತು ತತ್ವ ಪತಿಗಳಲ್ಲಿ ಶ್ರೇಷ್ಠರಾದವರು ಸರ್ವ ತತ್ವಗಳ ನಿಯಾಮಕರಾದ ಬ್ರಹ್ಮ ವಾಯುಗಳು ಇವರು ಮಹತ್ತತ್ವಕ್ಕೆ ಅಭಿಮಾನಿಗಳಾಗಿದ್ದು ಲಕ್ಷ್ಮೀನಾರಾಯಣರ ಸ್ವಾಧೀನವಲ್ಲಿದ್ದು ಉಳಿದ ಪ್ರಪಂಚಕ್ಕೆ ನಿಯಾಮಕರಾಗಿದ್ದಾರೆ.

ಶ್ರೀಮನ್ಮಧ್ವಾಚಾರ್ಯರು ತಮ್ಮ ಉಪದೇಶದಲ್ಲಿ ಸಾಧಕನಾದವನು ಜಗತ್ತಿನಲ್ಲಿ ಸೋತ್ತುಮ, ಸ್ವಾವರದ ಸ್ಥಾನಮಾನಗಳನ್ನು ಯಥಾರ್ಥವಾಗಿ ತಿಳಿದುಕೊಂಡು ಸೋತ್ತುಮರಲ್ಲಿ ಭಕ್ತಿಯನ್ನೂ, ಸ್ವಾವರರಲ್ಲಿ ಅನುಕಂಪವನ್ನೂ, ಸಮಾನಸ್ಕಂದರಲ್ಲಿ ಗೌರವವನ್ನೂ, ತಮೋಯೋಗ್ಯರಲ್ಲಿ ತಿರಸ್ಕಾರವನ್ನೂ ಹೊಂದಿ ಭಗವದನುಗ್ರಹವನ್ನು ಸಂಪಾದಿಸಿದರೆ ಮಾತ್ರ ಮೋಕ್ಷವು ದೊರೆಯುತ್ತದೆಂದೂ, ಅನ್ಯಥಾ ನರಕಾದಿ ಅನರ್ಥವಾಗುತ್ತದೆಂದೂ ಬೋಧಿಸಿರುತ್ತಾರೆ.

ಈ ನಿಟ್ಟಿನಲ್ಲಿ ಪ್ರಸ್ತುತ ವಾಯುದೇವರ ಮಹಿಮೆಯನ್ನು ಶಾಸ್ತ್ರಸಮ್ಮತವಾದ, ಜ್ಞಾನಿವರೇಣ್ಯರಿಗೆ ಅಭಿಮತವಾದ ಪ್ರಕ್ರಿಯೆಗಳನ್ನು ಶ್ರೀ ವಾಯುದೇವರ ಅವತಾರ ತ್ರಯಗಳೊಂದಿಗೆ ಮೂಲ ರೂಪವರ್ಣನೆಯನ್ನು ಸ್ತೋತ್ರರೂಪವಾಗಿ ಬರೆಯಲಾಗಿದೆ. ಶ್ರೀ ವಾಯುದೇವರ ಮಹಿಮೆಗಳನ್ನು ವೇದಾದಿಯಾಗಿ ಸಮಸ್ತವಾಙ್ಮಯ ಪ್ರಪಂಚವು ಅವ್ಯಾಹತವಾಗಿ ಕೊಂಡಾಡುತ್ತಲೇ ಸಾಗಿದೆ. ಆದರೆ ನಿಸ್ಸೀಮ ಬಲ, ಜ್ಞಾನ, ಶೌರ್ಯೌದಾರ್ಯ, ಗುಣ ಗಂಭೀರರಾದ ವಾಯು ದೇವರ ಗುಣಗಳನ್ನು ಸಾಕಲ್ಯೇನ, ಗರುಡ, ಶೇಷ, ರುದ್ರಾದಿಗಳೂ ಅರಿಯರೆಂದ ಮೇಲೆ ಉಳಿದವರ ಪಾಡೇನು?

ಶ್ರೀ ವಿಜಯದಾಸರೇ ಮೊದಲಾದ ಮಹಾತ್ಮರು ಶ್ರೀ ವಾಯುದೇವರ ಬಗ್ಗೆ ಉದ್ಭವಿಸಬಹುದಾದ ಬಹುಪರಿ ಶಂಕೆಗಳನ್ನು ಪರಿಹಾರ ಮಾಡಿದ್ದಾರೆ. ಶ್ರೀ ವಾಯು ದೇವರನ್ನು ಕುರಿತು ಹೊರಟ ವಾಙ್ಮಯದಲ್ಲಿ ಶ್ರೀ ವಾಯುದೇವರ ಮಹಿಮೆಗಳನ್ನು ವರ್ಣಿಸಿರುವುದನ್ನು ಗಮನಿಸಿದರೆ ಆಶ್ಚರ್ಯಾನಂದ್ರೋಕವಾಗದೇ ಇರದು. ಹನುಮ, ಭೀಮ, ಮಧ್ವರ ಅಗಾಧ ಮಹಿಮೆಗಳನ್ನು ಕೇಳುತ್ತಾ ತಲೆದೂಗುತ್ತೇವೆ. ಆದರೆ ಅವರ ಮಹಿಮೆ, ಶಕ್ತಿ, ಸಾಮರ್ಥ್ಯಗಳು ಇಷ್ಟೇ ಎಂದು ತಿಳಿಯಬಾರದು. ಅವರಲ್ಲಿ ದೇವಾಗಮ್ಯವಾದ ಮಹಿಮೆಗಳು ಸಾಕಷ್ಟಿವೆ. ಜಗತ್ತಿನ ಉದ್ಧಾರಾರ್ಥವಾಗಿ ಅವರು ತೋರಿದ ಲೀಲೆಗಳು ಅವರ ಸ್ವರೂಪಶಕ್ತಿಯ ಪೂರ್ಣವಾದ ನಿದರ್ಶನಗಳಲ್ಲ. ಕೇವಲ ಯತ್ಕಿಂಚಿತ್ ಮಾತ್ರ. ಶ್ರೀಮನ್ಮಧ್ವಾವತಾರದಲ್ಲಿ ಇವರು ಗೀತಾಭಾಷ್ಯವನ್ನು ಬರೆದುಕೊಂಡು ಹೋಗಿ ಶ್ರೀ ವೇದವ್ಯಾಸ ದೇವರಿಗೆ ಅರ್ಪಿಸಿದರು. ಕಡು ವಿನಯ ಸಂಪನ್ನರಾದ ಆಚಾರ್ಯರು ತಮ್ಮ ಗ್ರಂಥದಲ್ಲಿ

**ದೇವಂ ನಾರಾಯಣಂ ನತ್ವಾ ಸರ್ವ ದೋಷ ವಿವರ್ಜಿತಂ॥**
**ಪರಿಪೂರ್ಣಂ ಗುರೂಂಶ್ಚಾನ್ ಗೀತಾರ್ಥಂ ವಕ್ಷ್ಯಾಮಿ ಶಕ್ತಿತಃ॥**

ಎಂದು ಬರೆದುಕೊಂಡು ಹೋಗಿದ್ದರು. ಇಲ್ಲಿ ಶ್ರೀ ಮಧ್ವಾಚಾರ್ಯರು ಶಕ್ತಿ ಇದ್ದಷ್ಟನ್ನು ಬರೆದಿದ್ದೇನೆ ಎಂಬುದನ್ನು ನಸುನಕ್ಕು ನೋಡಿದ ದೇವೋತ್ತುಮನು **"ಶಕ್ತಿತಃ"** ಎಂದು ಬರೆದುದನ್ನು ತೆಗೆದು **"ಲೇಶತಃ"** ಎಂದು ಬರೆದು ತಿದ್ದಿ ಕೊಟ್ಟರು. ಇದರಿಂದ ಏನು ತಿಳಿಯುತ್ತದೆಂದರೆ ವಾಯು ದೇವರು ಜಗದ್ವಾಪಾರವನ್ನು ತಮ್ಮ ಶಕ್ತಿ ಲೇಶಮಾತ್ರದಿಂದಲೇ ಮಾಡಬಲ್ಲರಲ್ಲದೆ ಅವರು ಯಾವ ಪ್ರಸಂಗದಲ್ಲೂ ತಮ್ಮಲ್ಲಿರುವ ಪೂರ್ಣಶಕ್ತಿಯನ್ನು ಉಪಯೋಗಿಸುವ ಅವಶ್ಯಕತೆ ಇಲ್ಲ. ಅದೇನಾದರೂ ಇದ್ದರೆ ಅದು ತಮ್ಮನ್ನು ಪೂರ್ಣವಾಗಿ ಭಗವಂತನಿಗೆ ಅರ್ಪಿಸಿಕೊಂಡಿರುವ ವಿಷಯದಲ್ಲಿ ಮಾತ್ರ. ಅವರು ಬರೆದ ಗೀತಾಭಾಷ್ಯವು ಗರುಡ, ಶೇಷಾದಿಗಳಿಂದಾರಂಭಿಸಿ ಸಕಲ ಮುಮುಕ್ಷು ಕುಲವು ಉದ್ಧಾರವಾಗಲಿಕ್ಕೆ ಸಾಕು. ಹೆಜ್ಜೆಸದಲ್ಲವೂ ಭಗವಂತನ ಕಡೆ ಸಾಗಿರುತ್ತದೆ. ಜಗಜಟ್ಟಿಯೋರ್ವನು ಸಾಸಿವೆ ಕಾಳನ್ನು ಹೊತ್ತಂತೆ ಶ್ರೀ ವಾಯು ದೇವರು ಬ್ರಹ್ಮಾಂಡದಲ್ಲಿ ಲೀಲೆಯನ್ನು ಮಾಡುತ್ತಿರುವಾಗ ಅದನ್ನು ಕಂಡು ನಾವು ಭಲೇ ಭಲೇ ಎಂದು ವರ್ಣರಂಜಿತವಾಗಿ ಕೊಂಡಾಡಿದರೆ ಸಾಸುಯನ್ನು ಹೊತ್ತವನನ್ನು ನೋಡಿ ಇರುವೆಯು ಭಲೇ ಎಂದಂತೆಯೇ ಎಂದು ಶ್ರೀ ವಿಜಯರಾಯರು ತಿಳಿಸಿರುತ್ತಾರೆ. ಸಂಜೀವನ ಪರ್ವತವನ್ನು ತರಲು ಹನುಮಂತನು ತೋರಿದ ಶಕ್ತಿ ಎಷ್ಟು? ಆದರೆ ಆತನಿಗಿರುವ ಶಕ್ತಿ ಎಷ್ಟು? ಎಂಬುದನ್ನು ಶ್ರೀ ವಿಜಯರಾಯರು ಹೀಗೆ ಹೇಳುತ್ತಾರೆ.

**"ದ್ವಿತೀಯ ಕೂರ್ಮನಾಗಿ ಜಗವ ಪೊತ್ತ ಶಕ್ತ। ಭೃತ ಸಂಜೀವನಾದ್ರಿಯು ಭಾರತರವೇನೋ"** ಹದಿನಾಲ್ಕು ಲೋಕಗಳಿಂದ ಯುಕ್ತವಾದ ಈ ಬ್ರಹ್ಮಾಂಡವನ್ನೇ ವಾಯುದೇವರು ಹೊತ್ತಿರುವಾಗ ಆತನು ಸಂಜೀವನ ಪರ್ವತವನ್ನು ತಂದುದನ್ನು ಭಲೇ ಭಲೇ ಎಂದು ಹೊಗಳಿದರೆ ಆ ಪರ್ವತವನ್ನು ನಾವು ನಮ್ಮ ಶಕ್ತಿಯಿಂದ ಅಳೆದಂತಾಯಿತೇವಿನಃ ಶ್ರೀ ವಾಯುವಿನ ಶಕ್ತಿಯನ್ನು ಅಳೆದಂತಾಗಲಿಲ್ಲ. ಬ್ರಹ್ಮ ಪದಾರ್ಹನಾದ ವಾಯುದೇವರು "ಬ್ರಹ್ಮಾಣಂ ಬ್ರಹ್ಮಾಂಡ ವಿಗ್ರಹಂ"

ಶ್ರೀ ವಿಜಯ ದಾಸರು ವಾಯು ದೇವರಲ್ಲಿರುವ ನೈಜವಾದ ಸಾಮರ್ಥ್ಯವನ್ನೂ, ಲೋಕವಿಡಂಬನಾರ್ಥವಾಗಿ ಪ್ರಕಟಿಸಿರುವ ಸಾಮರ್ಥ್ಯವನ್ನೂ ತುಲನಾತ್ಮಕವಾಗಿ ಉಪಾಸಿಸಿ ತಮ್ಮ ಸುಳಾದಿಗಳಲ್ಲಿ ಸಜ್ಜನರ ಉದ್ಧಾರಾರ್ಥವಾಗಿ ತಿಳಿಸಿ ಉಪಕಾರ ಮಾಡಿರುತ್ತಾರೆ. ಶ್ರೀ ಶ್ರೀ ಪಾದರಾಜರು ತಮ್ಮ 'ಮಧ್ವನಾಮ' ಪದದಲ್ಲಿ ಅವತಾರ ತ್ರಯೋಪೇತ ಶ್ರೀ ವಾಯುದೇವರ ಮಹಿಮೆಯನ್ನು ಅಗಾಧವಾಗಿ ಬಣ್ಣಿಸಿರುತ್ತಾರೆ. ನಮ್ಮ ಯೋಗ್ಯತೆಯ ಪಕ್ವಕ್ಕೆ ಇಷ್ಟು ಸಾಕು. ಶ್ರೀ ವಾಯುದೇವವನ್ನು ಕೊಂಡಾಡದ ಮುಮುಕ್ಷುವಿಲ್ಲ ಕೊಂಡಾಡದಿದ್ದರೆ ಅವನು ಮುಮುಕ್ಷುವೇ ಅಲ್ಲ.

ಶ್ರೀ ಭೃಗುಋಷಿಗಳ ಅಂಶ ಸಂಭೂತರಾದ ಶ್ರೀ ವಿಜಯದಾಸರು ಹೀಗೆ ಹೇಳಿದ್ದಾರೆ

**"ಮಧ್ವರಾಯರ ಕರುಣ। ಪಡೆಯದವ ಧರೆಯೊಳಗೆ।**
**ಇದ್ದರೇನೂ ಇಲ್ಲದಿದ್ದರೇನು॥**
**ಮಧ್ವರಾಯರ ಕಥಾ ಕೇಳಲೂ ದುರಿತ ಹತ।**
**ಮಧ್ವರಮಣ ನಮ್ಮ ವಿಜಯವಿಠಲನ ದಾಸನಾದವನೆ ನಿರ್ದೋಷ॥"** ಎಂದು.

ವಾಙ್ಮನಃ ಕಾಯಗಳು ಶುದ್ಧಿಯಾಗಲು ವಾಯುದೇವರನ್ನು (ತಥಾ ಸೋತ್ತುಮರನ್ನು) ಕೊಂಡಾಡಬೇಕೆಂದೂ, ಅದಕ್ಕಾಗಿಯೇ ತಮಗೆ ವಾಯುದೇವರ ಬಗ್ಗೆ ಸಾಕಲ್ಯೇನ ಜ್ಞಾನವಿಲ್ಲದಿದ್ದರೂ "ಮನೋವಿಶುದ್ಧ್ಯೈ ಚರಿತಾನುವಾದಃ" ಇದು ಅವಶ್ಯವೆಂದು ತೋರಿಸಿಕೊಟ್ಟಿದ್ದಾರೆ. ಶ್ರೀಮನ್ನಾರಾಯಣ ಪಂಡಿತಾಚಾರ್ಯರು. ಇದೇ ನ್ಯಾಯದಿಂದ ರಚಿತವಾದ ಈ "ಭಾರತೀಶ ವಿಲಾಸ" ವೆಂಬ ಐವತ್ತೊಂದು ನುಡಿಗಳಿಂದ ಯುಕ್ತವಾದ ಅಕ್ಷರ ಮಾಲಿಕಾ ಸ್ತೋತ್ರದಲ್ಲಿ ವಾಯುದೇವರ ಮೂಲ ಮತ್ತು ಮೂರವತಾರಗಳನ್ನು ಬಣ್ಣಿಸಲಾಗಿದೆ. ಮತ್ತು ಅರ್ಥವನ್ನು ಸಹ ಬರೆಯಲಾಗಿದೆ. ನಾನಾ ಛಂದಸ್ಸಿನ ಪ್ರಿಯರಿಗಾಗಿ ಒಂದೇ ವಿಷಯವು ನಾನಾ ರೀತಿಯಾಗಿ ಬರೆಯಲ್ಪಡುವುದು ರೂಢಿಯಲ್ಲಿದೆ. ಪ್ರಸ್ತುತ ಈ ಸ್ತೋತ್ರವು ಕನ್ನಡ ಚೌಪದಿಯಿಂದ ರಚಿತವಾಗಿದೆ.

**॥ ವಕ್ಷ್ಯಾಮಿ ವಾಯೋರವತಾರ ಲೀಲಾಂ ॥**

**॥ ಪದ ॥ ತೋರಿದಲೀಲಾ। ಭಾರತಿಲೋಲ॥**
**ಚಾರು ಗುಣ ಶೀಲಾ। ಭೂರಿ ವಿಶಾಲಾ॥ ಪ॥**
**ಕ್ರೂರಿಗಳನು ತರಿದು। ಸೂರಿಗಳನು ಪೊರೆದು।**
**ಶ್ರೀ ರಮಣನ ಪ್ರೀತಿ। ವಾರಿಧಿಯೊಳು ಮುಳುಗಿ ॥ ಅ. ಪ॥**

**ಶಬ್ದದ ಅರ್ಥ:** ಭಾರತಿ = ಪ್ರಕಾಶವಾನವಾಗಿ ಉಳ್ಳ ವಾಯುದೇವರಲ್ಲಿ, ರತಿ = ಭಕ್ತಿಉಳ್ಳವಳು ಯಾರೋ ಅಂಥಾ ಮಹಾಮಹಿಮೆಯುಳ್ಳ 'ರಯಿ'ಗೆ ಪತಿಯಾಗಿ ವಿಹರಿಸುತ್ತಿರುವ ವಾಯುದೇವರು; ಲೀಲಾ = ಅನಾಯಾಸವಾಗಿ ಮಾಡಿದ ಜಗದ್ವಾಪಾರ, ಚಾರುಗುಣಶೀಲ = ದೋಷರಹಿತವಾದ ಗುಣ ಉಳ್ಳವರು. ಭೂರಿವಿಶಾಲ = ಆಗಾಧ ವ್ಯಾಪ್ತಿಯುಳ್ಳವರು (ವ್ಯಾಪ್ತೋಪಾಸಕರು; ಕ್ರೂರಿಗಳು = ದೈತ್ಯರು, ಅಸುದುಪಾಸಕರು; ತರಿದು = ನಿಗ್ರಹ (ಸಂಹಾರ) ಮಾಡಿ; ಸೂರಿಗಳನು = ಜ್ಞಾನಿಗಳನ್ನು ಮುಕ್ತಿ ಯೋಗ್ಯರನ್ನು, ಪೊರೆದು = ರಕ್ಷಿಸಿ; ಶ್ರೀರಮಣನ = ಪರಮಾತ್ಮನ, ಪ್ರೀತಿವಾರಿಧಿಯೊಳು ಮುಳುಗಿ = ಪರಮಾನುಗ್ರಹವನ್ನು ಸಂಪಾದಿಸಿಕೊಂಡಿರುವನು.

**ಅನುವಾದ:** ಗ್ರಂಥ ಪ್ರಾರಂಭಕ್ಕೆ ಮೊದಲು ಭಾರತೀಲೋಲನೆಂಬುದಾಗಿ ಹೇಳಿರುವಲ್ಲಿ ಭಕ್ತಿಗೂ, ಬುದ್ಧಿಗೂ ಅಭಿಮಾನಿಯಾದ ಭಾರತೀ ದೇವಿಯ ಸ್ಮರಣಪೂರ್ವಕವಾಗಿ ಗ್ರಂಥದ ಯಶಸ್ಸನ್ನು ಕೋರಿ ಪ್ರಾರಂಭಿಸಲಾಗಿದೆ. ಪರಮಾತ್ಮನ ಇಚ್ಛೆಯು ದೈತ್ಯರನ್ನು ಸದೆಬಡಿದು ಭಕ್ತರನ್ನು ಉದ್ಧರಿಸುವುದೇ ಆಗಿದೆ. ಆತನು ಈ ಕಾರ್ಯಕ್ಕೆಯೋಗ್ಯ ಜೀವರನ್ನು ತನಗೆ ಅಧಿಷ್ಠಾನ ಭೂತರನ್ನಾಗಿ ಆರಿಸಿಕೊಂಡು ಅವರಲ್ಲಿ ನಿಂತು ತಾನೇ ಆ ಕಾರ್ಯವನ್ನು ನಿರ್ವಹಿಸಿ ಭಕ್ತರಿಗೆ ಕೀರ್ತಿಯನ್ನೀಯುವನು. ಅಂಥಾ ಅಧಿಷ್ಠಾನಗಳಲ್ಲಿ ವಾಯುದೇವರು ಶ್ರೇಷ್ಠರು. ಶ್ರೀ ಹರಿಯ ಸೇವಾರೂಪವಾದ ದುಷ್ಟ ಶಿಕ್ಷಣ, ಶಿಷ್ಟ ಪರಿಪಾಲನೆಯನ್ನು ಮಾಡಿ ಶ್ರೀ ಹರಿಯ ಅನುಗ್ರಹವನ್ನು ಸಂಪಾದಿಸಿರುತ್ತಾರೆ. ಇಲ್ಲಿ ಮೊದಲು ಕ್ರೂರಿಗಳನ್ನು ತರಿದು ಎಂದು ಹೇಳಿ ತರುವಾಯ ಸೂರಿಗಳನು ಪೊರೆದು ಎಂದು ಹೇಳಿರುವ ಉದ್ದೇಶವೇನೆಂದರೆ ಮೊದಲು ಅನಿಷ್ಟ ನಿವೃತ್ತಿಯಾಗ ಬೇಕು. ತರುವಾಯ ಇಷ್ಟ ಪ್ರಾಪ್ತಿಯಾಗಬೇಕು. ಇದು ಕ್ರಮ. ದುಷ್ಟರು ನಾಶವಾದರೆ ತಾನೇ ಶಿಷ್ಯರು ಸುಖದಿಂದ, ನೆಮ್ಮದಿಯಿಂದ ಬಾಳಬಹುದು? ಹೀಗೆ ಭೋಗವು ದ್ವಿದಳಾತ್ಮಕವಾಗಿರಬೇಕೆಂಬ ನಿಯಮವನ್ನು ಇಲ್ಲಿ ಪಾಲಿಸಲಾಗಿದೆ. ಸಾಲ ತೀರಬೇಕು. ಗಳಿಕೆ ಆಗಬೇಕು. ಆಗ ಮಾತ್ರ ಅವನು ಶ್ರೀಮಂತನು. ಶ್ರೀಹರಿವಾಯುಗಳಿಗೆ ದೈತ್ಯರಲ್ಲಿ ದ್ವೇಷವಿಲ್ಲ. ದೈತ್ಯರೇ ಅವರನ್ನು ದ್ವೇಷಿಸಿ ದುಃಖವನ್ನು ಹೊಂದುತ್ತಾರೆ. ಇದಕ್ಕೆ ಅವರ ಸ್ವರೂಪವೇ ಕಾರಣ.

**॥ ಪದ ॥ ಅವಯವದಿಂದಲಿ। ಅವರಿವರುದಿಸಲು।**
**ಇವನೊಬ್ಬನೆ ಪ್ರಾಣಭವನೆನಿಸಿದನು॥**
**ಅವಕಾಶ ಭೂತತ್ವ । ಇವು ಎರಡನುಬಿಟ್ಟು।**
**ಇವಗಿದೆ ಮೂರು ತತ್ವ ಶರೀರವೆಂದು ॥೧॥**

**ಶಬ್ದಾರ್ಥ:** ಅವಯುವದಿಂದಲಿ = ಪರಮಾತ್ಮನ ಅವಯವಗಳಿಂದ, ಅವರಿವರು = ದೇವತೆಗಳು; ಉದಿಸಲು = ಹುಟ್ಟಲು; ಇವನೊಬ್ಬನೆ = ಪ್ರಾಣದೇವನೆನಿಸುವ ವಾಯುವು ಮಾತ್ರ. ಪ್ರಾಣಭವ = ಪ್ರಾಣಸ್ಥಾನದಿಂದ ಉದ್ಭವಿಸಿದವನು; ಅವಕಾಶ = ಆಕಾಶ; ಭೂ = ಪೃಥ್ವಿ.

**ಅನುವಾದ:** ಶ್ರೀ ವಾಯುದೇವರ ಸ್ಥಾನವು ಅತಿ ಮಹತ್ವದ್ದೆಂದು ಪೀಠಿಕೆಯಲ್ಲಿ ಹೇಳಲಾಗಿದೆ. ಬ್ರಾಹ್ಮಣಾದಿ ಚತುರ್ವರ್ಣದವರು ಪರಮಾತ್ಮನ ಮುಖ, ಬಾಹು, ಊರು, ಪಾದಗಳಿಂದ ಹುಟ್ಟಿದ್ದರೆ ಮುಖದಿಂದ ಇಂದ್ರನೂ, ಅಗ್ನಿಯೂ, ಮನಸಿನಿಂದ ಚಂದ್ರನೂ, ಕಣ್ಣಿನಿಂದ ಸೂರ್ಯನೂ ಹುಟ್ಟಿದರೆ, ಪ್ರಾಣದೇವರು ಮಾತ್ರ ಪರಮಾತ್ಮನ ಪ್ರಾಣದಿಂದಲೇ ಹುಟ್ಟಿರುವನು. ಆದ್ದರಿಂದಲೇ ಈತನು ಪರಮಾತ್ಮನಿಗೆ ಅತ್ಯಂತ ಪ್ರೀತಿಪಾತ್ರನು. ಜಗತ್ತಿನ ಜೀವರಾಶಿಗಳ ನಿರ್ವಹಣೆಯನ್ನು ಪರಮಾತ್ಮನು ಜೀವಾಂತರ್ಗತನಾದ ವಾಯು ದೇವರಲ್ಲಿ ಅಂತರ್ಯಾಮಿಯಾಗಿ ನಿಂತು ಮಾಡುತ್ತಿದ್ದಾನೆ. ಆದರೆ ಪರಮಾತ್ಮನ ಅವಯವಗಳಿಗೂ ಮತ್ತು ಆತನ ಪ್ರಾಣಕ್ಕೂ ಭೇದವಿಲ್ಲ. ಹೀಗಿರುವಾಗ ಪುರುಷ ಸೂಕ್ತದಲ್ಲಿ "ಮುಖಾದಿಂದ್ರಶ್ಚಾಗ್ನಿಶ್ಚ। ಪ್ರಾಣಾದ್ವಾಯುರಜಾಯತ" ಎಂದು ಏಕೆ ಹೇಳಿದ್ದಾರೆ? ಎಂದರೆ ಪರಮಾತ್ಮನ ಅವಯವಗಳಿಗೆ ಭೇದವಿಲ್ಲವಾದರೂ ಭಿನ್ನ ಗುಣ ಧರ್ಮಗಳಿಂದ ಸ್ವರೂಪಭೂತರಾಗಿ ಯುಕ್ತರಾದ ಜೀವ, ಜಡಗಳ ನಿಮಿತ್ತ ಪರಮಾತ್ಮನು ತನ್ನ ಗುಣ, ರೂಪ, ಕ್ರಿಯೆಗಳನ್ನು ಭಿನ್ನಭಿನ್ನವಾಗಿಯೇ ಅಭಿವ್ಯಕ್ತ ಮಾಡುತ್ತಾನೆ. ಇದು ಅವನು ಪರಪ್ರಯೋಜನಾರ್ಥವಾಗಿ ಮಾಡುವ ವ್ಯಾಪಾರವು. ಪರಮಾತ್ಮನು ತನ್ನ ಯಾವುದೇ ಜಗದ್ವ್ಯಾಪಾರವನ್ನು ಅಧಿಷ್ಠಾನಗತನಾಗಿಯೇ ಮಾಡುತ್ತಾನೆಯೇ ವಿನಃ ನೇರವಾಗಿ ಮಾಡುವುದಿಲ್ಲ. ಅದಕ್ಕೇನೇ ಶ್ರೀ ಜಗನ್ನಾಥದಾಸರು "ಬ್ರಹ್ಮಭವಾದಿಗಳ ನಾಮದಲಿ ಫಲವಿತ್ತಾದರಿಪನು ತನ್ನ ಮಹಿಮೆಯ ತೋರಗೊಡ ಜಗಕೆ" ಎಂದಿರುತ್ತಾರೆ. ಈ ನಿಯಮದಂತೆ ಜಗತ್ತಿನ ಜೀವರಾಶಿಗಳನ್ನು ಕಾಪಾಡಲು ಸ್ವರೂಪತಃ ಶ್ರೀ ವಾಯು ದೇವರೇ ಅಧಿಷ್ಠಾನ ಭೂತರಾಗಿರುವುದರಿಂದ ಪಾಣದೇವರು 'ಪ್ರಾಣ'ನೆಂತಲೂ, ಶ್ರೀ ಹರಿಯೂ 'ಪ್ರಾಣ'ನೆಂತಲೂ ಕರೆಸುತ್ತಾರೆ. ಈಶಾವಾಸ್ಯದಲ್ಲಿ **"ವಾಯುರನಿಲಮಮೃತಂ ಯಥೇದಂ ಭಸ್ಮಾಂತಂ ಶರೀರಂ"** ಎಂದು ಹೇಳಿರುತ್ತಾರೆ. ಆಚಾರ್ಯರು ಭಾಷ್ಯದಲ್ಲಿ "ಅತಿರೋಹಿತ ವಿಜ್ಞಾನಾತ್। ವಾಯುರಪ್ಯಮೃತಃ ಸ್ಮೃತಃ। ಮುಖ್ಯಾಂಮೃತಂ ಸ್ವಯಂ ರಾಮ ಪರಮಾತ್ಮಾ ಸನಾತನಃ ॥ ಇತಿರಾಮ ಸಂಹಿತಾಯಾಂ॥" ಎಂದಿರುತ್ತಾರೆ. ಪ್ರಾಣರಕ್ಷಕನು ವಾಯುವು. ಪರಮಮುಖ್ಯನು ಪರಮಾತ್ಮನು.

ಪರಮಾತ್ಮನು ಜೀವರಾಶಿಗಳನ್ನು ಶ್ರೀ ರಾಮರೂಪದಿಂದ ರಕ್ಷಿಸುತ್ತಾನೆ. ಆದ್ದರಿಂದ ಶ್ರೀ ರಾಮನಾಮವು 'ಅಮೃತ' ಎನಿಸಿದೆ. ಶ್ರೀ ಹರಿಯ ನಾನಾ ರೂಪಗಳನ್ನು ಸಮಯಾನುಸಾರ ಕೊಂಡಾಡಿದರೆ ಶ್ರೀ ರಾಮ ನಾಮವನ್ನು ಮಾತ್ರ ಸದಾ ಸ್ಮರಿಸಬೇಕೆಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಉದಾಹರಣೆಗೆ "ದುಸ್ವಪ್ನೇ ಸ್ಮರ ಗೋವಿಂದಂ।ಭಯೇಚ ಮಧುಸೂದನಂ॥ ನಾರಸಿಂಹಂ ಮಹಾರಣ್ಯೇ। ಶ್ರೀ ರಾಮಂ ಸರ್ವದಾಸ್ಮರಂ॥" ಎಂದು. ಯಾಕೆಂದರೆ ಬೇರೆ ಬೇರೆ ಪ್ರಸಂಗಗಳು ತಾತ್ಕಾಲಿಕವಾಗಿ ಬರುತ್ತವೆ. ಆ ಪ್ರಸಂಗದಲ್ಲಿ ಆಯಾ ರೂಪಗಳ ಚಿಂತನೆಯು ಉಚಿತ. ಆದರೆ

ಜೀವರಕ್ಷಾ ಕರ್ಮನಾದ ಶ್ವಾಸೋಶ್ವಾಸ ಕಾರ್ಯವು ನಿರಂತರವಾಗಿ ಸಾಗಿರುತ್ತದೆ. ಈ ಕಾರ್ಯಕ್ಕೆ ನಿಯಾಮಕವಾದ ರೂಪವೇ ಶ್ರೀ ರಾಮ ರೂಪವು. ಈ ರೂಪದ ವ್ಯಾಪಾರವನ್ನು ಶ್ರೀರಾಮನು ವಾಯುವಿನ ಅಧಿಷ್ಠಾನದಲ್ಲಿ ನಿರ್ವಹಿಸುತ್ತಾನೆ. ಆದ್ದರಿಂದಲೇ ಹನುಮಂತನು ಶ್ರೀ ರಾಮದೂತನು (ಕೇವಲ ಮುದ್ರೆ ಉಂಗುರ, ಚೂಡಾಮಣಿ, ಸೇತುಬಂಧನ ಮಾತ್ರದಿಂದ ಅಲ್ಲ). ಸದಾಕಾಲವೂ ನಾವು ಶ್ವಾಸ ಜಪ ಮಾಡುತ್ತಿರುವುದರಿಂದ ತನ್ನಿಯ್ಯಾಮಕನಾದ ಶ್ರೀರಾಮನನ್ನು ಸ್ಮರಿಸಬೇಕು.

ಇತರ ದೇವತೆಗಳಿಗೆ, ಜೀವರಾಶಿಗಳಿಗೆ ಚತುರ ಪಂಚಭೂತಾತ್ಮಕವಾದ ಶರೀರವು ಇದ್ದರೆ ವಾಯುದೇವರಿಗೆ ಮಾತ್ರ ಅತೀ ಸೂಕ್ಷ್ಮವಾದ ಆಕಾಶ ಮತ್ತು ಅತೀ ಸ್ಥೂಲವಾದ ಭೂ (ಪೃಥ್ವಿ) ಭೂತಾತ್ಮಕವಾದ ಶರೀರಾಂಶಗಳು ಇಲ್ಲ. ಇವರಿಗೆ ಇರುವುದು ವಾಯು, ಅಗ್ನಿ, ಜಲಾತ್ಮಕವಾದ ಶರೀರವು ಮಾತ್ರ. ಇದನ್ನು ಶ್ರೀ ಚಂದ್ರಿಕಾಚಾರ್ಯರು "ಅಪ್‌ತೇಜೋವಾಯುಭೂತ ತ್ರಯುಕೃತ ಶರೀರಾಯು" ಎಂದು ವಾಯು ಗದ್ಯದಲ್ಲಿ ಹೇಳಿರುತ್ತಾರೆ. ಶ್ರೀ ಜಗನ್ನಾಥದಾಸರೂ

> ಭೂತತ್ರಯ ವಪುಷಾ। ಭವಿಷ್ಯದ್ವಿ ಧಾತ ಗತಾ ದೋಷಾ॥
> ಮಾತರಿಶ್ವ ತನು ಜಾತ ಹನುಮ ಜಗ । ನ್ನಾಥ ವಿಠಲನ ಪ್ರೀತಿಲಿ ತೋರೋ ॥

ಎಂದು ಬರೆದಿರುತ್ತಾರೆ.

ಕೆಲವು ಕಡೆ ಹೇಳುತ್ತಿರುತ್ತಾರೆ! ವಾಯುದೇವರಿಗೆ ಕೆಲವು ಭೂತಾತ್ಮಕವಾದ ಶರೀರಗಳು ಇವೆ. ಕೆಲವು ಇಲ್ಲ. (ಮಾವ್ರೋ, ಎಷ್ಟೋ ವಿತರಣೆ ಇಲ್ಲ ). ಆದ್ದರಿಂದ ಕೆಲವು ತತ್ವಾಭಿಮಾನಿಗಳು ಮಾತ್ರ ವಾಯುದೇವರ ಸ್ವಾಧೀನದಲ್ಲಿ ಇದ್ದಾರೆ – ಕೆಲವರು ಇಲ್ಲ ಎಂದು ಮಹಾಸಂಶೋಧಕ ಪಟುಗಳಂತೆ ಹೇಳುತ್ತಾರೆ. ಹೀಗೆಂದಿಗೂ ತಿಳಿಯಬಾರದು. ಸಮಸ್ತ ಪ್ರಧಾನ ಇಪ್ಪತ್ತಾಲ್ಕು ತತ್ವಾಭಿಮಾನಿಗಳನ್ನೊಳಗೊಂಡು ಒಂಭತ್ತು ಕೋಟಿ ತತ್ವಾಭಿಮಾನಿಗಳೂ ವಾಯುದೇವರ ಸ್ವಾಧೀನದಲ್ಲಿ ಇದ್ದಾರೆ.

> ಮುಖ್ಯ ಪ್ರಾಣ ವಶೇಸರ್ವಂ । ಸವಿಷ್ಣೋರ್ವಶಗ ಸದಾ ॥ ಅ.ಭಾ. ॥
> ತತ್ವಾಭಿಮಾನಿನೋ ದೇವಾಃ । ದೇಹೇಸ್ಮಿನ್ । ನವ ಕೋಟಿಯಃ ॥
> ವಿಷ್ಣು ವಜ್ಞಯಾ ಪ್ರವರ್ತ್ರಂತೇ ತತ್ತತ್ತತ್ವಾವಬೋ ॥ ಧಕಃ "॥ಮಾನಸಸ್ಮೃತಿ॥"

ಪ್ರಾಣ ರಕ್ಷಕರಾದ ಪ್ರಾಣದೇವರು ಜೀವ ಪರಮಾತ್ಮರಿಬ್ಬರಿಗೂ ಪ್ರೀತ್ಯಾಸ್ಪದರು. ಜೀವ – ಪರಮಾತ್ಮರಿಬ್ಬರನ್ನೂ ನಿರ್ವ್ಯಾಜದಿಂದ ಪ್ರೀತಿಸುವವರು. ತಂದೆ, ತಾಯಿಗಳು ಮಕ್ಕಳನ್ನು ಪ್ರೀತಿಸುವುದೂ ಮಕ್ಕಳು ತಂದೆ ತಾಯಿಗಳನ್ನು ಪ್ರೀತಿಸುವುದೂ ಎರಡೂ ಪ್ರಾಣದೇವರು ಇಬ್ಬರಲ್ಲೂ ಒಂದೊಂದಂಶದಿಂದ ಸನ್ನಿಹಿತನಾಗಿರುವುದೇ ಕಾರಣವು. ಇದಕ್ಕೆ ಕಾರಣವೆಂದರೆ ಮಾತಾ–ಪಿತಾ, ಪುತ್ರ, ಪಶು, ಗೇಹ, ಸುಹೃಜ್ಜನಗಳೆಲ್ಲರ ಇಷ್ಟಾರ್ಥಗಳನ್ನು ಇತ್ತು ಸಂತೃಪ್ತಿಗೊಳಿಸುತ್ತಿರುವವನು ಶ್ರೀ ವಾಯುದೇವರೆ ಆಗಿದ್ದಾನೆ. ಪ್ರಾಣಿಗಳನ್ನು ರಕ್ಷಿಸಬೇಕೆಂಬ ಭಗವದಿಚ್ಛೆಗೆ ಅನುಗುಣವಾಗಿ ಇವರು ಪ್ರಾಣ ಕಾರ್ಯವನ್ನು ಮಾಡುತ್ತಿರುವುದರಿಂದ ಇವರು ಪ್ರಾಣಭವರು, ಪ್ರಾಣದೇವರು. (ಆಣ–ಜೀವ; ಪ್ರಾಣ=ಪ್ರಖರವಾದ ಚೇಷ್ಟೆಯಿಂದ ಯುಕ್ತನಾದವನು)

॥ ಪದ ॥ ಹರಿ ಭಯವೆಂಬುದು। ಸ್ವರೂಪದಲ್ಲಿಯೆ ಉಂಟು।
ಅರಿಯನು ಸಾಕಲ್ಯ। ಶಿರಿ ಹರಿಯಾಧೀನ॥
ದುರುಳರಾವೇಶದಿ। ತಿರೋಧಾನವೆಂಬುದಿಲ್ಲ॥
ವಿರಜೆ ಪರಿಯಂತ। ವರ್ಧಿಸಿ ಮೆರೆಯುತ ॥೨॥

**ಶಬ್ದಾರ್ಥ:** ಪರಮಾತ್ಮನ ಭಯವು ಸ್ವರೂಪದಲ್ಲಿಯೆ = ವಾಯುದೇವರು ಭಯ ರಹಿತರಲ್ಲ. ಭಗವಂತನ ನಿಮಿತ್ತ ಭಯಯುಳ್ಳವರು ಎಂದು ಅರ್ಥ, ಸಾಕಲ್ಯ = ಸಂಪೂರ್ಣ, ದುರುಳರು = ದೈತ್ಯರು: ತಿರೋಧಾನ= ಮರೆವು, ವಿಸ್ಮೃತಿ, ವಿರಜೆ ಪರಿಯಂತ = ಮೋಕ್ಷಕ್ಕೆ ಹೋಗುವವರೆಗೆ; ವರ್ಧಿಸಿ = ಅಧಿಕಗೊಳ್ಳುತ್ತ.

**ಅನುವಾದ:** ವಾಯುದೇವರಿಗೆ ಭಯವೆಂಬುದೇ ಇಲ್ಲ. ಅಷ್ಟೇ ಏಕೆ ವಾಯುವಿನ ಅವತಾರಾಂಶನೇ ಆದ ಪ್ರಾಣದೇವರನ್ನು ಸ್ಮರಿಸಿದವರಿಗೇ ಭಯವಿಲ್ಲದಂತಾಗುತ್ತಿರುವಾಗ ಇನ್ನು ವಾಯುದೇವರಿಗೆಲ್ಲಿಂದ ಭಯ ಉಂಟಾಗುತ್ತದೆ? ಎಂದರೆ ಭಯವಿಲ್ಲೆಂದೇ ಅರ್ಥ. ಆದರೆ ಸ್ವರೂಪದಿಂದ ವಿಚಾರ ಮಾಡಿದಾಗ ಪರಮಾತ್ಮನ ಭಯವು ವಾಯು, ಲಕ್ಷ್ಮಿಯನ್ನೊಳಗೊಂಡು ಸರ್ವರಿಗೂ ಉಂಟು. ಸೋತ್ತುಮರ ಭಯವು ಸ್ವಾವರರರಿಗೆ ಇದ್ದೇಇರುತ್ತದೆ. ಆದರೆ ಸರ್ವೋತ್ತಮನಾದ ಶ್ರೀಹರಿಗೆ ಮಾತ್ರ ಯಾರ ಭಯವೂ ಇಲ್ಲ. ಬದಲಿಗೆ ಎಲ್ಲರನ್ನೂ ಭಯಪಡಿಸುತ್ತಾನೆ.

"ತತೋಭಿಭೇತಿ ಸರ್ವೇಪಿ। ನಭಿಭೇತಿ ಹರಿ ಸ್ವಯಂ" ॥ ಭಾ॥
"ತದೇಜತಿ ತನ್ನೇಜತಿ। ತದ್ದೂರೇತದ್ವದಂತಿಕೇ" ಈ. ಉ.
"ತತ್ ಏವ ಜತ್ ಅನ್ಯತ್ ತತ್ಸ್ವಯಂ ನೇಜತಿ ॥ ಭಾ॥"

ವಾಯುದೇವರು ಪರಮಾತ್ಮನ ಬಗ್ಗೆ ಹೊಂದಿರುವಷ್ಟು ಜ್ಞಾನವನ್ನು ಇತರ ಯಾವ ಕ್ಷರ ಜೀವರಾಶಿಗಳೂ ಹೊಂದಿಲ್ಲ. ಇವರು ಬ್ರಹ್ಮಕಲ್ಪರೇ ಆದುದರಿಂದ ಕೇವಲ ನಾಲ್ಕು ಗುಣವೋಪಾಸನೆಯಿಂದ ಮಾತ್ರ ಇವರು ಬ್ರಹ್ಮನಿಗೆ ಸಾಧನಕಾಲದಲ್ಲಿ ಅವರರಾಗಿದ್ದಾರೆ. ಆದರೆ ಸ್ವರೂಪದಿಂದ ಭಾವಿ ಬ್ರಹ್ಮರೇ ಇವರು. ಋಜುಗಣಸ್ಥರೆಲ್ಲರೂ ಯೋಗ್ಯತೆಯಲ್ಲೂ ಸಮಾನರೇ. ಆದರೆ ಸಾಧನ ಕಾಲದಲ್ಲಿ ಒಂದನೇ ಕಲ್ಪದ ಋಜುವಿಗಿಂತ ೨ ನೇ, ೩ನೇ ಹೀಗೆ ೨೦೦ನೇ ಕಲ್ಪದವರು ತಮ್ಮ ಹಿಂದಿನ ಕಲ್ಪದವರಿಗಿಂತ ಒಂದು ಕಲ್ಪ ಸಾಧನದ ಜ್ಞಾನದಷ್ಟು ಹೆಚ್ಚು ಜ್ಞಾನದವರಾಗಿರುತ್ತಾರೆ. ಗಣ ಜೇಷ್ಠರೆನಿಸುತ್ತಾರೆ. ಸಾಕಲ್ಯದಿಂದ ಲಕ್ಷ್ಮೀಯೂ ಶ್ರೀಹರಿಯನ್ನು ತಿಳಿದಿಲ್ಲವೆಂದ ಮೇಲೆ ಇನ್ನು ವಾಯುದೇವರು ಸಾಕಲ್ಯದಿಂದ ಶ್ರೀಹರಿಯನ್ನು ತಿಳಿದಿಲ್ಲವೆಂಬುದು ಆಶ್ಚರ್ಯದ ಮಾತಲ್ಲ. ತಾವು ಶ್ರೀಹರಿಯನ್ನು ಸಾಕಲ್ಯದಿಂದ ತಿಳಿದಿಲ್ಲವೆಂದು ಬ್ರಹ್ಮದೇವರೇ ಹೇಳಿದ್ದಾರೆ.

ಬ್ರಹ್ಮ ಉವಾಚಾ: "ನಾಹಂ ನಯೂಯಂ। ಬತತದ್ಗತಿಂವಿಧು।
ರ್ನ ವಾಮದೇವಃ। ಕಿಮುತಾ ಪರೇಸುರಾಃ॥ ಭಾಗವತ ॥
"ಏಕೋತ್ತರ ಪಂಚಾಶದ್ವರ್ಣಗ। ಳೇಕಾತ್ಮನ ನಾಮಂಗಳಿವು॥
ಮಾಕಮಲಾಸನ ಮೊದಲಾದಮರರು । ಸಾಕಲ್ಯದಿ ಇವರನರಿಯರೆಂತೆಂಬುದೆ॥"
॥ಫಲವಿದು ಬಾಳ್ದುದಕೆ॥

ದೇವ ಶ್ರೇಷ್ಠರಾದ ವಾಯುದೇವರಿಗೆ ಕಲ್ಯಾದಿ ದೈತ್ಯರ ಆವೇಶವು, ಮತ್ತು ತನ್ನಿ ಮಿತ್ತವಾದ ಅಜ್ಞಾನ ಕಾರ್ಯಗಳು ಇಲ್ಲವು. ದೇವತೆಗಳು ಸ್ವರೂಪತಃ ವಿಕರ್ಮಗಳಲ್ಲಿ ನಿರತರಾಗುವುದಿಲ್ಲ. ಆದರೆ ದೈತ್ಯರ ಆವೇಶ ಬಂದಾಗ ಮಾತ್ರ ಇವರ ಜ್ಞಾನವು ತಿರೋಧಾನವಾಗಿರುತ್ತದೆ. ಇವರ ಜ್ಞಾನವು ವೃದ್ಧಿ ಮತ್ತು ಹ್ರಾಸ ಹೊಂದುತ್ತಾ ಇರುತ್ತದೆ. ಇಂಥಾಸ್ಥಿತಿಯು ಗರುಡ ಶೇಷರಿಂದಾರಂಭಿಸಿ ತೃಣ ಜೀವ ಪರಿಯಂತವಾಗಿ ಇರುತ್ತದೆ. ಕೆಳಹಂತದಲ್ಲಿ ಇರುವವರಿಗೆ ಕ್ರಮವಾಗಿ ಅಸುರಾವೇಶ ಕಾಲವು ಅಧಿಕವಾಗುತ್ತ ಹೋಗುತ್ತದೆ. ಆವೇಶ ನಿವೃತ್ತಿಯಾದ ಮೇಲೆ ಅವರು ಸ್ವರೂಪಕ್ಕೆ ಮರಳುತ್ತಾರೆ. ಪಶ್ಚಾತ್ತಾಪಗಳಿಂದ ಶುದ್ಧಿಯಾಗುತ್ತಾರೆ. ಆದರೆ ವಾಯುದೇವರಿಗೆ ಇಂಥಾ ಅವಸ್ಥೆಯು ಇಲ್ಲ. ವಾಯು ದೇವರ ಜ್ಞಾನವು ಸೃಷ್ಟ್ಯಾರಬ್ಧದಿಂದ ಮೋಕ್ಷ ಪರಿಯಂತವಾಗಿ ವೃದ್ಧಿ ಪಥದಲ್ಲಿ ಇರುತ್ತದೆಯೇ ವಿನಃ ಹ್ರಾಸವೆಂಬುದೇ ಇಲ್ಲ. ಒಂದು ಬ್ರಹ್ಮಾಂಡದಲ್ಲಿ ಏಕ ಕಾಲದಲ್ಲಿ ಇನ್ನೂರು ಜನ ಋಜು ಗಣಸ್ಥರಿರುತ್ತಾರೆ. ಒಂದನೇ ಸಂಖ್ಯೆಯ ಋಜುಗಣಸ್ಥನು ಅಸೃಜ್ಯಾವಸ್ಥೆಯಿಂದ ಆಗ ತಾನೇ ಸೃಷ್ಟಿಗೆ ಬಂದಿರುತ್ತಾನೆ. ಈತನಿಗಿಂತ ಬ್ರಹ್ಮನಿಗೇ ಇನ್ನೂರನೇ ಕಲ್ಪದವರೆಗೆ ಸಾಗಿದ ಅಧಿಕ ಸಾಧನದ ಜ್ಞಾನವು ಇರುತ್ತವೆ. ಬಟ್ಟೆಯನ್ನು ನೀರಿನಲ್ಲಿ ಅದ್ದಲು ತಂತುಗಳಲ್ಲಿ ನೀರು ಸೇರಿ ಅದು ಒದ್ದೆಯಾಗುವಂತೆ ಇತರ ದೇವತೆಗಳಲ್ಲಿ ಕಲ್ಯಾದಿ ದೈತ್ಯರ ಆವೇಶವಾಗುತ್ತದೆ. ಆದರೆ ವಾಯುದೇವರು ಕಂಬಳಿಯಂತಿದ್ದು (ತೋಯದೆ) ಅಸುರಾವೇಶ ರಹಿತರಾಗಿದ್ದಾರೆ. ವಾಯುದೇವರು ಜೀವೋತ್ತಮರು ಎಂಬುವದಕ್ಕೆ ಅಸುರಾವೇಶ ರಹಿತತ್ವವೇ ಕಾರಣ. ಇದು ವಾಯು-ದೇವತೆಗಳಿಗೆ ಇರುವ ವ್ಯತ್ಯಾಸವನ್ನು ತೋರುತ್ತದೆ. ಯೋಗ್ಯವೇ. ಹುಳಿಸಂಪರ್ಕದಿಂದ ತಾಮ್ರ ಹಿತ್ತಾಳೆಗಳು ಕಿಲುಬುಗೊಳ್ಳುವಂತೆ ಬಂಗಾರವು ಎಷ್ಟು ಮಾತ್ರಕ್ಕೂ ಪರಿಣಾಮವನ್ನು ಹೊಂದುವುದಿಲ್ಲ. ಹಾಗೆಯೇ ವಾಯುದೇವರು ದೇವ-ದಾನವಾವೇಶ ಮುಕ್ತರು. ಬದಲಿಗೆ ಇವರೇ ಇವರೀರ್ವರಲ್ಲಿ ಆವೇಶಿತರಾಗಿ ಅಂತಃಪ್ರೇರಿತರಾಗಿ ಅವರವರ ಸ್ವರೂಪ ಯೋಗ್ಯತಾನುಸಾರವಾಗಿ ಕರ್ಮಗಳನ್ನು ಮಾಡಿಸುತ್ತಾರೆ.

"ತತ್ರೋತ್ತಮ ದೇವತಾಸ್ತಾ। ಸರ್ವ ದೋಷ ವಿವರ್ಜಿತಾಃ ॥
ಗುಣೈಃ ಸರ್ವೈಃ ಸುಸಂಪನ್ನಾ। ವಿರಿಂಚಾದುತ್ತರೋತ್ತರಂ ॥
ಪ್ರೇರಕಾಃ ಸರ್ವ ಜೀವಾನಾಂ। ಸೋತ್ತಮೈಃ ಪ್ರೇರಿತಾ ಸದಾ ॥
ತೇಷಾಂ ದುಃಖಾದಿಕಂ ಕಿಂಚಿತ್। ಅಸುರಾವೇಶತೋ ಭವೇತ್ ॥
ಪ್ರಾಣಸ್ಯನಾಸುರಾವೇಶಾ। ಆಖಿಣಾಶ್ಮ ಸಮೋಹಿಸಃ ॥"
"ಅಸುರಾವೇಶ ವಿಧುರಾಯ। ಆಮುಕ್ತಿ ಕ್ರಮೇಣ ವರ್ಧಮಾನೇನ"

(ವಾಯುಗದ್ಯ ಶ್ರೀ ವ್ಯಾ. ರಾಯರು)

"ಜ್ಞಾನ ಭಕುತಿಯು ದ್ರುಹಿಣ ಪದ ಪರಿಯಂತ ವೃದ್ಧಿಯು ..........

(ಹ.ಕ.ಸಾ. ಸಂ. ೨೪ಪ. ೩೪)

ಅಂದರೆ, ಮೇಲೆ ವಿವರಿಸಿರುವಂತೆ ಋಜುಗಣಸ್ಥರಿಗೆ ಸೃಷ್ಟ್ಯಾದಿಯಿಂದ ಬ್ರಹ್ಮ ಪದವಿಗೆ ಬರುವವರೆಗೂ ಜ್ಞಾನವು ವೃದ್ಧಿಗೊಂಡು ಬ್ರಹ್ಮಪದವಿಯನ್ನು ಒಂದು ಕಲ್ಪ ಭೋಗಿಸಿದಾನಂತರ ಅವರಿಗೆ ಮುಕ್ತಿಯಾಗುತ್ತದೆ.

॥ ಪದ ॥ ಶ್ರೀಕರನಿದಿರಲಿ। ಶೋಕ ಭಯಾಽಜ್ಞಾನ ।
ಸೂಕ್ತವಾಗಿದೆ ಪ್ರ ಸಕ್ತ ಲೋಕದೊಳಿಲ್ಲ ॥
ಲೋಕಕೆ ತೋರಿದ। ಶೋಕ ಮೋಹಾಽ ಜ್ಞಾನ।
ಏಕಾತ್ಮನೊಲಿಮೆಗೆ। ಘೂಕ ವಿಡಂಬನಕ್ಕೆ ॥೩॥

**ಶಬ್ದಾರ್ಥ:** ಶ್ರೀಕರನಿದಿರಲಿ = ಪ್ರಪಂಚಕ್ಕೆ ಮಂಗಳವನ್ನುಂಟು ಮಾಡುವ ಶ್ರೀಹರಿ. ಸೂಕ್ತವಾಗಿದೆ = ಯಥಾರ್ಥವಾಗಿಯೇ ಇದೆ. ವಾಯುದೇವರಿಗೆ ಪರಮಾತ್ಮನ ದೃಷ್ಟಿಯಲ್ಲಿ ಅಜ್ಞಾನ, ಶೋಕ, ಭಯಗಳು ಇವೆ ಎಂದರ್ಥ. ಪ್ರಸಕ್ತಲೋಕದೊಳಿಲ್ಲ = ಈ ಅಜ್ಞಾನಾದಿಗಳು ಲಕ್ಷ್ಮೀನಾರಾಯಣರ ಪರ ವಿನಃ ಇತರ ಜೀವ, ಜಡ ಪ್ರಪಂಚದ ಬಗ್ಗೆ ಇಲ್ಲ. ಲೋಕಕೆ ತೋರಿದ = ಆದರೂ ಹನುಮ, ಭೀಮ, ಮಧ್ವಾವತಾರಗಳಲ್ಲಿ ಕೆಲ ಸಂದರ್ಭಗಳಲ್ಲಿ ಅಜ್ಞಾನಾದಿಕಾರ್ಯಗಳು ಕಂಡಿರುವುದು ಅದು ಸ್ವ ಇಚ್ಛೆಯಿಂದ ತೋರ್ದ ಕಾರ್ಯಗಳು; ಏಕಾತ್ಮನೊಲಿಮೆಗೆ = ಪರಮಾತ್ಮನ ಪ್ರೀತಿಗಾಗಿ; ಘೂಕ ವಿಡಂಬನಕ್ಕೆ = ಜ್ಞಾನ ಶೂನ್ಯವಾದ ಗೂಬೆಯಂತಿರುವ ಅಸುರರ ಸಮ್ಮೋಹನಕ್ಕೆ.

**ಭಾವಾರ್ಥ:** ವಾಯು ದೇವರಿಗೆ ಅಜ್ಞಾನ, ಶೋಕ, ಭಯ ಇವುಗಳು ಇಲ್ಲವೇ ಇಲ್ಲ; ಆದರೆ ಇವನ್ನು ಕೇವಲ ಪರಮಾತ್ಮ ಪ್ರೀತಿಗಾಗಿ ತೋರಿದ್ದಾನೆ ಎಂದು ಹೇಳುತ್ತಾರೆ. ಇಲ್ಲಿ ಹೆಚ್ಚಿನ ವಿವರದ ಅವಶ್ಯಕತೆ ಇದೆ. ಯಾಕೆಂದರೆ ಕೇವಲ ಹರಿ ಪ್ರೀತಿಗಾಗಿ ಅಜ್ಞಾನ, ಶೋಕ ಭಯಗಳನ್ನು ತೋರಿದ್ದಾನೆ ಎಂದಿಷ್ಟೇ ಹೇಳಿದರೆ ವಾಯುದೇವರು ತನ್ನಲ್ಲಿ ಇಲ್ಲದ ಶೋಕಾದಿಗಳನ್ನು ಭಗವಂತನ ಮುಂದೆ ನಟಿಸಿದನೆಂದರೆ ಈತನ ನಟನೆಯ ಮರ್ಮವು ಭಗವಂತನು ಅರಿಯದೇ ವಂಚಿತನಾಗಿ ವಾಯುವನ್ನು ಪ್ರೀತಿಯಿಂದ ಅನುಗ್ರಹಿಸಿದನು ಎಂಬ ಅಭಿಪ್ರಾಯವು ಮೂಡುತ್ತದೆ. ಇದು ಶುದ್ಧ ತಪ್ಪು.

ಈ ಹಿಂದೆಯೇ ಹೇಳಿದಂತೆ ಪರಮಾತ್ಮನ ಮತ್ತು ಲಕ್ಷ್ಮೀ ದೇವಿಯರ ಬಗ್ಗೆ, ಅವ್ಯಕ್ತ ತತ್ವದ ಬಗ್ಗೆ ವಾಯುದೇವರಿಗೆ (ಸಾಕಲ್ಯೇವ) ಇರುವ ಅಜ್ಞಾನವು ಯಥಾರ್ಥವಾಗಿಯೇ ಇದೆ. ಬ್ರಹ್ಮಾಂಡದ ವಿಷಯದಲ್ಲಿ ವಾಯುವಿಗೆ ಸುತರಾಂ ಅಜ್ಞಾನಾದಿಗಳು, ಇಲ್ಲ ಹಾಗಾದರೆ ಭಗವತ್ಪ್ರೀತಿಗೋಸ್ಕರವಾಗಿ ಬ್ರಹ್ಮಾಂಡದಲ್ಲೇ ತೋರಿದ ಅಜ್ಞಾನ ಶೋಕ, ಭಯಗಳನ್ನು ಹೇಗೆ ಭಾವಿಸಬೇಕು ಎಂದರೆ ಪರಮಾತ್ಮನು ಅಸುರ ಮೋಹನಾರ್ಥವಾಗಿಯೂ, ಮುಮುಕ್ಷುಗಳ ಉದ್ಧಾರಾರ್ಥವಾಗಿಯೂ, ನಾನಾವತಾರಗಳನ್ನು ಮಾಡುತ್ತಾನೆ. ಈ ಅವತಾರ ಕಾಲದಲ್ಲಿ ಪರಮಾತ್ಮನೂ ಪ್ರಾಕೃತ ಪುರುಷನಂತೆ ನಟಿಸಿ ಕ್ಷುತ್ಪಿಪಾಸ, ಜರಾ, ನಿದ್ರಾಲಸ್ಯ, ಮರಣಾದಿಗಳನ್ನು ಅನುಭವಿಸಿದವನಂತೆ ನಟಿಸುತ್ತಾನೆ. ಇದೇ ರೀತಿಯಾಗಿ ಭಗವಂತನ ಪ್ರೀತಿಗಾಗಿ ಹನುಮಂತಾದಿ ಅವತಾರಗಳಲ್ಲಿ ದೇವದೂತನಾಗಿ ವಾಯುವೂ ಅಜ್ಞಾನ; ಭಯ, ಶೋಕಾದಿಗಳನ್ನು ಪ್ರಕಟಿಸುತ್ತಾನೆ. ಹೀಗೆ ಮಾಡುವದು ಭಗವತ್ಕಾರ್ಯ ಸಾಧನೆಗಾಗಿ. ಪರಮಾತ್ಮನ ಲೀಲೆಯು ವಿಶ್ವತೋಮುಖವಾದರೆ ವಾಯುವಿನ ಲೀಲೆಯು ಬ್ರಹ್ಮಾಂಡಗತವಾದುದು.

ಒಂದು ಉದಾಹರಣೆಯಿಂದ ಇದನ್ನು ವಿಶ್ಲೇಷಿಸುವುದಾದರೆ ರಾಜಾಮಾತ್ಯರು ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನಾರ್ಥವಾಗಿ ಇಬ್ಬರೂ ಮಾರುವೇಷದಿಂದ ಸಂಚರಿಸುತ್ತಾರೆ. ರಾಜನು ಡೊಂಬನಾದರೆ ಮಂತ್ರಿಯು ಡೋಲು ಬಾರಿಸುವವನಾಗುತ್ತಾನೆ. ರಾಜನ ಕುಣಿತಕ್ಕೆ ಸರಿಯಾಗಿ ಮಂತ್ರಿಯು ಡೋಲನ್ನು ಬಾರಿಸುತ್ತಾನೆ. ರಾಜನಿಗೂ,

ಮಂತ್ರಿಗೂ ಇಬ್ಬರಿಗೂ ಗೊತ್ತು ತಾವು ಡೊಂಬರಲ್ಲವೆಂದು. ಇಲ್ಲಿ ಮಂತ್ರಿಯು ರಾಜನ ಪ್ರೀತಿಗಾಗಿ, ಕಾರ್ಯಸಾಧನೆಗಾಗಿ ಡೋಲು ಬಾರಿಸುವವನಾಗಿದ್ದಾನೆ. ಇದು ರಾಜನಿಗೆ ಗೊತ್ತಿಲ್ಲವೇ? ರಾಜಾಜ್ಞೆಯಂತೆಯೇ ಈ ನಟನೆ. ಇದೇ ರೀತಿಯಾಗಿ ಶ್ರೀಹರಿಯಾಜ್ಞೆಯಂತೆ, ತ್ರಿವಿಧಜೀವರ ಸ್ವರೂಪ ವಿಕಾಸಕ್ಕಾಗಿ ವಾಯುದೇವರು ಭಗವದಿತರವಾದ ಈ ಬ್ರಹ್ಮಾಂಡದ ವಿಷಯದಲ್ಲಿ ನಶ್ವರ ಸುಖದ ಬಗ್ಗೆ ಅಜ್ಞಾನ, ಅಭಿರುಚಿಗಳಿಲ್ಲದಿರುವವನಾದರೂ ಆ ತೆರನಾಗಿ ನಟಿಸಿದನು. "ಭಗವತ್ಪ್ರೀತ್ಯರ್ಥಂ ಅಜ್ಞಾನ ಶೋಕ ಭಯಾಯ" ಎಂಬ ವಾಯು ಗದ್ಯಕ್ಕೆ ಮೇಲಿನಂತೆ ಅರ್ಥೈಸಬೇಕು. ಶ್ರೀವಿಜಯರಾಯರು "ವಾಯು ದೇವರು ಬ್ರಹ್ಮಾಂಡವನ್ನು ಬಲ್ಲವರಾದರೂ ಸೀತೆಯನ್ನು ಹುಡುಕಿದರು. ಈ ಬ್ರಹ್ಮಾಂಡವನ್ನು ಹೆಬ್ಬೆಟ್ಟಿನಿಂದ ಆಣೆಕಲ್ಲಿನಂತೆ ಚಿಮ್ಮಬಲ್ಲವರಾದರೂ ಸಂಜೀವನ ಬೆಟ್ಟವನ್ನು ಬಹು ಸಾಹಸದಿಂದ ತಂದವನಂತೆ ನಟಿಸಿದರು. ಏನು ಈತನ ಲೀಲೆ ಎಂದು ಹೊಗಳಿರುತ್ತಾರೆ. ಈ ವಿಡಂಬನೆಗಳು ದೈತ್ಯರಿಗೆ ಆಯಥಾರ್ಥವಾದ, ಅಜ್ಞಾನಾಭಿವೃದ್ಧಿಗಾಗಿ ತೋರಿದ ಲೀಲೆಗಳು, ಇಷ್ಟನ್ನು ಬಿಟ್ಟರೆ ಪರಮಾತ್ಮನ ಮತ್ತು ವಿಶ್ವ ಸ್ಥಿತಿಯಿಂದ ವಿವೇಚಿಸಿದಾಗ ವಾಯುದೇವರಿಗೆ ಭಗವಂತನ ವಿಷಯದಲ್ಲಿ ಸಾಕಲ್ಯೇ, ನವಿವಿಕ್ಷದಿಂದ ಅಜ್ಞಾನ, ಶೋಕ, ಭಯಾದಿಗಳು ಇವೆ ಎಂದು ಸಿದ್ಧವಾಗುತ್ತದೆ. ಜಗದ್ವಿಷಯಲ್ಲಿ ಮಾತ್ರ ವಿಡಂಬನೆಯನ್ನು ಮಾಡಿರುತ್ತಾರೆ. ಈ ಉಪಾಸನೆಯು ಹರಿಸರ್ವೋತ್ತುಮತ್ವಕ್ಕೆ ಪೂರಕವಾಗಿರುವುದರಿಂದ ಪರಮಸಾಧುವಾಗಿದೆ.

> "ಅನಿತ್ಯತ್ವಂ ದೇಹ ಹಾನಿ। ದುಃಖಪ್ರಾಪ್ತಿರಪೂರ್ಣತಾ॥
> ನಾಶಃ ಚತುರ್ವಿಧಃ ಪ್ರೋಕ್ತಾ। ತದಾಭಾವೋ ಹರೇ ಸ್ಸದಾ॥"

ಚತುರವಿಧ ನಾಶಗಳು ಯಾರಿಗಿಲ್ಲವೋ ಅವನೇ ಸರ್ವೋತ್ತಮನು. ಅವನು ಕೇವಲ ಶ್ರೀಹರಿಯು ಮಾತ್ರ. ಕ್ಷರಃ ಸರ್ವಾಣಿ ಭೂತಾನಿ। ಕೂಟಸ್ಥೋ ಅಕ್ಷರ ಉಚ್ಯತೇ॥"

ಎಂದಂತೆ ಅಸೃಜ್ಯಾವಸ್ಥೆಯಿಂದ ಸೃಷ್ಟಿಗೆ ಬರುವ ಸಕಲ ಜೀವರೂ ಲಿಂಗ ದೇಹ ಉಳ್ಳವರಾದುದರಿಂದ, ಈ ಲಿಂಗವು ಜೀವ ಭಿನ್ನವಾದ ಜಡವಾದುದರಿಂದ, ಕಾಲಾಂತರದಲ್ಲಿ ಇದು ನಿವೃತ್ತಿಯಾಗುವುದರಿಂದ ಇವರನ್ನು ಕ್ಷರಪುರುಷರೆನ್ನುತ್ತಾರೆ. ಎಂದರೆ ದೇಹ ವಿಯೋಗ ಉಳ್ಳವರೆಂದು ಅರ್ಥ. 'ಅನಿತ್ಯತ್ವಂ' ಎಂದರೆ ಮಣ್ಣು ನಿತ್ಯವಾದರೂ ಘಟವು (ರೂಪ) ಅನಿತ್ಯವಾದುದು. ಇನ್ನು 'ದುಃಖ ಪ್ರಾಪ್ತಿ' ಎಂಬುದು ಪರಾಧೀನ ದೋಷವು 'ಅಪೂರ್ಣತಾ' ಎಂದರೆ ಸರ್ವನಿಯಾಮಕತ್ವಾಃ ಭಾವ. ಹೀಗೆ ಇರುವ ದೋಷಗಳನ್ನು ಶಾಸ್ತ್ರ ದೃಷ್ಟಿಯಲ್ಲಿ 'ನಾಶ'ವೆಂದು ಪರಿಗಣಿಸಿರುತ್ತಾರೆ. ಈ ದೋಷಗಳು ವಾಯುವಿನಲ್ಲಿ ಇರುವುದರಿಂದ ವಾಯುವು ಹರಿ ಸಾಮ್ಯರಲ್ಲವೆಂಬ ಜ್ಞಾನವು ಯಥಾರ್ಥವೆನಿಸುತ್ತದೆ. ಇದು ಭೂಷಣವೇ. ಶ್ರೀ ಲಕ್ಷ್ಮೀದೇವಿಯೂ ಪಾರತಂತ್ರ್ಯ ಅಪೂರ್ಣ ಗುಣತ್ವವನ್ನು ಹೊಂದಿ, ಪರಮಾತ್ಮನ ಏಕ ಗುಣೋಪಾಸನೆಯನ್ನು ಮಾಡುತ್ತಿರುವಾಗ ಇನ್ನು ವಾಯುದೇವರಿಗೆ ಇವನ್ನು ಹೇಳಿದರೆ ದೋಷವಿಲ್ಲ. ಲಕ್ಷ್ಮೀದೇವಿಯು ಅಕ್ಷರ (ದೇಹ ನಾಶ ರಹಿತ) ಪುರುಷಳು. ವಾಯುವು ಕ್ಷರ ಪುರುಷನು. ಪರಿಣಾಮ ಶೂನ್ಯವಾದ, ದಗ್ಧಪಟ ಸದೃಶವಾದ ಲಿಂಗಶರೀರವು ಇವರಿಗೆ ಇದೆ.

ವಾಯುದೇವರು ಬ್ರಹ್ಮಪವಿಗೆ ಬಂದಾಗ ನಾಭಿಕಮಲದಿಂದ ಪುಟ್ಟಿದ ಕೂಡಲೇ ಭೂ, ದುರ್ಗಾರೂಪವಾದ ಜಲರಾಶಿ, ಗಾಢಾಂಧಕಾರಗಳನ್ನು ಕಂಡು ಭಯಪಟ್ಟು ರೋಧಿಸಿರುತ್ತಾನೆ. ಜ್ಞಾನ ಪ್ರಾಪ್ತಿಗಾಗಿ ಭಗವದುಪಾಸನೆಯನ್ನು

ಮಾಡಿರುತ್ತಾನೆ. ಭಗವತ್ಪರವಾಗಿ ಅಜ್ಞಾನ, ಭಯ, ಶೋಕಗನ್ನು ಯಥಾರ್ಥವೆಂದು ಭಾವಿಸಿ, ಬ್ರಹ್ಮಾಂಡದಲ್ಲಿ ತೋರಿದ ಈ ಕೃತ್ಯಗಳು ವಿಡಂಬನಕ್ಕಾಗಿ ಮತ್ತು ಶ್ರೀಹರಿ ಪ್ರೀತ್ಯರ್ಥವಾಗಿ ಎಂದು ತಿಳಿಯಬೇಕು. ಇದು ಶ್ರೀಹರಿಕಥಾಽಮೃತಸಾರದಲ್ಲಿ ಹೀಗೆ ಹೇಳಿರುತ್ತಾರೆ.

"ಜ್ಞಾನ ಭಯ ರಹಿತತ್ವ ಪೇಳ್ಽ ಪುರಾಣ ದೈತ್ಯರ ಮೋಹಕವು ಚತು।
ರಾನನಿಗೆ ಕೂಡುವುದೆ ಮೋಹಾಽಜ್ಞಾನ ಭಯ ಶೋಕ॥
ಭಾನು ಮಂಡಲ ಚಲಿಸಿದಂದದಿ। ಕಾಣುವದು ದೃಗ್ದೋಷದಿಂದಲಿ।
ಶ್ರೀನಿವಾಸನ ಪ್ರೀತಿಗೋಸುಗ ತೋರ್ದನಲ್ಲದಲೇ"

ಈ ಪದ್ಯಕ್ಕೆ ಮೇಲಿನಂತೆ ಅರ್ಥಮಾಡಿಕೊಳ್ಳಬೇಕು.

॥ ಪದ ॥ ಹರಿ ಪರವಾಗೀ। ಅರಿಯನೆಂಬುದು ಸತ್ಯ
ಪರತ್ರದಿ ಅರಿತರು। ಮರೆಮಾಚಿದನು॥
ಮರೆಮಾಚಿದನವ। ತರಿಸಿದ ಕಾಲಕ್ಕೆ।
ಹರಿ ತೋಷಣೆಗೆಂದು। ಒರೆದರು ಸಾರದಿ ॥೪॥

**ಶಬ್ದಾರ್ಥ:** ಹರಿಪರನಾಗಿ = ಪರಮಾತ್ಮನ ವಿಷಯದಲ್ಲಿ; ಅರಿಯ = ಅಜ್ಞಾನ – ಎಂದರೆ ಸಾಕಲ್ಯ ಜ್ಞಾನರಹಿತರು; ಪರತ್ರದಿ = ಬ್ರಹ್ಮಾಂಡದ ಬಗ್ಗೆ; ಅರಿತರು = ತಿಳಿದವರಾಗಿದ್ದರೂ, ಮರೆಮಾಚಿದನು = ಜ್ಞಾನಿ ಎಂಬಂತೆ ತೋರದೆ ಇದ್ದನು; ಅವತರಿಸಿದ ಕಾಲಕ್ಕೆ = ಹನುಮ, ಭೀಮಾವತಾರಗಳಲ್ಲಿ ಸಾಮಾನ್ಯರಂತೆ ವರ್ತಿಸಿದರು; ಹರಿತೋರ್ಷಣೆಗೆ = ಹರಿ ಇಚ್ಛೆಗನುಗುಣವಾಗಿ; ಎಂದು = ಹೀಗೆ; ಬರೆದರು = ಹೇಳಿರುತ್ತಾರೆ; ಸಾರದಿ = ಹರಿಕಥಾಽಮೃತಸಾರದಲ್ಲಿ

**ಭಾವಾರ್ಥ:** ವಾಯು ದೇವರಿಗೆ ಹರಿಯ ವಿಷಯದಲ್ಲಿ ಸಾಕಲ್ಯೇನ ಜ್ಞಾನ ಇಲ್ಲವು. ಆದರೆ ಜಗದ್ವಿಷಯದಲ್ಲಿ ಅವರಿಗೆ ಯತ್ಕಿಂಚಿತ್ತೂ ಅಜ್ಞಾನಾದಿಗಳು ಇಲ್ಲವೇ ಇಲ್ಲ. ಆದಾಗ್ಯೂ ವಾಯು ದೇವರು ಪ್ರಪಂಚದಲ್ಲಿ ತಾವು ಅಜ್ಞಾನಿಗಳಲ್ಲವೆಂಬುದನ್ನು ಪ್ರಕಟಿಸದೇ ಇತರರಂತೇ ಸಾಹಸಮಯವಾದ ಶ್ರಮದಿಂದ ಶ್ರೀರಾಮ, ಕೃಷ್ಣರ ಸೇವೆಯನ್ನು ಮಾಡಿದರೆಂಬಂತೆ ತೋರಿರುತ್ತಾರೆ. ಅವರು ಹೀಗೆ ಮಾಡಿರುವುದು ಕೇವಲ ಅವತಾರ ಕಾಲಗಳಲ್ಲಿ ಮಾತ್ರ. ಮೂಲರೂಪದಿಂದ ಅಲ್ಲ. ಪರಮಾತ್ಮನು ಅವತಾರ ಮಾಡಿದಂತೆ ವಾಯುವು ತಾನೂ ಅವತಾರ ಮಾಡಿ ಆತನು ನಟಿಸಿದಂತೆ ತಾವೂ ನಟಿಸಿ ಪರಮಾತ್ಮ ಪ್ರೀತಿ ಪಾತ್ರರಾಗಿರುವರೆಂದು ಶ್ರೀಹರಿಕಥಾಽಮೃತಸಾರ ಹಾಗೂ ಶ್ರೀವಿಜಯರಾಯರ ಸುಳಾದಿಗಳಲ್ಲಿ ವರ್ಣಿಸಲಾಗಿದೆ. ಶ್ರೀ ವಾಯುದೇವರ ಮಹಿಮೆಯು ರಾಮಾಯಣ – ಮಹಾಭಾರತಗಳಲ್ಲಿ ಹೇಳಿರುವ ಮಹಿಮೆಗಳಿಗಿಂತ ಆಗಾಧಮಯವಾದುದು ಎಂದು ಅರ್ಥ. ಅಸುರ ಮೋಹನಾರ್ಥವಾಗಿ ಅಜ್ಞರಂತೆ – ಸಾಮಾನ್ಯರಂತೆ ನಟಿಸಿರುತ್ತಾನೆ.

॥ ಪದ ॥ ಹರಿಯಂತೆ ತಾನವ । ತರಿಸಿದ ಭಾಗ್ಯವಂತ।
ಹರಿಯಂತೆ ನಟಿಸಿ। ಚರಾಽಚರ ನಿಚಯವ॥
ಚರಣ ನಖಾಗ್ರದಿ। ಗಿರಿಗಿರಿ ತಿರುಗಿಸಿ।
ಗುರಿ ಸಾಧಿಸಿದುದ। ನೊರೆದಿವೆ ಶೃತಿಗಳು ॥ ೫ ॥

**ಶಬ್ದಾರ್ಥ:** ಹರಿ = ಶ್ರೀಹರಿ, ವಿಷ್ಣು; ಭಾಗ್ಯವಂತ = ಶಕ್ತಿಶಾಲಿ, ಯೋಗ್ಯ; ಚರಾಽಚರ = ಜಂಗಮ, ಸ್ಥಾವರ, ದೇವ, ಮಾನವ, ದಾನವರೆಂಬ ತ್ರಿವಿಧ ಜೀವ ರಾಶಿಗಳಲ್ಲಿನ ಅಸಂಖ್ಯಾತರನ್ನು; ಚರಣ ನಖಾಗ್ರದಿ = ಇಚ್ಛಾಮಾತ್ರದಿಂದ, ಸುಲಭವಾಗಿ; ಗಿರಿಗಿರಿತಿರುಗಿಸಿ = ಅವರಲ್ಲಿ ಅಂತಃಪ್ರೇರಕರಾಗಿ ಅವರಿಂದ ಉಚಿತಸಾಧನಗಳನ್ನು ಮಾಡಿಸುತ್ತ; ಗುರಿಸಾಧಿಸಿದುದ = ಜಗದ್ವ್ಯಾಪಾರವನ್ನು ಮಾಡಿ ಹರಿಗೆ ಅರ್ಪಿಸಿದ ಬಗೆಯನ್ನು; ಒರೆದಿವೆ ಶೃತಿಗಳು = ವೇದಗಳು ಕೊಂಡಾಡಿವೆ.

**ಭಾವಾರ್ಥ:** ಶ್ರೀಮನ್ನಾರಾಯಣನು ಭೂಲೋಕದಲ್ಲಿ ನಾನಾ ಅವತಾರಗಳನ್ನು ಮಾಡಿದನು. ಆತನನ್ನು ಅನುಸರಿಸಿ ವಾಯುದೇವರೂ ಅವತಾರಗಳನ್ನು ಮಾಡಿದರು. ಹೀಗೆ ಪರಮಾತ್ಮನ ತೃಪ್ತಿಕಾರಕವಾಗಿ ವ್ಯವಹರಿಸುವ ಅಧಿಷ್ಠಾನ ಭೂತರಾದ ಶ್ರೀವಾಯು ದೇವರು ಇತರ ದೇವತೆಗಳಿಗಿಂತ ಭಾಗ್ಯಶಾಲಿಗಳು. ಉದಾಹರಣೆಯನ್ನು ನೀಡುವುದಾದರೆ ಶ್ರೀರಾಮನು ಮನುಷ್ಯನಲ್ಲ. ದಶರಥನ ಮಗನೂ ಅಲ್ಲ. ಚಿನ್ಮಯಸ್ವರೂಪನು ಆದರೂ ಆತನು ನಿತ್ಯ ಅವಿಯೋಗಿನಿಯಾದ ಲಕ್ಷ್ಮ್ಯಾತ್ಮಕಳಾದ ಸೀತಾದೇವಿಯನ್ನು ಹುಡುಕುತ್ತಾ ಹೊರಟಿದ್ದು ವಿಡಂಬನ. ರಾವಣನೊಡನೆ ಯುದ್ಧ ಮಾಡುವಾಗ ಮೈಗೆ ಗಾಯಗಳಾದುವಂತೆ. ಅಪ್ರಾಕೃತನಾದ ಶ್ರೀಹರಿಯಲ್ಲಿ ಹೀಗೆ ಚಿಂತಿಸಬಾರದು. ರಾಮ–ಪರಶುರಾಯರು ಪರಸ್ಪರ ಯುದ್ಧ ಮಾಡಿ ಅಸುರರಿಗೆ ಭಿನ್ನರೂಪ ಕಲ್ಪನೆಯನ್ನುಂಟುಮಾಡಿದನು. ಇದೇ ರೀತಿಯಾಗಿ ವಾಯುದೇವರೂ ಹನುಮಂತನಾಗಿ ರಾಮನನ್ನು ಹುಡುಕಿಕೊಂಡು ಬಂದು ಕಾಲಿಗೆರಗಿದನಂತೆ. ಸೀತಾನ್ವೇಷಣ ಕಾಲದಲ್ಲಿ ಸೀತೆಯನ್ನು ಕಾಣದೆ ಮುಲುಗಿದನಂತೆ. ಈ ಚೇಷ್ಟೆಗಳನ್ನು ಮೂಲರೂಪದಿಂದಲೂ, ಅಂಶದಿಂದಲೂ ಕಂಡ ದೈತ್ಯರು ಇವನೊಬ್ಬ ಕೋಡಗ ರಾಮನೊಬ್ಬ ನಾಡಗ ಎಂದು ಚಿಂತಿಸಿ ತಮಸ್ಸಾಧನವನ್ನು ಮಾಡಿಕೊಂಡರು. ಆದರೆ ಇವೇ ಲೀಲೆಗಳು ದೇವತೆಗಳಿಗೆ ಲೀಲಾವಿನೋದ ಮಹಿಮಾನ್ವಿತಗಳಾಗಿ ಕಂಡವು. ಇದನ್ನೇ ಶ್ರೀಮಧ್ವಾಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ ಹೀಗೆ ಬರೆದಿರುತ್ತಾರೆ.

ಯದ್ದೃಷ್ಯೇ ತನ್ನ ಪಶ್ಯಂತಿ। ನಿಶಾಚರ ಗಣಾಸ್ತುತೇ ॥ ದ್ಯುಲೋಕ ಚಾರಿಣಸರ್ವೇ।
ಪಶ್ಯಂತ್ಯೃಷಯ ಏವಚ॥ ಪಶ್ಯತಾಂ ಕಲಿ ಮುಖ್ಯಾನಾಂ। ವಿಡಂಬೋಯಂ ಕೃತೋ ಅಭವತ್ ॥
ತೇಷಾಂವಿಡಂಬನಾಯೈವ। ದೈತ್ಯಾನಾಂ ವಂಚನಾಯಚ ॥

ಶ್ರೀ ಹನುಮದವತಾರ (ಸುಂದರಕಾಂಡ)

॥ ಪದ ॥ ಜನಿಸಿದ ಕ್ಷಣದಲಿ। ದಿನಮಣಿಯನು ಸಾರಿ।
ತಿನಲು ಪೋದನೆ ಇಲ್ಲ। ದನುಜರ ಮೋಹಿಸಿ॥
ಅನಿಮಿಷರೊಡೆಯನ। ಟೊಣಪೆಗೆ ಮಣಿದನೆ।
ವನಜಭವಾಂಡವು। ಕೊನೆಗೊಂಡರುಳಿದವ ॥ ೬ ॥

**ಶಬ್ದಾರ್ಥ**: ಜನಿಸಿದ ಕ್ಷಣದಲಿ = ಹುಟ್ಟಿದ ಕೂಡಲೆ; ದಿನಮಣಿ = ಸೂರ್ಯ; ಅನಿಮಿಷರು = ದೇವತೆಗಳು; ಒಡೆಯ = ಇಂದ್ರನ; ಟೊಣಪೆಗೆ = ವಜ್ರಾಯುಧಕ್ಕೆ; ಮಣಿದನೆ = ಸೋತನೆ; ಎಂದಿಗೂ ಇಲ್ಲವೆಂದರ್ಥ. ವನಜಭವಾಂಡವು: ವನಜಭವಾಂಡ = ಬ್ರಹ್ಮಾಂಡ; ಪ್ರಪಂಚವು ಕೊನೆಗೊಂಡರೂ = ಪ್ರಳಯವನ್ನು ಹೊಂದಿದರೂ; ಉಳಿದರ = ಅಜ್ಞಾನಾದಿ ದೋಷಗಳಿಲ್ಲದೆ; ಮೂರ್ಛಾವಸ್ಥೆ ರಹಿತನಾಗಿದ್ದವನು.

ಅಂಜನಾದೇವಿಯು ಪುಂಜಿಕಸ್ಥಳೀ ಎಂಬ ಅಪ್ಸರ ಸ್ತ್ರೀಯು. ಈಕೆಯು ಕೇಸರಿ ಎಂಬ ಹೆಸರಿನ ಕಪಿ ವೀರನ ಪತ್ನಿಯು. (ಅಂಜನಾ ಹನುಮನ್ಮಾತಾ। ಹ್ಯಪ್ಸರಾಃ ಪುಂಜಕಸ್ಥಳೀ"). ಈಕೆಯು ತನಗೆ ಯೋಗ್ಯನಾದ, ಜ್ಞಾನ, ಬಲಸಂಪನ್ನನಾದ ಪುತ್ರನು ಜನಿಸಬೇಕೆಂದು ವಾಯುದೇವರನ್ನು ಸೇವಿಸಿದಳು. ಇತರರೂ ತಮ್ಮ ಅಭೀಷ್ಟಗಳನ್ನು ಹೊಂದಲು ದೇವತೆಗಳ ಸೇವೆಯನ್ನು ಮಾಡುತ್ತಾರಲ್ಲವೇ? ಈಕೆಯ ಸೇವೆಗೆ ಸಂತುಷ್ಟನಾದ ವಾಯುವು ಒಂದು ಫಲದಲ್ಲಿ ತಾನು ಒಂದಂಶದಿಂದ ಆವಿಷ್ಟನಾಗಿ ಆ ಫಲವನ್ನು ಅಂಜನಾದೇವಿಗೆ ನೀಡಿದನು. ಮತ್ತು ಆಕೆಗೆ ಅನುಗ್ರಹ ರೂಪವಾಗಿ ತಾನೇ ಪುತ್ರನಾಗಿ ಆಕೆಯಲ್ಲಿ ಅವತರಿಸಿದನು. ಆಗ ಆತನಿಗೆ ಆಂಜನೇಯ ಎಂಬ ಹೆಸರು ಬಂದಿತು.

ಷಡೂರ್ಮಿ ರಹಿತನಾದ ವಾಯು (ಪುತ್ರ) ಹಸಿವೆಯಿಂದ ಬಳಲಿದನೆಂದು ಹೇಳುವುದು ಅಸದುಪಾಸನೆಯು. ಮಾತ್ರವಲ್ಲ. ತಾನು ಉದಯೋನ್ಮುಖನಾದ ಸೂರ್ಯನನ್ನು ಕಂಡು ಹಣ್ಣೆಂದು ತಿನ್ನಲು ಸೂರ್ಯಮಂಡಲಕ್ಕೆ ಜಿಗಿದನೆಂದೂ ಹೇಳುತ್ತಾರೆ. ಅಷ್ಟು ಅಜ್ಞಾನಿಯೇ ಈತನು? ಹೀಗೆ ಅಸುರರು ತಿಳಿಯಲಿ, ತನ್ನಲ್ಲಿ ಅವರಿಗೆ ಭಕ್ತಿ ಹುಟ್ಟದಿರಲಿ. ಇರುವ ಸ್ವಾಭಾವಿಕವಾದ ದ್ವೇಷವು ಉಲ್ಬಣಿಸಲಿ ಎಂದೇ ಈತನು ಹಾಗೆ ನಟಿಸಿರುತ್ತಾನೆ. ನಿಜವಾಗಿಯೂ ಸೂರ್ಯಮಂಡಲ ಮಧ್ಯನಾಗಿ ಇರುವ ಶ್ರೀ ನಾರಾಯಣ ರೂಪಿ ಪರಮಾತ್ಮನಿಗೆ ಆದಿಷ್ಠಾನ ಭೂತರಾದ ಈ ವಾಯುವು ಹಾರಿದ್ದು ಸೂರ್ಯನಲ್ಲಿ ದೇವರಿದ್ದಾನೆ. ಸೂರ್ಯಾಂತರ್ಯಾಮಿಯಾದ ವಿಭೂತಿಪರನಾದ ನಾರಾಯಣನನ್ನು ಉಪಾಸಿಸಿದರೆ ಜ್ಞಾನಪ್ರಾಪ್ತಿಯಾಗುತ್ತದೆ ಎಂದು ಜಗತ್ತಿಗೆ ಸಾರಲು ತಾನು ಅಲ್ಲಿ ವ್ಯಾಕರಣವನ್ನು ನಾರಾಯಣನಿಂದ ತಿಳಿಯಲು ಹಾರಿದ್ದನೇ ಹೊರತಾಗಿ ಅಜ್ಞಾನ ವಶದಿಂದ, ಕ್ಷುನ್ನಿವಾರಣೆಗಾಗಿ ಅಲ್ಲ. ಅಸುರಾವೇಶ ನಿಮಿತ್ತವಾಗಿ ಇಂದ್ರಾದಿದೇವತೆಗಳೂ ಈತನ ಮಹಿಮೆಯನ್ನು ತಿಳಿಯದೇ ಹೋದರು. ಅದರ ಫಲವಾಗಿಯೇ ಇಂದ್ರನು ಈ ಬಾಲಕನು ಸೂರ್ಯನನ್ನು ತಿನ್ನಲು ಬರುತ್ತಿದ್ದಾನೆ. ಇವನು ಸೂರ್ಯನನ್ನು ನುಂಗಿದರೆ ಜಗತ್ತು ಕತ್ತಲೆಮಯವಾಗುತ್ತದೆ. ಆದ್ದರಿಂದ ಇವನನ್ನು ನಿಗ್ರಹಿಸುತ್ತೇನೆ (ತನ್ನಲ್ಲಿಲ್ಲದ ಶಕ್ತಿಯನ್ನೂ, ವಾಯುವಿನಲ್ಲಿಲ್ಲದ ದೌರ್ಬಲ್ಯವನ್ನೂ ಅರಿಯದೆ) ಮೋಹಿತನಾಗಿ ತನ್ನ ವಜ್ರಾಯುಧವನ್ನು ವಾಯುವಿನ ಮೇಲೆ ಪ್ರಹಾರ ಮಾಡಿದನು. ಆಗ ಕರುಣಾಳುವಾದ ವಾಯು ಸಂಭೂತನು ದೇವತೆಗಳ ಅಜ್ಞಾನವನ್ನು ಪರಿಹರಿಸಲಿಕ್ಕಾಗಿಯೂ, ದೈತ್ಯರ ಅಜ್ಞಾನವನ್ನು ದಟ್ಟಣೆಗೊಳಿಸಲಿಕ್ಕಾಗಿಯೂ ಮೂರ್ಛೆ ಹೋದವನಂತೆ ನಟಿಸಿದನು. ಮತ್ತು ತನ್ನ ಮೂಲರೂಪದಿಂದ ಶ್ವಾಸ ನಿರೋಧ ಮಾಡಿದನು. ಅಮೃತ ಸ್ವರೂಪಿಯಾದ ವಾಯುವು ಮೂರ್ಛೆ ಹೊಂದಿದನೆಂದರೆ ಏನರ್ಥ? ಆತನು

ಶ್ವಾಸವನ್ನು ನಿಲ್ಲಿಸಿ ಬಿಟ್ಟನೆಂದು ತಿಳಿಯೋಣವೇ? ಹೌದು. ವಾಯುವು ಹಾಗೆಯೇ ಮಾಡಿದನು. ಅಷ್ಟುಮಾತ್ರದಿಂದ (ನಾರಾಯಣನಿಗೆ ಪ್ರತಿಬಿಂಬರು ಜಗತ್ತಗೆ ಬಿಂಬ ಸ್ವರೂಪರು) ಇಡೀ ಬ್ರಹ್ಮಾಂಡವೇ ಶ್ವಾಸನಿರ್ಬಂಧದಿಂದ ಮರಣ ಸಂಕಟವನ್ನು ಅನುಭವಿಸಲಾರಂಭಿಸಿತು. ತಕ್ಷಣವೇ ಬ್ರಹ್ಮದೇವರು ವಾಯುವಿನಲ್ಲಿ ಸಮತಾ ಗೌರವದಿಂದ ಜಗತ್ತನ್ನು ರಕ್ಷಣೆ ಮಾಡೆಂದು ಕೇಳಿದಾಗ ವಾಯುವು ಪುನಃ ಜಗತ್ತಿನಲ್ಲಿ ಪ್ರವೃತ್ತನಾಗಲು ಜೀವರೆಲ್ಲರೂ ಕಣ್ಣು ಬಿಟ್ಟರು. ವಜ್ರ ಶರೀರಿಯಾದ ವಾಯುದೇವರಿಗೆ ಇಂದ್ರನ ವಜ್ರಾಯುಧವು ಏನು ಮಾಡೀತು। ಅದೇ ವಾಯು ಸ್ಪರ್ಶದಿಂದ ಒಂದು ತುಣುಕನ್ನು ಕಳೆದುಕೊಂಡಿತು. ಅದು ಪುಡಿಪುಡಿಯಾಗದೇ ಉಳಿದುಕೊಂಡಿದ್ದು ಅದರಲ್ಲಿರುವ ಭಗವದ್ವಿಭೂತಿರೂಪಕ್ಕೆ ವಾಯುದೇವರು ಮನ್ನಣೆಯನ್ನು ಇತ್ತುದರಿಂದ, ಇಂದ್ರನ ಅಜ್ಞಾನ ಕಾರ್ಯವು ಸಹ ಅಸುರ ಮೋಹಕಕ್ಕೆ ಸಾಧಕವೇ ಆಯಿತು. ಆದ್ದರಿಂದ ಆತನು ಪುಣ್ಯವಂತನು. (ಇಷ್ಟು ಮಾತ್ರದಿಂದ ದೈತ್ಯರು ವಾಯುದೇವರಿಗೆ ಅಜ್ಞಾನ, ಮೂರ್ಛಾದಿಗಳು ಉಂಟೆಂದು ತಿಳಿದರು. ಆದರೆ ದೇವತೆಗಳು ಆತನ ಹೊರತು ನಾವು ಉಳಿಯಲಾರೆವು. ನಮ್ಮ ಸಮಸ್ತ ಜ್ಞಾನ, ಇಚ್ಛಾ, ಕ್ರಿಯಾದಿ, ಶಕ್ತಿಗಳೂ ಆತನಿಂದಲೇ ಅಂತರ್ಯಾಮಿತ್ವದಿಂದ ನಮಗೆ ದತ್ತ ಮಾಡಲ್ಪಟ್ಟಿವೆ. ಆತನಿಗೆ ನಮೋ ಎಂದರು.

ಸೂರ್ಯ ಮಂಡ ಮಧ್ಯವರ್ತಿಯಾದ ನಾರಾಯಣಸಲ್ಲಿ ವ್ಯಾಸಂಗ ಮಾಡಲು ವಾಯುದೇವರು ಹೋದರು. ಸೂರ್ಯನನ್ನು ತಿನ್ನಲು ಅಲ್ಲ. ಸೂರ್ಯನ ನೀಚಾಧಿ ಷಾನೋಪಾಸನೆಯು ವಾಯು (ಋಜುಗಣಸ್ಥರಿಗೆ) ವಿಗೆ ಮಾತ್ರ ನಿಷಿದ್ಧವಲ್ಲ. ಮತ್ತು ಸೂರ್ಯನಲ್ಲಿ ವಿಭೂತಿ ರೂಪವು ಆಗ ಇತ್ತು. ಇತರ ಜನರು ಸೂರ್ಯನನ್ನು ಉಪಾನಿಸಬೇಕು ಎಂಬುದನ್ನು ತೋರಲಿಕ್ಕಾಗಿ ಹನುಮಂತನು ಸೂರ್ಯ ಮಂಡಲಕ್ಕೆ ಹಾರಿದನು.

ಪ್ರಳಯ ಕಾಲದಲ್ಲಿಯೂ ವಾಯುದೇವರಿಗೆ ಅಜ್ಞಾನ, ಮೂರ್ಛಾದಿಗಳು ಇಲ್ಲ. ಹೇಗೆಂದರೆ ಪ್ರಳಯಾ ನಂತರದಲ್ಲಿ ಬ್ರಹ್ಮ, ಪುರಂಜನ, ಕಲಿ ಮೊದಲುಗೊಂಡು ಸಮಸ್ತ ತ್ರಿವಿಧಗಣ ಜೀವರು ಯಾರು ಯಾರು ತಮ್ಮ ಕಲ್ಪ ಸಾಧನದ ಕೊನೇ ಕಲ್ಪವನ್ನು ಮುಗಿಸಿರುತ್ತಾರೋ (ಅಂದರೆ ಬ್ರಹ್ಮನು ೨೦೦ ನೇ ಕಲ್ಪ, ಗರುಡ, ಶೇಷ, ಸಾರುಣಿ, ವಾರುಣಿಯರು ೧೦೦ನೇ ಕಲ್ಪ, ಇಂದ್ರ, ಕಾಮರು ೪೦ನೇ ಕಲ್ಪ, ಶಚಿ, ರತಿ ದೇವಿಯರು ೩೨ನೇ ಕಲ್ಪ – ಈ ರೀತಿಯಾಗಿ) ಅವರು ಮುಕ್ತಿಗೆ ಸಿದ್ಧರಾಗಿರುತ್ತಾರೆ. ಪ್ರಳಯವಾದ ಕೂಡಲೇ ಎಲ್ಲರೂ ಮೂರ್ಛೆಯನ್ನು (ವಿನಾ ಋಜುಗಳು ಬ್ರಹ್ಮ, ಸರಸ್ವತಿ – ವಾಯು, ಭಾರತಿ) ಹೊಂದಿರುತ್ತಾರೆ. ಆಗ ಶ್ರೀಹರಿಯು ವಾಯುವನ್ನು ಕರೆದು ಸಾಧನಪೂರ್ಣರನ್ನೂ, ಸಾಧನ ಶೇಷರನ್ನೂ ಪ್ರತ್ಯೇಕಿಸಲು ಆಜ್ಞಾಪಿಸುತ್ತಾನೆ. ಹೀಗೆ ಶ್ರೀಹರಿಯು ವಾಯುವಿಗೇ ಅಜ್ಞಾಪಿಸಲು ಏನು ಕಾರಣವೆಂದರೆ ಶ್ರೀವಾಯುದೇವರ ಸ್ವರೂಪ ಯೋಗ್ಯತೆಯು ಕಾರಣವಾಗಿದೆ. ಅವರು ಮಾತ್ರ ಮೂರ್ಛೆಯನ್ನು ಹೊಂದದೆ ಎಚ್ಚತ್ತಿರುವುದರಿಂದ ದೇವರು ಇವರಿಗೆ ವಿಭಾಗಿಸಲು ಆಜ್ಞೆಯನ್ನು ಮಾಡುತ್ತಾನೆ. ಆಗ ವಾಯುವು ವಿಭಾಗಿಸಿದನಂತರದ ಅವರು ಮುಕ್ತ ಸಾಧನರನ್ನು ಮುಕ್ತಿ, ಸಾಂತಾನಿಕ ಮತ್ತು ತಮೋ ಲೋಕಗಳಿಗೆ ಕಳಿಸಿ, ಉಳಿದ ವಾಯುವನ್ನೊಳಗೊಂಡು ಆ ಮುಕ್ತ ಜೀವರಾಶಿಗಳನ್ನು ನುಂಗುತ್ತಾನೆ. ಹಾಗೆ ನುಂಗುವಾಗ ಎಷ್ಟು ಜನರನ್ನು ಮುಕ್ತಿಗೆ ಕಳಿಸಿರುತ್ತಾನೋ ಅಷ್ಟೇ ಸಂಖ್ಯಾ ತ್ರಿವಿಧ ಜೀವರನ್ನು ಅಸೃಜ್ಯಾವಸ್ಥೆಯಿಂದ ಪಡೆದು ಈ ಅಮುಕ್ತರ ಜೊತೆಗೆ ಸೇರಿಸಿ ವಾಯುವನ್ನು ಬ್ರಹ್ಮನನ್ನಾಗಿ ಪದವಿಗೇರಿಸಿ ತನ್ನ ನಾಭೀ ಕಮಲದಿಂದ ಸೃಷ್ಟಿಗೆ ತರುತ್ತಾನೆ. ಆಗ ಹೊಸದಾಗಿ ಜಡ ಬ್ರಹ್ಮಾಂಡವನ್ನು ನಿರ್ಮಿಸಿ ಆ ಬ್ರಹ್ಮಾಂಡದಲ್ಲಿ ಜೀವರನ್ನು ತಂದಿರಿಸಿ ಸಾಧನವನ್ನು ಮಾಡಿಸುತ್ತಾನೆ.

ಈ ರೀತಿಯಾದ ಸೃಷ್ಟಿ, ಸ್ಥಿತಿ, ಲಯ ಕಾರ್ಯವು ಪ್ರವಾಹದೋಪಾದಿಯಲ್ಲಿ ಅನಾದ್ಯನಂತ ಕಾಲದಿಂದ ಅವ್ಯಾಹತವಾಗಿ ಸಾಗಿದೆ. ಸಾಗುತ್ತಿರುತ್ತದೆ. ಇದನ್ನು ವಿಷ್ಣು ರಹಸ್ಯದಲ್ಲಿ ಹೀಗೆ ಹೇಳಿರುತ್ತಾರೆ.

"ತಮವೋಂಚ ತತಃ ಪ್ರಾಣ। ಮಸ್ಮಿನ್ ಕಲ್ಪೇತ್ವಯಾ ಸಹ।
ಮೋಕ್ಷಾಣಾಂ ಶ್ಚತಾನ್ ಜೀವಾನ್ । ಪೃಥಕ್ ಕುರು ಮಹಾಮತೇ ॥೨-೪೪॥
ಏವಂ ಮಹದಾಜ್ಞಯಾ ಪ್ರಾಣೋ। ಜೀವಾನ್ ಸರ್ವಾಂಶ್ಚತಾದೃಶಾನ್ ॥
ಉದ್ಬೋಧಯಿತ್ವಾ ಪುರತಃ। ಸ್ಥಾಪಯಾಮಾಸ ಸರ್ವವಿತ್ ॥೪೫॥

ಶ್ರೀಚಂದ್ರಿಕಾಚಾರ್ಯರು ವಾಯು ಗದ್ಯದಲ್ಲಿ "ಪ್ರಲಯ ಕಾಲೇಪಿ ಪ್ರತಿಭಾ ತಪರಾವರಾಯ" ಎಂದು ಸ್ತುತಿಸಿದ್ದಾರೆ. ಶ್ರೀಗುರು ಪುರಂದರದಾಸರು ಸುಳಾದಿಯಲ್ಲಿ "ಪ್ರಳ/ಯೋದಕವು ಶಿರಿಯಾಗೆ। ಭೂದೇವಿ ವಟಪತ್ರವಾಗೆ। ಅದುವೆ ಏಳು ಕೋಟಿ ಯೋಜನಮಿತ ಬಾಲಕನಾ। ಗಿ ದುರ್ಗೆ ತಮವ್ಯಾಪಿಸಿ ಆ। ಲದೆಲೆಯು ಮೇಲೆ ಗುರುಪುರಂದರವಿಠಲ ಪವಡಿಸಲು ಉಳಿದ ಜಗವೆಲ್ಲೆ ಸುಕ್ಷುಪ್ತಿಯನೈದಲು ಮುಖ್ಯ ಪ್ರಾಣನೊಬ್ಬನು ಎಚ್ಚತ್ತಿಪ್ಪನು ಗಡ" ಎಂದು ಹೇಳಿರುತ್ತಾರೆ.

ಜೀವರಾಶಿಗಳಿಗೆ ನಿತ್ಯದಲ್ಲೂ ಜಾಗ್ರತ್, ಸ್ವಪ್ನ, ಸುಕ್ಷುಪ್ತಿಗಳೆಂಬ ಅವಸ್ಥಾ ತ್ರಯಗಳಿವೆ. ಮೊದಲನೆಯದಾಗಿ ಜೀವ, ತತ್ವೇಶ್ವರರು ಮತ್ತು ಮುಖ್ಯ ಪ್ರಾಣರು ಎಚ್ಚೆತ್ತಿರುತ್ತಾರೆ. ಎರಡನೆಯದಾಗಿ ಜೀವನಿದ್ರಿಸಿ, ತತ್ವಾಭಿಮಾನಿಗಳೂ, ಮುಖ್ಯ ಪ್ರಾಣನು ಎಚ್ಚೆತ್ತಿರುತ್ತಾರೆ. ಮೂರನೆಯದಾಗಿ ಜೀವ, ತತ್ವಾಭಿಮನಿಗಳು ಮಲಗಿರುವಾಗ ಮುಖ್ಯ ಪ್ರಾಣನು ಮಾತ್ರ ಎಚ್ಚರವಾಗಿರುತ್ತಾನೆ. ಈತನಿಗೆ ನಿಶೆ ಎಂಬುದೇ ಇಲ್ಲ. ಆಯಾಸವೂ ಇಲ್ಲ. ಈತನು ಮಲಗಿದರೆ ಜಗತ್ತಿನ ಆಟವೇ ಉಡುಗುತ್ತದೆ. ಸ್ವರೂಪಭೂತವಾಗಿ ಯಾವ ದೇವತೆಗಳಿಗೂ ಈ ಸಾಮರ್ಥ್ಯವು ಇಲ್ಲದಿರುವುದರಿಂದ, ವಾಯುವಿಗೆ ಈ ಬಲವಿರುವುದರಿಂದ ಶ್ರೀಹರಿಯು ಈತನನ್ನು ತನ್ನ ಜೀವ ರಕ್ಷಕ ವ್ಯಾಪಾರಕ್ಕಾಗಿ ಅಧಿಷ್ಠಾನ ಭೂತರನ್ನಾಗಿ ಸ್ವೀಕರಿಸಿರುತ್ತಾನೆ.

ಹೊಸ ಬ್ರಹ್ಮಾಂಡದಲ್ಲಿ ಸಾಧನ ಶೇಷರನ್ನು ಸೃಷ್ಟಿಗೆ ತರುವಾಗ ಹಿಂದಿನ ಕಲ್ಪದಲ್ಲಿ ಲಾತವ್ಯರಾಗಿದ್ದ ಋಜುಗಣಸ್ಥನು ಈ ನೂತನ ಬ್ರಹ್ಮಾಂಡದಲ್ಲಿ ವಾಯು ಸ್ಥಾನಕ್ಕೆ ಬಂದು ಹರಿಯಾಜ್ಞೆಯಂತೆ ಜೀವರಲ್ಲಿ ಪ್ರವಿಷ್ಟನಾದ ಕೂಡಲೇ ಸಕಲ ಜೀವರು ಸಾಧನ ಚೇಷ್ಟಾ ಪ್ರವೃತ್ತರಾಗುತ್ತಾರೆ.

ಶ್ರೀಜಗನ್ನಾಥ ದಾಸರು ಈ ಮಹಿಮೆಗಳನ್ನು ಹೀಗೆ ವರ್ಣಿಸಿರುತ್ತಾರೆ.

"ವಾಸವ ಕುಲಿಶದಿ ಘಾಸಿಸೇ ಜೀವರ।ಶ್ವಾಸ ನಿರೋಧಿಸಿದೇ॥
ಆಸಮಯದಿ ಕಮಲಾಸನ ಪೇಳಲು। ನೀ ಸಲಹಿದೆ ಜಗವಾ ॥ ೧ ॥
ಪ್ರಾಣದೇವ ನೀನಲ್ಲದೆ ಕಾಯ್ವರ। ಕಾಣೆ ಲೋಕದೊಳಗೇ ॥ ಪ ॥
"ವಾರಿಜಾಸನ ವಾಯು ವಾಣಿ। ಭಾರತಿಗಳಿಗೆ ಮಹಾ ಪ್ರಳಯದಿ।
ಬಾರದ ಜ್ಞಾನಾದಿ ದೋಷವು ಹರಿ ಕೃಪಾ ಬಲದಿ ॥ ಕ.ಸಾ.ಸಂ. ೩೮ ॥"

॥ ಪದ ॥ ಸಾವಿರ ಸಿಂಧುಭುಕ್। ಸಾವಿರೊಂದಕೆ ಸಲ್ಲ।
ಯಾವ ಜಲಧಿಯದೋ। ದೇವಗೆ ಮೀರಿದ್ದು॥
ಕಾವರ ಕಾವರ। ಕಾವರಸದೆಯುತ।
ಮ್ಯಾವ್ಮರಿಯಂದದಿ। ತಾ ವೊಳ ಪೊಕ್ಕು ॥ ೧೦ ॥

**ಶಬ್ದಾರ್ಥ:** ಸಿಂಧುಭುಕ್ = ಅಗಸ್ತ್ಯಮುನಿಗಳು; ಸಾವಿರ = ಸಹಸ್ರ; ಸಾ+ಅವಿರ ರೋಮದಿಂದ ಯುಕ್ತನಾದ ಪ್ರಾಣ ದೇವರ; ಒಂದಕೆ = ಒಂದು ರೋಮಕ್ಕೆ ಸಲ್ಲ = ಸಾಟಿಯಾಗಲಾರರು; ಜಲಧಿ = ಸಮುದ್ರವು; ದೇವಗೆ = ಪ್ರಾಣ ದೇವಗೆ; ಮೀರಿದು = ಅಸಾಧ್ಯವಾದುದು; ಅದಾವುದು? = ಯಾವುದೂ ಇಲ್ಲವೆಂದರ್ಥ; ಕಾ+ವರ = ಬ್ರಹ್ಮದೇವರವರ; ಕಾವರ = ಅಧ್ಯಾವ ಮಹತ್ತುಉಳ್ಳದ್ದು? ಅಲ್ಲವೆಂದರ್ಥ; ಕಾವರ = ಕಾವಲುಗಾರರನ್ನು; ಸದೆಯುತ = ಧ್ವಂಸಮಾಡಿ; ಮ್ಯಾವ್ಮರಿಯಂದದಿ = ಬೆಕ್ಕಿನ ಮರಿಯಂತೆ ಸಂಕೋಚನಾಗಿ; ತಾ = ಪ್ರಾಣ ದೇವನು; ಒಳಪೊಕ್ಕು = ಲಂಕಾಪುರವನ್ನು ಸೇರಿದನು.

**ಭಾವಾರ್ಥ:** ಸುಗ್ರೀವನು ರಾಮನಿಂದ ಉಪಕೃತನಾದರೂ ತಾನು ಕೊಟ್ಟ ಭಾಷೆಯನ್ನು ಮರೆತುಬಿಟ್ಟನು. ಸುಖಲೋಲುಪನಾಗಿ ಕಾಲವನ್ನು ಕಳೆಯುತ್ತಿರುವಾಗ ಲಕ್ಷ್ಮಣನು ಬಂದು ಎಚ್ಚರಿಕೆಯನ್ನು ನೀಡಿ ಶೀಘ್ರವೇ ಸೀತಾನ್ವೇಷಣ ಕಾರ್ಯದಲ್ಲಿ ತೊಡಗದಿದ್ದರೆ ಸಂಹಾರ ಮಾಡುವೆನೆಂದು ಗುಡುಗಿದನು. ತಕ್ಷಣವೇ ಸುಗ್ರೀವನು ನಾನಾ ದ್ವೀಪ, ಖಂಡಗಳಿಂದ ಚಿತ್ರ ವಿಚಿತ್ರ ರೂಪಿಗಳಾದ ಕಪಿಗಳನ್ನು ಒಟ್ಟುಗೂಡಿಸಿ ಅವರನ್ನು ನಾಲ್ಕು ಭಾಗಗಳನ್ನಾಗಿ ವಿಭಾಗಿಸಿ ಚತುರ್ದಿಕ್ಕುಗಳಿಗೂ ಕಳುಹಿಸಿದನು. ಹನುಮಂತ, ಅಂಗದ, ಜಾಂಬವಂತರೇ ಮೊದಲಾದ ಕಪಿವೀರರು ದಕ್ಷಿಣ ದಿಕ್ಕಿಗೆ ಹೊರಟರು. ಸೀತಾನ್ವೇಷಣೆಯು ಹನುಮಂತನಿಂದ ಮಾತ್ರ ಸಾಧ್ಯವೆಂದು ತಿಳಿದು ಶ್ರೀರಾಮನು ಮುದ್ರೆ ಉಂಗುರವನ್ನು ಹನುಮಂತನ ಕೈಗೇ ಕೊಟ್ಟನು. ಸೀತೆಯು ಲಂಕೆಯಲ್ಲಿ ಇರುವುದು ಗೊತ್ತಿದ್ದೇ ಆಗಿದ್ದರೂ ಶ್ರೀರಾಮನು ವೃಥಾ ಯಾಕೆ ಕಪಿಗಳನ್ನು ಉಳಿದ ಮೂರು ದಿಕ್ಕುಗಳಿಗೆ ಕಳುಹಿಸಿದನು? ಎಂದರೆ ಶ್ರೀರಾಮನು ಗೊಂದಲಕ್ಕೆ ಸಿಲುಕಿರುವನೆಂದು ಅಸುರರು ತಿಳಿಯಲೆಂದೇ ಹಾಗೆ ಮಾಡಿದನು. ಸುಗ್ರೀವನಾದರೋ ಕಪಿಗಳಿಗೆ ಅದು ಸಾಧ್ಯವೋ ಅಸಾಧ್ಯವೋ ಎಂಬುದನ್ನು ಕೂಡಾ ವಿವೇಚಿಸದೆ ಒಂದು ತಿಂಗಳೊಳಗಾಗಿ ಸೀತಾವಾರ್ತೆಯನ್ನು ತರಲೇಬೇಕು. ಇಲ್ಲವಾದರೆ ಎಲ್ಲರಿಗೂ ಮರಣದಂಡನೆ ಎಂದು ಆಜ್ಞೆ ಮಾಡಿದನು. ಮುಂದೆ ಸಾಗಿದ ಕಪಿವೀರರು ದಕ್ಷಿಣ ಸಮುದ್ರವನ್ನು ಕಂಡು ಹೌಹಾರಿದರು. ತಿಂಗಳು ಮೀರುತ್ತಾ ಬಂದಿತು. ಸಮುದ್ರವನ್ನು ದಾಟುವುದು ಅಸಾಧ್ಯವೆಂದು ತಿಳಿದು ಇನ್ನು ಸುಗ್ರೀವನ ಕೈಗೆ ಸಿಕ್ಕು ದಾರುಣ ಮರಣವನ್ನು ಅನುಭವಿಸುವುದಕ್ಕಿಂತ ಇಲ್ಲೇ ಪ್ರಾಯೋಪವೇಶವನ್ನು ಮಾಡೋಣವೆಂದು ಬಗೆದು ಉಪವಾಸ ಕುಳಿತು ಬಿಟ್ಟು ಶ್ರೀರಾಮನ ಕಥನವನ್ನು ಶುರುಮಾಡಿದರು. "ಇದೇನಪ್ಪ ಗ್ರಹಚಾರ! ಒಳ್ಳೇ ರಾಮನೇ ಬಂದನು. ದಶರಥನ ಮಗನಂತೆ. ಸೀತೆಯಂತೆ. ರಾವಣನು ಅಪಹರಿಸಿದನಂತೆ. ಜಟಾಯು ತಡೆದು ಹೋರಾಡಿ ಮಡಿದನಂತೆ. ಈಗ ನಾವು ಸೀತೆಯನ್ನು ಹುಡುಕಬೇಕಂತೆ! ಇಲ್ಲವಾದರೆ ಮರಣದಂಡನೆಯಂತೆ. ನಮ್ಮ ಹಣೆಬರಹ" ಎಂದು ಬೇಕಾಬಿಟ್ಟಿಯಾಗಿ ಹರಟೆ ಕೊಚ್ಚುತ್ತಿದ್ದಾಗ ಈ ರಾಮಚರಿತಾಂಶವು ಅಕಸ್ಮಾತ್ತಾಗಿ ಕಿವಿಗೆ ಬಿದ್ದ ಮಾತ್ರದಿಂದಲೇ ಅಲ್ಲೇ ಗರಿಬೆಂದು ಬಿದ್ದಿದ್ದ ಜಟಾಯುವಿನ ಅಣ್ಣನಾದ ಸಂಪಾತಿ ಪಕ್ಷಿಯ ಗರಿಗಳು ಚಿಗುರಿ ಬಿಟ್ಟವು. ಬೇಕಾಬಿಟ್ಟಿಯಾಗಿ ಹೇಳಿದ, ಅಕಸ್ಮಾತ್ತಾಗಿ

ಅರ್ಥವನ್ನು ಮಾತ್ರ ಕೇಳಿದ ರಾಮಾಯಣದಿಂದ ಸಂಪಾತಿಯು ಬೆಂದಗರಿಗಳು ಚಿಗುರಿದವು. ಆ ರಾಮ ಕಥ್ಹಾಲಾಪದಿಂದಲೇನೇ ಮುಂದೆ ವಕ್ಕರಿಸಲಿದ್ದ ಮರಣದಂಡನೆಯು ಸಹ ಮುಖ ತಿರುಗಿಸಿತು.

**"ಪ್ರಾಯೋಪವಿಷ್ಟಾಶ್ಚ ಕಥಾಂ ವದಂತೋ। ರಾಮಸ್ಯ ಸಂಸಾರ ವಿಮುಕ್ತಹೇತೋಃ॥**
**ಜಟಾಯುಷಃ ಪಾತುನ ಮೂಚಿರೇತ। ತ್ಸಂಪಾತಿ ನಾಮ್ನಃಶ್ರವಣಂ ಜಗಾಮ॥ ತಾ.ನಿ.೬-೪೮ ॥**
**"ಬಿಟ್ಟಗಳ ನೆವದಿಂದೊಡಾಗಲಿ। ಹೊಟ್ಟೆಗೋಸುಗವಾದೊಡಾಗಲಿ।**
**ಕೆಟ್ಟ ರೋಗ ಪ್ರಯುಕ್ತವಾಗಲಿ ಅಣಕದಿಂದೊಮ್ಮೆ॥**
**ನಿಟ್ಟುಸಿರಿನಿಂ ಬಾಯ್ದೆರೆದು ಹರಿ । ವಿಠ್ಠಲಾ ಸಲಹೆಂದೆನಲು ಕೈ।**
**ಗೊಟ್ಟು ಕಾವ ಕೃಪಾಳು ಸಂತತ। ತನ್ನ ಭಕುತರನು ॥ ೨೨-॥"**

ತರುವಾಯ ಸಂಪಾತಿಯು ಪ್ರತ್ಯುಪಕಾರಾರ್ಥವಾಗಿ ಗಗನ ಮಂಡಲವನ್ನು ಸೇರಿ ಅಲ್ಲಿಂದ ಸೀತಾಕೃತಿಯು ಲಂಕಾಪಟ್ಟಣದ ಅಶೋಕ ವನದಲ್ಲಿ ಶಿಂಶುಪಾ ವೃಕ್ಷದ ಅಡಿಯಲ್ಲಿ ಕುಳಿತಿರುವುದನ್ನು ತಿಳಿಸಿ ಹಾರಿ ಹೋದನು.

ಹೀಗೆ ಹೇಳಿದ ಸಂಪಾತಿ ಪಕ್ಷಿಯ ಮಾತನ್ನು ಕೇಳಿದ ಜಾಂಬವಂತನು ಎಲ್ಲಾ ಕಪಿವೀರರನ್ನು ಕೇಳಿದನು. ಯಾರು ನೂರು ಯೋಜನದ ಸಮುದ್ರವನ್ನು ದಾಟಿ ಸೀತಾ ವಾರ್ತೆಯನ್ನು ತರುವಿರೆಂದು. ಕೊನೆಗೆ

**ಭವೇಯುರನ್ಯೇ ಪಿತತೋಹನೂಮಾ। ನೇಕಃಸಮರ್ಥೋನಪತತೋಸ್ತಿಕಶ್ಚಿತ್॥ ೫೭॥"** ಎಂದು ತಿಳಿದು ಕೊನೆಗೆ ಹನುಮಂತನಲ್ಲಿಗೆ ಬಂದು **"ಹನುಮಾ, ತ್ವಮೇವ ಏವಾತ್ರ ಪರಂ ಸಮರ್ಥಃ॥ ಕುರುಷ್ವಚೈ ತತ್ಪರಿಪಾಹಿ ವಾನರಾನ್" ॥೫೮॥"** ನೀನೊಬ್ಬನೇ ಈ ಕಾರ್ಯದಲ್ಲಿ ಪರಮ ಸಮರ್ಥನಿರುವಿ. ನೀನೇ ಈ ಕಾರ್ಯವನ್ನು ಸಾಧಿಸಿ ಖಿನ್ನಮಾನಸರಾಗಿ ಕುಳಿತಿರುವ ಈ ಕಪಿ ಜಂಗುಳಿಯನ್ನು ಕಾಪಾಡು. "ಪ್ರಾಣ ದೇವ ನೀನಲ್ಲದೆ ಕಾಯ್ವರ। ಕಾಣಲೋಕದೊಳಗೇ" ಎಂದು ಅಂಗಲಾಚಿದನು.

ತರುವಾಯ ಹನುಮಂತನು ಶ್ರೀರಾಮಚಂದ್ರನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಸಮುದ್ರ ತರಣವನ್ನು ಮಾಡಲು ಗಗನ ಮಂಡಲಕ್ಕೆ ಹಾರಿದನು. ಮಾರ್ಗದಲ್ಲಿ ಸುರಸೆ ಎಂಬ ನಾಗಕನ್ನಿಕೆಯುಗೆ ಬ್ರಹ್ಮದತ್ತ ವರದ ಪ್ರಕಾರವಾಗಿ ಅವಳ ವದನವನ್ನು ಪ್ರವೇಶಿಸಿ ತಕ್ಷಣವೇ ಹೊರಬಂದು ಮುಂದೆ ಸಾಗಿದನು. ಮತ್ತೊಮ್ಮೆ ಅದೇ ಮಾರ್ಗದಲ್ಲಿ ಚಲಿಸುತ್ತಿರುವಾಗ ಪ್ರತಿಬಂಧಕಳಾಗಿ ಬಂದ ಸಿಂಹಿಕಾ ಎಂಬ ಛಾಯಾ ರಕ್ಕಸಿಯನ್ನು ಸೀಳಿ ಸಮುದ್ರ ತಟವನ್ನು ಸೇರಿದನು ಮತ್ತು ತನ್ನ ಅಗಾಧವಾದ ದೇಹವನ್ನು ಸಂಕುಚಿತವನ್ನಾಗಿ ಮಾಡಿದನು. ಯಾವಾಗ ಹನುಮಂತನು ಸಮುದ್ರವನ್ನು ಲಂಘಿಸಿದನೋ ಅದನ್ನು ನೋಡಿ "ಅಬ್ಬಬ್ಬಾ, ಈ ಹನುಮಂತನು ಎಷ್ಟು ಸಾಹಸಿಯೋ ಏನೋ. ನೂರು ಯೋಜನ ವಿಸ್ತಾರವಾದ ಈ ಸಮುದ್ರವನ್ನು ಹಾರಿದನು. ಭಲೇ ಭಲೇ" ಎಂದರೆ ಇದು ಅಸುರರ ಉಪಾಸನೆಯಾಗುತ್ತದೆ. ಯಾಕೆಂದರೆ ಹನುಮಂತನಿಗೆ ಇರುವ ಶಕ್ತಿಯು ಇಷ್ಟೇನೇ? ಯಾವ ಸಪ್ತಸಾಗರಗಳನ್ನು ಏಕಾಪೋಶ ಮಾಡಿದ ಅಗಸ್ತ್ಯಮುನಿಗಳಂಥವರ ಬಲವನ್ನು ನೆನೆದರೆ ಮೈ ನಡಗುತ್ತದೆ. ಇಂಥಾ ಸಾವಿರ ಅಗಸ್ತ್ಯ ಮುನಿಗಳನ್ನು ಒಟ್ಟುಗೂಡಿಸಿದರೆ ರುದ್ರ ದೇವರ ಒಂದು ರೋಮಕ್ಕೆ ಸಾಟಿಯಾಗಲಾರದು. ಅಂಥಾ ಕೋಟಿ

ರುದ್ರದೇವರು ವಾಯುಪುತ್ರನಾದ ಹನುಮಂತನ ಒಂದು ರೋಮಕ್ಕೆ ಸಾಟಿಯಾಗಲಾರರು. ಅಂದ ಬಳಿಕ ಹನುಮಂತನಿಗೆ ಆ ಮಹಾರ್ಣವು ಬಂದು ಗೋಷ್ಪಾ ದೋದಕವಾಗಿರುವಲ್ಲಿ ಆಶ್ಚರ್ಯವೇನಿದೆ? ಹೀಗೆ ಯಥಾರ್ಥವಾಗಿ ತಿಳಿಯಬೇಕು. "ರೋಮ ರೋಮಕೆ ಕೋಟಿ। ಲಿಂಗ ಉದುರಿಸಿದ। ಭೀಮನ ನೆನೆದರೆ ಬಿಟ್ಟು ಹೋಗ್ವದು ಪಾಪ॥" ಎಂದು ಶ್ರೀಪುರಂದರ ದಾಸರು ಸಾರಿದ್ದಾರಲ್ಲವೇ? ಯಾವ ಕುಬೇರನಿಂದ ಆಜ್ಞಪ್ತನಾಗಿ ವಿಶ್ವಕರ್ಮನು ಆ ಲಂಕಾಪಟ್ಟಣವನ್ನು ನಿರ್ಮಿಸಿದನೋ ಅಂಥಾ ಲಂಕಾ ಪಟ್ಟಣಕ್ಕೆ ರಕ್ಷಕಳಾಗಿ ಇರಲು ಬ್ರಹ್ಮದೇವರ ವರದಿಂದ ರಾಕ್ಷಸ ರೂಪಿಯಾದ ಲಂಕಾಪುರಾಧಿ ದೇವತೆ ಲಂಕಿಣಿಯನ್ನು ಕಂಡ ಹನುಮಂತನು ಅವಳ ಪ್ರತಿಭಟನೆಯನ್ನು ಗಣಿಸದೆ ಒಂದೇ ಮುಷ್ಟಿ ಪ್ರಹಾರದ ರುಚಿಯನ್ನು ತೋರಿದನು. ಆ ಮಾರುತಿಯ ಹಸ್ತ ಸ್ಪರ್ಶ ಮಾತ್ರದಿಂದ ಅವಳು ಭೀತಳೂ, ಧನ್ಯ ಮನಸ್ಕಳೂ ಆಗಿ ಆ ಹನುಮಂತನಿಗೆ ಪುರ ಪ್ರವೇಶಕ್ಕೆ ಅಡ್ಡಿ ಪಡಿಸದೆ ಸಮ್ಮತದಿಂದ ಅಲ್ಲಿಂದ ನಿರ್ಗಮಿಸಿದಳು. ಅವಳಿಗಿದ್ದ ರಕ್ಕಸ ರೂಪವು ಕಪಿ ಶ್ರೇಷ್ಠನಾದ ಹನುಮಂತನ ಸ್ಪರ್ಶದಿಂದ ನಿವೃತ್ತಿಯಾಯಿತು.

ಲಂಕಾಪಟ್ಟಣ ಪ್ರವೇಶಕ್ಕೆ ಯಾರನ್ನೂ ತಡೆಯಬಲ್ಲ ಶಕ್ತಿಯು ಆಕೆಗೆ ಬ್ರಹ್ಮದೇವರರಿಂದ ಬಂದಿದ್ದುದರಿಂದ ಅವಳನ್ನು ಎದುರಿಸುವುದು ಯಾರಿಂದಲೂ ಸಾಧ್ಯವಿರಲಿಲ್ಲ. ಯಾಕೆಂದರೆ ಬ್ರಹ್ಮದೇವರು ಜೀವೋತ್ತಮರು. ಅವರಿಗಿಂತ ಹಿರಿಯ ದೇವತೆಗಳು (ವಿನಾ ಲಕ್ಷ್ಮೀನಾರಾಯಣರು) ಈ ಬ್ರಹ್ಮಾಂಡದಲ್ಲಿಯೇ ಇಲ್ಲ. ಅಂದ ಬಳಿಕ ಆತನ ವರವನ್ನು ಉಲ್ಲಂಘಿಸುವವರು ಯಾರು? ಅಂದರೆ ಬ್ರಹ್ಮನೇ ಹೇಳಿರುವಂತೆ ("ವಾಯೋರ್ಮವಾಂತರಂ ನಾಸ್ತಿ॥ಗಾರುಡೇ॥") ಬ್ರಹ್ಮನಿಗೆ ಸಮಾನರಾದವರು ಪ್ರಾಣದೇವರು. ಇವರು ಭಗವತ್ಕಾರ್ಯ ಸಾಧಕರು. ತನ್ನಿಮಿತ್ತವಾಗಿ ಬರುವ ಯಾವುದೇ ಪ್ರತಿ ಬಂಧಕಗಳನ್ನು ಇವರು ನಿವಾರಿಸಬಲ್ಲರು. ಇದೇ ರೀತಿಯಾಗಿ ಸಮಯೋಚಿತವಾಗಿ ಪ್ರಾಣದೇವರು ಬ್ರಹ್ಮನಿತ್ತ ವರಗಳನ್ನು ಅನೇಕ ಬಾರಿ ಅತಿಕ್ರಮಿಸಿರುತ್ತಾರೆ. "ಮಯಾವರಾವಿಲಂಘಿತಾಹ್ಯನೇಕಶಃ । ಸ್ವಯಂಭುವಃ॥"

ಸಮಾನನೀಯ ಏವಮೇ। ತತೋತ್ರಮಾನಯಾಮ್ಯಹಂ ॥ ತಾ.ನಿ. ೭-೩೩॥"

ಹೀಗೆ ಶ್ರೀಮದಾಚಾರ್ಯರು ಹೇಳಿರುತ್ತಾರೆ. ಆದ್ದರಿಂದ ಹನುಮಂತನು ಇಲ್ಲಿ ಬ್ರಹ್ಮದೇವರ ವರವನ್ನು ಗಣನೆಗೆ ತಾರಲಿಲ್ಲ. ಇದು ಬ್ರಹ್ಮದೇವರಿಗೆ ಇಷ್ಟವೇ ಆಗಿತ್ತು. ಹೀಗೆ ಲಂಕಿಣಿಯನ್ನು ಮರ್ದಿಸಿದ ತರುವಾಯ ಹನುಮಂತನು ನಿರ್ಭೀತಿಯಿಂದ ಲಂಕಾಪಟ್ಟಣವನ್ನು ಸೇರಿದನು. ಹನುಮಂತನು ಎಷ್ಟು ಕಷ್ಟ ಪಟ್ಟನಪ್ಪಾ ಈ ಲಂಕಾಪಟ್ಟಣವನ್ನು ಸೇರಲು ಎಂಬಂತೆ ನಟಿಸಿದ್ದು ಅಸುರ ಮೋಹನಕ್ಕೆ, ದೇವತೆಗಳ ಉದ್ಧಾರಕ್ಕೆ ಶ್ರೀಹರಿಯ ಪ್ರೀತಿಗೆ. ಇಲ್ಲಿ ದೇವತೆಗಳಿಗೆ ಏನು ಪ್ರಯೋಜನವಾಗಿದೆ ಎಂದರೆ ದೇವತೆಗಳು ತಮಗೆ ಅಸಾಧ್ಯವಾದ ಕಾರ್ಯವನ್ನು ಮಾರುತಿಯು ನಿರಾಯಾಸವಾಗಿ ಮಾಡಿರುವುದರಿಂದ ಈತನು ನಮಗಿಂತಲೂ ಉತ್ತಮನು. ಈತನು ಶ್ರೀರಾಮನಿಗೆ ಎರಗಿರುವುದರಿಂದ ಶ್ರೀರಾಮನು ಸರ್ವೋತ್ತಮನು ಎಂಬ ಜ್ಞಾನವನ್ನು ಹೊಂದಿದರು. ಕಪಿವೀರರೆಲ್ಲಾ ಜ್ಞಾನ, ಬಲಾದಿಗಳಲ್ಲಿ ತಾರತಮ್ಯ ಉಳ್ಳವರು ಎಂದೂ ತಿಳಿದರು. ಮುಮುಕ್ಷು ಕುಲವೂ ಹಾಗೆಯೇ ತಿಳಿಯಿತು.

॥ ಪದ ॥ ಅರಿಗಳ ವರ್ಗಕೆ। ಅರಿಯದವಾನಂತೆ।
ಚರಿಸಿದ ಪುರದೊಳು। ಎರಡೊಂದು ಬಾರಿ ॥
ಸರಸಿಜ ಜಾಂಡವ। ಕರದಲಿ ಕಾಂಬುವ ।
ನರಸಿದನೇಕೋ। ಇರುಳಲಿ ಸೀತೆಯ ॥ ೧೧ ॥

**ಶಬ್ದಾರ್ಥ:** ಅರಿಗಳ ವರ್ಗಕೆ = ದೈತ್ಯ ಸಮುದಾಯಕ್ಕೆ; ಅರಿಯದವನಂತೆ = ತಿಳಿಯದಂತೆ (ಅವರಿಗೆ ಗೊತ್ತಾಗದಂತೆ) ಮತ್ತು ತಿಳಿಯದವನಂತೆ(ದಡ್ಡನಂತೆ); ಪುರದೊಳು = ಲಂಕಾ ಪಟ್ಟಣದಲ್ಲಿ; ಸಂಚರಿಸಿದ: ಎರಡೊಂದು ಬಾರಿ = ಮೂರು ಸುತ್ತು; ನರಸಿಜಜಾಂಡವ = ಸರೋವರದಲ್ಲಿ ಜನಿಸಿದ ಕಮಲದಲ್ಲಿ ಹುಟ್ಟಿದ ಬ್ರಹ್ಮನಿಂದ ಸೃಷ್ಟವಾದ, ಹದಿನಾಲ್ಕು ಲೋಕಗಳಿಂದ ಯುಕ್ತವಾದ ಈ ಲೋಕವನ್ನು; ಕರದಲ್ಲಿ ಅಂಗೈಯಗೆರೆಯಂತೆ; ಕಾಂಬುವ = ನೋಡುವ; ಅರಸಿದನೇಕೋ = ಏಕೆ ಹುಡುಕಿದನೋ; ಇರುಳಲಿ = ರಾತ್ರಿ ಕಾಲದಲ್ಲಿ; ಸೀತೆಯ = ಸೀತಾಕೃತಿಯನ್ನು.

**ಭಾವಾರ್ಥ:** ಹನುಮಂತನು ಲಂಕಾ ಪಟ್ಟಣವನ್ನು ಸೇರಿದ ಮೇಲೆ ತ್ರಿಕೂಟಾಚಲದ ಶಿಖರವನ್ನು ಏರಿ ಅಲ್ಲಿಂದ ಹತ್ತು ಯೋಜನ ವಿಸ್ತಾರವಾದ ಲಂಕಾಪಟ್ಟಣವನ್ನು ಒಮ್ಮೆ ನೋಡಿದನು. ಇನ್ನು ಇಂಥಾ ನಗರದಲ್ಲಿ ಸೀತೆಯು ಎಲ್ಲಿರುವಳೋ ಏನೋ ಹೇಗೆ ಹುಡುಕುವುದು? ಎಂದು ಚಿಂತಾಕ್ರಾಂತನಾದವನಂತೆ ತೋರಿಕೊಂಡನು ಸರಿ. ದೈತ್ಯ ವರ್ಗಕ್ಕೆ ಇವನೊಬ್ಬ ಶ್ರಮಜೀವಿ, ಸಂಶೋಧಕ, ಮಂದಜ್ಞ, ಏನೂ ಅರಿಯದವನಂತೆ ಶ್ರಮಪಟ್ಟು ಹುಡುಕುವವನಂತೆ ಲಂಕಾಮಂಡಲದ ಗಗನದಲ್ಲಿ ಸಂಚರಿಸುತ್ತ ಮೂರು ಸುತ್ತು ತಿರುಗಿದನು. ಸಪ್ಪಳ ಮಾಡದೆ ತಾನು ಲಂಕೆಯಲ್ಲಿ ಸಂಚರಿಸುತ್ತಿರುವುದು ದೈತ್ಯರಿಗೆ ಅರಿಯಲಾಗದಂತೆ ಸಂಚಾರ ಮಾಡಿದನು.

**"ಈಶಾದ್ಯನ್ಯತ್ರ ಸರ್ವತ್ರಾಽಲೋಚನೇ ಸರ್ವವಿಷಯೇನ"** ಎಂದಂತೆ ಆಲೋಚನೆಯಿಂದ ಇಡೀ ಬ್ರಹ್ಮಾಂಡನವನ್ನೇ ಕರತಲಾಮಲಕವಾಗಿ ಅರಿತಿರುವ ಹನುಮಂತನಿಗೆ ಸೀತೆಯು ಎಲ್ಲಿರುವಳೆಂಬುದು ತಿಳಿಯಲಿಲ್ಲವೆಂಬಂತೆ, ಆಯಾಸ, ಭಯ, ನಿರಾಶೆಗಳು ಆವರಿಸಿದವನಂತೆ ನಟಿಸಿದನು. ಕೊನೆಗೆ ತನ್ನ ಪಿತನನ್ನು ಸ್ಮರಿಸಲು ಆಗ ಆ ವಾಯುವು ತಂಗಾಳಿ ರೂಪದಿಂದ ಸೀತೆಯಿರುವ ಆ ಅಶೋಕವನದ ಕಡೆಯಿಂದ ಬೀಸಿದನಂತೆ. ಆಗ ಹನುಮಂತನು ಆ ಸುಳುವಿನಿಂದ ಅಶೋಕವನದ ಕಡೆಗೆ ಹಾರಿ ಅಲ್ಲಿ ಅಶೋಕ ವೃಕ್ಷದ ಕೆಳಗೆ ಕುಳಿತಿದ್ದ ಸೀತೆಯನ್ನು ಸಂತೋಷಭರಿತನಾಗಿ ಮೆಲ್ಲಗೆ ಆ ವೃಕ್ಷದ ಮೇಲಿಂದ ಇಳಿದು ಸ್ವಲ್ಪ ಶಮನವನ್ನು ಹೊಂದಿದ ಮೇಲೆ, ಅಷ್ಟರಲ್ಲಿ ಎಲ್ಲಾ ದೈತ್ಯರು ನಿದ್ರೆ ಹೋದ ಮೇಲೆ ಮೆಲ್ಲನೇ ಕೆಳಗಿಳಿದು ಸೀತಾ ಸಮ್ಮುಖದಲ್ಲಿ ವಂದನೆ ಮಾಡಿ ಕೈಜೋಡಿಸಿಕೊಂಡು ನಿಂತನಂತೆ.

||ಪದ|| ತಾತನ ಸ್ಮರಿಸುತ| ವಾತಾಯನದಿಂದ|
ಮಾತೆ ಇದ್ದಲ್ಲಿಗೆ ಪೋಗಿ| ತಾತರುವಡರಿಸಿ ||
ನಾಥನ ಮುದ್ರಿಕೆ । ಸೀತಾಕೃತಿಗಿತ್ತು||
ಭೂತಗಣಕೆ ಅದು| ಭೂತನುತಾನಾಗಿ || ೧೨ ||

**ಶಬ್ದಾರ್ಥ:** ತಾತನ = ಮೂಲ ವಾಯುದೇವನನ್ನು; ವಾತಾಯನ = ತಂಗಾಳಿ ಬೀಸಿದ ದಿಕ್ಕನ್ನು ಅನುಸರಿಸಿ; ಮಾತೆ = ಸೀತಾಕೃತಿ; ತರುವಡಿರಿ = ಅಶೋಕ ವೃಕ್ಷದಲ್ಲಿ ಕುಳಿತು; ನಾಥನ = ಶ್ರೀರಾಮನ; ಭೂತಗಣಕೆ = ರಾಕ್ಷಸರ ಕುಲಕ್ಕೆ; ಅದು ಭೂತನು = ಆಶ್ಚರ್ಯಕರವಾದ ಕಪಿ ಎನಿಸಿ.

ಯಾರು ಹನುಮಂತನನ್ನು ಸ್ಮರಣೆ ಮಾಡುತ್ತಾರೋ ಅಂಥವರಿಗೆ ಯಾವ ಫಲವಿದೆ ಎಂದರೆ "ಬುದ್ಧಿರ್ಬಲಂ| ಯಶೋಧೈರ್ಯಂ । ನಿರ್ಭಯತ್ವಂ । ಅರೋಗತ || ಅಜಾಡ್ಯಂ । ವಾಕ್ಪಟುತ್ವಂಚ । ಹನುಮಾನ್ ಸ್ಮರಾಣಾತ್ ಭವೇತ್" ಎಂಬ ಅಷ್ಟ ವಿಧವಾದ ಐಶ್ವರ್ಯಗಳು ಲಭಿಸುತ್ತವೆ ಎಂದಿರುವಾಗ ಈ ಹನುಮಂತನು ಯಾಕೆ ಇಷ್ಟೊಂದು ಭಯಗ್ರಸ್ಥನಾಗಿ ವರ್ತಿಸಿದನು? ಎಂದರೆ ಅಶೋಕವನದಲ್ಲಿರುವ ದೈತ್ಯರೆಲ್ಲರೂ ಗಾಢ ನಿದ್ರೆಯಲ್ಲಿದ್ದರೂ ಮೂಲ ರೂಪದಲ್ಲಿ ಕಲಿಯಿಂದ ಸಹಿತರಾಗಿ ಹನುಮಂತನ ಈ ಲೀಲೆಗಳನ್ನೆಲ್ಲಾ ನೋಡುತ್ತ ಇವನೂ ಸಾಮಾನ್ಯ ಶ್ರಮಜೀವಿ ಎಂದೇ ತಿಳಿದರು. ಅವರು ಹಾಗೆ ತಿಳಿಯಲೆಂದೇ ಹನುಮಂತನು ಹಾಗೆ ಮಾಡಿದನು.

"ಯದ್ಯಪ್ಯೇ ತನ್ನ ಪಶ್ಯಂತಿ । ನಿಶಾಚಾರಗನಾಸ್ತುತೇ||
ದ್ಯುಲೋಕ ಚಾರಿಣಃ ಸರ್ವೇ| ಪಶ್ಯಂತ್ಯಪಯ ಏವಚ || ತಾ.ನಿ. ೭-೧೪||
ತೇಷಾಂ ವಿಡಂಬನಾಯೈವ । ದೈತ್ಯಾನಾಂ ವಂಚನಾಯಚ||
ಪಸ್ಯತಾಂ ಕಲಿ ಮುಖ್ಯಾನಾಂ| ವಿಡಂಬೋಯಂ ಕೃತೋಽ ಭವೇತ್ || ತ್ರಾನಿ. ೭-೧೫ ||"

ಈತನ ಲೀಲೆಯನ್ನು ಕಂಡು ದೇವತೆಗಳು ಸಂತೋಷಪಟ್ಟರು. ಸೀತಾಕೃತಿಯನ್ನು ಕಂಡ ಹನುಮಂತನು ತಾನು ಶ್ರೀರಾಮನ ದೂತನೆಂದು ಆಕೆಗೆ ತಿಳಿಸಿ, ಬಹುಪರಿಯಾದ ಸಂಶಯಗಳನ್ನು ನಿವಾರಣೆ ಮಾಡಿ, ಆಕೆಗೆ ಶ್ರೀರಾಮನ ಮುದ್ರಿಕೆಯುಂಗರವನ್ನು ಕೊಟ್ಟು ಸಂತೋಷಗೊಳಿಸಿದನು. ತರುವಾಯ ತನ್ನ ದೌತ್ಯವನ್ನು ಸಾರ್ಥಕಗೊಳಿಸಲಿಕ್ಕಾಗಿ ವಿನಯ ವಿಡಂಬನೆಯಿಂದ ಸೀತಾಮಾತೆಯನ್ನು ತನ್ನ ಹಸಿವೆಯನ್ನು ಅಡಗಿಸಿಕೊಳ್ಳುವುದಕ್ಕಾಗಿ ಫಲಗಳನ್ನು ಸ್ವೀಕರಿಸಲು ಅನುಮತಿಯನ್ನು ಬೇಡಿದನು. ಆತನಿಗಿದ್ದ ಹಸಿವೆ ಎಂದರೆ ದೈತ್ಯರನ್ನು ಸದೆಬಡಿಯುವುದೇ ಆಗಿತ್ತು. ಸೀತಾದೇವಿಯಾದರೂ ಭಯಗ್ರಸ್ಥಳಾಗಿರುವಂತೆ ತೋರುತ್ತ "ಅಪ್ಪಾ ಹನುಮಾ, ದೈತ್ಯರು ಕ್ರೂರಿಗಳೂ, ಬಲಾಢ್ಯರೂ ಆಗಿದ್ದಾರೆ. ಅವರಿಗೆ ಎಚ್ಚರವಾಗದ ಹಾಗೆ, ಸ್ವಲ್ಪ ಮಟ್ಟಿಗೆ ಮಾತ್ರ ನಿನ್ನ ಹಸಿವೆಯನ್ನು ಇಂಗಿಸಿಕೊಂಡು ಇಲ್ಲಿಂದ ಪಾರಾಗಿ ಹೋಗು. ಬೇಗನೇ ಶ್ರೀರಾಮನನ್ನು ಕರೆದುಕೊಂಡು ಬಂದು ನನ್ನ ಬಂಧಮೋಚನೆಯನ್ನು ಮಾಡು" ಎಂದು ಆಜ್ಞಾಪಿಸಿದಳು.

**ಸೀತಾಕೃತಿ :** ವೇದವತಿ ಎಂಬವರ್ಣಾಭಿಮಾನಿಯು ಶ್ರೀ ಶನೇ ಪತಿಯಾಗಬೇಕೆಂದು ತಪೋನಿರತಳಾಗಿದ್ದಳು. ಆಗ ರಾವಣನು ಆಕೆಯನ್ನು ಬಲಾತ್ಕಾರವಾಗಿ ಅಪಹರಿಸಬೇಕೆಂದು ಧಾವಿಸಿದಾಗ ಆಕೆಯು ದೂರ ಸರಿದು ನಿಂತು

ಕೊಳ್ಳುವಾಗ ಆಕೆಯ ವೇಣಿಯು ರಾವಣನ ಕೈಗೆ ಸಿಕ್ಕಿತು. ತಕ್ಷಣವೇ ಆಕೆಯು ಆ ವೇಣಿಯನ್ನು ಕತ್ತರಿಸಿ ಬಗೆದು ಇನ್ನು ಮುಂದೆ ಬಲಾತ್ಕಾರವಾಗಿ ಪರಸ್ತ್ರೀಯರನ್ನು ಮುಟ್ಟಿದರೆ ನಿಧನನಾಗೆಂದು ಶಾಪವನ್ನಿತ್ತು ನಿನ್ನ ಸಾವಿಗೆ ನಾನೇ ಕಾರಣಳಾಗುತ್ತೇನೆಂದು ಹೇಳಿ ಅಗ್ನಿ ಪ್ರವೇಶ ಮಾಡಿದಳು. ತರುವಾಯ ಅಗ್ನಿ ಮತ್ತು ಇಂದ್ರರ ಆವೇಶದಿಂದ ಸೀತೆಯಂತೆ ರೂಪವನ್ನುತಾಳಿ ಸೀತಾ ರಾಮರ ಆಶ್ರಮವನ್ನು ಸೇರಿದಳು. ಇತ್ತ ನಿಜವಾದ ಸೀತೆಯು (ಶ್ರೀ ಲಕ್ಷ್ಮಿ) ಪಾರ್ವತೀ ಪತಿಯಿಂದ ಪೂಜೆಗಳ್ಳಲು ಕೈಲಾಸಕ್ಕೆ ಧಾವಿಸಿಬಟ್ಟಳು. ಸೀತಾಕೃತಿಯೇ ಮುಂದಿನ ಕಥಾನಾಯಕಿ. ಈಕೆಯಲ್ಲಿ ಶ್ರೀಲಕ್ಷ್ಮೀ ದೇವಿಯ ಆವೇಶವಿದ್ದಿತು.

ಇಲ್ಲಿ ಸೀತಾಕೃತಿಯಲ್ಲಿ ಆವಿಷ್ಟರಾಗಿದ್ದ ಇಂದ್ರ ಮತ್ತು ಅಗ್ನಿಗಳೇ ಕಾಲಾಂತರದಲ್ಲಿ ಸೀತಾದೇವಿಯಲ್ಲಿ ಕ್ರಮವಾಗಿ ಕುಶ ಮತ್ತು ಲವರೆಂಬ ಯಮಳ ಪುತ್ರರಾಗಿ ಹುಟ್ಟಿದರು. ಸೀತಾಽಕೃತಿಯಾಗಿದ್ದ ವೇದವತಿಯು ಮುಂದೆ ಪದ್ಮಾವತಿಯಾಗಿ ಅವತರಿಸಿ ಶ್ರೀನಿವಾಸನನ್ನು ಒರಿಸಿದಳು.

ಇಲ್ಲಿ ಒಂದು ಸಂಶಯವು ಬರುತ್ತದೆ. ಅದೇನೆಂದರೆ ದೂತನಾಗಿ ಬಂದ ಹನುಮಂತನಿಗೆ ಸೀತಾಮಾತೆಯು "ದೈತ್ಯರಿಗೆ ಎಚ್ಚರವಾಗದಂತೆ ಸ್ವಲ್ಪ ಫಲವನ್ನು ಸ್ವೀಕರಿಸು" ಎಂದು ಹೇಳಿದ್ದು ಆಜ್ಞಾಸ್ವರೂಪವಾದುದಲ್ಲವೇ? ಹಾಗಾದರೆ ಹನುಮಂತನು ಮಾಡಿದ್ದೇನು? ಪೂರ್ತಿ ವನವನ್ನೆಲ್ಲಾ ಧ್ವಂಸ ಮಾಡಿ, ದೈತ್ಯರನ್ನೆಲ್ಲಾ ಸಂಹರಿಸಿಬಿಟ್ಟನು. ಇದು ಒಡತಿಯ ಆಜ್ಞೆಯ ಉಲ್ಲಂಘನೆಯಾಗಲಿಲ್ಲವೇ? ಎಂದರೆ ಮಹಾಮತಿಯಾದ ಹನುಮಂತನು ಹಾಗೆ ಎಂದಿಗೂ ಮಾಡುವುದಿಲ್ಲ. ಒಡೆಯ ಒಡತಿಯರ ಆಜ್ಞೆಯನ್ನು ಪಾಲಿಸುವಲ್ಲಿ ಹನುಮಂತನನ್ನು ಬಿಟ್ಟರೆ ಬೇರೆ ಯಾರಿದ್ದಾರೆ?

ಹನುಮಂತನಿಗೆ ಸೀತಾಮಾತೆಯ ಆಜ್ಞೆಯು ಸಿಕ್ಕಿದ್ದೇ ತಡ. ಅಶೋಕವನದಲ್ಲಿ ವೃಕ್ಷಗಳ ಮೇಲೆ ಹಾಗೂ ನೆಲದ ಮೇಲೆ ಎಚ್ಚರವಿಲ್ಲದಹಾಗೆ ಮದ್ಯಪಾನ ಮತ್ತರಾಗಿ ಮಲಗಿದ್ದ ಅಸಂಖ್ಯಾತ ದೈತ್ಯರನ್ನು ನೋಡಿದನು. ಮೆಲ್ಲಗೆ ಅತೀ ಸೂಕ್ಷ್ಮವಾಗಿ ಒಂದೊಂದೇ ಗಿಡವನ್ನು ಹನುಮಂತನು ಕಿತ್ತಲಾರಂಭಿಸಿದನು. ಹಾಗೆ ಮರವನ್ನು ಕಿತ್ತಿವಾಗ ದೈತ್ಯರಿಗೆ ಎಚ್ಚರವಾಗಲಿಲ್ಲ. ಯಾಕೆಂದರೆ ಅಮಿತ ಬಲಪೂರ್ಣನಾದ ಮಾರುತಿಯು ಆ ಗಿಡಗಳನ್ನು ಎಷ್ಟು ಸುಲಭವಾಗಿ ಕಿತ್ತಿದನೆಂದರೆ ನಾವು ಮಡಿಗೆ ನೀರನ್ನು ಬಿಟ್ಟು ಕೊತ್ತಂಬರೀ ಗಿಡಗಳನ್ನು ಕಿತ್ತುವಂತೆ ಕಿತ್ತಿದನು. ನಾವು ಕೊತ್ತಂಬರಿ ಸೊಪ್ಪನ್ನು ಕಿತ್ತಿದರೆ ಅದರಲ್ಲಿ ಇರುವ ಕ್ರಿಮಿಗಳಿಗೆ ಆ ಗಿಡವು ಕಿತ್ತಲ್ಪಟ್ಟುದ್ದು ಗೊತ್ತಾಗುತ್ತದೆಯೇ? ಇಲ್ಲ ಹಾಗೆಯೇ ಸುಲಭವಾಗಿ ಕೈ ಚಳಕದಿಂದ ಶಕ್ತಿಯುಕ್ತನಾದ ಹನುಮಂತನು ಆ ಗಿಡಗಳನ್ನು ಕಿತ್ತಿ ನೆಲದ ಮೇಲೆ ಮಲಗಿದ್ದ ರಕ್ಕಸರ ಸಮೂಹಕ್ಕೆ ಅಪ್ಪಳಿಸಿದನಾದ್ದರಿಂದ ಸಮೀಚೀನವಾದ ಆ ಹೊಡೆತಕ್ಕೆ ವೃಕ್ಷದಲ್ಲಿದ್ದ ಹಾಗೂ ಕೆಳಗೆ ಮಲಗಿದ್ದ ದೈತ್ಯರಿಗೆ ಪುನಃ ಎಚ್ಚರವಾಯಿತೆಂಬ ಶಂಕೆಯನ್ನು ಸಹ ಮಾಡುವವರು ಮೂರ್ಖರೇ ಸರಿ. ಚಿರನಿದ್ರೆಯಲ್ಲಿ ಅವರು ಲೀನವಾದರು. ಪುನಃ ಅವರಿಗೆ ಎಚ್ಚರವಾಗಲೇ ಇಲ್ಲ.

"ಅಮ್ಮಾ, ಯಾರಿಗೂ ಎಚ್ಚರವಾಗದ ಹಾಗೆ, ನಾನು ಕೆಲಸವನ್ನು ನಿರ್ವಹಿಸಿದ್ದೇನೆ ತಾಯಿ" ಎಂದ ಹನುಮ. ಅದಕ್ಕೆ ಸೀತಾದೇವಿಯು "ಅಪ್ಪಾ ಹನುಮಾ, ನಾನು ವನವನ್ನು ಸ್ವಲ್ಪ ಮಾತ್ರ ಬಳಸಿಕೋ ಎಂದು ಹೇಳಿದ್ದೆ. ಆದರೆ, ನೀನು ಪೂರಾವನವನ್ನು ಧ್ವಂಸ ಮಾಡಿ ಬಿಟ್ಟೆಯಲ್ಲಾ" ಎಂದರೆ " ಅಮ್ಮಾ ನನಗೆ ಈ ವನವೇ ಸ್ವಲ್ಪವಾದುದು. ಇದು ನನಗೆ ಹೆಚ್ಚೇ? ಎಂದನು ಬ್ರಹ್ಮಾಂಡ ವಿಗ್ರಹನಾದ ಹನುಮಂತನು.

ಹನುಮಂತನು ಸಮಸ್ತ ವನಸ್ಥ ದೈತ್ಯರನ್ನು ನಾಶ ಮಾಡಿದ ಮೇಲೆ ನಿಮಿತ್ತ ಮಾತ್ರಕ್ಕೆ ಒಬ್ಬನನ್ನು ಉಳಿಸಿದನು. ಆ ದೈತ್ಯನು ಓಡಿ ಬಂದು ದೈತ್ಯ ಕುಲ ಸಾರಭೌಮನಾಗಿದ್ದ ರಾವಣನಿಗೆ ಈ ವಾರ್ತೆಯನ್ನು ಮುಟ್ಟಿಸಿ ಹನುಮಂತನ ಶಕ್ತಿ ರೂಪಗಳನ್ನು ವರ್ಣಿಸುತ್ತ ಗಡ ಗಡ ನಡುಗುತ್ತಿದ್ದನು. ಮೊದಲು ಅವನ ಮಾತನ್ನು ರಾವಣನು ನಂಬಲೇ ಇಲ್ಲ. ಕೊನೆಗೆ ದೂತನ ಮಾತನ್ನು ನಂಬಿದ ರಾವಣನು ಹನುಮಂತನನ್ನು ನಿಗ್ರಹಿಸಬೇಕೆಂದು ದೈತ್ಯರನ್ನು ನಿಯೋಜಿಸಿದನು.

॥ ಪದ ॥ ನಾಮ ಮಾತ್ರಕೆ ದೈತ್ಯ ಸ್ತೋಮವಳಿಯುತಿರೆ।
ತಾಮರಗಳಕಿತ್ತಿ ಗುಮ್ಮಲು ಬೇಕೇ॥
ಮಾರ್ಮಲೆತಕ್ಷನ। ಮರ್ಮ ಭೇದಿಸು।
ತ್ರಾಮಾರಿ ಶರವ ವಿ । ರಾಮವಗೊಳಿಸುತ ॥ ೧೩ ॥

**ಶಬ್ದಾರ್ಥ:** ನಾಮ ಮಾತ್ರಕೆ = ವಾಯು ದೇವರ ಯಾವುದೇ ಒಂದಾವತಾರವಿರಲಿ ಆ ಅವತಾರದ ಒಂದು ಹೆಸರನ್ನು ಹೇಳಿದರೆ ಸಾಕು; ದೈತ್ಯರ ಸ್ತೋಮ = ರಾಕ್ಷಸರ ಕುಲ? ಅಳಿಯುತ್ತದೆ = ನಾಶವಾಗುವಂತಿರಲಿಕ್ಕೆ; ತಾ = ಹನುಮಂತನು; ಗುಮ್ಮಲು ಬೇಕೇ = ಅಪ್ಪಳಿಸ ಬೇಕೆ; ಮಾರ್ಮಲೆತ = ಮದೋನ್ಮತ್ತನಾದ; ಅಕ್ಷನ = ಅಕ್ಷಯ ಕುಮಾರನೆಂಬ ರಾವಣನ ದ್ವಿತಿಯ ಪುತ್ರನನ್ನು; ಮರ್ಮವ ಭೇದಿಸಿ = ಸಂಹಾರ ಮಾಡಿ; ಸುತ್ರಾಮಾರಿ ಶರವ = ಇಂದ್ರಜಿತು (ಸುತ್ರಾಮ = ಇಂದ್ರ); ಇವನು ಬಿಟ್ಟ ಬ್ರಹ್ಮಾಸ್ತ್ರವನ್ನು; ವಿರಾಮವಗೊಳಿಸಿದ = ಅಲ್ಪ ಮರ್ಯಾದೆಯ ಮೂಲಕ ಅದನ್ನು ನಿವೃತ್ತಿಗೊಳಿಸಿದನು.

**ಭಾವಾರ್ಥ:** ಹನುಮಂತನು ತನ್ನ ಅಮಿತವಾದ ಶಕ್ತಿಯಿಂದ ಮರಗಿಡಗಳನ್ನು ಕಿತ್ತಿ ನೆಲಕ್ಕೆ ಅಪ್ಪಳಿಸುವುದರ ಮೂಲಕ ವನಸ್ಥ ಸಕಲ ದೈಯಿತೇಯರನ್ನು ಧ್ವಂಸ ಮಾಡಿದನಲ್ಲವೇ? ಹೌದು. ಹನುಮಂತನು ಯಾಕೆ ಇಷ್ಟಾದರೂ ಶ್ರಮವನ್ನು ವ್ಯಯಿಸಿದನು? ಯಾವ ಹನುಮಂತನ ಹೆಸರನ್ನು ಕೇಳಿದ ಮಾತ್ರಕ್ಕೆ ಆ ರಕ್ಕಸ ಕುಲ ಎದೆಯೊಡೆದು ಸಾಯುತ್ತಿತ್ತು. ಹಿಂದೆ ಹನುಮಂತನು ಅಂಜನಾದೇವಿಯ ಗರ್ಭದಲ್ಲಿ ಉದಿಸಿದ ಎಂದಾಕ್ಷಣವೇ ಆ ಕಾಲದಲ್ಲಿ ಗರ್ಭಿಣಿಯರಾಗಿದ್ದ ಸಮಸ್ತ ದೈತ್ಯ ತರುಣಿಯರಿಗೆ ಗರ್ಭಪಾತವಾಯಿತಂತೆ. ಇಲ್ಲವಾದರೆ ಆ ಕೋಟ್ಯಾಂತರ ದೈತ್ಯರು ಹುಟ್ಟಿದ್ದರೆ ಭೂಲೋಕದ ಸ್ಥಿತಿಗತಿ ಏನಾಗುತ್ತಿತ್ತೋ ಏನೋ. ತನ್ನ ಹುಟ್ಟಿನಿಂದಲೇ ಇಂಥಾ ವಿಪತ್ತಿನಿಂದ ಜಗತ್ತನ್ನು ಪಾರು ಮಾಡಿ ಉಪಕಾರಗೈದ ಹನುಮಂತನು ವನದಲ್ಲಿ ರಣನರ್ತನವನ್ನು ಯಾಕೆ ಮಾಡಬೇಕಾಗಿತ್ತು? ವಾಯುಸುತನು ಹುಟ್ಟಿದ ಮಾತ್ರದಿಂದಲೇ ದೈತ್ಯಸಂಕುಲದ ಮೇಲೆ ಅದು ಯಾವ ಪರಿಣಾಮವನ್ನು ಉಂಟು ಮಾಡುತ್ತದೆ ಎಂದರೆ ಶ್ರೀಮದಾಚಾರ್ಯರು ಹೇಳುತ್ತಾರೆ "ತಸ್ಮಿನ್ತ ಜಾತೇ ರುಧಿರಂ ಪ್ರಸಸ್ರುವು। ಮರ್ಹ್ಯಾಸುರಾ ವಾಹನ ಸೈನ್ಯ ಸಂಯನ್ಯಪಾಷ್ಟ ತತ್ಪಕ್ಷ ಭವಾಃ ಸಮಸ್ತಾ । ಸ್ತದಾ ಭೀತಾ ಅಸುರಾ ರಾಕ್ಷಸಾಶ್ಚ ॥ ತಾ.ನಿ.೧೨-೫೬ ॥"

ಎಂದರೆ ಸಮಸ್ತರಾದ ಪಾತಾಲಾದಿಲೋಕಗಳಲ್ಲಿ ಮೂಲ ರೂಪದಿಂದಲೂ, ಅಂಶಗಳಿಂದಲೂ ಯುಕ್ತರಾಗಿ ಸೈನ್ಯ ವಾಹನ, ಐಶ್ವರ್ಯ, ಬಲಾದಿಗಳಿಂದ ಗರ್ವಿತರೂ, ಕ್ರೂರ ಕರ್ಮಾಸಕ್ತರೂ ಆದ ದೈತ್ಯರಿಗೆ ವದನ, ಗುದಾದಿ ನವ ದ್ವಾರಗಳಲ್ಲಿ ರಕ್ತಸ್ರಾವ ಉಂಟಾಗಿ ಎಲ್ಲರೂ ಹತರಾದರಂತೆ. ಹೀಗಿರುವಾಗ ಹನುಮಂತನು ಯಾಕೆ ಆ ಅಶೋಕ ವನದಲ್ಲಿ ಇಷ್ಟೊಂದು ರಾದ್ಧಾಂತವನ್ನು ಮಾಡಬೇಕಾಗಿತ್ತು? ಎಂದರೆ ಈ ಮೊದಲೇ ಹೇಳಿದಂತೆ ಮಾರುತಾತ್ಮ ಸಂಭೂತನೆನಿಸಿದ್ದ ಹನುಮಂತನು ಇಲ್ಲಿ ಲೀಲಾವಿನೋದಕ್ಕಾಗಿ ಮಾತ್ರ ಹಾಗೆ ನಟಿಸಿದನು ಎಂದು ತಿಳಿಯಬೇಕು. ಮತ್ತು ಬಹು ಪ್ರಯಾಸದಿಂದ ಹನುಮಂತನು ವನ ಹಾಗೂ ರಾಕ್ಷಸರನ್ನು ನಾಶಮಾಡಿದನೆಂದು ಮೂಲ ದೈತ್ಯರು ತಿಳಿಯಲು ಹಾಗೆ ಮಾಡಿದನು.

ತರುವಾಯ ಧೂತನ ವಾರ್ತೆಯನ್ನು ಕೇಳಿ ಕ್ರೋಧಾಶ್ಚರ್ಯ ಭರಿತನಾದ ರಾವಣನು ತಕ್ಷಣವೇ ಆ ಕಪೀಶ್ವರನನ್ನು ನಿಗ್ರಹ ಮಾಡಬೇಕೆಂದು

**"ಅಶೀತಿ ಕೋಟಿಯೂಧಪಂ । ಪುರಃಸರಾಷ್ಟ ಕಾಯುತಂ ॥**
**ಅನೇಕ ಹೇತಿ ಸಂಕುಲಂ। ಕಪೀಂದ್ರ ಮಾವೃಣೋದ್ಬಲಂ ॥ ೭-೨೦॥"**

ಎಂಭತ್ತು ಕೋಟಿ ದೈತ್ಯರನ್ನು ಎಂಟು ಸಾವಿರ ಸೈನ್ಯಾಧಿಕಾರಿಗಳ ನೇತೃತ್ವದೊಂದಿಗೆ ಮಹಾ ಮಹಾಸ್ತ್ರ ಸಜ್ಜಿತರನ್ನಾಗಿ ಕಳುಹಿಸಿದನು. ಅವರೆಲ್ಲರೂ ದುರ್ಮಂತ್ರ ಸಿದ್ಧರೂ, ವಾಮಾಚಾರಿಗಳೂ, ಅಭಿಚಾರಕ್ಕೆ ಸ್ವಯಂ ಅಭಿಮಾನಿಗಳೂ, ಬಲಿಷ್ಠರೂ, ನಾನಾ ವಿಧವಾದ ಭಯಂಕರವಾದ ಆಯುಧ ಪಾಣಿಗಳೂ ಆಗಿ ಮುನ್ನುಗ್ಗಿದ್ದರು ಇಷ್ಟೇ ಅಲ್ಲ, ಅವರೆಲ್ಲರೂ

**"ಸಮಸ್ತಶೋ ವಿಮೃತ್ಯುವೋ । ವರಾದ್ಧರಹಸ್ಯ ಕಿಂಕರಾಃ॥**
**ಸಮಾಸದನ್ಮಹಾ ಬಲಂ । ಸುರಾಂತರಾತ್ಮನೋಂಗಜಂ ॥ ೭-೧೯ ॥"**

ರುದ್ರದೇವರ ವರ ಬಲದಿಂದ ಅವಧ್ಯರಾಗಿದ್ದವರು. ಇವರೆಲ್ಲರೂ ದೇವತಾಂತರ್ಯಾಮಿಯಾದ ಹನುಮಂತನನ್ನು ಸುತ್ತುವರಿದರು. ಅಶೋಕ ವನಾಂತರಂಗದಲ್ಲಿ ಹಣಾಹಣಿ ಹೋರಾಟವು ಪ್ರಾರಂಭವಾಯಿತು. ವೀರ ಹನುಮಂತನು ಆ ದೈತ್ಯ ಸಮೂಹವನ್ನೆಲ್ಲಾ ತಿಗಣೆಗಳನ್ನು ಒರಸುವಂತೆ, ಏಕೈಕ ವನಕೆಯು ಖಂಡುಗ ಧಾನ್ಯವನ್ನು ಹಣಿಯುವಂತೆ ಹಣಿದು ಸಂಹರಿಸಿಬಿಟ್ಟನು. ಈ ಕದನದಲ್ಲಿ ಹರವರಗರ್ವಿತರಾದ, ಪರ್ವತಕ್ಕೆ ಸಮಾನರಾದ ರಾವಣನ ಏಳು ಮಂತ್ರಿ ಕುಮಾರರನ್ನೊಳಗೊಂಡು ಅವನ ಬಲದ ಮೂರನೇ ಒಂದು ಭಾಗದಷ್ಟು ರಕ್ಕಸರನ್ನು ಹನುಮಂತನು ಧ್ವಂಸ ಮಾಡಿಬಿಟ್ಟನು.

ಈ ವಾರ್ತೆಯನ್ನು ಕೇಳಿ ದುಃಖ, ಕ್ರೋಧದಿಂದ ಉದ್ವಿಗ್ನನಾದ ರಾವಣನು ತನಗೆ ಸಮಾನನೇ ಆದ ತನ್ನ ಎರಡನೇಯ ಮಗನಾದ ಅಕ್ಷಯ 'ಕುಮಾರ ಸ್ವಾಮಿ'ಯನ್ನು ಯುದ್ಧಕ್ಕೆ ಕಳುಹಿಸಿದನು. "ಕುಮಾರ ಮಾಕ್ಷ ಮಾತ್ಮನಃ ಸಮಂ ಸುತಂ ನ್ಯಯೋಜಯತ್ ॥" ಆ ರಾಕ್ಷಸನಾದರೂ ವೀರಾವೇಶದಿಂದ ಬಂದು ಹನುಮಂತನ ಮೇಲೆ ಮಂತ್ರ, ಯಂತ್ರ, ತಂತ್ರಮಯದಿಂದ ಆಯುಧಗಳ ಸುರಿಮಳೆಯನ್ನು ಸುರಿಸಿಬಿಟ್ಟನು. ಆದರೆ ಆ ಯಾವ ವಿಧವಾದ ಯತ್ನವೂ ಹನುಮಂತನ ಮುಂದೆ ಸಾಗಲಿಲ್ಲ. ಯಾಕೆಂದರೆ ಸಮಸ್ತ ಮಂತ್ರಗಳು ಶಬ್ದಾತ್ಮಕವಾದುವುಗಳು. ಆ ಎಲ್ಲಾ ಮಂತ್ರಗಳಿಗೂ ರಮಾ, ನಾರಾಯಣರ ತರುವಾಯ ನಿಯಾಮಕನು ವಾಯುದೇವರೇ (**"ಲಕ್ಷ್ಮೀ ನಾರಾಯಣಾ ನಂತರಂ। ಸಮಸ್ತ ವೇದ ಪ್ರತಿಪಾದ್ಯಾಯುನಮಃ ॥ ಹರಿ ರಮಾ ಪ್ರಸಿದ್ಧಾತಿರಿಕ್ತಾನಂತ ವೇದ ವೇದ್ಯಾಯು ನಮಃ"**) ಶಸ್ತ್ರಗಳಿಗೆ ವೇಗವನ್ನು ನೀಡುವವನೂ ಮಾರುತಿಯೇ. ಅಂದ ಮೇಲೆ ಎಷ್ಟು ದೈತ್ಯರಿದ್ದರೇನು? ಅವರು ಏನು ಮಾಡಿದರೇನು? ಯಾವ ಆಯುಧ ಮಂತ್ರ, ತಂತ್ರಗಳು ಹನುಮಂತನನ್ನು ಏನು ಮಾಡುತ್ತವೆ?

ಹನುಮಂತನು ಯೋಚಿಸಿದನು. ರಾವಣನು ಶ್ರೀರಾಮನಿಗೇ ಮೀಸಲು. ಇಂದ್ರಜಿತುವನ್ನು ಲಕ್ಷ್ಮಣನಿಗೆ ಬಿಟ್ಟು ಕೊಟ್ಟರೆ ಆ ಯುದ್ಧದಲ್ಲಿ ಇವನು ತೋರುವ ಬಲವನ್ನು ಬೇರೇ ಕಪಿವೀರರು ನೋಡಬಹುದು. ಇವನ ಬಲಕ್ಕೆ ತಮ್ಮ ಬಲವನ್ನು ಹೋಲಿಸಿಕೊಂಡು ನೋಡಲಿ. ಆಗ ಇವರಿಗೆ ಗೊತ್ತಾಗುತ್ತದೆ ಹರಿ ವಾಯುಗಳ ಕೃಪೆ ಇಲ್ಲವಾದರೆ ಜಗತ್ತಿನ ಗತಿ ಏನಾಗುತ್ತದೆ ಎಂದು. ಈಗ ಈ ನೀಚ ಕುಮಾರ ಸ್ವಾಮಿಯನ್ನು ನಾನೇ ಸಂಹಾರ ಮಾಡುತ್ತೇನೆ. ಹೀಗೆಂದು

ಯೋಚಿಸಿ ಮುನ್ನುಗ್ಗಿದ ಹನುಮಂತನು ತಕ್ಷಣದಲ್ಲೇ ಅಕ್ಷಯ ಕುಮಾರನ ಕಾಲುಗಳನ್ನು ಹಿಡಿದು

**"ಸಚಕ್ರವದ್ಭ್ರಮಾತುರಂ। ವಿಧಾಯ ರಾವಣಾತ್ಮಜಂ॥**
**ಅಪೋತಯದ್ಧರಾತಲೇ । ಕ್ಷಣೇನ ಮಾರುತೀ ತನುಃ ॥ ೭-೨೯ ॥"**

ಗಿರಗಿರನೆ ತಿರುಗಿಸಿ ನೆಲಕ್ಕೆ ಅಪ್ಪಳಿಸಿ ಬಿಟ್ಟನು. ಹನುಮಂತನ ಹೊಡೆತಕ್ಕೆ ಸಿಕ್ಕ ಅಕ್ಷಯಕುಮಾರನು

**"ವಿಚೂರ್ಣಿತೇ ಧರಾತಲೇ। ನಿಜೇಸುತೇಸ್ಸ ರಾವಣಃ॥**
**ನಿಶಮ್ಯ ಶೋಕತಾಪಿತ । ಸ್ತದಗ್ರಜಂ ಸಮಾದಿಶತ್ ॥ ೭-೩೦॥**

ಅಕ್ಷಯ ಕುಮಾರನು ನುಚ್ಚು ನೂರಾಗಿ ಹತನಾದನು. ಇದನ್ನು ಕೇಳಿ ಪುನಃ ಶೋಕ ಸಮನ್ವಿತನಾದ ರಾವಣನು ತನ್ನ ಹಿರಿಯ ಮಗನಾದ ಇಂದ್ರಜಿತುವನ್ನು ಹನುಮಂತನನ್ನು ಸದೆ ಬಡಿದು ಹೇಗಾದರೂ ಸರಿ ಹಿಡಿದು ತರಬೇಕೆಂದು ನಿಯೋಜಿಸಿದನು. ತರುವಾಯ ಇಂದ್ರಜಿತುವು ಹನುಮಂತನೊಡನೆ ಸೆಣಸುತ್ತಾ ಕೊನೆಗೆ ಬೇರ ಉಪಾಯವನ್ನು ಕಾಣದೆ ತನ್ನಲ್ಲಿ ಉಳಿದಿದ್ದ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿ ಬಿಟ್ಟನು. ಆಗ ಹನುಮಂತನು ಯೋಚಿಸಿದನು. ಈಗ ನಾನು ಈ ಬ್ರಹ್ಮಾಸ್ತ್ರಕ್ಕೆ ಸಿಲುಕದೇ ಹೋದರೆ ನನ್ನ ನೈಜವಾದ ಬಲವು ಇವರಿಗೆ ಗೊತ್ತಾಗುತ್ತದೆ. ಹಾಗಾಗಬಾರದು. ಸ್ವಯತ್ನದಿಂದ ಏನು ಬೇಕಾದರೂ ಸಾಧಿಸಬಹುದೆಂಬ ಅಯಥಾರ್ಥ ಅಭಿಮಾನವು ಅವರಿಗೆ ಹುಟ್ಟಲಿ ಮತ್ತು ಇವನಿಂದ ಋಜುಗಣಸ್ಥರಿಗಿಂತ ಕಡಿಮೆಯಾದ ಕಪಿವೀರರು ಹಾಗೂ ಲಕ್ಷ್ಮಣರ ಮೇಲೆ ಈ ಬ್ರಹ್ಮಾಸ್ತ್ರವನ್ನು ಬಿಟ್ಟರೆ ಅವರು ತಡೆಯಲಾರರು. ಆದ್ದರಿಂದ ನನ್ನ ಮೇಲೆ ಪ್ರಯೋಗಿಸಿದ ಈ ಬ್ರಹ್ಮಾಸ್ತ್ರವು ನನ್ನ ಮೇಲೆ ಅಲ್ಪ ಪರಿಣಾಮವನ್ನು ಮಾತ್ರ ಬೀರಬಲ್ಲುದಾದ್ದರಿಂದ ಅಷ್ಟನ್ನು ಮಾತ್ರ ಅದು ನಿರ್ವಹಿಸಿ ನಿರ್ಗಮಿಸುತ್ತದೆ. ಇದರಿಂದ ಇತರರಿಗೆ ಉಪಕಾರವೂ, ದೈತ್ಯರಿಗೆ ಮೋಹವೂ ಅಧಿಕವಾಗುತ್ತದೆ. ನನ್ನ ಸಮಾನನೇ ಆದ ಬ್ರಹ್ಮದೇವರಿಗೆ ನಾನು ಗೌರವವನ್ನು ಕೊಟ್ಟಂತೆಯೂ ಆಗುತ್ತದೆ ಎಂದು ಯೋಚಿಸಿದನು ಮತ್ತು ಶತೃವಾದ ರಾಕ್ಷಸೇಶ್ವರನನ್ನು ಕಾಣದೆ ಹಾಗೇ ತಾನೇ ಯಾಕೆ ಹೋಗಬೇಕು? ಹೇಗೋ ನಾನು ಸಿಕ್ಕಿ ಬಿದ್ದರೆ ನನ್ನನ್ನು ಬಂಧಿಸಿ ರಾವಣನೆಡೆಗೆ ಕೊಂಡೊಯ್ಯುತ್ತಾರೆ. ನಾನು ಅವನಿಗೆ ಬುದ್ಧಿಯನ್ನು ಹೇಳಿದ ನೀತಿ ರೀತಿಗೂ ಕೀರ್ತಿಯೂ ಬರುತ್ತದೆ. ಹೀಗೆಂದು ಬಗೆದ ಮಾರುತಿಯು ಆ ಬ್ರಹ್ಮಾಸ್ತ್ರಕ್ಕೆ ಸಿಲುಕಿದನು. ಕೇವಲ ಸ್ವ ಇಚ್ಛೆಯಿಂದ. ಆಗ ದೈತ್ಯರೆಲ್ಲರೂ ಸೇರಿ ಬಲವಾದ ಹಗ್ಗಗಳಿಂದ ಹನುಮಂತನನ್ನು ಬಿಗಿದು ಕೊರಡೆಗಳಿಂದ ಹೊಡೆಯುತ್ತ, ಕೇಕೆ ಹಾಕುತ್ತ ವಾದ್ಯಗಳನ್ನು ಕರ್ಕಶವಾಗಿ ಬಾರಿಸುತ್ತ ವಿಜಯೋತ್ಸಾಹದಿಂದ ರಾವಣನ ಅರಮನೆಗೆ ಹನುಮಂತನನ್ನು ಹಿಡಿದು ತಂದರು.

ದಾರಿಯಲ್ಲಿ ಹನುಮಂತನಿಗೆ ದೈತ್ಯರಿಂದ ಹೊಡೆತಗಳು ಬಿದ್ದಂತೆಲ್ಲಾ ಆತನು ಅಯ್ಯೋ, ಅಪ್ಪಾ, ಅಮ್ಮಾ ಎಂದು ಚೀರುತ್ತಾ ಸಾಗಿದನು. ಯಾಕೆಂದರೆ ಹನುಮಂತನಿಗೆ ನೋವು, ಬಾವುಗಳು ಉಂಟು ಎಂದು ಆ ದೈತ್ಯರು ತಿಳಿಯಲಿ ಎಂದು. ಸಮಿಚೀನವಾದ ಮೋಹಕವನ್ನು ದೈತ್ಯರಿಗೆ ಉಂಟು ಮಾಡಲಿಕ್ಕಾಗಿಯೇ ತಾನು ಹಾಗೆ ನಟಿಸಿದನೇ ವಿನಃ ಹನುಮಂತನಿಗೆ ಇಂಥಾ ಕ್ಷುದ್ರ ದೈತ್ಯರಿಂದ ಎಂದಿಗಾದರೂ ಬಾಧೆಯಾಗುತ್ತದೆಯೇ? ಆ ಮುಕ್ತ ಪರಿಯಂತವಾಗಿ ಮಹಾಸುಖ ಪ್ರಾರಬ್ಧೈಕ ಭೋಕ್ತೃವಾದ ಮಾರುತಿಗೆ ಈ ದೈತ್ಯರಿಂದ ನೋವಾಗುತ್ತದೆಯೇ? ಎಂದಿಗೂ ಇಲ್ಲ. ಶ್ರೀ ಹನುಮಂತನು ಯಾರನ್ನೂ ಮೋಹಗೊಳಿಸುವುದಿಲ್ಲ. ದೇವದಾನವರ ಸ್ವರೂಪ ಸ್ವಭಾವ

ಚಿಂತನೆಗಳನ್ನು ಬಹಿರಂಗಪಡಿಸಿ ಉಚಿತ ಫಲಗಳನ್ನು ನೀಡುತ್ತಾರೆ. ಚನ್ನಾಗಿ ಗುದ್ದಿದೆವೆಂದು ದೈತ್ಯರು ಹಿಗ್ಗಿದರು. ಹನಮಪ್ಪನಿಗೆ ನೋವೇ ಇಲ್ಲವೆಂದು ಹಿಗ್ಗಿದ ರುಸುರರು.

ವನ ಧ್ವಂಸಾರಂಭದಿಂದ ಇಲ್ಲಿಯವರೆಗೆ ಶ್ರಮವಹಿಸಿದವನಂತೆ ಈ ಹನುಮಂತನು ತೋರಿಕೊಂಡುದು ಕೇವಲ ದೈತ್ಯರ ಬಲವನ್ನೂ, ಕುಟಿಲತನವನ್ನೂ, ಅವರ ಸ್ವರೂಪ ಸ್ವಭಾವವನ್ನೂ ಅವರು ಯಥಾವತ್ತಾಗಿ ಪ್ರಕಟಿಸಬೇಕು. ಅದನ್ನು ದೇವತೆಗಳು ನೋಡಿ ಇಂಥವರೊಡನೆ ಸೆಣಸುವುದು ತಮಗೆ ಸ್ವಶಕ್ತಿ, ಯುಕ್ತಿಗಳಿಂದ ಸಾಧ್ಯವೇ ಎಂದು ತುಲನಾತ್ಮಕವಾಗಿ ಚಿಂತಿಸಿ ಕೊನೆಗೆ ವಾಯುದೇವರು ತಮಗೆ ಮಾಡುತ್ತಿರುವ ಉಪಕಾರವನ್ನು ಯಾವತ್ತಿಗೂ ಸ್ಮರಿಸಿ ಉದ್ಧಾರವಾಗಬೇಕು. ಹರಿ, ವಾಯುಗಳಲ್ಲಿ ನೈಜವಾದ ಭಕ್ತಿಯು ಅವರಿಗೆ ಉಂಟಾಗಬೇಕು ಎಂದು. ಇಲ್ಲಿ ಹನುಮಂತನು ದೈತ್ಯರ ಶಕ್ತಿಯನ್ನು ಪ್ರಕಟಿಸಿರುವನೇ ಹೊರತಾಗಿ ತನ್ನ ಶಕ್ತಿಯನ್ನಲ್ಲ. ಹನುಮಂತನು ಈ ನಟನೆಯನ್ನು ಮಾಡದೆ ತನ್ನ ಶಕ್ತಿಯನ್ನು ನೈಜವಾಗಿ ತೋರಿಸುವುದಾಗಿದ್ದರೆ ಹನುಮಂತನ ದರ್ಶನ ಮಾತ್ರವೇ ಸಾಕಾಗಿತ್ತು. ಆ ಅಸುರ ಕುಲ ನಾಶಕ್ಕೆ, ಮಾನವನಂತೆ ನಟಿಸಿದ ಶ್ರೀರಾಮನ ಪ್ರೀತ್ಯರ್ಥವಾಗಿ ತಾನು ಕೂಡಾ ಮಾರುತಿಯು ಇಲ್ಲಿ 'ಸಾಹಸಿ' ಎಂಬ ಪಟ್ಟವನ್ನು ಪಡೆದನು, ಬ್ರಹ್ಮಪಟ್ಟಕ್ಕೇ ಆಸೆ ಬೀಳದವನು. ಮಹಾನುಭಾವರಾದ ಶ್ರೀವಿಜಯದಾಸರು ಇದೇ ಜ್ಞಾನದಿಂದ ಶ್ರೀ ಹನುಮಂತನನ್ನು ಭಜಿಸಬೇಕೆಂದು ಬೋಧಿಸುತ್ತಾರೆ. ಶ್ರೀ ಹರಿ ವಾಯು ಗುರುಗಳು ಅಸುರರ ಸಂಹಾರಕ್ಕೆ ಹೆಚ್ಚು ಮಹತ್ವವನ್ನು ಕೊಡದೆ ಅವರ ತಮಸ್ಸಾಧನಕ್ಕೆ ಅವಶ್ಯವಾಗಿ ಬೇಕಾಗಿರುವ ಮೋಹಕ ವ್ಯಾಪಾರಗಳನ್ನು ಅಗಾಧವಾಗಿ ಮಾಡಿರುತ್ತಾರೆ ಮತ್ತು ದೇವತೆಗಳ ಉದ್ಧಾರಕ್ಕಾಗಿ ತಮ್ಮಲ್ಲಿ ಇರುವ ಖಂಡಾಃ ಖಂಡ ಗುಣಗಳನ್ನು ಪ್ರಕಟಿಸಿರುತ್ತಾರೆ. ಸ್ವರೂಪತಃ ನಾಶ ರಹಿತರಾದ ಜೀವರಿಗೆ ಸಂಹಾರವೆಂದರೇನು? ದೈತ್ಯರು ತಮಸ್ಸನ್ನು ಸೇರುವುದೇ ಸಮೀಚೀನವಾದ ಸಂಹಾರವು. ಹೀಗೆ ಶ್ರೀವಿಜಯದಾಸರು ಬೋಧಿಸಿರುತ್ತಾರೆ.

**॥ ಪದ ॥ ಗರುಡ ಭವಾದಿಗಳು। ಅರಿಯದ ಮಹಿಮನು।**
**ಎರಡೈದು ಶಿರನಿಗೆ। ತೋರಿದನೇಕೋ ॥**
**ಉರಿಯಿತೆ ವೈಶ್ವಾ । ನರನಿಂದ ಲಂಕೆಯು ।**
**ಉರಿಸಿದ ಹನುಮನು । ಮರೆಯದೆ ತೇಜದಿ ॥ ೧೪ ॥**

**ಶಬ್ದಾರ್ಥ** ಪ್ರಾಣ ದೇವರ ಮಹಿಮೆಯನ್ನು ಗರುಡ, ಶೇಷ, ರುದ್ರಾದಿ ದೇವತೆಗಳು ಅರಿಯರು = ಸಾಕಲ್ಯೇನ ತಿಳಿಯಲಾರರು. ಎರಡೈದು ಶಿರನಿಗೆ = ಹತ್ತು ತಲೆಯ ರಾವಣನಿಗೆ; ತೋರಿದನು = ಕಾಣಿಸಿಕೊಂಡನು; ಯಾವ ಪ್ರಮೇಯಕ್ಕೆ? ವೈಶ್ವಾನರನಿಂದ = ಅಗ್ನಿಯಿಂದ; ತೇಜದಿ = ಸ್ವಸಾಮರ್ಥ್ಯದಿಂದುರಿಸಿದನು.

**ಭಾವಾರ್ಥ:** ಜೀವೋತ್ತುಮರಾದ ವಾಯು ದೇವರ ಮಹಿಮೆಯನ್ನು ಗರುಡ, ಶೇಷ, ರುದ್ರರೇ ಮೊದಲಾದ ದೇವತೆಗಳೂ ಸಾಕಲ್ಯೇನ ತಿಳಿಯಲಾರರು. ಹೀಗಿರುವಾಗ, ಈ ಮಾರುತಿಯು **"ಶಿವಶೇಷ ಖಗೇಶ ಮುಖ್ಯಾಮರ । ಸಮಾರಾಧಿತ ಚರಣ ಸರೋರುಹಾಯ । ಸುಪರ್ಣಾತ್ಯಧಿಕ ತತ್ವ ಜ್ಞಾನಾಯ ॥ ವಾ.ಗ ॥"** ಎಂದಿರುವಾಗ ಕುತ್ಸಿತ ರಾವಣನ ಸಮ್ಮುಖದಲ್ಲಿ ಬಂದಿಯಾಗಿ ನಿಂತಿರುವನಲ್ಲಾ ಇದು ಯಥಾರ್ಥವೇ? ವಿಡಂಬನವೇ? ಬಂದಿಯಾಗಿನಿಂತ ಹನುಮಂತನನ್ನು ರಾವಣನು ಪ್ರಶ್ನಿಸಿದನು?

"ಕಪೇ ಕುತೋಽಸಿಕಸ್ತ್ವಾ । ಕಿಮರ್ಥಮಿದ್ವನಂ ಕೃತಂ" ಹೇ ಕಪಿಯೇ, ನೀನು ಯಾಕೆ ನನ್ನ ವನವನ್ನು ಧ್ವಂಸ ಮಾಡಿ ನನ್ನ ಪರಿವಾರದವರನ್ನೆಲ್ಲಾ ಸಂಹಾರ ಮಾಡಿರುವೆ ಎಂದು. ಆಗ ಹನುಮಂತನು ಹೇಳಬೇಕಾದ ಅವಶ್ಯಕತೆ, ಭಯವು ಎರಡೂ ಆತನಿಗೆ ಇರಲಿಲ್ಲ. ಆದರೂ ಲೋಕ ಶಿಕ್ಷಣನ್ಯಾಯವನ್ನನುಸರಿಸಿ ನೀತಿಯನ್ನು ಹೇಳಿದರೆ ಕೇಳದ್ದರೆ ಪರಿಣಾಮವು ಏನಾಗುತ್ತದೆ ಎಂಬುದನ್ನು ಜಗತ್ತಿಗೆ ಸಾರಲು ಜಗದ್ಗುರು ಸ್ಥಾನಮಾನನಾದ ಹನುಮಂತನು ಗುಣಗಾಂಭೀರ್ಯ ಯುಕ್ತನಾಗಿಯೇ ಹೀಗೆ ಹೇಳುತ್ತಾನೆ.

**"ಅವೈಹಿದೂತ ಮಾಗತಂ ದುರಂತ ವಿಕ್ರಮಸ್ಯ ಮಾಂ ।**
**ರಘೂತ್ತಮಸ್ಯ ಮಾರುತಿಂ । ಕುಲಕ್ಷಯೇ ತವೇಶ್ವರಂ ॥ ೭-೩೮ ॥**
**ನಚೇತ್ಪ್ರದಾಸ್ಯಸಿತ್ವರನ್ರ । ಷೂತ್ತಮ ಪ್ರಿಯಾಂ ತದಾ ॥**
**ಸಪುತ್ರ ಮಿತ್ರ ಬಾಂಧವೋ। ವಿನಾಶಮಾಶುಯಾಸ್ಯಸಿ ॥ ೩೯ ॥**
**ನ ರಾಮಬಾಣ ಧಾರಣೇ ಕ್ಷಮಾಃ ಸುರೇಶ್ವರಾ ಅಪಿ ॥**
**ವಿರಿಂಚಿ ಶರ್ವ ಪೂರ್ವಕಾಃ । ಕಿಮುತ್ವಮಲ್ಪ ಸಾರಕಃ ॥ ೪೦ ॥**
**ಪ್ರಕೋಪಿತಸ್ಯ ತಸ್ಯಕಃ ಪುರಃ ಸ್ಥಿತೌಕ್ಷಮೋಭವೇತ್ ॥**
**ಸುರಾಽಸುರೋರಗಾದಿಕೇ । ಜಗತ್ಯಚಿಂತ್ಯ ಕರ್ಮಣಃ ॥ ೪೧ ॥**

ಎಲೈ ರಾವಣನೇ ಕೇಳು. ಪರಾಕ್ರಮದಲ್ಲಿ ಅದ್ವಿತೀಯನಾದ ಯಾವ ಶ್ರೀರಾಮನು ಇರುವನೋ ಆತನ ಸೇವಕನು ಮಾತ್ರ ನಾನು. ನಿನ್ನ ನಾಶಕ್ಕೆ ನಾನೇ ಸಾಕು. ಆದರೆ ನಿನಗೆ ಹಿತವನ್ನು ಹೇಳುತ್ತಿದ್ದೇನೆ. ಶ್ರೀರಾಮರಾಣಿಯನ್ನು ಶೀಘ್ರವಾಗಿ ಒಪ್ಪಿಸು. ಇಲ್ಲವಾದರೆ ನಿನ್ನ ವಂಶವೇ ನಾಶವಾದೀತು. ಶ್ರೀರಾಮ ಬಾಣಕ್ಕೆ ಬ್ರಹ್ಮನೂ

ನಿಲ್ಲಲಾರನು. ಸುರಾಽಸುರ ನರ, ಸರ್ಪ ಯಾರೂ ನಿಲ್ಲಲಾರರು. ನನ್ನ ಮಾತನ್ನು ಕೇಳಿ ಉದ್ಧಾರನಾಗು ಎಂದು ಬೋಧಿಸಿದನು. ಆದರೇನು? "ವಿನಾಶ ಕಾಲೇ ವಿಪರೀತ ಬುದ್ಧಿಃ" ಎಂದಂತೆ ರಾವಣನು ತನ್ನ ಹಿತವನ್ನೂ ಬಯಸಲಿಲ್ಲ. ಬದಲಿಗೆ ಹನುಮಂತನನ್ನು ಕೊಲ್ಲಿರೆಂದು ಆಜ್ಞಾಪಿಸಿದನು. ಆದರೆ ಅಲ್ಲೇ ಇದ್ದ ವಿಭೀಷಣನು ಸಮಾಧಾನವನ್ನು ಪಡಿಸಿ ಹಾಗೆ ಮಾಡಬಾರದೆಂದನು. ಇದರಿಂದ ಕೆಲವರು ಹನುಮಂತನು ವಿಭೀಷಣನಿಂದ ಬದುಕಿದನೆನ್ನುತ್ತಾರೆ. ಅದು ಹಾಗಲ್ಲ. ಹನುಮಂತನು ವಿಭೀಷಣನ ದೇವ ಸ್ವಭಾವವನ್ನು ಪ್ರಕಟಿಸಲಿಕ್ಕಾಗಿ ಒಂದು ಸಂದರ್ಭವನ್ನು ಹೀಗೆ ಒದಗಿಸಿಕೊಟ್ಟನು. ರಾವಣನು ಕೆಲವು ರಾಕ್ಷಸರ ಸಲಹೆಯಂತೆ ಹನುಮಂತನ ಬಾಲವನ್ನು ಸುಡಬೇಕೆಂದು ಆಜ್ಞೆ ಮಾಡಿದನು. ಸರಿ, ದೈತ್ಯರೆಲ್ಲಾ ಸೇರಿ ಹನುಮಂತನ ಬಾಲಕ್ಕೆ ಬಟ್ಟೆಯನ್ನು ಸುತ್ತಿ ತೈಲಾಜ್ಯಾದಿಗಳನ್ನು ಸುರಿದು ಅಗ್ನಿಸ್ಪರ್ಶ ಮಾಡಿದರು. ಅಷ್ಟೇ ತಡ ಹನುಮಂತನು ಛಂಗನೆ ಹಾರಿ ಕೊಳ್ಳಿಯಂತೆ ಬಾಲವನ್ನು ಹಿಡಿದುಕೊಂಡು ರಾವಣನ ಅರಮನೆಯನ್ನೊಳಗೊಂಡು ಎಲ್ಲಾ ಕಡೆ ಸುತ್ತಾಡಿ ಕಂಡ ಕಡೆಗೆ ಬೆಂಕಿಯನ್ನು ಹಚ್ಚಿ ಇಡೀ ಲಂಕಾಪುರವನ್ನೇ ಸುಟ್ಟು ಬೂದಿ ಮಾಡಿದನು. ಅಸಂಖ್ಯಾತ ದೈತ್ಯರು ಇದರಿಂದ ನಾಶವಾದರು. ಅಶೋಕವನ, ವಿಭೀಷಣನ ಮನೆ ಮತ್ತು ತ್ರಿಜಟಾ (ಶಚಿ ಅಂಶ) ಇವರ ಮನೆಯನ್ನು ಬಿಟ್ಟು ಉಳಿದೆಲ್ಲವನ್ನೂ ಸ್ವಾಹಾಕಾರ ಮಾಡಿದನು. ನಿಜವಾಗಿಯೂ ಆ ಲಂಕಾ ಪಟ್ಟಣವು ಹನುಮಂತನು ಹಚ್ಚಿದ ಜಡಾಗ್ನಿಯಿಂದ ಉರಿಯಲಿಲ್ಲ. ಸ್ವಯಂ ಹನುಮಂತನೇ ತನ್ನ ತೇಜಸ್ಸಿನಿಂದಲೇ ಆ ಮಾಯಾಪುರವನ್ನು ದಹಿಸಿ ಬಿಟ್ಟನು. ಯಾಕೆಂದರೆ ಆ ಪಟ್ಟಣವು ವಿಶ್ವಕರ್ಮನಿಂದ ನಿರ್ಮಿತವಾಗಿತ್ತು. ವರ ರಕ್ಷಿತವಾಗಿತ್ತು. ಅಗ್ನಿಯು ಹನುಮಂತನ ತೇಜಸ್ಸೇ ಅಗಿದ್ದುದರಿಂದ ಅದು ಆತನ ನಿಯಂತ್ರಣದಲ್ಲೇ ಇದ್ದು ಅದು ಅಶೋಕವನ, ವಿಭೀಷಣರ ಮನೆಯನ್ನು ಸುಡಲಿಲ್ಲ ಮತ್ತು ಉರಿಯುತ್ತಿದ್ದ ಬಾಲವನ್ನು ಸಮುದ್ರದಲ್ಲಿ ಅದ್ದಿದಾಗ್ಯೂ ಯಾವ ಜಲಚರಗಳಿಗೂ ಹಾನಿಯಾಗಲಿಲ್ಲ. ರಂಗನಾಟಕ ದೃಷ್ಟಿಯಿಂದ ನೋಡುವುದಾದರೆ ಲಂಕಾಪಟ್ಟಣವನ್ನು, ಪಾಪ! ನಮ್ಮ ಹನುಮಪ್ಪ ನ್ಯಾತಕ್ಕೆ ಸುಟ್ಟಾನು? ಆತನೇನು ಬೆಂಕಿಪೊಟ್ಟಣ, ಎಣ್ಣೆ, ಬಟ್ಟೆಗಳನ್ನು ಲಂಕಾಪಟ್ಟಣಕ್ಕೆ ಕೊಂಡು ಹೋಗಿದ್ದನೇ? ಬರಿಕೈಯಲ್ಲಿ ಹೋಗಿದ್ದ. ಪೊಂಜನ್ನು ಹೊತ್ತಿಸಿದವರು ರಾಕ್ಷಸರೇ. ಅವರೇ ಆ ಪಾಪಕ್ಕೆ ಭಾಗಿಗಳು ಅಲ್ಲವೇ?

**"ದದಾಹಚಾಽಖಿಲಾಂ ಪುರೀಂ । ಸ್ವ ಪುಚ್ಛಗೇನ ವಹ್ನಿನಾ ॥**
**ಕೃತಿಸ್ತು ವಿಶ್ವಕರ್ಮಣೋ । ಪ್ರದಹ್ಯತಾಸ್ಯ ತೇಜಸಾ ॥ ೭ – ೪೫ ॥"**

॥ ಪದ ॥ ನಿತ್ಯಾವಿಯೋಗಿಯೆಂದು । ಭಕ್ತಿಲಿತುತಿಪನು ॥
ನೆತ್ತಿ ಭೂಷಣವೆಂತು । ಇತ್ತನೋ ಕಾಣೆ ॥
ಅತ್ತಂತೆ ನಟಿಸಿದ । ನಿತ್ಯಾನಂದಾತ್ಮಗೆ ।
ಇತ್ತಮತೆ ನಟಿಸಿದ । ಭೃತ್ಯ ಶಿರೋಮಣಿ ॥ ೧೫ ॥

**ಶಬ್ದಾರ್ಥ:** ನಿತ್ಯಾऽವಿಯೋಗಿನಿ = ಲಕ್ಷ್ಮೀಸ್ವರೂಪಳಾದ ಸೀತೆಗೂ ರಾಮನಿಗೂ ಯಾವಕಾಲಕ್ಕೂ ಅಗಲಿಕೆ ಇಲ್ಲ; ಭಕ್ತಿಲಿ = ನಿಸ್ಸಂಶವಾಗಿ; ತುತಿಪನು = ತಿಳಿದು ಕೊಂಡಿರುವವನು; ನೆತ್ತಿಯ ಭೂಷಣ = ಸೀತಾಕೃತಿ ಇತ್ತ ಚೂಡಾಮಣಿಯನ್ನು; ನಿತ್ಯಾऽನಂದಾತ್ಮ = ಆನಂದಮಯ; ಭೃತ್ಯ ಶಿರೋಮಣಿ = ಸೇವಕರಲ್ಲಿ ಶ್ರೇಷ್ಠನಾದವನು.

**ಭಾವಾರ್ಥ:** ಹನುಮಂತನು ಲಂಕೆಯನ್ನು ದಹಿಸಿದ ತರುವಾಯ ಸೀತಾಕೃತಿಯಿಂದ ಪಡೆದ ಚೂಡಾಮಣಿಯನ್ನು ತೆಗೆದುಕೊಂಡು ಪುನಃ ಸಮುದ್ರವನ್ನು ಲಂಘಿಸಿ ಬಂದು ಕಪಿ ವೀರರನ್ನು ಸೇರಿ ಕೊಂಡನು. ಅಲ್ಲಿ ಎಲ್ಲಾ ಕಪಿ ವೀರರು ಜಯದ ಹಬ್ಬವನ್ನು ಆಚರಿಸಿ ಕೊಂಡು ಮರಳಿ ಕಿಷ್ಕಿಂಧೆಗೆ ಬಂದು ಸೇರಿದರು. ಆಗ ಹನುಮಂತನು ತಾನು ತಂದಿದ್ದ ಚೂಡಾಮಣಿಯನ್ನು ಶ್ರೀರಾಮನ ಚರಣಗಳ ಮುಂದಿರಿಸಿ ಸಮಸ್ತ ಘಟನೆಗಳನ್ನು ಶ್ರೀರಾಮನಿಗೆ ಅರುಹಿ ನಮಸ್ಕರಿಸಿದನು. ಆಗ ಶ್ರೀರಾಮನು ಹನುಮಂತನನ್ನು ಆಲಿಂಗಿಸಿಕೊಂಡು ಹನುಮಾ, ಈಗ ನನಗೆ ನಿನ್ನಿಂದ ಸಮಾಧಾನವಾಯಿತು ಎಂದನು. ಎಲ್ಲಾ ಕಪಿ ವೀರರೂ ಜಯಜಯಾಕಾರವನ್ನು ಮಾಡಿದರು. ಶ್ರೀ ಲಕ್ಷ್ಮೀನಾರಾಯಣ ಸ್ವರೂಪಿಗಳಾದ ಸೀತಾ ರಾಮರಿಗೆ ಯಾವ ಕಾಲದಲ್ಲಿಯೂ ವಿಯೋಗವೆಂಬುದೇ ಇಲ್ಲ. ಹೀಗಿರುವಾಗ ಹನುಮಂತನು ಅಶೋಕ ವನದಲ್ಲಿ ಸೀತೆ ಇದ್ದಾಳೆಂದು ರಾಮನಿಗೆ ತಿಳಿಸುವ ಅವಶ್ಯಕತೆಯು ಇದೆಯೇ? ಇಲ್ಲ ಇಂಥ ವಿಯೋಗಪರವಾದ ಚಿಂತನೆಯು ಹನುಮಂತನಿಗೆ ಇದೆಯೇ? ಇಲ್ಲ. "ನಿತ್ಯಾऽವಿಯೋಗಿನೀ ದೇವ್ಯಾ । ವಿಯೋಗಾನು ಚಿಂತನಂ ॥ ತೇ ಸರ್ವೇ ಅಸುರಾಜ್ಞೇಯಾ । ನಾತ್ರಕಾರ್ಯಾವಿಚಾರಣಾ ॥ ಗಾರುಡೆ ॥" ಹೀಗೆ ಇದ್ದರೂ ಹನುಮಂತನು ಯಾಕೆ ಹಾಗೆ ಮಾಡಿದನು ಎಂದರೆ ದೈತ್ಯರ ಅಯಥಾರ್ಥವಾದ ಜ್ಞಾನವು ದಟ್ಟಣಿಸಲಿ ಎಂದು ಹಾಗೆ ಮಾಡಿದನು. ಶ್ರೀರಾಮನಿಗೆ ದುಃಖ ಉಂಟೇ? ಹನುಮಂತನಿಗೆ ಅಜ್ಞಾನ ಉಂಟೇ? ಪುರಾಣಗಳಲ್ಲಿ ವರ್ಣಿತವಾಗಿರುವ ಶ್ರೀಹರಿ, ವಾಯುಗಳ ಲೀಲಾವತಾರಗಳು ಬಹುಮಟ್ಟಿಗೆ ದೇವತೆಗಳ ಸತ್ಸಾಧನಕ್ಕಿಂತ ದೈತ್ಯರ ದುಸ್ಸಾಧನೆಗೆ ಹೆಚ್ಚು ಒತ್ತು ಕೊಟ್ಟಂತೆ ಕಾಣುತ್ತವೆ. ಮೂಲ ರೂಪದಿಂದ ಮುಕ್ತಾಶ್ರಯನಾದಪರಮಾತ್ಮನೆಲ್ಲಿ? ಜನ್ಮ, ಮೃತಿ, ಯಾಚನೆ, ಯೋಚನೆ ಇತ್ಯಾದಿಗಳನ್ನು ವಿಡಂಬಿಸುವ ಅವನ ಅವತಾರ ರೂಪಗಳೆಲ್ಲಿ? ಅಖಂಡ ರೂಪವನ್ನು ಚಿಂತಿಸಲು ಯಾವ ದೇವತೆಗಳಿಗೂ ಸಾಧ್ಯವಿಲ್ಲ. ಸಮಸ್ತರೂ ಖಂಡ ರೂಪಗಳನ್ನೇ ಚಿಂತಿಸಿ ಉದ್ಧಾರವಾಗುತ್ತಾರೆ. ಹೀಗೆ ದೇವತೆಗಳ ಉದ್ಧಾರಾರ್ಥವಾಗಿ, ಅವರವರ ಸ್ವರೂಪೋಪಾಸನೆಗಳಿಗೆ ಅನುಕೂಲಕರನಾಗಿ ಶ್ರೀಹರಿಯು ನಾನಾಪರಿಚ್ಛಿನ್ನಾವತಾರಗಳನ್ನು ಮಾಡುತ್ತಾನೆಯೇ ಹೊರತಾಗಿ ಅವನಲ್ಲಿ ಅವನ ಅವತಾರಗಳಿಗೆ ಭೇದಗಳಿಲ್ಲ. "ಮಾಯ ಮಾತ್ರಮಿದಂ ದ್ವೈತಂ। ಅದ್ವೈತಂ ಪರಮಾರ್ಥತಃ ॥ ಮಾ. ಉ ॥" ಎಂದು ಶ್ರುತಿಗಳು ಹೇಳುತ್ತವೆ. ದೇವ ದಾನವರ ಉಪಾಸನಾರ್ಥವಾಗಿ ಭಗವದ್ರೂಪಗಳು ಭಿನ್ನ, ಸ್ವಯಂ ಅಭಿನ್ನವಾದುವುಗಳು. ಸೀತೆಯನ್ನು ಜ್ಞಾಪಿಸಿಕೊಂಡು ಅತ್ತಂತೆ ಶ್ರೀರಾಮನು ನಟಿಸಿದರೆ ಆತನಿಗೆ ಕಷ್ಟ ಪಟ್ಟು ಚೂಡಾಮಣಿಯನ್ನು ತಂದು ಕೊಟ್ಟು ತಾತ್ಕಾಲಿಕವಾಗಿ ಶ್ರೀರಾಮನನ್ನು ಸಮಾಧಾನಗೊಳಿಸಿದವನೆಂಬಂತೆ ಹನುಮಂತನು ಸಹ ನಟಿಸಿದನು.

**॥ ಪದ ॥ ಶರಧಿ ಎಂದರೆ ಏನೋ। ಗಿರಿ ಗುಂಡು ಎಂದರೇನೋ।**
**ಎರಡೇಳು ಲೋಕವ ಧರಿಸಿದ ಕೂರ್ಮಗೆ॥**
**ಧರೆಯೊಳೆಲ್ಲರ ನಿತ್ಯ । ಪೊರಯುತಲಿಹಾಽನಿಲ ।**
**ಧುರದೊಳು ಗಿರಿ ತಂದು । ಇರಿಸಿದನೇಕೋ ॥ ೧೬ ॥**

**ಶಬ್ದಾರ್ಥ:** ಶರಧಿ = ಸಮುದ್ರ; ಗಿರಿ = ಪರ್ವತಗಳು; ಎರಡೇಳು ಲೋಕವ = ಹದಿನಾಲ್ಕು ಲೋಕಗಳನ್ನು; ಧರಿಸಿದ = ಹೊತ್ತ; ಕೂರ್ಮಗೆ = ದ್ವಿತೀಯ ಕೂರ್ಮರೂಪಿಯಾದ ಹನುಮಂತನಿಗೆ; ಅನಿಲ = ದೋಷರಹಿತ; ಧುರದೊಳು = ಯುದ್ಧದಲ್ಲಿ;

**ಭಾವಾರ್ಥ:** ಶ್ರೀಹನುಮಂತನ ನೀತಿ ವಚನಗಳನ್ನು ಕೇಳದ ರಾವಣನ ಮೇಲೆ ಯುದ್ಧವನ್ನು ಸಾರುವುದು ಅನಿವಾರ್ಯವಾಯಿತು. ಆಗ ಶ್ರೀರಾಮನ ಆಜ್ಞೆಯಂತೆ ಕಪಿವೀರರೆಲ್ಲರೂ ಸಮುದ್ರ ತರಣ ಮಾಡಲು ಉಪಕ್ರಮಿಸಿದರು. ಅದಕ್ಕೆ ಸಮುದ್ರದ ಮೇಲೆ ಸೇತುವೆಯನ್ನು ಕಟ್ಟಬೇಕಾಗಿತ್ತು. ಅದಕ್ಕಾಗಿ ಎಲ್ಲಾ ಕಪಿವೀರರು ಬಂಡ ಕಲ್ಲುಗಳನ್ನು ತಂದು ಸಮುದ್ರಕ್ಕೆ ಒಟ್ಟಲಾರಂಭಿಸಿದರು. ಹನುಮಂತನು ಮಾತ್ರ ಭಾರೀ ಗಾತ್ರದ ಬೆಟ್ಟಗಳನ್ನೇ ತಂದು ಸಮುದ್ರಕ್ಕೆ ಎಸೆಯುತ್ತಿದ್ದನಂತೆ ಹನುಮಂತನ ಈ ಅಚಿಂತ್ಯಾದ್ಭುತವಾದ ಶಕ್ತಿಯನ್ನು ನೋಡಿ ಎಲ್ಲರೂ ಬೆರಗಾದರಂತೆ! ಯಾವ ಹನುಮಂತನು ಭಗವತ್ಪ್ರೀತ್ಯರ್ಥವಾಗಿ ತ್ರಿವಿಧ ಜೀವರ ಸ್ವರೂಪ ಸಾಧನ ಸಿದ್ಧ್ಯರ್ಥವಾಗಿ ಇಡೀ ಬ್ರಹ್ಮಾಂಡವನ್ನೇ ದ್ವಿತೀಯ ಕೂರ್ಮ ರೂಪದಿಂದ ಹೊತ್ತು ಮಹಾಜಲಧಿ ವ್ಯಾಪ್ತನಾಗಿ ನಿರಾಯಾಸವಾಗಿ ಭಗವಧ್ಯಾನ ಪರನಾಗಿರುವಾಗ ಈ ಗಿರಿ, ಗುಂಡುಗಳನ್ನು ತಂದೊಡ್ಡಿ ನೂರು ಯೋಜನ ಸೇತುವೆಯನ್ನು ನಿರ್ಮಾಣ ಮಾಡಿದ್ದು ದೊಡ್ಡದೇ? ಎಂದಿಗೂ ಇದು ಹನುಮಂತನಿಗೆ ಅತಿಶಯವಾದ ಕಾರ್ಯವೇನೂ ಅಲ್ಲ. ಹನುಮಂತನಿಗೆ ಈ ಪರ್ವತಗಳು ಪುಷ್ಪಗಳಂತಾಗಿದ್ದುವಂತೆ! ಆದರೆ ಶ್ರೀರಾಮನ ಪೂಜಾರ್ಥವಾಗಿ ತರುತ್ತಿದ್ದ ಹೂಗಳೇ ಆತನಿಗೆ ಪರ್ವತಗಳಂತೆ ಭಾರವಾಗಿದ್ದುವಂತೆ. ಯಾಕೆಂದರೆ ಎಲ್ಲಿ ಆ ಹೂಗಳ ಸುಗಂಧ ಪರಿಮಳವು ಮೂಗಿಗೆ ಸೋಂಕಿ, ಅಥವಾ ಪುಷ್ಪಗಳು ಮೈಗೆ ತಾಕಿ ನಿರ್ಮಾಲ್ಯಗಳಾಗಿ ಬಿಡುತ್ತವೋ ಎಂಬ ಭಕ್ತಿಭರದಲ್ಲಿ ಹೀಗಾಗಿತ್ತಂತೆ! ಅಂತು ಎಲ್ಲರೂ ಲಂಕಾಪಟ್ಟಣವನ್ನು ಸೇರಿ ಮುತ್ತಿಗೆಯನ್ನು ಹಾಕಿದರು. ಘೋರ ಸಂಗ್ರಾಮವು ನಡೆಯಿತು. ಅಸಂಖ್ಯಾತ ದೈತ್ಯರು ನಾಶವಾದರು. ಮಾಯಾವಿಯಾದ ಮೇಘನಾದ (ಇಂದ್ರ ಜಿತು) ನು ಬಿಟ್ಟ ಸರ್ಪಾಸ್ತ್ರಕ್ಕೆ ಎಲ್ಲಾ ಕಪಿವೀರರು ಹಾಗೂ ಲಕ್ಷ್ಮಣನು ಸಹ ಮೂರ್ಛೆಯನ್ನು ಹೊಂದಿದರು. ಆಗ ಶ್ರೀರಾಮನ ಪಾಳೆಯದಲ್ಲಿ ಹಾಹಾಕಾರವೆದ್ದಿತು. ಇಲ್ಲಿ ಶ್ರೀರಾಮನು ಲಕ್ಷ್ಮಣನನ್ನು ಅಪ್ಪಿಕೊಂಡು "ಹಾ ಲಕ್ಷ್ಮಣ ನನಗಿನ್ನಾರಪ್ಪಾ ಗತಿ" ಎಂದು ಅತ್ತು ಬಿಟ್ಟ (ನಂತೆ). ಮುಂದೆ ದಾರಿ ಕಾಣದಾಗಿ ಏನು ಮಾಡಬೇಕೆಂದು ಯೋಚಿಸುತ್ತಿರುವಾಗ ಸುಷೇಣ (ವರುಣನ ಅಂಶ)ನು ಒಂದು ಸಾವಿರದ ಐವತ್ತು ಗಾವುದಲ್ಲಿ ಇರುವ ಸಂಜೀವನ ಪರ್ವತದಲ್ಲಿ ಕೆಲವು ಮೂಲಿಕೆಗಳಿವೆ; ಆ ಮೂಲಿಕೆಗಳನ್ನು ತಕ್ಷಣವೇ ತರಬೇಕು. ಸೂರ್ಯೋದಯದೊಳಗಾಗಿ ತಂದರೆ ಸರಿ. ಇಲ್ಲವಾದರೆ ಯಾರೂ ಉಳಿಯುವುದಿಲ್ಲವೆಂದು ಸಲಹೆ ನೀಡಿದನು. ಆದರೆ ಆ ವೇಳೆಯಲ್ಲಿ ಈ ಅದ್ಭುತವಾದ ಕಾರ್ಯವನ್ನು ಮಾಡುವ ಸಮರ್ಥರು ಯಾರು? ಎಂಬ ಜಿಜ್ಞಾಸವು ತಲೆದೋರಿತು. ಈ ವಿಷಯದಲ್ಲಿ ಕಾಲವ್ಯವಧಾನ ಮಾತ್ರವಲ್ಲದೆ ಮೂಲಿಕಾ ನಿಶ್ಚಯ, ಪ್ರತಿಬಂಧಕ ನಿವಾರಣೆ ಮೊದಲಾದ ಸಮಸ್ಯೆಗಳು ತಲೆದೋರಿ ಎಲ್ಲರೂ ಅಸಹಾಯಕರಾಗಿ ಹನುಮಂತನ ಕಡೆಗೇ ನೋಡುತ್ತಿದ್ದರು. ಆಗ ಶ್ರೀರಾಮನ ಮನೋಗತಾಜ್ಞೆಯನ್ನು ಶಿರಸಾವಹಿಸಿ ಹನುಮಂತನು ಕ್ಷಣಾರ್ಧದಲ್ಲಿ ಸಂಜೀವನ ಪರ್ವತವು ಇರುವ

ಕಡೆಗೆ ವಾಯು ಮಾರ್ಗ ಗಾಮಿನಿಯಾದನು. ಇತ್ತ ಈ ಸುಳುವನ್ನರಿತ ಕಾಲನೇಮಿ ದೈತ್ಯನು ರಾವಣನಿಂದ ಬಲಾತ್ಕಾರವಾಗಿ ಬೋಧಿತನಾಗಿ ಈ ಕಾರ್ಯಕ್ಕೆ ವಿಘ್ನವನ್ನುಂಟು ಮಾಡಲು ಹವಣಿಸಿದನು. ಲಂಕಾದಹನ ಕಾಲದಲ್ಲಿ ಹನುಮಂತನ ಪರಾಕ್ರಮವನ್ನು ಅರಿತಿದ್ದ ಕಾಲನೇಮಿಯು ಈಗ ಈ ಹನುಮಂತನೊಡನೆ ಬಲದಿಂದ ಎದುರಿಸಿದರೆ ತನಗೆ ಮೃತ್ಯುವು ಸಿದ್ಧವೆಂದು ಬಗೆದು ಬೇರೇ ಉಪಾಯವನ್ನು ಕಲ್ಪಿಸಿದನು. ಶ್ರೀ ಹನುಮಂತನಂತೂ ರಾಮ ಭಕ್ತನು. ಎಲ್ಲೆಲ್ಲಿ ಶ್ರೀರಾಮ ಭಜನೆಯು ನಡೆಯುತ್ತಿರುತ್ತದೋ ಅಲ್ಲಿ ಆತನು ಭಜನೆಯು ಮುಗಿಯುವವರೆಗೆ ಕುಳಿತು ತಾನೂ ಭಜನೆಯನ್ನು ಮಾಡುವನು. ಆದುದರಿಂದ ಈಗ ನಾನು ಈ ಸನ್ಯಾಸಿ ವೇಷವನ್ನು ಧರಿಸಿಕೊಂಡು ನನ್ನ ಪರಿವಾರದವರಿಗೂ ಸನ್ಯಾಸಿ ವೇಷಗಳನ್ನು ತೊಡಿಸಿ, ಹನುಮಂತನು ಬರುವ ಮಾರ್ಗದಲ್ಲಿ ಒಂದು ಮಾಯಾ ಪರ್ಣಕುಟೀರವನ್ನು ನಿರ್ಮಿಸಿ ಭಜನೆಯನ್ನು ಮಾಡುತ್ತ ಕುಳಿತು ಬಿಟ್ಟರೆ ಇದನ್ನು ಕಂಡು ಹನುಮಂತನೂ ಇಲ್ಲಿಗೆ ಬಂದು ಭಜನೆಯಲ್ಲಿ ಭಾಗವಹಿಸುತ್ತಾನೆ. ಆಗ ನಾವು ಇಲ್ಲ ಸಲ್ಲದ ನೇಮಗಳನ್ನು ಹಾಕಿ ಹನುಮಂತನನ್ನು ಬೆಳಗಿನ ಜಾವ ಪರಿಯಂತವಾಗಿ ಇಲ್ಲೇ ಉಳಿಯುವಂತೆ ಮಾಡಿಬಿಟ್ಟರೆ ಆ ಲಕ್ಷ್ಮಣನ ಕಥೆ ಮುಗಿಯುತ್ತದೆ. ಲಕ್ಷ್ಮಣನ ಕಥೆಯು ಮುಗಿದರೆ ರಾಮನ ಕಥೆಯೂ ಮುಗಿದಂತೆಯೇ ಸರಿ ಎಂದು ತಕ್ಷಣವೇ ಮಾಯಾ ವನವನ್ನು ನಿರ್ಮಿಸಿ ಅಗ್ನಿ ಕುಂಡವನ್ನು ಸ್ಥಾಪಿಸಿ ಎಲ್ಲರೂ ಚಪ್ಪಾಳೆ ತಟ್ಟುತ್ತ ಪಾನಮತ್ತರಾಗಿ "ರಘುಪತಿ ರಾಘವ ರಾಜಾರಾಂ । ಈಶ್ವರ ಅಲ್ಲಾ ತೇರೇನಾಂ॥" ಎನ್ನುತ್ತ ಭಜನೆಯಲ್ಲಿ ತಲ್ಲೀನರಾದರು. ತರುವಾಯ ಯಥಾಪ್ರಕಾರವಾಗಿ ನಿರೀಕ್ಷಣೆಯಂತೆ ಹನುಮಂತನು ಅದೇ ಮಾರ್ಗವಾಗಿ ಬಂದನು. ಹನುಮಂತನು ಅದೇ ಮಾರ್ಗವಾಗಿ ಬಂದ ಉದ್ದೇಶವೇನೆಂದರೆ ಆ ಕಾಲನೇಮಿಯನ್ನು ಸಂಹಾರ ಮಾಡಲಿಕ್ಕಾಗಿಯೇ ಆತನು ಆ ಮಾರ್ಗವನ್ನು ಹಿಡಿದುದು.

ಕಾಲನೇಮಿಯ ಭಜನೆಯು ಭರದಿಂದ ಸಾಗಿತ್ತು. ಹನುಮಂತನಾದರೂ ಈ ರಾಮ ಭಜನೆಯನ್ನು ಬಿಡುತ್ತಾನೆಯೇ? ತಕ್ಷಣವೇ ಆಶ್ರಮವನ್ನು ಸೇರಿ ತಾನೂ ಭಜನೆ ಮಾಡುವೆನು. "ನಾನೂ ರಾಮ ಭಜನೆಯನ್ನು ಮಾಡಬೇಕಾಗಿದೆ. ಅವಕಾಶವನ್ನು ನೀಡಿರೆಂದು ಬೇಡಿದನು. ತಕ್ಷಣವೇ ಕಾಲನೇಮಿಯು "ಅಹೋ ಆಗಲಿ. ಆದರೆ ಇಲ್ಲಿಗೆ ಬರುವವರು ಮಡಿಯಲ್ಲಿ ಬರಬೇಕು. ಅಕೋ ಅಲ್ಲಿ ಕೊಳವು ಯಿದೆಯಲ್ಲವೇ? ಅಲ್ಲಿಯೇ ಸ್ನಾನ ಮಾಡಿಕೊಂಡು ಇಲ್ಲಿಗೆ ಬರಬೇಕು" ಎಂದನು. ಇಲ್ಲಿ ಸ್ನಾನ ಮಾಡು ಎಂದು ಹೇಳಿದ ಉದ್ದೇಶವೇನೆಂದರೆ ಆ ಕೊಳದಲ್ಲಿ ಭಯಂಕರವಾದ ಒಂದು ಮೊಸುಳೆಯು ಇತ್ತು. ಅಲ್ಲಿ ಕಾಲಿಟ್ಟವರು ಮರಳಿ ಮೇಲೆ ಬಂದಿರಲಿಲ್ಲ. ಅಲ್ಲಿಗೆ ಹನುಮಂತನನ್ನು ದೂಡಿದರೆ ಹನುಮಂತನ ಕಥೆಯು ಮುಗಿಯಿತು ಎಂಬುದು ಆ ಕಾಲನೇಮಿಯ ತರ್ಕ. ಆದರೆ ಇವನನ್ನು ನಿಗ್ರಹಿಸಲಿಕ್ಕೆಂದೇ ಬಂದ ಹನುಮಂತನು ಕೊಳದೊಳಗೆ ಇಳಿದನು. ತಕ್ಷಣವೇ ಅಲ್ಲಿದ್ದ ಮೊಸುಳೆಯು ಹನುಮಂತನ ಕಾಲನ್ನು ಹಿಡಿದೆಳೆಯಲಾರಂಭಿಸಿತು. ಆಗ ಹನುಮಂತನು ಆ ಮೊಸಳೆಯನ್ನು ಹಿಡಿದೆಳೆದು ಅದರ ಬಾಯನ್ನು ಸೀಳಿ ಎಸೆದುಬಿಟ್ಟನು. ಕೂಡಲೆ ಶಾಪಗ್ರಸ್ಥನಾಗಿ ಇಲ್ಲಿ ಮೊಸಳೆಯಾಗಿ ಬಿದ್ದಿದ್ದ ಗಂಧರ್ವನಿಗೆ ಹನುಮಂತನಿಂದ ವಿಮೋಚನೆ ಎಂದು ಇದ್ದುದರಿಂದ ಹನುಮಂತನು ಅವನನ್ನು ಶಾಪದಿಂದ ಮುಕ್ತನನ್ನಾಗಿ ಮಾಡಿದನು. ಆಗ ಆ ಗಂಧರ್ವನು "ಸ್ವಾಮಿ, ಹನುಮಂತ ಪ್ರಭೋ, ನಿನಗೆ ತಿಳಿಯದ ಮರ್ಮಗಳು ಯಾವುವು ಇವೆ? ಆದರೂ ಸೇವಾರೂಪವಾಗಿ ನಿನಗೆ ಬಿನ್ನೈಸುತ್ತಿದ್ದೇನೆ. ಇಲ್ಲಿ ಈಗ ಭಜನೆ ಮಾಡುತ್ತಿರುವವರಲ್ಲಾ ಸಾಧುಗಳಲ್ಲ ದೈತ್ಯರು. ಕಾಲನೇಮಿಯ ಮುಖಂಡತ್ವದಲ್ಲಿ ನಿನ್ನ ವಂಚನಾರ್ಥವಾಗಿ ಈ ಕುಟಿಲ ಕಲಾಪಗಳನ್ನು ಹೊಂಚಿಕೊಂಡಿರುತ್ತಾರೆ. ಆದ್ದರಿಂದ ಸಮರ್ಥನಾದ ನೀನು ಇವರನ್ನು ಬೇಗನೇ ಸಂಹರಿಸಿ ಸುಜನರ ರಕ್ಷಕನಾಗು" ಎಂದು ನಮಸ್ಕರಿಸಿ ಮೂಲವನ್ನು ಸೇರಿದನು.

॥ ಪದ ॥ ಸುರರೆಲ್ಲರು ಸೇರಿ। ಶಿರಬಾಗಿದಲ್ಲದೆ ।
ವರವನಿತ್ತರೆ ಇಲ್ಲ । ಪೊರೆ ಎಂದುಲಿದರು॥
ಕುರುಡನು ಇವನೆಂದು। ಸುರವೈರಿಗಳು ತಿಳಿಯೆ ।
ತರುಚರವರನಾದ। ಧರೆಯೊಳು ಮೆರೆಯುತ ॥ ೭ ॥

**ಶಬ್ದಾರ್ಥ:** ಸುರರು = ದೇವತೆಗಳು (ತತ್ತ್ವೇಶ್ವರರು); ಉಲಿದರು = ಬೇಡಿದರು; ಸುರವೈರಿಗಳು = ದೈತ್ಯರು; ತಮೋಯೋಗ್ಯರು; ತರುಚರವರ = ಕಪಿರೂಪ.

ಮುಖ್ಯ ಪ್ರಾಣ ದೇವರ ಬಗ್ಗೆ ಕೆಲವರ ಅಭಿಪ್ರಾಯವು ಹೀಗಿದೆ. ಯಾವಾಗ ಆತನು ಸೂರ್ಯಮಂಡಲವನ್ನು ಕುರಿತು ಹಾರಿದನೋ ಆತ ಕ್ಷಣವೇ ಸೂರ್ಯನನ್ನೂ ಹಾಗೂ ಜಗತ್ತನ್ನೂ ರಕ್ಷಿಸಲು ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದಾಗ ಈತನ ಒಂದು ಕಣ್ಣು ಕಿತ್ತುದಾಗಿ ಕುರುಡನಾದನು ಮತ್ತು ವಜ್ರಾಯುಧದ ಹೊಡೆತಕ್ಕೆ ಈತನ ಮುಖವು ಸೊಟ್ಟದಾಗಿಯೂ ಉದ್ದವಾಗಿಯೂ ಊದಿಕೊಂಡಿತು. ಆಗ ಈತನ ತಂದೆಯಾದ ವಾಯು ಗುಹೆಯಲ್ಲಿ ಅಡಗಿ ಕುಳಿತುಬಿಟ್ಟನು. ಆಗ ಬ್ರಹ್ಮದೇವರ ಆಜ್ಞೆಯಮೇರೆಗೆ ಪುನಃ ಹೊರಬಂದನು. ಆಗ ವಾಯುವು ಬ್ರಹ್ಮನಿಗೂ ಮತ್ತು ಇತರ ದೇವತೆಗಳಿಗೂ ಹೀಗೆ ಹೇಳಿದನು. 'ಎಲೈ ದೇವತೆಗಳಿರಾ, ನೀವೆಲ್ಲರೂ ನಿಮ್ಮಲ್ಲಿ ಇರುವ ಸ್ವಲ್ಪ, ಸ್ವಲ್ಪ ಶಕ್ತಿಯನ್ನೂ ನಿಮ್ಮ ಆಯುಧಗಳನ್ನೂ ನನ್ನ ಮಗನಿಗೆ ಕೊಟ್ಟು ವರವನ್ನು ನೀಡಿರಿ' ಎಂದು ಕೇಳಿದರು. ಅದಕ್ಕೆ ಎಲ್ಲಾ ದೇವತೆಗಳು ಒಪ್ಪಿ ತಮ್ಮ ಶಕ್ತಿಯನ್ನು ಇತ್ತರು ಮತ್ತು ಹೇಳಿದರು, ಈ ವಾಯುವಿಗೆ ನಾವು ಇತ್ತ ಶಕ್ತಿಯು ಸ್ವತಃ ಈತನಿಗೆ ತಿಳಿಯದಂತಿರಲಿ. ಬೇರೆಯವರು ಬಂದು ನಿನ್ನಲ್ಲಿ ಇಷ್ಟು ಬಲವಿದೆ ಅದನ್ನು ಉಪಯೋಗಿಸು ಎಂದಾಗ ಮಾತ್ರ ಈತನಿಗೆ ಜ್ಞಾನ ಉಂಟಾಗಿ ಸ್ಫೂರ್ತಿಯಿಂದ ಬಲಯುತನಾಗಿ ಕೆಲಸಗಳನ್ನು ಮಾಡುತ್ತಾ ಕೀರ್ತಿವಂತನಾಗಲಿ: ಎಂದು ಆಶೀರ್ವದಿಸಿದರಂತೆ. ಮತ್ತು ವಜ್ರಾಯುಧಾಘಾತಕ್ಕೆ ಮುಖವು ಸೊಟ್ಟದಾದುದಕ್ಕಾಗಿ ಆತನಿಗೆ ಕೋತಿ, ಕಪಿ 'ಹನುಮಾ' ಎಂದು ಹೆಸರು ಬಂದಿತೆಂದು ಹೇಳುತ್ತಾರೆ. ಹನುಮಾ ಎಂದರೆ ಮುಖ ಊದಿಸಿದ್ದವನು ಎಂದು ಅರ್ಥವನ್ನು ಹೇಳುತ್ತಾರೆ.

ಇಂಥ ಅಸದುಪಾಸಕರೆಲ್ಲರೂ ಹೀಗೆಯೇ ತಿಳಿಯಲೆಂದು ವಾಯುದೇವರೂ ಅವರಭಿಪ್ರಾಯಕ್ಕೆ ತಕ್ಕಂತೆ ನಟಿಸಿಯೂ ಇದ್ದಾರೆ. "ದ್ವಾತ್ರಿಂಶೈರ್ಲಕ್ಷಣ್ಯೆಯುತಃ" ಎಂದಂತೆ ಮೂವತ್ತೆರಡು ಲಕ್ಷಣಗಳಿಂದ ಯುಕ್ತರಾಗಿ ಭಾರತೀ ದೇವಿಯ ಕರ ಕಮಲ ಪೂಜಿತರಾದ, ಸ್ಫುರದ್ರೂಪಿಗಳಾದ ವಾಯು ದೇವರು ಕುರೂಪಿಗಳೇ "ಅನಂತ ರೂಪಾಯ । ವಿಶೇಷತ್ರಿಕೋಟಿ ರೂಪಾಯ" ಎಂದು ಶ್ರೀ ವ್ಯಾಸರಾಯರು ಹೇಳಿದ್ದರೆ "ಖೇಟ ಕುಕ್ಕಟ ಜಲಟರೆಂಬ ತ್ರಿ। ಕೋಟಿ ರೂಪವ ಧರಿಸಿ।ಸತತನಿ। ಶಾಟರನು ಸಂಹರಿಸಿ ಸಲಹುವ ಸರ್ವ ಸಜ್ಜನರಾ ॥ ಹ.ಕ.ಸಾ.ಕ.ಸಾ.ಸಂ. ೨೧ ॥ ಎಂದು ಶ್ರೀಜಗನ್ನಾಥದಾಸರು ಹೇಳಿರುವಲ್ಲಿ ಬ್ರಹ್ಮಾಂಡಕ್ಕೆ ಬಿಂಬರಾದ ವಾಯುದೇವರಲ್ಲಿ ಸಮಸ್ತ ಜಲಚರ, ಭೂಚರ, ಗಗನಚರ, ಜಂಗಮ, ಸ್ಥಾವರ, ದಿವಾಚರ, ರಾತ್ರಿಚರ ಪ್ರಾಣಿಗಳ ರೂಪಗಳು ವಾಯುವಿನಲ್ಲಿ ಇವೆ. ಅವನ್ನೆಲ್ಲಾ ಮರೆಮಾಚಿ ಕೇವಲ ಒಂದು ಕಪಿರೂಪವನ್ನು ಮಾತ್ರ ಅಭಿವ್ಯಕ್ತಗೊಳಿಸಿರುವಲ್ಲಿ ಅಸುರ ಮೋಹಕವು ಅಡಗಿದೆಯೇ ವಿನಃ ಅವರದದು ಕೇವಲ ಇದೊಂದೇ ಕುರೂಪವಲ್ಲ. 'ಹನುಮಾ' ಎಂದರೆ ಜ್ಞಾನಿ–ಜ್ಞಾನಿ ಎಂದರ್ಥ. ಕಪಿ ಎಂದರೆ ಪರಬ್ರಹ್ಮಚಿಂತಕರು ಎಂದು ಅರ್ಥ.

ಅಸುರಾವೇಶನಿಮಿತ್ತ ಅಜ್ಞಾನ ಕುಂಡದಲ್ಲಿ, ತತ್ವಾಭಿಮಾನಿ ಸುರರು ತಾನೇ ಶ್ರೇಷ್ಠ, ತಾನೇ ಶ್ರೇಷ್ಠನೆಂದು ಪರಸ್ಪರ ವಾಗ್ವಾದಕ್ಕಿಳಿದಾಗ ಒಬ್ಬರನ್ನು ಮತ್ತೊಬ್ಬರು ಜರಿದರು. ಇದರಿಂದ ಯಾರೂ ಸರ್ವನಿಯಾಮಕರಲ್ಲವೆಂದು ಇವರ ವಾದವೇ ಸಾರುತ್ತಿದೆ.

ಈ ಸಂದರ್ಭದಲ್ಲಿ ವಾಯುವು ಬಂದು ಯಾವ ಒಂದು ಸ್ಪರ್ಧಾಕ್ಷೇತ್ರವೆಂದು ನಿರ್ಮಿತವಾದ ದೇಹದಲ್ಲಿ ಇವರು ವಾದಗ್ರಸ್ಥರಾಗಿದ್ದರೋ ಆ ದೇಹದಿಂದ ಒಬ್ಬೊಬ್ಬರಾಗಿ ನಿರ್ಗಮಿಸಿರೆಂದು ವಾಯು ದೇವರು ಹೇಳಿದರು. ಆಗ ಒಬ್ಬೊಬ್ಬರಾಗಿ ಚಕ್ಷುರಭಿಮಾನಿ, ಸೂರ್ಯ, ಕರ್ಣಕ್ಕೆ ಚಂದ್ರ, ಹಸ್ತಕ್ಕೆ ದಕ್ಷಬ್ರಹ್ಮ, ಪಾದಕ್ಕೆ ಜಯಂತ ಹೀಗೆ ಎಲ್ಲರೂ ದೇಹವನ್ನು ತ್ಯಜಿಸಿದರು. ಆಗ ದೇಹವನ್ನು ಕುರುಡ, ಕುಂಟ, ಕಿವುಡ, ಚೊಂಚ ಎಂದು ಬಗೆದರೇ ಹೊರತಾಗಿ ಪೆಣವೆಂದು ಯಾರೂ ಅದನ್ನು ಹೊರಹಾಕಲಿಲ್ಲ. ಆದರೆ ಪ್ರಾಣ ದೇವರು ದೇಹದಿಂದ ನಿರ್ಗಮಿಸಿದ ಕ್ಷಣವೇ ಅದು ಬಿದ್ದು ಪೆಣವೆನಿಸಿತು. ಆಗ ಅದು ತ್ಯಾಜ್ಯ ವಸ್ತುವಾಗಿ ಬಿಟ್ಟಿತು. ಪುನಃ ಒಬ್ಬೊಬ್ಬರಾಗಿ ಆ ದೇಹವನ್ನು ಪ್ರವೇಶಿಸಿದರು. ಆದರೆ ಆ ದೇಹವು ಮೇಲೇಳಲಿಲ್ಲ. ಮಾತ್ರವಲ್ಲ, ವಾಯುವು ಇಲ್ಲದ ಆ ದೇಹವನ್ನು ಪ್ರವೇಶಿಸಿದ ದೇವತೆಗಳು ಆ ದೇಹದಲ್ಲಿ ನಿಲ್ಲಲು ಸಾಧ್ಯವಾಗದೆ ಸಂಕಟವನ್ನು ಸಹಿಸಲಾಗದೆ ಪುನಃ ಹೊರಗೋಡಲು ಆತುರರಾದರು, ತಕ್ಷಣವೇ ವಾಯುವು ಆ ದೇಹವನ್ನು ಪ್ರವೇಶಿಸಿದನು. ಅಗ ದೇವತೆಗಳು ಸಮಾಧಾನದಿಂದ ಅಲ್ಲೇ ಇರಲು ಶಕ್ತರಾದರು. ಈಗ ಕೊನೆಯ ಪರೀಕ್ಷೆಯಲ್ಲಿ ವಾಯುದೇವರು ತಾವೇ ಮೊದಲು ಆ ದೇಹವನ್ನು ತೊರೆದರು. ಆ ತಕ್ಷಣ ದೇವತೆಗಳೆಲ್ಲಾ ಆ ದೇಹದಿಂದ ವಾಯುವನ್ನು ಕಬ್ಬಿಣದ ತುಣುಕುಗಳು ಅಯಸ್ಕಾಂತವನ್ನು ಅನುಸರಿಸಿ ಹೋಗುವಂತೆ ಅನುಸರಿಸಿದರು. ಈ ಮಹಿಮೆಯನ್ನು ತಿಳಿದ ತರುವಾಯ ದೇವತೆಗಳು ಗರ್ವ (ಮೋಹ) ಮುಕ್ತರಾಗಿ

"ವಾಯುರ್ಭೀಮೋ ಭೀಮನಾದೋ। ಮಹೌಜಾಃ ಸರ್ವೇಷಾಂಚ।
ಪ್ರಾಣಿನಾಂ ಪ್ರಾಣ ಭೂತಃ ॥
ಅನಾವೃತ್ತಿರ್ದೇಹಿನಾಂ ದೇಹ ಪಾತೇ।
ತಸ್ಮಾದ್ವಾಯುರ್ದೇವ ದೇವೋ ವಿಶಿಷ್ಟಃ॥"

ಎಂದು ವಾಯುದೇವರ ಜೀವೋತ್ತುಮತ್ವವನ್ನು ಅಂಗೀಕರಿಸಿದರು. ರಾಣಿನೊಣ ರಹಿತವಾದ ಜೇನುಗೂಡನ್ನು ಸಮಸ್ತ ನೊಣಗಳು ತ್ಯಜಿಸುವಂತೆ ವಾಯು ರಹಿತವಾದ ದೇಹದಲ್ಲಿ ತತ್ವಾಭಿಮಾನಿಯಾದಿಯಾಗಿ ಯಾವ ಜೀವನೂ ಅಲ್ಲಿ ಇರಲಾರನು.

"ತದನ್ಯಥಾ ಮಧುಮಕ್ಷಿಕಾ। ಮಧುಕರಾಜಾನಮುತ್ಕ್ರಾಮಂತಂ॥
ಸರ್ವಾವಿವೋತ್ಕ್ರವಂತೇ ॥ ತಸ್ಮಿನ್‌ಶ್ಚ ಪ್ರತಿಷ್ಠಮಾನೇ ಸರ್ವಾಏವ ಪ್ರತಿಷ್ಠಂತೇ॥

ಹೀಗೆ ಷಟ್ಪ್ರಶ್ನೋಪನಿಷತ್ತು ಹೇಳುತ್ತದೆ.

ಇಂಥಾ ವಾಯುದೇವಾಂಶನಾದ (ಮೂಲಾಂಶಭೇದವಿವರ್ಜಿತ) ಹನುಮಂತನಿಗೆ ಇತರ ದೇವತೆಗಳು

ವರವನ್ನಿತ್ತರು ಎಂಬುದು ಎಷ್ಟು ಹಾಸ್ಯಾಸ್ಪದವಾದುದು? ಬದಲಿಗೆ ಆ `ದೇವತೆಗಳು" ಸ್ವಾಮಿ ಹನುಮಾ, ನಮ್ಮಲ್ಲಿರುವ ವಿಶಿಷ್ಟವಾದ ಶಕ್ತಿ ಜ್ಞಾನ, ಐಶ್ವರ್ಯಾದಿಗಳೆಲ್ಲವೂ ನಿನ್ನವೇ ಅದೂ ನಿನ್ನ ಶಕ್ತಿ ಸಂಪನ್ನತೆಯ ಲವಲೇಶಾಂಶ ಮಾತ್ರವನ್ನು ನೀನು ನಮಗೆ ಅನುಗ್ರಹಿಸಿರುವೆಯೇ ಹೊರತಾಗಿ ಮತ್ತೇನೂ ಇಲ್ಲ. ನಿನ್ನ ಸಮ್ಮುಖದಲ್ಲಿ ನಾವು ತೃಣ ಸಮಾನರು ಎಂದು ಸ್ತೋತ್ರ ಮಾಡಿದರು.

॥ ಪದ ॥ ನರನವನಾಗೆ ವಾ। ನರ ನಿವನಾಗುತ।
ಉರದೊಳಿಟ್ಟೂಕೊಂಡು । ಅರಸುತ ಬಂದು॥
ಚರಣಕೆರಗಿ ಹರಿಯ। ಹರಿಜಗೆ ತೋರಿಸಿ।
ಹರಿಜನ ಭಂಗಿಸಿ। ಶಿರಿವಂತನನು ಮಾಡಿ ॥ ೮ ॥

**ಶಬ್ದಾರ್ಥ:** ನರ = ಮನುಷ್ಯಾವತಾರ (ಶ್ರೀಹರಿಯು ರಾಮಾವತಾರ ಮಾಡಿದನು) ವಾನರ = ವಾಯುವು ಕಪಿಯಾದನು: ಉರದೊಳಟ್ಟುಕೊಂಡು = ಸದಾ ಹೃದಯದಲ್ಲಿ ಕಾಣುವಂಥವನಾಗಿ: ಅರಸುತ = ಹುಡುಕುತ್ತ; ಹರಿಯ = ಶ್ರೀರಾಮನನ್ನು; ಹರಿಜಗೆ = ಸೂರ್ಯ ಪುತ್ರನಾದ ಸುಗ್ರೀವನಿಗೆ; ತೋರಿಸಿ: ಹರಿಜನ ಭಂಗಿಸಿ = ಇಂದ್ರನ ಪುತ್ರನಾದ ವಾಲಿಯನ್ನು ಶ್ರೀರಾಮನಿಂದ ನಿಗ್ರಹಿಸಿ: ಶಿರಿವಂತನನು ಮಾಡಿ = ಕಿಷ್ಕಿಂಧ ರಾಜ್ಯಕ್ಕೆ ಒಡೆಯನನ್ನಾಗಿ ಮಾಡಿಸಿದನು.

**ಭಾವಾರ್ಥ:** ಆದಿ ದೈತ್ಯರಾಗಿದ್ದ ಹಿರಣ್ಯಕಶ್ಯಪ, ಹಿರಣ್ಯಾಕ್ಷರು ತಾವು ಪುಣ್ಯ ಸಂಪಾದನೆಯನ್ನು ಮಾಡಿ ದೇವತೆಗಳನ್ನು ಜೈಸಬೇಂದು – ಇದು ದೇವತೆಗಳ ಸಹವಾಸದಿಂದ ಸಾಧ್ಯವೆಂದು ಬಗೆದು ವೈಕುಂಠ ಪತಿ ಶ್ರೀಮನ್ನಾರಾಯಣನ ದ್ವಾರಪಾಲಕರಾಗಿದ್ದ ಜಯ, ವಿಜಯರಲ್ಲಿ ಆವಿಷ್ಕರಾದರು. ಎಲ್ಲಿದ್ದರೇನು ಹರಿಗಲ್ಲದವರು. ಎಲ್ಲಿದ್ದರೇನು ಹರಿಗಾಗುವರು! ವೈಕುಂಠದಲ್ಲಿದ್ದರೂ ಅಲ್ಲಿಗೆ ದರ್ಶನಾಂಕ್ಷಿಗಳಾಗಿ ಬರುತ್ತಿದ್ದ ಭಕ್ತರನ್ನು ಹೀಯಾಳಿಸುವುದೇ ಇವರ ಧರ್ಮ, ಕರ್ಮವಾಗಿತ್ತು. ಇದರಿಂದ ಜಯ, ವಿಜಯರಿಗೆ ಸಾಧನಕ್ಕೆ ತೊಡಕಾಗಿತ್ತು. ಪಕ್ವ ಕಾಲವನ್ನರಿತು ಶ್ರೀಹರಿಯು ಸನಕ, ಸನಂದಾದಿ ಮುನಿಗಳ ದೆಸೆಯಿಂದ ಆ ದೈತ್ಯರಿಗೆ ಹೊರ ಬೀಳಲು ಶಾಪವನ್ನೂ, ಅಂತರಂಗದಲ್ಲಿ ಜಯ, ವಿಜಯರಿಗೆ ಈ ದೈತ್ಯರಿಂದ ಮುಕ್ತಿ (ಬಿಡುಗಡೆ) ಯನ್ನೂ ವರರೂಪವಾಗಿ ದಯಪಾಲಿಸಿದನು. ಸಂಕಲ್ಪದಂತೆ ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಮೂರು ಬಾರಿ ಜೀವದ್ವಯಾವೇಶದಿಂದ ಭೂಲೋಕದಲ್ಲಿ ಹುಟ್ಟಿದರು. ಕೃತಯುಗದಲ್ಲಿ ಶ್ರೀಹರಿಯು ವರಾಹ ಮತ್ತು ನರಸಿಂಹಾವತಾರಗಳಿಂದ ಪ್ರಥಮ ಬಾರಿಗೆ ಹಿರಣ್ಯಾಕ್ಷ, ಹಿರಣ್ಯ ಕಶಪರನ್ನು ಸಂಹರಿಸಿದನು.

ದ್ವಿತೀಯ ಬಾರಿಗೆ ಈ ದೈತ್ಯರೀರ್ವರು ತ್ರೇತಾಯುಗದಲ್ಲಿ ರಾವಣ, ಕುಂಭಕರ್ಣರೆಂಬುದಾಗಿ ಹುಟ್ಟಿ ಬ್ರಹ್ಮರ ಬಲದಿಂದ ಅಜೇಯರಾದರು. ದೇವ ದಾನವರಿಂದ ತಮಗೆ ಸಾವಿಲ್ಲವೆಂದು ವರ ಬೇಡಿದರು. ಮನುಷ್ಯರೂ ಪ್ರಾಣಿಗಳೂ ತಮಗೆ ಆಹಾರವೆಂದು ತಿಳಿದು ಉಪೇಕ್ಷಿಸಿದರು. ತರುವಾಯ ಪ್ರಾರಂಭವಾಯಿತು ಇವರ ಹಾವಳಿಯು. ಆಗ ಖಿನ್ನರಾದ ದೇವತೆಗಳು ಬ್ರಹ್ಮನಿಂದೊಡಗೂಡಿ ಶ್ರೀಮನ್ನಾರಾಯಣನ್ನು ಕಂಡು ವಂದಿಸಿ ತಮ್ಮ ಕಷ್ಟವನ್ನು ಬಿಡಿಸಬೇಕೆಂದು ಪ್ರಾರ್ಥಿಸಿದರು. ಆಗ ಶ್ರೀಹರಿಯು ದೇವತೆಗಳನ್ನು ಸಂತೈಸಿ ದಶರಥ ಮಹಾರಾಜನಲ್ಲಿ ರಾಮನೆಂಬ ಹೆಸರಿನಿಂದ ಪ್ರಾದುರ್ಭವಿಸಿದನು. ಶ್ರೀರಾಮನು ಅಪ್ರಾಕೃತ-ಜನನ ರಹಿತನಾಗಿದ್ದಾಗ್ಯೂ ಮನುಷ್ಯನಾಗಿ ಅವತರಿಸಿದುದು ವಿಡಂಬನೆಯು. ಸ್ವಯಂಭೂಮನುವಾದ ದಶರಥನಿಗೆ ಅನುಗ್ರಹಿಸಲು ಮತ್ತು ದೈತ್ಯರಿಗೆ ತಾನೊಬ್ಬಯ ಕಲ್ಪಿತ್ ಕ್ಷತ್ರಿಯನೆಂಬ ಅಯಥಾರ್ಥವಾದ ಜ್ಞಾನವನ್ನು ಹುಟ್ಟಿಸಲು ಶ್ರೀಹರಿಯು ಹಾಗೆ ಮಾಡಿದನು.

ಶ್ರೀರಾಮನೆಲ್ಲಿ? ವಿಶ್ವಾಮಿತ್ರರೆಲ್ಲಿ? ಇವರಲ್ಲಿ ಧನುರ್ವೇದದ ಅಭ್ಯಾಸವೆಲ್ಲಿ? ತಾಟಕ ಸುಬಾಹುಗಳನ್ನು ಧ್ವಂಸ ಮಾಡಿ, ಹರ ಧನುವ ಮುರಿದು ಸೀತಾ ಕರವ ಪರಿಗ್ರಹಿ ಅಯೋಧ್ಯೆಗೆ, ಬರುವಾಗ ದಾರಿಯಲ್ಲಿ ಪರಶುರಾಮನೊಡನೆ

ಸಂವಾದಕ್ಕೆ ಇಳಿದು ಪರಶುರಾಮನನ್ನು ಸೋಲಿಸಿ ವಿಷ್ಣು ಧನಸ್ಸನ್ನು ಮುರಿದುದು ಮಾತ್ರವಲ್ಲದೆ ಪರಶುರಾಮನ ಗರ್ವವನ್ನೂ ಮುರಿದನೆಂತೆ (ಎಲ್ಲಾ ಅಂತೆಗಳೇ). ಇಲ್ಲಿ ಹೇಳುತ್ತಾರೆ। ಪರಶುರಾಮನಲ್ಲಿ ಅತುಲನಾಮಕ ದೈತ್ಯನು ಹೃದಯದಲ್ಲಿ ಆಶ್ರಯ ಪಡೆದಿದ್ದು ತಾನೂ ಶ್ರೀಹರಿಯಂತೆ ಅಕ್ಷರನಾಗಬೇಕೆಂದು ಬಯಸಿದ್ದನು. ಅದಕ್ಕಾಗಿಯೇ ಶ್ರೀರಾಮನು ತಾನೇ ಎರಡು ರೂಪದಿಂದ ಅಭಿವ್ಯಕ್ತನಾಗಿ ಸಮಬಲ ನ್ಯಾಯದಿಂದ ತಾನು ವೈಷ್ಣವ ಧನಸ್ಸಿನಿಂದ ಆ ಅತುಲನನ್ನು ಸಂಹರಿಸಿದನು ಎಂದು. ಇದು ಯಥಾರ್ಥವೇ. ಆದರೆ ಇದರಲ್ಲಿರುವ ಮತ್ತೊಂದಂಶವೇನೆಂದರೆ ಶ್ರೀಹರಿಯು ಕೇವಲ ಅತುಲನನ್ನು ಸಂಹರಿಸಲಿಕ್ಕಾಗಿ ಮಾತ್ರ ಅವತಾರಗಳ ಸಮಾಗಮವನ್ನು ಮಾಡಲಿಲ್ಲ. ಅತುಲನ್ನು ಸಂಹರಿಸಿದರೆ ಜೀವಕ್ಕೆ ನಾಶವಿಲ್ಲ ಮತ್ತೂ ಹುಟ್ಟಬಹುದು. ಅಷ್ಟೇ ಅಲ್ಲ. ಇಲ್ಲಿ ಕೇವಲ ಒಬ್ಬ ದೈತ್ಯನ ಸಂಹಾರಕ್ಕಾಗಿ ಇಷ್ಟೊಂದು ಪರಿಶ್ರಮವೇ ಎಂದರೆ ಇಲ್ಲಿ ಇನ್ನೂ ಹೆಚ್ಚಿನ ಪ್ರಯೋಜನವಿದೆ. ಒಂದೇ ಬಾಣದಿಂದ ಒಬ್ಬನನ್ನು ಮಾತ್ರ ಸಂಹರಿಸಿದ್ದಷ್ಟೇ ಅಲ್ಲ. ರಾಮ ಭಾರ್ಗವ ಎರಡೂ ಅಭೇದಗಳಾದ ಭಗವದ್ರೂಪಗಳು. ಆದರೆ ತನ್ನ ಅಚ್ಛಿನ್ನ ರೂಪಗಳಿಗೆ ಶ್ರೀರಾಮಃ ಕಶ್ಚಿದ್ ಕ್ಷತ್ರಿಯಃ ತಥಾ ಭಾರ್ಗವೋ ಕಶ್ಚಿದ್ವಿಪ್ರಃ ಎಂಬ ಭೇದಃಸ್ತಗತ ಏವಚ" ಇತ್ಯಾದಿ ದ್ವೇಷೋಪಾಸನೆಗೆ ಎಡೆ ಮಾಡಿದನು. ಬಾಣ ಘಾತಕ್ಕಿಂತ ಭಯಂಕರವಾದುದು ಅಸದುಪಾಸನೆಯು ಬಾಣದಿಂದ ಮೃತಿ ಹೊಂದಿದವನು ಒಬ್ಬನೇ ಮತ್ತೂ ಹುಟ್ಟಿ ಬರಬಹುದು. ಆದರೆ "ಅಸದುಪಾಸನಯಾತ್ಮಹನಃ" ಎಂದಂತೆ ಭಗವದ್ರೂಪ ಭೇದ ಚಿಂತನೆಯಿಂದ ಅಂಧಂತಮಸ್ಸೇ ಆಗುವುದರಿಂದ ಪುನರಾವೃತ್ತಿ ಇಲ್ಲ. ಈ ಮೂಲ ರೂಪ ಭೇದವನ್ನು ಗಮನಿಸಿದ ತಪೋ ಯೋಗ್ಯರು (ಮೂಲ ರೂಪದಿಂದಲೂ ಮತ್ತು ಅಂಶದಿಂದಲೂ ಸಹ) ಅಪುನರಾವರ್ತಿ ತಮಸ್ಸನ್ನು ಸೇರಿದರು. ಒಬ್ಬರಲ್ಲ ಅಸಂಖ್ಯಾತರು ಶ್ರೀರಾಮನನ್ನು ದಶರಥ ಪುತ್ರನೆಂದು (ಮನುಷ್ಯ) ತಿಳಿಯಲು ಅವತರಿಸಿದುದೇ ಶ್ರೀಹರಿಯ ಪ್ರಥಮ ಸಾಮೂಹಿಕ ನಾಶಕರವಾದ ಬಾಣವು. ಇದು ಎರಡನೇ ದೊಡ್ಡ ಬಾಣವು. ಸರಿ. ತರುವಾಯ ಅಯೋಧ್ಯಾ ಪಟ್ಟಣವನ್ನು ಸೇರಿದ ಮೇಲೆ ಮಂಥರೆಯ ನಿಮಿತ್ತವಾಗಿ ಶ್ರೀರಾಮ ಪಟ್ಟಾಭಿಷೇಕ ಮಹೋತ್ಸವವು ಸ್ಥಗಿತವಾಗಿ ಆತನು ಸೀತಾ, ಲಕ್ಷ್ಮಣನ ಸಹಿತವಾಗಿ ವನವಾಸಕ್ಕೆ ಹೋಗಬೇಕಾಯಿತು. ಓಗಾಗಲು ಕಾರಣವೇನೆಂದರೆ ವಶಿಷ್ಠಾದಿ ಮಹಾಮುನಿಗಳು ಶ್ರೀರಾಮ ಪಟ್ಟಾಭಿಷೇಕಕ್ಕೆ ಒಳ್ಳೇ ಮುಹೂರ್ತವನ್ನು ನೋಡಿದ್ದರೆಂದು ಹೇಳಬೇಕಾಗಿಲ್ಲ. ಆದರೆ ಶ್ರೀರಾಮನ ಚಲ್ವಿಕೆಯನ್ನೇ ನೋಡುತ್ತಾ ಮುಗ್ಧರಾಗಿ ನಿಂತು ಬಿಟ್ಟ ಋಷಿಗಳು ಒಳ್ಳೇ ಮುಹೂರ್ತವು ಕಳೆದು ಹೋದದನ್ನು ಗಮನಿಸಲಿಲ್ಲ. ಬದಲಿಗೆ ಪಿತೃ ವಿಯೋಗ, ವನವಾಸ ಪ್ರಾಪ್ತಿ ಮುಹೂರ್ತದಲ್ಲಿ ಶ್ರೀರಾಮನಿಗೆ ಕಂಕಣವನ್ನು ಕಟ್ಟಿಬಿಟ್ಟರಂತೆ. "ಸಕಲ ಗ್ರಹ ಬಲ ನೀನೆ ಸರಸಿಜಾಕ್ಷ"ನಿಗೆ ಮುಹೂರ್ತದ ಬಾಧೆಯು ತಟ್ಟಿತಂತೆ. ಶ್ರೀರಾಮನು ತನಗೂ ಗ್ರಹಗತಿಗಳ ಬಾಧೆ ಉಂಟು ಎಂಬ ಅಸಮುಪಾಸನೆಯನ್ನು ದೈತ್ಯರು ಮಾಡಲಿ ಎಂದು ಗ್ರಹಚಾರಕ್ಕೆ ಒಳಗಾದನು. ಹಾಗೂ ಗ್ರಹಗಳ ಸ್ಥಾನಮಾನವನ್ನು ಕಾಪಾಡಿದನು ಮತ್ತು ಗ್ರಹಗತಿಗಳನ್ನು ಗಮನಿಸಲು ಲೋಕರಿಗೆ ಮಾರ್ಗದರ್ಶಕನಾದನು. ಹೌದಲ್ಲವಾದರೆ ಅಸುರರ ಗತಿ ಏನು? ಅಂತೂ ಶ್ರೀರಾಮನು ಕಾಡನ್ನು ಸೇರಿದನು. ಗ್ರಹಗಳಿಗಂತೂ ಮನ್ನಣೆ ಸಿಕ್ಕಿತು. ಶ್ರೀರಾಮನು ಮಾಯಾಮೃಗ ವಂಚಿತನಾದನು. ರಾವಣನು ಸೀತೆಯನ್ನು ಅಪಹರಿಸಿದನು. ರಾಮ, ಲಕ್ಷ್ಮಣರು ಬಹಳ ಚಿಂತಾವ್ಯಾಕುಲಗಳಿಂದ ನೊಂದು ರೋದಿಸುತ್ತಾ ಸೀತಾನ್ವೇಷಣೆಯಲ್ಲಿ ಬಳಲಿ ಕಾಡು ಮೇಡು, ಆಶ್ರಮಗಳನ್ನು ಸಂದರ್ಶಿಸುತ್ತಾ, ಹಸಿವು, ಬಾಯಾರಿಕೆಗಳನ್ನು ನಿವಾರಿಸಿಕೊಳ್ಳಲು ಉಚ್ಛಿಷ್ಟ ಫಲಗಳನ್ನು ತಿನ್ನುತ್ತಾ, ಸೀತಾ ವಿರಹ ತಾಪದಿಂದ ಬೆಂಡಾಗಿ ಅಂತೂ ಇಂತೂ ಕಿಷ್ಕಿಂಧಾವನವನ್ನು ಸೇರಿದನು. ಹೇಗಿದೆ ಸ್ವಾಮಿಯ ನರವೇಷ ನಟನೆ? (ದೈತ್ಯರನ್ನು ಸಂಹರಿಸಲು ಶ್ರೀ ರಾಮನಿಗೆ ಬಿಲ್ಲು ಬಾಣಗಳು ಬೇಕಾಯಿತೇ!) ಕಪಿಗಳ ಸಹಾಯವು ಬೇಕಾಗಿತ್ತೇ !

ಹೇಗೆ ಶ್ರೀಹರಿಯು ನರನಾಗಿ ಅಸುರ ಮೋಹನಾರ್ಥವಾಗಿ ಹೀಗೆ ನಟಿಸಿದನೊ ಹಾಗೆಯೇ ಆತನ ಭಕ್ತಶಿರೋಮಣಿಯಾದ ವಾಯುವು ತಾನೂ ಕೋತಿರೂಪವನ್ನು ತಾಳಿ ಕಪಿಗಳ ಗುಂಪಿನಲ್ಲಿ ಸೇರಿ ಅತ್ತಿತ್ತ ಸಂಚರಿಸುತ್ತ ಅಕಸ್ಮಾತ್ತಾಗಿ ರಾಮಲಕ್ಷ್ಮಣರನ್ನು ಕಂಡು ನಮಿಸಿ ನೀವು ಯಾರು? ಎಲ್ಲಿಂದ ಬಂದಿರಿ? ನಿಮ್ಮ ವೃತ್ತಾಂತವೇನು? ಎಂದು ಕೇಳಿದ ಮೇಲೆ ರಾಮನು ಈ ಹನುಮಂತನಿಗೆ ತನ್ನ ಕಥೆಯನ್ನೆಲ್ಲಾ ಹೇಳಿದನಂತೆ. ರಾಮನ ಕಷ್ಟವನ್ನು ಕೇಳಿ ಈ ಹನುಮಪ್ಪನಿಗೆ ಕನಿಕರ ಬಂದಿತಂತೆ. ಶ್ರೀರಾಮನಿಗೆ ಸಹಾಯ ಮಾಡಲು ಮನಸ್ಸು ಮಾಡಿದನಂತೆ. ಹೇಗಿದೆ ರಾಜ–ಮಂತ್ರಿಗಳ ಡೊಂಬರ ವೇಷ–ಆಟ?

ಶ್ರೀ ಹರಿವಾಯುಗಳು ಜಗನ್ನಿಯಾಮಕರು. ಇವರು ತ್ರಿವಿಧ ಜೀವರನ್ನು ಹೇಗೆ ಬೇಕಾದರೂ ನಿಯಂತ್ರಿಸಬಹುದು. ಅಂದ ಮೇಲೆ ಇವರೇ ಅಸುರರನ್ನು ವಂಚಿಸುತ್ತಾ ಮೋಹಗೊಳಿಸಿದರೆ ದೈತ್ಯರೇ ನುತಾನೇ ಮಾಡಿಯಾರು? ಇವರು ದೇವತೆಗಳನ್ನು ಏಕೆ ಮೋಹಿಸಬಾರದು? ದೈತ್ಯರಿಗೆ ಏಕೆ ಯಥಾರ್ಥವಾದ ಜ್ಞಾನವನ್ನು ಕೊಡಬಾರದು? ಎಂದರೆ ಶ್ರೀ ಹರಿವಾಯುಗಳು ದೇವ–ದಾನವರಲ್ಲಿ ಸ್ನೇಹೋದಾಶೀನ ದ್ವೇಷಗಳನ್ನು ಮಾಡದೆ ತಮ್ಮಲ್ಲಿರುವ ಮಹಿಮೆಗಳನ್ನು ಪದಾರ್ಥವಾಗಿ ಪ್ರಕಟಿಸುತ್ತಾರೆ. ಇದನ್ನು ದೇವ–ದಾನವರು ತಮ್ಮ ಸ್ವರೂಪಾನುಸಾರವಾಗಿ ತಿಳಿದು ಸ್ನೇಹ–ದ್ವೇಷಗಳನ್ನು ಹೊಂದುತ್ತಾರೆ. ಶ್ರೀರಾಮಾವತಾರವು ದೇವ–ದೈತ್ಯರಿಗೆ ಸಾಮಾನ್ಯವೇ. ಆದರೆ ದೇವತೆಗಳು ಇದನ್ನು ಭಗವಂತನೆಂದು ತಿಳಿದರೆ ದೈತ್ಯರು ರಾಜಪುತ್ರನೆಂದು ತಿಳಿದರು. ಇದಕ್ಕೆ ಸ್ವರೂಪವೇ ಕಾರಣ.

ಅತಿರೋಹಿತವಿಜ್ಞಾನಿಗಳಾದ ವಾಯುನಂದನ ಹನುಮಂತನಿಗೆ ಮೂಲಾವತಾರಗಳಲ್ಲಿ ಜ್ಞಾನ, ಶಕ್ತಿಗಳಿಗೆ ಭೇದವಿಲ್ಲ ಸದಾಹರಿಯನ್ನು ತನ್ನ ಅವಯವ, ರೋಮ ಕಲಾಪಗಳಲ್ಲಿ ಎಡೆಬಿಡದೆ ಚಿಂತಿಸುತ್ತಾ ("ಸಾಕ್ಷಾತ್ ಸರ್ವಾಂಗ ಸಾಯುಜ್ಯ ಯೋಗ್ಯಾಯ") ನಲಿದಾಡುವ ಮಹಾ ಮಹಿಮನಿಗೆ ಶ್ರೀರಾಮರೂಪವು ಈಗ ಮಾತ್ರ ಕಾಣಿಸಿತೇ? ಅನಂತರೂಪಾಯ। ಅನಂತ ರೂಪೋ ಪಾಸ ಕಾಯನಿಗೆ ಇರುವುದು ಒಂದು ಕೋತಿರೂಪ. ಕಂಡಿದ್ದು ಒಂದು ರಾಮ ರೂಪ. ಅದೂ ಅಕಸ್ಮಾತ್ತಾಗಿ! ಈಗ !! ಹೌದೆಂಬೋಣವೇ?

ಇತರ ದೇವತೆಗಳಲ್ಲಿ ಭಗವಂತನ ವಿಭೂತಿ ರೂಪವಿರುತ್ತದೆ. ವಿಭೂತಿ ರೂಪವೆಂದರೆ ತಾತ್ಕಾಲಿಕವಾಗಿ ಭಗವಂತನ ಆವೇಶದಿಂದ ಗಮನಾರ್ಹವಾದ ಸ್ಥಾನವನ್ನು ಪಡೆದಿರುವುದು. ಇತರ ದೇವತೆಗಳು ಭಿನ್ನಭಕ್ತರು. ಅವರು ಕಲ್ಯಾದಿ ದೈತ್ಯಾವೇಶಯುತರು. ಅವರಲ್ಲಿ ದೈತ್ಯಾವೇಶವಿದ್ದಾಗ ಶ್ರೀಹರಿಯ ಸ್ಮೃತಿಯಿಂದ ಚ್ಯುತರಾಗಿರುತ್ತಾರೆ. ಅಂಥಾ ಸಂದರ್ಭದಲ್ಲಿ ಅವರು ಶ್ರೀಹರಿಯನ್ನು ಸ್ಮರಿಸುವುದಿಲ್ಲ. ತನ್ನನ್ನು ಸ್ಮರಿಸದವರಲ್ಲಿ ಶ್ರೀಹರಿಯು ಇರುವುದಿಲ್ಲ. ಅಂದರೆ ಶ್ರೀಹರಿಯು ಯಾರನ್ನೂ ಕ್ಷಣವೂ ಬಿಟ್ಟಿರುವುದಿಲ್ಲ. ಆದರೆ ತನ್ನನ್ನು ಸ್ಮರಿಸದಿದ್ದರೆ ತಾನು ಅವರಲ್ಲಿ ಸನ್ನಿಹಿತನಾಗಿದ್ದರೂ ತನ್ನ ಇರುವಿಕೆಯ ಜ್ಞಾನವನ್ನು ಅವರಿಗೆ ನೀಡುವುದಿಲ್ಲ ಮತ್ತು ಅಲ್ಲಿನ ಉಚಿತ ಕರ್ಮಗಳನ್ನು ಮಾಡಿಸುವುದಿಲ್ಲ. ತಾನು ಅವರಲ್ಲಿರುವನೆಂಬ ಜ್ಞಾನವನ್ನು ಕೊಡುವುದಿಲ್ಲ. ಪರಮಾತ್ಮನನ್ನು ಸ್ಮರಿಸಿದರೆ ಅಲ್ಲಿ ಆ ಕಾಲಕ್ಕೆ ತಾನು ಪ್ರಕಟನಾಗುತ್ತಾನೆ. ಇಲ್ಲವಾದರೆ ಇಲ್ಲ. ಇದಕ್ಕೆ ವಿಭೂತಿ ರೂಪವೆನ್ನುತ್ತಾರೆ. ಆದರೆ ವಾಯುವು ಆಖಣಾತ್ಮ ಸಮರಾಗಿದ್ದು ಕಲ್ಯಾದ್ಯರ ಆವೇಶ ರಹಿತರಾಗಿ ಸದಾ ಶ್ರೀಹರಿಯ ಸ್ಮೃತಿಯಿಂದಲೇ ಯುಕ್ತರಾಗಿರುವುದರಿಂದ ಜ್ಞಾನಗಮ್ಯನಾಗಿ ವಾಯುವಿನಲ್ಲಿ ಶ್ರೀಹರಿಯು ಸದಾಕಾಲವೂ ಇರುತ್ತಾನೆ. ವಾಯುವಿನಿಂದ ಸ್ಮೃತ್ಯನಾಗಿರುತ್ತಾನೆ. ಇಂಥಾ

ಹನುಮಂತನಲ್ಲಿರುವ ಭಗವದಾವೇಶವು ನಿರಂತರವಾದುದೇ ವಿನಃ ತಾತ್ಕಾಲಿಕವಾದ ವಿಭೂತಿ ಪರವಾದ ರೂಪವಲ್ಲ. ಇತರ ದೇವತೆಗಳು ಕೆಲವು ರೂಪೋಪಾಸಕರು. ಆದರೆ ಹನುಮಂತನು ಬ್ರಹ್ಮಾಂಡ ವಿಗ್ರಹನಾದುದರಿಂದ ಬ್ರಹ್ಮಾಂಡ ಗತ ಸಕಲ ರೂಪೋಪಾಸನೆಗಳನ್ನು ಅಹರ್ನಿಶಿ ತಪ್ಪದೇ ತೈಲ ಧಾರೆಯಂತೆ ಮಾಡುತ್ತಿರುತ್ತಾರೆ. ಇಂಥಾ ಮಹಾಮಹಿಮನಾದ ಹನುಮಂತನು (ಎಂದರೆ ಅಸುರರಿಗೆ ಕೋತಿ, ದೇವತೆಗಳಿಗೆ ಜ್ಞಾನಿ) ಶ್ರೀರಾಮನನ್ನು ಪ್ರತ್ಯೇಕವಾಗಿ ಹುಡುಕುವ ಅವಶ್ಯಕತೆ ಇತ್ತೇ? ಎಂದರೆ ಇತ್ತು, ಅಸುರ ಮೋಹನಕ್ಕಾಗಿ ಸ್ವರೂಪೋದ್ಧಾರಕ್ಕಾಗಿ ಅಲ್ಲ. ಇದು ಪರೋಕ್ಷವಾಗಿ ಸ್ವರೂಪೋದ್ಧಾರಕ್ಕೂ ಕಾರಣವಾಗುತ್ತದೆ. ಯಾಕೆಂದರೆ ಭಗವದಿಚ್ಛಾ-ಭಗವತ್ಪರ – ತತ್ಸಾದೃಶವಾದ ಲೀಲೆಯಾದುದರಿಂದ, ತರುವಾಯದಲ್ಲಿ ಹನುಮಂತನು ಸುಗ್ರೀವಾದಿಗಳೊಡನೆ ವನಂಚಾರದಲ್ಲಿ ಇದ್ದಾಗ ಇವರ ಕಣ್ಣಿಗೆ ಶ್ರೀರಾಮ ಲಕ್ಷ್ಮಣರು ಕಾಣಿಸಿದರಂತೆ. ತಕ್ಷಣವೇ ಇವರು ಬೇಟೆಗಾರರೆಂದು ತಿಳಿದ ಸುಗ್ರೀವಾದಿಗಳು ಓಡಲು ಆರಂಭಿಸಿದರು. ಆಗ ಹನುಮಂತನು ಇವರನ್ನು ತಡೆದು ಅಲ್ಲೇ ನಿಲ್ಲಿಸಿ ತಾನು ಮಾತ್ರ ಶ್ರೀರಾಮನೆದುರಿಗೆ ಬಂದು ಅವರ ಲಕ್ಷಣಗಳನ್ನು ನೋಡಿ ಇವರು ಮಹಾತ್ಮರೆಂದು ತಿಳಿದು ಎರಗಿ ಶ್ರೀರಾಮನ ಔದಾರ್ಯ ಘನತೆಗಳನ್ನು ಅರಿತು ಪುನಃ ಸುಗ್ರೀವಾದಿಗಳನ್ನು ಸಂಧಿಸಿ ಅವರಿಗೆ ಧೈರ್ಯವನ್ನು ಹೇಳಿ ಅವರೆಲ್ಲರನ್ನೂ ಕರೆತಂದು ಶ್ರೀರಾಮನ ಚರಣಕ್ಕೆ ಎರಗುವಂತೆ ಮಾಡಿದನು.

ಇಲ್ಲಿ ಒಂದು ಪ್ರಸಂಗವು ಪ್ರಾಪ್ತವಾಗಿತ್ತು. ಅದೇನೆಂದರೆ ಇಂದ್ರಾಂಶ ಸಂಭೂತನಾದ ವಾಲಿಗೂ ಸೂರ್ಯಾಂಶ ಸಂಭೂತನಾದ ಸುಗ್ರೀವನಿಗೂ ವೈರವು ಉಮ್ಮಳಿಸಿತ್ತು. ಇದಕ್ಕೆ ಕಾರಣವು ಹೀಗಿದೆ.

ವಾಲಿ ಸುಗ್ರೀವರು ಸಹೋದರರು, ಬಲಾಢ್ಯರು. ಇವರು ಒಂದು ದಿನ ವನ ಸಂಚಾರದಲ್ಲಿ ದುಂದುಭಿ ಎಂಬ ದೈತ್ಯನನ್ನು ಸಂಧಿಸಲಾಗಿ ವಾಲಿಗೂ ದುಂಧುಭಿಗೂ ಘೋರವಾದ ಕದನವಾಗಿ ದುಂಧುಭಿಯು ಪಲಾಯನವನ್ನು ಮಾಡಿ ಒಂದು ಗುಹೆಯನ್ನು ಸೇರಿದನು. ಆಗ ಅವನನ್ನು ಬೆನ್ನಟ್ಟಿ ಹೋದ ವಾಲಿಯು ಬಹು ದಿನಗಳವರೆಗೆ ಗುಹೆಯಿಂದ ಮರಳಿ ಬರಲೇ ಇಲ್ಲ. ಆದರೆ ಬಲಶಾಲಿಯಾದ ವಾಲಿಯು ದುಂದುಭಿಯನ್ನು ನೆಲಕ್ಕೆ ಅಪ್ಪಳಿಸಿದಾಕ್ಷಣ ಅವನ ದೇಹವು ಛಿದ್ರವಾಗಿ ರಕ್ತ ಪ್ರವಾಹವು ಹರಿಯಿತು. ಇತ್ತ ಗುಹೆಯ ದ್ವಾರದಲ್ಲಿ ಚಿಂತಾಕ್ರಾಂತನಾಗಿ ಕುಳಿತಿದ್ದ ಸುಗ್ರೀವನು ಅನಿರೀಕ್ಷಿತವಾಗಿ ಗುಹೆಯಿಂದ ಹರಿದು ಬಂದ ರಕ್ತದ ಪ್ರವಾಹವನ್ನು ನೋಡಿ ಇದು ವಾಲಿಯ ರಕ್ತವೆಂದೇ ಭಾವಿಸಿ ತನ್ನ ಆತ್ಮ ರಕ್ಷಣೆಗಾಗಿ ಒಂದು ದೊಡ್ಡ ಗುಂಡನ್ನು ಆ ಗುಹೆಯ ಬಾಗಿಲಿಗೆ ಅಡ್ಡವಾಗಿ ತಳ್ಳಿ ಅಲ್ಲಿಂದ ನಿರ್ಗಮಿಸಿದನು. ಮಾತ್ರವಲ್ಲ ತನ್ನ ಪತ್ನಿಯ ಸಹಿತವಾಗಿ ಅಣ್ಣನ ಪತ್ನಿಯಾದ ತಾರಾದೇವಿಯನ್ನೂ ಸಹ ಕೂಡಿಕೊಂಡು ವಿಹರಿಸ ತೊಡಗಿದನು.

ಇತ್ತ ವಾಲಿಯು ಆ ದುಂಧುಭಿಯನ್ನು ಸಂಹಾರ ಮಾಡಿದ್ದನು. ಆ ರಕ್ತದ ಕೋಡಿಯು, ದೈತ್ಯನದೇ ಆಗಿದ್ದಿತು. ಅದನ್ನು ತಪ್ಪಾಗಿ ತಿಳಿದಿದ್ದ ಸುಗ್ರೀವನಿಂದ ತಪ್ಪು ಸಂಘಟಿಸಿತ್ತು. ಆಗ ವಾಲಿಯು ಬಂದು ಗುಹೆದ್ವಾರವನ್ನು ನೋಡಿದಾ ದೊಡ್ಡ ಬಂಡೆಯೊಂದು ಅಡ್ಡವಾಗಿದ್ದುದನ್ನು ನೋಡಿ ಆ ಗುಂಡನ್ನು ತಳ್ಳಿ ಹಾಕಿ ಸುಗ್ರೀವನಲ್ಲಿಗೆ ಬಂದು ನೋಡಿದನು. ತಮ್ಮನ ಆಕೃತ್ಯವನ್ನು ಸಹಿಸಲಾರದೆ ವಾಲಿಯು ಅವನನ್ನು ಸಂಹರಿಸಲು ನುಗ್ಗಿದನು. ಆಗ ಸುಗ್ರೀವನು ಓಡಿಹೋಗಿ ಮತಂಗ ಪರ್ವವನ್ನು ಸೇರಿಬಿಟ್ಟಿದ್ದನು. ವಾಲಿಯು ಮಾತಂಗ ಪರ್ವತವನ್ನು ಮುಟ್ಟುವಂತಿರಲಿಲ್ಲ. ಯಾಕೆಂದರೆ ಒಮ್ಮೆ ವಾಲಿಯು ಮಾತಂಗ ಪರ್ವತದಲ್ಲಿ ಸಂಚರಿಸುತ್ತಿದ್ದಾಗ ಕೋಣರೂಪೀ ದೈತ್ಯನನ್ನು ಹಿಡಿದು

ಗಿರಗಿರನೆ ತಿರುಗಿಸಿ ನೆಲಕ್ಕೆ ಅಪ್ಪಳಿಸಿ ಅವನನ್ನು ಸಂಹರಿಸಿಬಿಟ್ಟನು. ಅವನನ್ನು ನೆಲಕ್ಕೆ ಅಪ್ಪಳಿಸಿದ ಭರಕ್ಕೆ ಆ ದೈತ್ಯನ ದೇಹವು ಒಡೆದು ಅವನ ರಕ್ತ ಮಾಂಸಗಳು ಸಿಡಿದು ಅಲ್ಲೇ ತಪಸ್ಸಿಗೆ ಕುಳಿತಿದ್ದ ಮಾತಂಗ ಮಹಾಮುನಿಗೆ ಸಿಡಿಯಲಾಗಿ ಕುಪಿತಗೊಂಡ ಆ ಮುನಿಗಳು ಮತ್ತೊಮ್ಮೆ ನೀನು ಈ ಪರ್ವತಕ್ಕೆ ಕಾಲಿಟ್ಟರೆ ನಿನ್ನ ತಲೆಯು ಸಿಡಿಯಲೆಂದು ಶಾಪವನ್ನಿತ್ತಿದ್ದರು. ಆದ್ದರಿಂದ ವಾಲಿಯು ಮಾತಂಗ ಪರ್ವತವನ್ನು ಹತ್ತುವಂತಿರಲಿಲ್ಲ. ಆದ್ದರಿಂದ ಅಲ್ಲಿ ಸುಗ್ರೀವನು ತಲೆಮರೆಸಿಕೊಂಡು ತಿರುಗುತ್ತಿದ್ದನು. ಇವರಿಬ್ಬರ ವೈರವನ್ನು ತಣಿಸಲು ಹನುಮಂತನು ಯತ್ನಿಸಿದ್ದು ವಿಫಲವಾಯಿತು. ವಾಲಿಯು ಹನುಮಂತನನ್ನು ಕಡೆಗೇಣಿಸಿದ್ದನು, ಸುಗ್ರೀವನು ಹನುಮಂತನನ್ನೇ ಆಶ್ರೈಸಿದ್ದನು. ಅದರ ಫಲವಾಗಿಯೇ ಸುಗ್ರೀವನಿಗೆ ರಾಮ ದರ್ಶನವಾಯಿತು.

ಶ್ರೀರಾಮ ದರ್ಶನಾನಂತರದಲ್ಲಿ ಪರಸ್ಪರ ವಿಚಾರ ವಿನಮಯದಲ್ಲಿ ಸುಗ್ರೀವನು ತನ್ನ ಪತ್ನಿಯನ್ನು ವಾಲಿಯು ಅಪಹರಿಸಿರುವನಲ್ಲದೆ ತನ್ನನ್ನು ನಿಗ್ರಹಿಸಲು ಹವಣಿಸುತ್ತಿರುವನು. ಈ ವಿಪತ್ತಿನಿಂದ ತನ್ನನ್ನು ಪಾರುಮಾಡಿ ತನ್ನ ಪತ್ನಿಯನ್ನು ಪುನಃ ತನಗೆ ಕೊಡಿಸಬೇಕೆಂದು ಬೇಡಿಕೊಂಡನು. ಇದಕ್ಕೆ ವಾಲಿಯ ಸಂಹಾರದ ವಿನಃ ಬೇರೆ ಉಪಾಯವಿರಲಿಲ್ಲ. ತನ್ನ ಪತ್ನಿಯನ್ನು ಶ್ರೀರಾಮ ದೇವರು ದೊರಕಿಸಿಕೊಟ್ಟುದಾದರೆ ಪ್ರತಿಯಾಗಿ ಸೀತಾದೇವಿಯನ್ನು ಹುಡುಕಿ ಕೊಡುವುದಾಗಿ ಸುಗ್ರೀವನು ಪ್ರತಿಜ್ಞೆ ಮಾಡಿದನು. ಶ್ರೀರಾಮ ಚಂದ್ರನು ಇದಕ್ಕೆ ಒಪ್ಪಿದನು.

ಶ್ರೀ ರಾಮನು ತನ್ನ ಪತ್ನಿಯನ್ನು ಕೊಡಿಸುವನೇ ಎಂಬ ನಂಬಿಕೆಯು ಸುಗ್ರೀವನಿಗೆ ಧೃಢವಾಗಬೇಕಿತ್ತು. ಅದಕ್ಕೆ ಸುಗ್ರೀವನು ಎರಡು ಪರೀಕ್ಷೆಗಳನ್ನು ಮುಂದಿರಿಸಿದನು. ಒಂದು ಅಲ್ಲೇ ಕಾಡಿನಲ್ಲಿದ್ದ ಏಳು ತಾಟ ವೃಕ್ಷಗಳಲ್ಲಿ ಒಂದರ ಒಂದು ಗರಿಯನ್ನಾದರೂ ರಾಮನು ಉದುರಿಸಬೇಕು ಮತ್ತು ವಾಲಿಯಿಂದ ಸಂಹೃತನಾಗಿದ್ದ ದುಂಧುಭಿಯ ಶರೀರದ ಒಂದು ಅಸ್ತಿಯನ್ನಾದರೂ ಕದಲಿಸಬೇಕಿತ್ತು. ಈ ಪಣಕ್ಕೆ ಒಪ್ಪಿದ ಶ್ರೀರಾಮನು ಒಂದೇ ಬಾಣದಿಂದ ಕೇವಲ ಒಂದು ಗರಿಯನ್ನು ಮಾತ್ರ ಉದುರಿಸುವುದು ಇರಲಿ. ಇಡೀ ಸಪ್ತ ತಾಲವೃಕ್ಷಗಳನ್ನೇ ಕತ್ತರಿಸಿ ಕೆಡಹಿದನು. ಅವು ರಾಮಬಾಣ ರಭಸಕ್ಕೆ ದೂಳೀಪಟವಾಗಿ ಹೋದವು. ಇದರಿಂದ ತಾಟವೃಕ್ಷದ ರೂಪದಿಂದ ತಪಸ್ಸನ್ನಾಚರಿಸುತ್ತಿದ್ದ ಏಳು ಜನ ದೈತ್ಯರ ಸಂಹಾರವಾಯಿತು. ಮುಂದೆ ಆ ರಾಮಬಾಣವು ಬ್ರಹ್ಮದೇವರ ವರದಿಂದ ದುಷ್ಟರಾಗಿದ್ದು ಪಾತಾಳದಲ್ಲಿ ಅಡಗಿ ಕುಳಿತಿದ್ದ ಕುಮುದನಾಮಕ ದೈತ್ಯರನ್ನೂ ಸುಟ್ಟು ಭಸ್ಮ ಮಾಡಿತು. ಮುಂದೆ ದುಂಧುಭಿ ಶರೀರವನ್ನು ಅಲುಗಾಡಿಸಬೇಕಿತ್ತು ಅಲ್ಲವೇ? ಆದರೆ ಅದು ಶ್ರೀರಾಮನ ಅಂಗುಷ್ಟ ಸ್ಪರ್ಶಮಾತ್ರದಿಂದಲೇ ಗಗನ ಚುಂಬಿತವಾಗಿ ಕೆಳಗೆ ಬಿದ್ದು ಬಿಟ್ಟಿತು. ಅದು ಬಿದ್ದ ರಭಸವು ಎಷ್ಟಿತ್ತೆಂದರೆ ಆ ಭಾರ ಮತ್ತು ಎತ್ತರದ ಫಲವಾಗಿ ಅದು ರಸಾತಲವನ್ನೇ ಸ್ಪರ್ಶ ಮಾಡಿತು. ಅಲ್ಲಿ ಯಾರಿಂದಲೂ ಮರಣವಿಲ್ಲೆಂದು ವರವನ್ನು ಪಡೆದಿದ್ದ ಚಂಡಾಲ ದೈತ್ಯರ ಮೇಲೆ ಅದು ಬಿದ್ದು ಆ ದೈತ್ಯರು ಧ್ವಂಸರಾದರು. ಶವವೆಂಬುದು ನಿರ್ಜೀವ ತಾನೇ. ಶ್ರೀರಾಮನಿಂದ ಅವರು ಹತರಾದರಲ್ಲ ಎನ್ನುವಂತಿಲ್ಲ. ಯಾಕೆಂದರೆ ಇವರನ್ನು ಕೊಲ್ಲಲಿಕ್ಕಾಗಿ ಎಂದು ಶ್ರೀರಾಮನು ಆಶರೀರವನ್ನು ಅವರ ಮೇಲೆ ಎಸೆಯಲಿಲ್ಲ. ಬೇರೆ ಉದ್ದೇಶದಿಂದ ಚಿಮ್ಮಿದ ದೇಹವು ಅಕಸ್ಮಾತ್ತಾಗಿ ಆ ದೈತ್ಯರ ಮೇಲೆ ಬಿತ್ತು. ಅವರು ಹತರಾದರು.

ಹಗೆಯರಿಗೆ ವರವೀವರಿಬ್ಬರು। ತೆಗೆಯಲರಿಯರು ಕೊಟ್ಟ ವರಗಳ।
ತೆಗೆದು ಕೊಡುವ ಸಮರ್ಥರಾರೀ ಜಗದೊಳಗೆ ನಿನ್ನಂತೆ॥
ಸುಗಣರಿನ್ನಾರುಂಟು ಕದನವ। ಬಗೆದು ನಿನ್ನೊಳು ಜೈಸುವವರೀ।
ಜಗದೊಳುಂಟೇ ದೇವ ರಕ್ಷಿಸು ನಮ್ಮನನವರತ ॥ ಹ.ಭ.ಸಾ.॥

ಮೇಲಿನೆರಡು ಪರೀಕ್ಷೆಗಳಿಂದ ರಾಮನ ಸತ್ವವನ್ನರಿತ ಸುಗ್ರೀವನು ರಾಮನ ಸಲಹೆಯಂತೆ ಅಗ್ರಜನೊಡನೆ ಯುದ್ಧಕ್ಕೆ ಬಂದನು. ಆಗ ರಾಮನು ತಟಸ್ಥನಾಗಿ ಇದ್ದುದರಿಂದ ವಾಲಿಯ ಹೊಡತಕ್ಕೆ ಸಿಕ್ಕು ಸುಗ್ರೀವನು ಬಹಳವಾಗಿ ನೊಂದನು. ಇದಕ್ಕೆ ಕಾರಣಗಳನ್ನು ಬೇರೆ ಬೇರೆಯಾಗಿಯೇ ಹೇಳುತ್ತಾರೆ. ಕೋಪಿಃ ಸಹೋದರ ಜನೇ। ಪುನರಂತ ಕಾಲೇ। ಪ್ರಯೋ ನಿವೃತಿ ಮುಪಗಚ್ಛತಿ ತಾಪಕಷ್ಟ ॥ ತಾ.ನಿ.೬–೧೫॥

ಕೋಪ ಭರದಲ್ಲಿ ಕೊಲ್ಲು ಎನ್ನ ಬಹುದು. ತರುವಾಯ ಮಿಡುಕ ಬಹುದು. ಅದಕ್ಕೆ ಒಂದು ಅವಕಾಶವಿರಲಿ ಎಂದು ಶ್ರೀರಾಮನು ಮೊದಲ ಬಾರಿಗೆ ವಾಲಿಯನ್ನು ಕೊಲ್ಲಲಿಲ್ಲ. ಇದಕ್ಕೆ ಮುಖ್ಯ ಕಾರಣ ಸುಗ್ರೀವನು ಹನುಮಂತನನ್ನು ಬಿಟ್ಟು ಯುದ್ಧಕ್ಕೆ ತೊಡಗಿದ್ದು. ಎರಡನೆಯ ಬಾರಿ ಸುಗ್ರೀವನಿಗೆ ಶ್ರೀ ಹನುಮಂತನು ಶ್ರೀರಾಮನ ನಿರ್ಮಾಲ್ಯ ಪುಷ್ಪ ಮಾಲಿಕೆಯನ್ನು ತೊಡಸಿ ಯುದ್ಧಕ್ಕೆ ಕಳುಹಿಸಿದನು. ಈ ಬಾರಿ ಶ್ರೀರಾಮನು ತನ್ನ ಬಾಣದಿಂದ ವಾಲಿಯನ್ನು ನಿಗ್ರಹಿಸಿದನು. ಹಿಂದಿನಿಂದ ಬೆನ್ನಿರಿದ ಬಾಣಕ್ಕೆ ವಾಲಿಯು ಬಲಿಯಾದನು. ಬಿದ್ದ ವಾಲಿಯನ್ನು ತಬ್ಬಿದನು ಶ್ರೀರಾಮನು. ಆತನದ ದರುಶನದಿಂದ ಹರ್ಷಚಿತ್ತನಾದ ವಾಲಿಯು ಪುನಃ ಬದುಕಲು ಇಚ್ಛಿಸಲಿಲ್ಲ. ತರುವಾಯ ಶ್ರೀರಾಮನು ಸುಗ್ರೀವನಿಗೆ ಪಟ್ಟವನ್ನು ಕಟ್ಟಿ ವಾಲಿಯ ಪುತ್ರನಾದ ಅಂಗದನಿಗೆ ಯುವರಾಜ ಪಟ್ಟವನ್ನು ಕಟ್ಟಿದನು. ಸುಗ್ರೀವನು ತನ್ನ ಪತ್ನಿ ರುಮೆ ಹಾಗೂ ವಾಲಿ ಪತ್ನಿ ತಾರಾ ದೇವಿಯರೊಡನೆ ರಮಿಸುತ್ತ ಸುಖವಾಗಿದ್ದು ಶ್ರೀರಾಮನನ್ನು ಮರೆತುಬಿಟ್ಟನು.

॥ ಪದ ॥ ಇಂದ್ರಜನಾವೇಶ। ದಿಂದ ನಿನ್ನನು ಬಿಡೆ ।
ಇಂದ್ರಾವರಜನು। ಹಿಂದಕೆ ಸರಿದ ॥
ಮಂದಸ್ಮಿತನಿಗೆ । ಮಂದಿ ಸಹಾಯ ಬೇಕೆ ।
ಮಂದರ ಮೋಹಿಸಿ। ದಂದದಿ ಚರಿಸುತ ॥ ೯ ॥

**ಶಬ್ದಾರ್ಥ:** ಇಂದ್ರಜ = ವಾಲಿ; ಆವೇಶದಿಂದ = ಅಸುರಾವೇಶದಿಂದ; ನಿನ್ನನು = ಹನುಮಂತನನ್ನು; ಬಿಡೆ = ಉದಾಶೀನ ಮಾಡಲು; ಇಂದ್ರಾಽವರಜ = ಇಂದ್ರನ ತಮ್ಮನೆನಿಸಿದ (ವಾಮನಾವತಾರಿ ಶ್ರೀಹರಿಯೇ) ಶ್ರೀರಾಮನು; ಹಿಂದಕೆ ಸರಿದ = ವಾಲಿಯನ್ನು ಪರಿಗ್ರಹಿಸಲಿಲ್ಲ. ಹಿಂದಿನಿಂದ ಬಾಣವೆಸಗಿ ನಿಗ್ರಹಿಸಿದನು; ಮಂದನ್ಮಿಸ್ಮಿತನಿಗೆ = ಸದಾ ಆನಂದಮಯನಾದವನಿಗೆ; ಮಂದಿ ಸಹಾಯ = ಸುಗ್ರೀವಾದಿಗಳ ಸಹಾಯವು; ಬೇಕೆ? = ಅವಶ್ಯಕತೆಯು ಇಲ್ಲವೆಂದರ್ಥ; ಮಂದರ= ದೈತ್ಯರನ್ನು; ಮೋಹಿಸಿ ದಂದದಿ = ಯಾವ ರೀತಿಯಿಂದ ಶ್ರೀರಾಮನು ದೈತ್ಯರಿಗೆ ಮೋಹಕವನ್ನು ಉಂಟು ಮಾಡಿದನೋ ಅದೇ ರೀತಿಯಾಗಿ ಶ್ರೀ ಹನುಮಂತನೂ ಅಸುರರ ಮೋಹಕ ವ್ಯಾಪಾರದಲ್ಲಿ ತೊಡಗಿದನೆಂದು ಅರ್ಥ.

**ಭಾವಾರ್ಥ:** ಶ್ರೀರಾಮನು ವಾಲಿಯ ಬೆನ್ನ ಹಿಂದೆ ನಿಂತು ಅವನನ್ನು ತನ್ನ ಬಾಣದಿಂದ ಕೊಂದನಲ್ಲವೇ? ಹಾಗಾದರೆ ಇಲ್ಲಿ ಕೆಲವು ಪ್ರಶ್ನೆಗಳು ಏಳುತ್ತವೆ. ಅವೇನೆಂದರೆ ಶ್ರೀರಾಮನು ವಾಲಿಯನ್ನು ಮರೆಯಲ್ಲಿ ನಿಂತು ಏಕೆ ಹೊಡೆದನು? ಎಂದರೆ ಕಲವರು ಹೇಳುತ್ತಾರೆ. ಯಾರು ವಾಲಿಯ ಎದುರಿಗೆ ನಿಂತು ಯುದ್ಧ ಮಾಡುತ್ತಾರೋ ಅವರ ಅರ್ಧ ಶಕ್ತಿಯು ವಾಲಿಗೆ ಬರುತ್ತಿತ್ತು. ಅಂಥಾ ವರವು ವಾಲಿಗೆ ಇತ್ತು ಅದಕ್ಕೆ ರಾಮನು ತನ್ನ ಅರ್ಧ ಶಕ್ತಿಯು ಎಲ್ಲಿ ಕುಂದುತ್ತದೋ ಎಂಬ ಭಯದಿಂದ ಮರೆಯಲ್ಲಿ ನಿಂತು ಹೊಡೆದನೆಂದು. ಆದರೆ ಇದು ಕೇವಲ ಕಾಲ್ಪನಿಕ. ಆಧಾರವಿಲ್ಲದ ಉತ್ತರ.

ಇನ್ನು ಎರಡನೆಯದಾಗಿ ವಾಲಿಯು ತನ್ನ ತಮ್ಮನ ಹೆಂಡತಿಯನ್ನು ಅಪಹರಿಸಿದ್ದನು. ಅದಕ್ಕೆ ಅವನ ಮುಖವನ್ನು ನೋಡಬಾರದೆಂದು ಬೆನ್ನ ಹಿಂದೆ ನಿಂತು ಹೊಡೆದನೆಂದು ಹೇಳುತ್ತಾರೆ. ಇನ್ನು ವಾಲಿಯು ಶ್ರೀರಾಮನನ್ನು ಕಂಡಿದ್ದೇ ಆದರೆ ಆತನಿಗೆ ಶರಣಾಗತನಾಗಿ ಬಿಡುತ್ತಿದ್ದನು. ಆಗ ಶರಣಾಗತರನ್ನು ಕೊಲ್ಲುವುದು ಧರ್ಮವಲ್ಲವೆಂದು ಆವನನ್ನು ಬಿಟ್ಟು ಬಿಡಬೇಕಾಗುತ್ತಿತ್ತು. ಅದಕ್ಕೆ ಮರೆಯಲ್ಲಿ ನಿಂತು ಹೊಡೆದನು ಎನ್ನುತ್ತಾರೆ. ಇನ್ನೂ ಮುಂದುವರಿದು ಹೇಳುತ್ತಾರೆ. ವಾಲಿಯು ಹನುಮಂತನನ್ನು ತಿರಸ್ಕರಿಸಿ ಬಿಟ್ಟಿದ್ದನು. ಯಾರು ಹನುಮಂತನನ್ನು ತಿರಸ್ಕರಿಸುತ್ತಾರೋ ಅವರನ್ನು ಶ್ರೀರಾಮನೂ ತಿರಸ್ಕರಿಸುವನು. ಸುಗ್ರೀವನು ಹನುಮಂತನೊಡನೆ ಸಖ್ಯದಿಂದಿದ್ದುದರಿಂದಲೇ ಶ್ರೀರಾಮನ ಪ್ರೀತಿಗೆ ಪಾತ್ರನಾದನು ಎಂದು ಹೇಳುತ್ತಾರೆ. ಇಷ್ಟು ಹೇಳುವ ಮಾತ್ರದಿಂದ ಪ್ರಮೇಯವು ಪರಿಷ್ಕಾರವನ್ನು ಹೊಂದುವುದಿಲ್ಲ. ಬದಲಿಗೆ ಉಲ್ಬಣಿಸುತ್ತದೆ. ತಮ್ಮನ ಹೆಂಡತಿಯನ್ನು ಅಪಹರಿಸಿದವನ ಮುಖವನ್ನೇ ನೋಡಲಿಚ್ಛಿಸದ ಶ್ರೀರಾಮನು ಮೊದಲು ಅಣ್ಣನ ಹೆಂಡತಿ (ತಾಯಿ ಸಮಾನ)ಯನ್ನು ಅಪಹರಿಸಿದ ಸುಗ್ರೀವನ ಮುಖವನ್ನು ಹೇಗೆ ನೋಡಿದನು? ಅವನಿಗೆ ಪಟ್ಟವನ್ನು ಕಟ್ಟಿ ಅವನಿಂದ ಸಹಾಯವನ್ನು ಅದ್ಹೇಗೆ ಪಡೆದನು?

ಶ್ರೀರಾಮನನ್ನು ಕಂಡ ಕೂಡಲೇ ವಾಲಿಯು ಶರಣಾಗತನಾಗುತ್ತಿದ್ದನು. ಆಗ ಅವನನ್ನು ಕೊಲ್ಲಲಾಗುತ್ತಿರಲಿಲ್ಲ ಎಂದರೆ ಶ್ರೀರಾಮನಿಗೆ ವಾಲಿಯನ್ನು ಕೊಲ್ಲಲೇಬೇಕೆಂಬ ಹಟವಾದರೂ ಯಾಕೆ ಬೇಕಾಗಿತ್ತು? ಶ್ರೀರಾಮನು ಅಣ್ಣ ತಮ್ಮಂದಿರಿಗೆ ರಾಜಿ ಮಾಡಿಸಿ ಅವರವರ ಪತ್ನಿಯರನ್ನು ಅವರವರಿಗೇ ಕೊಡಿಸಿ ಬಿಡಬಹುದಾಗಿತ್ತು. ಮೇಲಾಗಿ ರಾಮಬಾಣ ಘಾತಿತನಾದ ವಾಲಿಯು ಉತ್ತಮಣ ಮುನ್ನ ಶ್ರೀರಾಮನಿಗೆ ಎರಗಿ 'ಸ್ವಾಮಿ, ನಿನ್ನ ಸಮಸ್ಯೆಯನ್ನು ನನಗೆ ನೀನು ಮೊದಲೇ ತಿಳಿಸಿದ್ದರೆ ಆ ರಾವಣನನ್ನು ಹೆಡೆ ಮುರಿದು ಕಟ್ಟಿ ಸೀತಾ ಮಾತಾ ಸಹಿತವಾಗಿ ನಿನ್ನ ಮುಂದೆ ತಂದಿರುಸುತ್ತಿದ್ದೆ. ವೃಥಾ ಯಾಕೆ ನನ್ನ ಕೊಂದೆ? ಎಂದು ಪ್ರಲಾಪಿಸಿದನು. ಮತ್ತೆ ಒಂದು ಪಕ್ಷ ಶ್ರೀರಾಮನು ಸಂಧಾನ ಮಾರ್ಗವನ್ನನುಸರಿಸಿದ್ದರೆ ತನಗೆ ಸೀತೆಯೂ ಪ್ರಾಪ್ತಳಾಗಿ ಸಹೋದರರಲ್ಲಿ ಅನ್ಯೋನ್ಯತೆಯೂ ಬೆಳೆದು ಸುಖಾಂತವಾಗುತ್ತಿತ್ತು. ಅದನ್ನು ಬಿಟ್ಟು ಶ್ರೀರಾಮನು ಈ ದುರಂತವನ್ನು ಆಯ್ದು ಕೊಂಡುದ್ದೇಕೆ? ವಾಲಿ, ಸುಗ್ರೀವ ಇಬ್ಬರೂ ದೋಷಿಗಳೇ. ಅಷ್ಟಾಗಿ ಸುಗ್ರೀವನನ್ನಂತೂ ಪರಿಗ್ರಹಿಸಿಯೇ ಇರುವನು. ಮೇಲಾಗಿ ವಾಲಿಗೆ ಶ್ರೀರಾಮನಲ್ಲಿ ಭಕ್ತಿ ಇದೆ ಎಂಬುದನ್ನು ಒಪ್ಪಲಾಗಿದೆ. ಹೀಗಿದ್ದ ಮೇಲೆ ವಾಲಿಯು ಸಂಧಾನಕ್ಕೆ ಒಪ್ಪುತ್ತಿದ್ದನೆಂದು ನಂಬಿಕೆ ಬರುತ್ತಿದೆ. ಸಂಧಾನಕ್ಕೆ ವಾಲಿಯು ಒಪ್ಪುತ್ತಿರಲಿಲ್ಲ ಎಂಬುದನ್ನು ಯಾವ ಗ್ರಂಥದಲ್ಲೂ ಹೇಳಿಲ್ಲ. ವಾಲಿಗೆ ರಾಮನಲ್ಲಿ ಭಕ್ತಿ ಇತ್ತು ಎಂದು ಎಲ್ಲಾ ಗ್ರಂಥಗಳು ಸಾರುತ್ತಿವೆ. ಹೀಗಿದ್ದ ಮೇಲೆ ಸಂಧಿಯ ಯಶಸ್ವಿಯು ಊಹಾತೀತವೇನಲ್ಲ. ಹಾಗಾದರೆ ಶ್ರೀರಾಮನು ವಾಲಿಯನ್ನು ಕೊಂದುದೇಕೆ? ಶ್ರೀರಾಮನ ಮುಂದೆ ಇಬ್ಬರೂ ದೋಷಿಗಳು, ಇಬ್ಬರೂ ಶ್ರೀರಾಮನ ಭಕ್ತರು. ಹೀಗಿರುವಾಗ ಶ್ರೀರಾಮನು ಇಲ್ಲಿ ಪಕ್ಷಪಾತವನ್ನೇಕೆ ಮಾಡಿದನು? ಶ್ರೀ ರಾಮನು ಹನುಮಂತನ ಪಕ್ಷಪಾತಿಯು. ಹನುಮಪ್ಪನು ಯಾರ ಕಡೆಗೆ ಇರುತ್ತಾನೋ ಅವರ ಕಡೆಗೇ ದೇವರು ಇರುವುದು. ಯಾರನ್ನು ಬಿಟ್ಟರೂ ಹನುಮಪ್ಪನನ್ನು ಬಿಡಬಾರದು. ವಾಲಿಯು ಹನುಮಪ್ಪನನ್ನು ಬಿಟ್ಟು ಶ್ರೀರಾಮನಲ್ಲಿ ಭಕ್ತಿಯನ್ನು ಮಾಡಿದನು. ಇದೇ ವಾಲಿಯ ನಿಗ್ರಹಕ್ಕೆ ಕಾರಣವಾಯಿತು ಎನ್ನುತ್ತಾರೆ. ಈ ರೀತಿಯಾಗಿ ಉತ್ತರಿಸಿದರೆ ಇಲ್ಲೊಂದು ಪ್ರಶ್ನೆಯು ಏಳುತ್ತದೆ. ಅದೇನೆಂದರೆ ಮುಖ್ಯ ಪ್ರಾಣ ದೇವರನ್ನು ಬಿಟ್ಟು ಏನು ಮಾಡಿದರೂ ಶ್ರೀಹರಿಯು ಪರಿಗ್ರಹಿಸುವುದಿಲ್ಲ ಎಂಬುದು ಎಲ್ಲಾ ಸಾಮಾನ್ಯ ಪುರಾಣ ಪಂಡಿತರೂ ವೈಭವದಿಂದ ಹೇಳುತ್ತಿದ್ದಾರೆ. ಹೀಗಿರುವಾಗ ಮನೋಭಿಮಾನಿ ಎಂಟನೇ ಕಕ್ಷದ ಇಂದ್ರಾಂಶ ಸಂಭೂತನಾದ ವಾಲಿಗೆ ಅದು ಗೊತ್ತಿರಲಿಲ್ಲವೇ? ಗೊತ್ತಿದ್ದರೆ ಯಾಕೆ ಬಿಟ್ಟನು?.

ಇವುಗಳಿಗೆ ಸಮೀಚೀನವಾದ ಉತ್ತರಗಳು ಶ್ರೀಮಧ್ವಾಚಾರ್ಯರ ಗ್ರಂಥಗಳಲ್ಲಿ ಬಿಟ್ಟರೆ ಬೇರೆಲ್ಲೂ ಸಿಕ್ಕಲಾರವು. ಶ್ರೀರಾಮನು ಎದುರಿಗೆ ಬಂದಿದ್ದರೆ ಖಂಡಿತಾ ವಾಲಿಯು ಶರಣಾಗುತ್ತಿದ್ದನು. ಆಗ ಲೋಕ ನೀತಿಯಂತೆ ಅವನನ್ನು ಕೊಲ್ಲಲಾಗುತ್ತಿರಲಿಲ್ಲ. ವಾಲಿಯ ಶರಣಾಗತಿಯು ಹನುಮ ದ್ವೇಷಪುರಸ್ಸರವಾಗಿಯೇ ಇರುತ್ತಿತ್ತು. ಅಂಥಾ ಸೇವೆಯನ್ನು ಶ್ರೀಹರಿಯು ಸ್ವೀಕರಿಸುವುದಿಲ್ಲ. **"ಹರಿಯೇ ನಿನ್ನ ನೆನಸಿ ವೃಕೋದರನ ನೆನಸದವನು । ಹಿರಿಯನಾದರೆ ಏನು। ಕಿರಿಯನಾದರೆ ಏನು। ಥರವಲ್ಲ ಮನ್ನಣೆಗೆ। ಪರಕೆ ದೂರನು ಕಾಣೋ॥"** ಎಂದರು ಶ್ರೀವಿಜಯದಾಸರು. ತಮ್ಮನ ಪತ್ನಿಯನ್ನು ಅಪಹರಿಸಿದ ದೋಷ ನಿಮಿತ್ತ ವಾಲಿಯ ಮುಖಾವಲೋಕನ ತ್ಯಾಜ್ಯವೆಂಬುದು ನೈತಿಕವಾದುದು. ಮುಖ್ಯವಾಗಿ ದೇವತೆಗಳು ಯಾವಕಾಲಕ್ಕೂ ದುಷ್ಕೃತ್ಯಗಳನ್ನು ಮಾಡುವುದಿಲ್ಲ. ಪ್ರಾರಬ್ಧನಿಮಿತ್ತ ಅವರಲ್ಲಿ ಅಸುರಾವೇಶವು ಪ್ರಾಪ್ತವಾಗುತ್ತದೆ. ಅಂಥಾ ಸಂದರ್ಭಗಳಲ್ಲಿ, ದೇವತೆಗಳಿಂದ ತಪ್ಪುಗಳಾಗುತ್ತವೆ. **"ತೇಷಾಂ ದುಃಖಾದಿಕಂ ಕಿಂಚಿತ್। ಅಸುರಾವೇಶತೋ ಭವೇತ್"** ಎಂದು ಶ್ರೀಮಧ್ವಾಚಾಯಾರು ಹೇಳಿರುತ್ತಾರೆ. ಈ ವಾಲಿಯಲ್ಲಿ ತನ್ನಾಮಕ ದೈತ್ಯನ ಆವೇಶವಿದ್ದುದರಿಂದಲೇ ವಾಲಿಗೆ ಹನುಮಂತನಲ್ಲಿ ದ್ವೇಷ ಉಂಟಾಗಿತ್ತು. ದೈತ್ಯರು ಶ್ರೀವಾಯು ದೇವನಲ್ಲಿ ಮಾಡುವಷ್ಟು ದ್ವೇಷವನ್ನು ಮತ್ತಾರಲ್ಲೂ

ಮಾಡುವುದಿಲ್ಲ. ಎಂಟನೇ ಕಕ್ಷದ ಇಂದ್ರಾಂಶನಾದ ವಾಲಿಯು ಅಸುರಾವೇಶದಿಂದ ಎಲ್ಲಾ ವಿಧವಾದ ದುಷ್ಕೃತ್ಯಗಳನ್ನು ಮಾಡಿದನು. ಋಜು ಸಮ್ಮತವಲ್ಲದ ವಾಲಿಯ ಭಕ್ತಿಯು ಶ್ರೀರಾಮನಿಗೆ ಬೇಕಾಗಿರಲಿಲ್ಲ. ತಮ್ಮನ ಪತ್ನಿಯ ಅಪಹರಣ ನಿಮಿತ್ತ ವಾಲಿಗತ ದೈತ್ಯನ ಪುಣ್ಯವು ಹ್ರಾಸವಾಗಿದ್ದುದನ್ನು ಅರಿತ ಶ್ರೀರಾಮನು ವಾಲಿಯ ಸಂಧಾನ ಚಿಂತನೆಯನ್ನು ಬಿಟ್ಟು ತದ್ಗತ ದೈತ್ಯನ ಸಂಹಾರಕ್ಕೆ ಪ್ರಶಸ್ತಿಯನ್ನು ಕೊಟ್ಟು ಶರಣಾಗತಿಗೆ ಅವಕಾಶವನ್ನು ನೀಡದೆ ಅವನನ್ನು ಮರೆಯಲ್ಲಿ ನಿಂತು ನಿಗ್ರಹಿಸಿದನು. ವಾಲಿಗತ ದೈತ್ಯನ ಸಂಹಾರದಿಂದ ಶುದ್ಧಮತಿಯಾದ ವಾಲಿ (ಇಂದ್ರ)ಯು ಶ್ರೀರಾಮನ ದರ್ಶನದಿಂದ ಪುಳಕಿತನಾಗಿ ಪುನಃ ದೂಷಿತ ಶರೀರವನ್ನು ಬಯಸದೆ ಮುಕ್ತನಾಗಿ ಮೂಲವನ್ನು ಸೇರಿದನು. ಇದೇ ಜನ್ಮದಲ್ಲಿ ವಾಲಿಯು ಅಸುರಾವೇಶ ಮುಕ್ತನಾದನು. ಸುಗ್ರೀವನಿಗೆ ಇನ್ನೂ ಆ ಭಾಗ್ಯದ ಬಾಗಿಲು ತೆರೆದಿರಲಿಲ್ಲ, ಆ ತ್ರೇತಾಯುಗದಲ್ಲಿ.

ಇನ್ನು ವಾಲಿಯಷ್ಟೇ ಅಪರಾಧವೆಸಗಿದ ಸುಗ್ರೀವನ ಕಥೆಯನ್ನು ಮುಂದೆ ಕೇಳಿರಿ. ತ್ರೇತಾಯುಗದಲ್ಲಿ ಸುಗ್ರೀವನು ಶ್ರೀರಾಮನಿಂದ ಪಡೆದ ಭಾಗ್ಯವು ವರ್ಣನಾತೀತವಲ್ಲವೇ. ಇದರ ರಹಸ್ಯವೇನು? ಎಂದರೆ ರಾಮಾಯಣದಲ್ಲಿ ವಾಲಿ ಸುಗ್ರೀವರ ವೈರ, ಮಹಾಭಾರತದಲ್ಲಿ ಕರ್ಣಾರ್ಜುನರ ವೈರಗಳು ಪರಾಕಾಷ್ಠೆಯನ್ನು ತಲುಪಿ ವರ್ಣಿತವಾಗಿದೆಯಲ್ಲವೆ? ಇವರಿಬ್ಬರೂ ಬೇರೆಯಲ್ಲ. ಸೂರ್ಯ ಮತ್ತು ಇಂದ್ರರೇ ಆಗಿದ್ದಾರೆ. ತತ್ವಾಭಿಮಾನಿ ಮಟ್ಟದ ದೇವತೆಗಳು ಇವರು. ಅಂದ ಬಳಿಕ ಇವರಲ್ಲೇಕೆ ಇಷ್ಟೊಂದು ವೈರತ್ವ? ಎಂದರೆ ಪೂರ್ವದಲ್ಲಿ ಇಂದ್ರನಿಗೂ ತಮೋಯೋಗ್ಯನಾದ ಸಹಸ್ರವರ್ಮನೆಂಬ ದೈತ್ಯನಿಗೂ ಘೋರವಾದ ಯುದ್ಧವು ನಡೆಯಿತು. ಸ್ವಾಭಾವಿಕವಾಗಿಯೇ ಬಲಶಾಲಿಯಾದ ಇಂದ್ರನು ಸಹಸ್ರವರ್ಮನ ತೋಳುಗಳನ್ನು ಕತ್ತರಿಸಿಬಿಟ್ಟನು. ಇನ್ನೇನು ಅವನ ಶಿರಚ್ಛೇದನವನ್ನು ಮಾಡಬೇಕಾಗಿತ್ತು ಅಷ್ಟರಲ್ಲಿ ಅವನು ಅಲ್ಲಿಂದ ಪಲಾಯನ ಮಾಡಿಬಿಟ್ಟನು ಮತ್ತು ಯೋಚನೆ ಮಾಡುತ್ತ ಈ ಇಂದ್ರನನ್ನು ಏನಾದರೂ ಮಾಡಿ ಸಂಹರಿಸಲೇಬೇಕೆಂದು ಧೃಡ ನಿಶ್ಚಯ ಮಾಡಿದನು. ಅದಕ್ಕೆ ಅವನು ಚಿಂತಿಸಿದ್ದು ತಪೋಬಲವನ್ನು, ಆ ತಪಸ್ಸನ್ನು ಹೇಗೆ ಮಾಡಬೇಕು ಎಂದಾಲೋಚಿಸುತ್ತ ಕೊನೆಗೆ ವಿಶ್ವ ಪರ್ಯಟನೆಯನ್ನು ಮಾಡುತ್ತಿರುವ ಸೂರ್ಯನಲ್ಲಿ ಆವಿಷ್ಟನಾಗಿ ಆತನೊಡನೆ ಭೂಮಂಡಲವನ್ನು ಪ್ರದಕ್ಷಣೆ ಹಾಕುತ್ತ ಪುಣ್ಯವನ್ನು ಸಂಪಾದಿಸಿಕೊಂಡು ಆ ಪುಣ್ಯ ವಿಶೇಷ ಬಲದಿಂದ ಇಂದ್ರನನ್ನು ಸಂಹರಿಸಬೇಕೆಂದು ಹವಣಿಸಿದನು. ಅದೇ ರೀತಿಯಾಗಿ ಅವನು ಸೂರ್ಯನಲ್ಲಿ ಆವಿಷ್ಟನಾದನು. ಸಾಕಷ್ಟು ಪುಣ್ಯವನ್ನು ಸಂಪಾದಿಸಿಕೊಂಡು ಹೊಂಚುಹಾಕುತ್ತ, ಇಂದ್ರನು ವಾಲಿಯಾಗಿ ಅವತಾರ ಮಾಡಲು ತಾನೂ ಸೂರ್ಯನಲ್ಲಿ ಆವಿಷ್ಟನಾಗಿ ಸುಗ್ರೀವ ನಾಮಧೇಯದಿಂದ ವಾಲಿಗೆ ತಮ್ಮನಾಗಿಯೇ ಹುಟ್ಟಿದನು. ಅಸುರಾವೇಶಯುಕ್ತರಾದ ವಾಲಿ ಸುಗ್ರೀವರಿಬ್ಬರೂ ಪರಸ್ಪರ ಅಪರಾಧವನ್ನೆಸಗಲು ದಯಾಮಯನಾದ ಶ್ರೀರಾಮಚಂದ್ರನು ವಾಲಿಯನ್ನು ನಿಮಿತ್ತ ಮಾಡಿಕೊಂಡು ತದ್ಗತ ದೈತ್ಯನನ್ನು ಸಂಹಾರ ಮಾಡಿ ವಾಲಿಯನ್ನು ಮುಕ್ತನನ್ನಾಗಿ ಮಾಡಿದನು. ಇದರಿಂದ ಶ್ರೀರಾಮನು ಸುಗ್ರೀವನಿಗಿಂತಲೂ ಮೊದಲು ವಾಲಿಗೇ ಅನುಗ್ರಹವನ್ನು ಮಾಡಿದನೆಂದು ತಿಳಿಯಬೇಕು.

ಇನ್ನು ಸುಗ್ರೀವನ ಪ್ರಕರಣವು ಹೀಗಿದೆ. ಸಹಸ್ರವರ್ಮನು ಸೂರ್ಯನಲ್ಲಿ ಆವಿಷ್ಟನಾಗಿ ಭೂಪ್ರದಕ್ಷಿಣೆಯಿಂದ ಸಂಪಾದಿತವಾದ ಪುಣ್ಯವು ಈಗ ಅವನಲ್ಲಿ ಇದ್ದುದರಿಂದ ಈಗ ಅವನನ್ನು ನಿಗ್ರಹಿಸುವುದು ಸರಿಯಲ್ಲವೆಂದು ಶ್ರೀರಾಮನು ಬಗೆದನು. ಪರಮಾತ್ಮನಿಗೆ ಯಾವ ವಿಧವಾದ ಪ್ರತಿಬಂಧಕಗಳು ಇಲ್ಲವಾದರೂ ಅವನ ಸತ್ಯಸಂಕಲ್ಪ ಮಾತ್ರದಿಂದ "ಪುಣ್ಯಕ್ಕೆ ಫಲ"ವೆಂಬಂತೆ ತನ್ನ ಮೈತ್ರಿಯನ್ನು ಈ ಅವತಾರದಲ್ಲಿ ಅವನಿಗೆ ನೀಡಿದನು. ತರುವಾಯ

ಅವನಲ್ಲಿ ಆವಿಷ್ಟನಾಗಿದ್ದ ದೈತ್ಯನ ಪುಣ್ಯವು ಸೋತ್ತುಮಾಪರಾಧದಿಂದ ಮಾತ್ರ ನಷ್ಟವಾಗಬೇಕಾಗಿತ್ತು. ಅದು ವಿಸ್ತೃತವಾಗಿ ಸುಗ್ರೀವನ ಅವತಾರ ಪರಿಯಂತವಾಗಿಯೂ ಪ್ರಮಾಣಗೊಂಡಿತ್ತು. ಆದ್ದರಿಂದ ಆ ಪುಣ್ಯವು ನಷ್ಟವಾಗಲೆಂದೇ ಪ್ರಾರಬ್ಧಾನುಸಾರವಾಗಿ ಶಚಿಯ ಅಂಶ ಸಂಭೂತಳಾದ ಜೇಷ್ಠ ಭ್ರಾತೃ ಪತ್ನಿ ತಾರಾದೇವಿಯು ಸುಗ್ರೀವನ ಸಂಪರ್ಕವನ್ನು ಹೊಂದಿ ಕ್ರಮೇಣ ಅವನ ಇಡೀ ಪುಣ್ಯವನ್ನು ನಾಶ ಪಡಿಸಿದಳು. ಇಲ್ಲಿ, ಹಿಂದೆ ಭೃಗು ಮುನಿಗಳ ಸಂಪರ್ಕದಿಂದ ಆರ್ಜಿತವಾದ ಮಹಾಪುಣ್ಯವು ಕಾಲನೇಮಿ ಅಂಶ ಸಂಭೂತನಾದ ಕಂಸನಲ್ಲಿ ನಷ್ಟ ಹೊಂದಬೇಕಾದರೆ ಅವನು ಆರು ಶಿಶುಗಳನ್ನು ಹತ್ಯೆ ಮಾಡಬೇಕಾಗಿತ್ತು. ಅವನ ಕ್ರೌರ್ಯವು ಅವನಿಂದ ಆ ಕಾರ್ಯವನ್ನು ಮಾಡಿಸಿ ಅವನ ಪುಣ್ಯವನ್ನು ಧ್ವಂಸ ಮಾಡಿ ಅವನ ಸಾವಿಗೆ ಕಾರಣವಾದುದನ್ನು ಇಲ್ಲಿ ಸ್ಮರಿಸಬೇಕು. (ಕೆಲಸವನ್ನು ಮಾಡಿದ್ದಕ್ಕೆ ಕೂಲಿಯನ್ನು ಕೊಡಬೇಕು. ಹಾಗೆ ಪಡೆದ ಹಣವು ಯೋಗ್ಯರಿಂದ ಯೋಗ್ಯ ರೀತಿಯಲ್ಲಿ, ಅಯೋಗ್ಯರಿಂದ ಅಯೋಗ್ಯ ರೀತಿಯಲ್ಲಿ ವ್ಯಯವಾಗುತ್ತದೆ. ಜೂಜಾಡಿದವನು ಕಾರಾಗೃಹವನ್ನು ಅನುಭವಿಸುವಂತೆ ದುಷ್ಟರಿಗೆ ವರವೇ ಶಾಪವಾಗಿ ಪರಿಣಮಿಸುತ್ತದೆ).

**"ವಿದ್ಯಾ ತಪೋ ವಿತ್ತ ವಪುರ್ವಯಃ ಕುಲೈ । ಸತಾಂಗಣ ಸಡ್ಭಿರ। ಸತ್ತ ಮಾಮದೈ॥**
**ಸ್ಮ ತೌಹತಾಯಮಭಿಮಾನ ದುರ್ದಶ। ಸ್ತಪ್ತಾನ ಪಶ್ವಂತಿಃ ಧಾಮಭೂಯಸಾಂ॥"**

ಯಥಾಪ್ರಕಾರವಾಗಿ ತಿಳಿದಿರುವಂತೆ ದ್ವಾಪರಯುಗದಲ್ಲಿ ಸುಗ್ರೀವನೇ ದೈತ್ಯವೇಶಯುತನಾಗಿ ಕುಂತೀದೇವಿಯಲ್ಲಿ ಕರ್ಣನಾಗಿ ಹುಟ್ಟಿದನು. ಇಲ್ಲಿ ಶ್ರೀಮದಾಚಾರ್ಯರ ನೀತಿಯನ್ನನುಸರಿಸಿ (ಪರತ್ರಚ ಶಕ್ರ ಸೂನುಂ॥ ೫-೪೮॥) ಕಿಂಚಿತ್ ಭಾರತ ಕಥಾ ಪ್ರಸಂಗವನ್ನು ಪ್ರಮೇಯನಿಮಿತ್ತವಾಗಿ ಇಲ್ಲಿ ವಿವರಿಸಲಾಗಿದೆ.

ದೂರ್ವಾಸ ಮಹಾಮುನಿಗಳು ಬಂದು ಬಾಲೆ ಕುಂತೀ ದೇವಿಗೆ ಸೂರ್ಯ, ಯಮ, ವಾಯು, ಇಂದ್ರ ಮತ್ತು ಅಶ್ವಿನಿ ದೇವತೆಗಳ ಮಂತ್ರಗಳನ್ನು ಉಪದೇಶ ಮಾಡಿ ಆಯಾ ಮಂತ್ರಗಳಿಂದ ಆಯಾ ದೇವತೆಗಳು ಆಕೆಗೆ ಮಕ್ಕಳಾಗಿ ಹುಟ್ಟುತ್ತಾರೆಂದು ಹೇಳಿ ಹೊರಟು ಹೋದರು.

ಇತ್ತ ಕುಂತೀ ದೇವಿಯು ಕನ್ಯಾವಸ್ಥೆಯಲ್ಲಿ ಇರುವಾಗಲೇ ದೂರ್ವಾಸರ ಮಂತ್ರವು ನಿಜವೋ ಸುಳ್ಳೋ ಎಂಬುದನ್ನು ತಿಳಿದು ಕೊಳ್ಳುವ ಅಪೇಕ್ಷೆಯುಳ್ಳವಳಾದಳು. ಆಕೆಯು ಪರೀಕ್ಷಾರ್ಥವಾಗಿ ಸೂರ್ಯಮಂತ್ರವನ್ನು ಜಪಿಸಿದಳು. ತಕ್ಷಣವೇ ಸೂರ್ಯದೇವನು ಬಂದು ಕುಂತೀ ದೇವಿಯ ಕರ್ಣದ್ವಾರ ಜನಿಸಿ ಬಂದು ಕರ್ಣನೆನಿಸಿದನು. ತರುವಾಯ ಕುಂತಿಯು ಲಜ್ಜಾ ಭಯವಿಹ್ವಲಳಾಗಿ ಮಗುವನ್ನು ಗಂಗೆಯಲ್ಲಿ ತೇಲಿ ಬಿಡಲಾಗಿ ಅಧಿರಥನೆಂಬ ಬೆಸ್ತನು ಅವನನ್ನು ಪಡೆದು ಸಾಕಿದನು. ಬೆಸ್ತನ ಹೆಂಡತಿಯಾದ ಸುರಾಧೆಯ ಕೈಯಲ್ಲಿ ಬೆಳೆದವನಾದುದರಿಂದ ಕರ್ಣನು ರಾಧೇಯನೆನಿಸಿದನು.

ಮಹಾಭಾರತ ಕಥಾ ಪ್ರಸಂಗದಲ್ಲಿ ಕುಂತಿಯ ಪಾತ್ರವನ್ನು ಅತ್ಯಂತ ಮನನೀಯವಾಗಿ ವರ್ಣಿಸಲಾಗಿದೆ. ಆಕೆಯ ಕಥೆಯನ್ನು ಕೇಳಿದರೆ ಅಂತಃಕರಣಗಳು ಕರಗಿ ನೀರಾಗುತ್ತವೆ. ಭಕ್ತಿಯ ಮೂರ್ತಿಯೇ ಈ ಕುಂತೀ ದೇವಿಯು. ಹೀಗಿರುವಾಗ ಇಂಥಾ ಮಹಾತ್ಮಳಿಂದ ಸಲ್ಲದ ಗುರುಮಂತ್ರ ಪರೀಕ್ಷಾ ಕುಮತಿಯು ಹೇಗೆ ಉಂಟಾಯಿತು ಎಂಬ ಪ್ರಶ್ನೆಯು ಬರುತ್ತದೆ. ಇದಕ್ಕೆ ಈ ಮೊದಲೇ ಹೇಳಿರುವಂತೆ ಯಾವುದೇ ದೇವತೆಗಳಿಂದ ಒಂದು ಅಕೃತ್ಯವು

ಎಸಗಲ್ಪಟ್ಟಿರುವುದಾದರೆ ಅಲ್ಲಿ ಅಸುರಾವೇಶವು ಸಿದ್ಧವೆಂದು ಪರಿಗಣಿಸಬೇಕು. ದೈತ್ಯರು ಎಲ್ಲೇ ಹುಟ್ಟಲಿ, ಅಲ್ಲಿ ಧರ್ಮಕರ್ಮಗಳ ವಿಕಲ್ಪನೆಯು ಇರುತ್ತದೆ. ಆದಿ ದೈತ್ಯರಾದ ಹಿರಣ್ಯಕಶ್ಯಪ-ಹಿರಣ್ಯಾಕ್ಷರು ಹುಟ್ಟುವಾಗ ಕಶ್ಯಪ-ದಿತಿಯರು ಅಸುರ ಪ್ರೇರಿತರಾಗಿ ದಿವಾ-ರಾತ್ರಿಸಂಧಿ ಸಮಯದಲ್ಲಿ ರಮಿಸಿದರು. ರಾವಣ-ಕುಂಭಕರ್ಣರ ಜನನವೂ ಹಾಗೆಯೇ ವಿಶ್ರವಾ-ಕೈಕಸೆಯರ ಸಂಪರ್ಕವು ನಿಷಿದ್ಧ ಕಾಲದಲ್ಲಿಯೇ ಆಯಿತು. ಕಾಲನೇಮಿಯಾದ ಕಂಸನೂ ಉಗ್ರಸೇನನ ಪತ್ನಿಯಲ್ಲಿ ಅಸುರನಿಂದಲೇ ಜನಿಸಿದನು.

ಇದೇ ರೀತಿಯಾಗಿ ಕುಂತೀ ದೇವಿಯು ಸಹ ಅಸುರಾವೇಶದಿಂದ ಮಂತ್ರ ಪರೀಕ್ಷೆಯನ್ನು ಮಾಡಿದಳು. ದೂರ್ವಾಸರು ಯಾವಾಗ ಸೂರ್ಯ ಮಂತ್ರವನ್ನು ಕುಂತೀದೇವಿಗೆ ಉಪದೇಶ ಮಾಡಿದರೋ ಆ ಕ್ಷಣದಲ್ಲಿಯೇ ಸಹಸ್ರವರ್ಮನು ಕುಂತಿಯಲ್ಲಿ ಆವಿಷ್ಟನಾಗಿ ಆಕೆಗೆ ಮಂತ್ರ ಪರೀಕ್ಷೆಯ ಬುದ್ಧಿಯನ್ನು ಹುಟ್ಟಿಸಿದನು ಮತ್ತು ಒಂದಂಶದಿಂದ ಸೂರ್ಯನಲ್ಲಿಯೂ ಆವಿಷ್ಟನಾಗಿ ಮಂತ್ರೋಚ್ಚಾರಣದ ಫಲರೂಪವಾಗಿ ಕುಂತಿಯಲ್ಲಿ ಹುಟ್ಟಿದನು. ಅದೂ ಕನ್ಯಾವಸ್ಥೆಯಲ್ಲಿ. ದೈತ್ಯರಿಗೆ ಇಂಥಹವುಗಳೇ ಪ್ರಾಶಸ್ತ್ಯಗಳಲ್ಲವೇ? ರಾಮಾಯಣದಲ್ಲಿ ಮಂಥರೆಯು ಒಂದು ರೂಪದಿಂದ ಕೈಕೇಯಿಯಲ್ಲಿ ಆವಿಷ್ಟಳಾಗಿ ಮತ್ತೊಂದು ರೂಪದಿಂದ ಬಾಹ್ಯದಲ್ಲಿ ವಿದುರಿಗೆನಿಂತು ಕೈಕೇಯಿಗೆ ದುರ್ಭೋದನೆಯನ್ನು ಮಾಡಿದಳು. ಹೊರಗಿನಿಂದ ಬೋಧಿಸಿ ಒಳಗಿನಿಂದ ತಾನೇ ಅನುಮೋದಿಸಿ ಕೈಕೇಯಿಯನ್ನು ಗುಣಭ್ರಷ್ಟಳನ್ನಾಗಿ ಮಾಡಿದಳು. "ಪಾವನ ಜೀವಕೆ ತಮಸು ಎಂದಿಗೂ ಇಲ್ಲ", "ನ ದೇವಾನಂ ನರಕ ಧ್ರುವಂ" ಎಂದಂತೆ ಮುಕ್ತಿ ಯೋಗ್ಯಳಾದ ಕೈಕೇಯಿಯ ಸ್ವರೂಪದಿಂದ ಶ್ರೀರಾಮ, ದಶರಥರಿಗೆ ಎಂದೂ ದ್ರೋಹವನ್ನು ಬಗೆಯಲಿಲ್ಲ. ಹಾಗೆ ಮಾಡಿಸಿದ್ದು ತಮೋ ಯೋಗ್ಯಳಾದ ಕಲಿಭಾರ್ಯೆ ಅಲಕ್ಷ್ಮಿ ಅಂಶಳೇ ಆದ ಆ ಮಂಥರೆಯೇ. ಇದೇ ರೀತಿಯಾಗಿ ಸಹಸ್ರವರ್ಮನು ಒಂದಂಶದಿಂದ ಕುಂತಿಯಲ್ಲಿ ಆವಿಷ್ಟನಾಗಿ ಮಂತ್ರವನ್ನು ಪಠಿಸಲು ಪ್ರೇರಿತನಾದನು. ಬಹಿರಂಗದಲ್ಲಿ ಸೂಯಾಂತರ್ಯಾಮಿಯಾಗಿ ಮಂತ್ರವನ್ನು ಅನುಮೋದಿಸಿ ಆಕೆಯಲ್ಲಿ ಸುತತ್ವೇನ ಆವಿರ್ಭವಿಸಿದನು. ಪ್ರಾರಂಭದಲ್ಲಿ ಕುಂತಿಯು ಸೂರ್ಯನನ್ನು ನಿರಾಕರಿಸಿದರೂ ಸಹಸ್ರ ವರ್ಮನ ಆವೇಶದಿಂದ ಸೂರ್ಯನು ಕುಂತಿಯ ಮಂತ್ರವನ್ನು ಸಫಲಗೊಳಿಸಿದನು.

"ಪುರಾ ಸವಾಲಿ ಮಾರಣ ಪ್ರಭೂತ ದೋಷಕಾರಣಾತ್॥<br>
ಸಹಸ್ರವರ್ಮ ನಾಮಿನಾಽ ಸುರೇಣಾವೇಷ್ಟಿತೋಽಜನಿ॥ ತಾ.ನಿ.೧೧-೧೫೬॥"

ಹೀಗೆ ಹುಟ್ಟಿದ ಕರ್ಣನು ಇಂದ್ರನ ಮೇಲಿನ ಪೂರ್ವಾಗ್ರಹದಿಂದ ತದಂಶ ಸಂಭೂತನಾದ ಅರ್ಜುನನ ಮೇಲೆ ಸೇಡನ್ನು ತೀರಿಸಿಕೊಳ್ಳಲು ಸತತ ಪ್ರಯತ್ನವನ್ನು ಮಾಡಿದನು. ಪಾಂಡವರಲ್ಲಿ ಯಾರನ್ನು ಬೇಕಾದರೂ ಬಿಟ್ಟೇನು. ಅರ್ಜುನನನ್ನು ಮಾತ್ರ ಬಿಡುವುದಿಲ್ಲವೆಂದು ಕಠೋರ ಪ್ರತಿಜ್ಞೆಯನ್ನು ಮಾಡಿ, ದುರುದ್ದೇಶ ಪೂರ್ವಕವಾಗಿಯೇ ಬಹು ವಿಧ ದಾನ ಧರ್ಮಗಳನ್ನು ಮಾಡಿದನು. ಆದರೆ ಈ ವೇಳೆಗಾಗಲೇ ಅವನ ಪುಣ್ಯವು ನಷ್ಟವಾಗಿದ್ದುದರಿಂದ ಇವನ ಈ ಕರ್ಣ ಜನ್ಮದಲ್ಲಿ ಅರ್ಜುನನಿಂದಲೇ ಶಿರಚ್ಛೇದವಾಗಿ ಸಹಸ್ರವರ್ಮನ ಸಂಹಾರವಾಯಿತು. ಸೂರ್ಯನು ಆ ದೈತ್ಯನ ಆವೇಶದಿಂದ ಮುಕ್ತನಾದನು ಮತ್ತು ಮೂಲದಲ್ಲಿ ಅಂತರ್ಧಾನಾದನು.

ಯಾವ ಸಹಸ್ರವರ್ಮನ ಪುಣ್ಯವನ್ನು ನಾಶಮಾಡಿ ತನ್ನ ಪತಿಯಾದ ಇಂದ್ರನ ಜಯಕ್ಕೆ ಕಾರಣೀಭೂತಳಾದ

ವಾಲಿ ಪತ್ನಿ ಎನಿಸಿದ ತಾರಾದೇವಿಯು ಮಹಾಪತಿವ್ರತೆ ಎನಿಸಿ ಪ್ರಾತಃ ಸ್ಮರಣೀಯಳಾದಳು. ಸುಗ್ರೀವನಲ್ಲಿ ಇಂದ್ರಾವೇಶವೂ ಇತ್ತು. ಸೂರ್ಯನು ಉದಯಿಸುವ ಪೂರ್ವ ದಿಕ್ಪತಿಯು ಇಂದ್ರನೇ. ನಿಯತ ಪತಿ-ಪತ್ನಿನ್ಯಾಯದಿಂದ ಸುಗ್ರೀವನ (ಸೂರ್ಯ) ಮತ್ತು ಸಹಸ್ರವರ್ಮನ ಸಂಪರ್ಕವು ತಾರೆಗೆ ಇರಲೇ ಇಲ್ಲ ಬಾಹ್ಯ ಅಪವಾದ ಮಾತ್ರದಿಂದ ದೈತ್ಯನ ಪುಣ್ಯವು ನಾಶವಾಯಿತು. ದ್ವಾಪರದಲ್ಲಿ ಅವನ ಸಂಹಾರವಾಯಿತು.

ಇಷ್ಟು ಅಂಶದಿಂದ ತಿಳಿದು ಬರುವ ಅಂಶವೆಂದರೆ ಪರಮಾತ್ಮನು ಅಚ್ಛಿನ್ನ ಭಕ್ತನಾದ ಹನುಮಂತನ ಪಕ್ಷಪಾತಿಯು. ಹನುಮಂತನಿದ್ದರೆ ಶ್ರೀರಾಮ. "ಹನುಮನ ಮತವೇ ಹರಿಯಾ ಮತವು। ಹರಿಯಾ ಮತವೇ ಹನುಮನ ಮತವು"

**ಹರೇರ್ವಿರುದ್ಧಂ ನಕರೋತಿ ವಾಯುಃ ॥ ವಾಯೋರ್ವಿರುದ್ಧಂ ನಕರೋತಿದೇವಃ ॥**

ಎಂದಂತೆ ಹನುಮಂತನನ್ನು ಆಶ್ರೈಸಿದ ಸುಗ್ರೀವನು ಶ್ರೀಹರಿಗೆ ಪ್ರೀತನಾಗಿದ್ದ. ಆದರೆ ವಾಲಿಯು ಹನುಮಂತನನ್ನು ಬಿಟ್ಟಿದ್ದು ಅಸುರಾವೇಶದಿಂದ ಹೊರತಾಗಿ ಬೇರೆಯಲ್ಲ. ವಾಲಿಯಲ್ಲಿ ಆ ಅಸುರಾವೇಶವು ಪ್ರಚುರವಾಗಿತ್ತು. ಅದಕ್ಕೇನೇ ಶ್ರೀರಾಮನು ಶೀಘ್ರವಾಗಿ ವಾಲಿಯನ್ನು ನಿಗ್ರಹಿಸಿ ಅಸುರಾವೇಶದಿಂದ ಮುಕ್ತನನ್ನಾಗಿ ಮಾಡಿದನು. ಆದರೆ ಸುಗ್ರೀವನಲ್ಲಿ ಅಸುರಾವೇಶವು ಸುಪ್ತವಾಗಿತ್ತು. ಆದ್ದರಿಂದ ಹನುಮಪ್ಪನನ್ನು ಆಶ್ರೈಸಿ ಇದ್ದನು. ಅದಕ್ಕೇ ಗೆದ್ದನು.

ಆದರೆ ದ್ವಾಪರಯುಗದಲ್ಲಿ ವಾಲಿಯೇ ಅರ್ಜುನನಾಗಿ ಹುಟ್ಟಿ ಭೀಮನನ್ನು ಆಶ್ರೈಸಿ ಶ್ರೀಕೃಷ್ಣನ ಪರಮಾನುಗ್ರಹಕ್ಕೆ ಪಾತ್ರನಾಗಿ ಧನ್ಯನೆನಿಸಿದನು. ಆದರೆ ಅದೇ ಸುಗ್ರೀವನು ಸಹಸ್ರವರ್ಮನ ಪ್ರಚುರ ಆವೇಶದಿಂದ ಮತ್ತನಾಗಿ ಭೀಮನನ್ನು ಬಿಟ್ಟು ದುಷ್ಟ ದುರ್ಯೋಧನನ ಪಕ್ಷವನ್ನು ಸೇರಿ ನಷ್ಟ ಪುಣ್ಯಘಟಿತ ಪಾಪಗಳಿಂದ ಸಂಹರಿಸಲ್ಪಟ್ಟನು. ಆದಾಗ್ಯೂ ಮುಕ್ತಿ ಯೋಗ್ಯನಾದ ಸೂರ್ಯನು ರಾಹು ಮುಕ್ತನಾದ ಸೂರ್ಯನಂತೆ ಸಹಸ್ರವರ್ಮನ ಆವೇಶದಿಂದ ಮುಕ್ತನಾದನು. ಸೂರ್ಯನು ತನ್ನ ಮೂಲದಲ್ಲಿ ಸೇರಿಕೊಂಡು ಮುಕ್ತಿ ಸಾಧನೆಯಲ್ಲಿ ತೊಡಗಿದನು. ಸಹಸ್ರವರ್ಮನು ಈ ಒಂದಂಶದಿಂದ ತಮೋದ್ವಾರದಲ್ಲಿ ಇಂದಿಗೂ ಬಿದ್ದಿರುವನು. ಅವನ ಕಲ್ಪಸಾಧನವು ಮುಗಿದ ಮೇಲೆ ಮೂಲರೂಪೀ ದೈತ್ಯನು ತಮೋದ್ವಾರವನ್ನು ತಲುಪಿದಾಗ ಆ ಮೂಲದಲ್ಲಿ ಈ ಅಂಶವು ಐಕ್ಯವನ್ನು ಹೊಂದಿ ವಾಯುದೇವರ ಗದಾ ಪ್ರಹಾರದಿಂದ ಲಿಂಗ ಭಂಗವನ್ನು ಹೊಂದಿ ಅಂಧಂತಮಸ್ಸನ್ನು ಸೇರುವನು.

ಹೀಗೆ ವಾಲಿಯು ಹನುಮಂತನನ್ನು ಅಸುರಾವೇಶದಿಂದ ಮಾತ್ರ ಬಿಟ್ಟಿದ್ದನೇ ಹೊರತು ಸ್ವರೂಪದಿಂದ ಅಲ್ಲವೆಂದು ತಿಳಿಯಬೇಕು. ಇಷ್ಟು ಮಾತ್ರದಿಂದಲೇ ಇದರ ಪರಿಣಾಮವು ಇಷ್ಟು ದೀರ್ಘವಾಗಿ ಪರಿಣಮಿಸಿತು.

ಮುಂದೆ ಪರಮಾತ್ಮನಿಗೆ, ಅರ್ಥಾತ್ ಶ್ರೀರಾಮನಿಗೆ ಸೀತೆಯನ್ನು ಹುಡುಕುವುದಕ್ಕೆ ಮತ್ತು ಸೇತುವೆಯನ್ನು ಕಟ್ಟಿ ದೈತ್ಯರೊಡನೆ ಯುದ್ಧಮಾಡಿ ಅವರನ್ನು ಸಂಹಾರ ಮಾಡಿ ಸೀತೆಯನ್ನು ಮರಳಿ ಪಡೆಯುವುದಕ್ಕೆ ವಾನರ, ಕರಡಿ, ದೈತ್ಯರ (ವಿಭೀಷಣ) ಸಹಾಯವು ಬೇಕಾಗಿತ್ತೇ?

ಎಸಗಲ್ಪಟ್ಟಿರುವುದಾದರೆ ಅಲ್ಲಿ ಅಸುರಾವೇಶವು ಸಿದ್ಧವೆಂದು ಪರಿಗಣಿಸಬೇಕು. ದೈತ್ಯರು ಎಲ್ಲೇ ಹುಟ್ಟಲಿ, ಅಲ್ಲಿ ಧರ್ಮಕರ್ಮಗಳ ವಿಕಲ್ಪನೆಯು ಇರುತ್ತದೆ. ಆದಿ ದೈತ್ಯರಾದ ಹಿರಣ್ಯಕಶ್ಯಪ-ಹಿರಣ್ಯಾಕ್ಷರು ಹುಟ್ಟುವಾಗ ಕಶ್ಯಪ-ದಿತಿಯರು ಅಸುರ ಪ್ರೇರಿತರಾಗಿ ದಿವಾ-ರಾತ್ರಿಸಂಧಿ ಸಮಯದಲ್ಲಿ ರಮಿಸಿದರು. ರಾವಣ-ಕುಂಭಕರ್ಣರ ಜನನವೂ ಹಾಗೆಯೇ ವಿಶ್ರವಾ-ಕೈಕಸೆಯರ ಸಂಪರ್ಕವು ನಿಷಿದ್ಧ ಕಾಲದಲ್ಲಿಯೇ ಆಯಿತು. ಕಾಲನೇಮಿಯಾದ ಕಂಸನೂ ಉಗ್ರಸೇನನ ಪತ್ನಿಯಲ್ಲಿ ಅಸುರನಿಂದಲೇ ಜನಿಸಿದನು.

ಇದೇ ರೀತಿಯಾಗಿ ಕುಂತೀ ದೇವಿಯು ಸಹ ಅಸುರಾವೇಶದಿಂದ ಮಂತ್ರ ಪರೀಕ್ಷೆಯನ್ನು ಮಾಡಿದಳು. ದೂರ್ವಾಸರು ಯಾವಾಗ ಸೂರ್ಯ ಮಂತ್ರವನ್ನು ಕುಂತೀದೇವಿಗೆ ಉಪದೇಶ ಮಾಡಿದರೋ ಆ ಕ್ಷಣದಲ್ಲಿಯೇ ಸಹಸ್ರವರ್ಮನು ಕುಂತಿಯಲ್ಲಿ ಆವಿಷ್ಟನಾಗಿ ಆಕೆಗೆ ಮಂತ್ರ ಪರೀಕ್ಷೆಯ ಬುದ್ಧಿಯನ್ನು ಹುಟ್ಟಿಸಿದನು ಮತ್ತು ಒಂದಂಶದಿಂದ ಸೂರ್ಯನಲ್ಲಿಯೂ ಆವಿಷ್ಟನಾಗಿ ಮಂತ್ರೋಚ್ಚಾರಣದ ಫಲರೂಪವಾಗಿ ಕುಂತಿಯಲ್ಲಿ ಹುಟ್ಟಿದನು. ಅದೂ ಕನ್ಯಾವಸ್ಥೆಯಲ್ಲಿ. ದೈತ್ಯರಿಗೆ ಇಂಥಹವುಗಳೇ ಪ್ರಾಶಸ್ತ್ಯಗಳಲ್ಲವೇ? ರಾಮಾಯಣದಲ್ಲಿ ಮಂಥರೆಯು ಒಂದು ರೂಪದಿಂದ ಕೈಕೇಯಿಯಲ್ಲಿ ಆವಿಷ್ಟಳಾಗಿ ಮತ್ತೊಂದು ರೂಪದಿಂದ ಬಾಹ್ಯದಲ್ಲಿ ವಿದುರಿಗೆನಿಂತು ಕೈಕೇಯಿಗೆ ದುರ್ಭೋದನೆಯನ್ನು ಮಾಡಿದಳು. ಹೊರಗಿನಿಂದ ಬೋಧಿಸಿ ಒಳಗಿನಿಂದ ತಾನೇ ಅನುಮೋದಿಸಿ ಕೈಕೇಯಿಯನ್ನು ಗುಣಭ್ರಷ್ಟಳನ್ನಾಗಿ ಮಾಡಿದಳು. "ಪಾವನ ಜೀವಕೆ ತಮಸು ಎಂದಿಗೂ ಇಲ್ಲ", "ನ ದೇವಾನಂ ನರಕ ಧ್ರುವಂ" ಎಂದಂತೆ ಮುಕ್ತಿ ಯೋಗ್ಯಳಾದ ಕೈಕೇಯಿಯ ಸ್ವರೂಪದಿಂದ ಶ್ರೀರಾಮ, ದಶರಥರಿಗೆ ಎಂದೂ ದ್ರೋಹವನ್ನು ಬಗೆಯಲಿಲ್ಲ. ಹಾಗೆ ಮಾಡಿಸಿದ್ದು ತಮೋ ಯೋಗ್ಯಳಾದ ಕಲಿಭಾರ್ಯೆ ಅಲಕ್ಷ್ಮಿ ಅಂಶಳೇ ಆದ ಆ ಮಂಥರೆಯೇ. ಇದೇ ರೀತಿಯಾಗಿ ಸಹಸ್ರವರ್ಮನು ಒಂದಂಶದಿಂದ ಕುಂತಿಯಲ್ಲಿ ಆವಿಷ್ಟನಾಗಿ ಮಂತ್ರವನ್ನು ಪಠಿಸಲು ಪ್ರೇರಿತನಾದನು. ಬಹಿರಂಗದಲ್ಲಿ ಸೂಯಾಂತರ್ಯಾಮಿಯಾಗಿ ಮಂತ್ರವನ್ನು ಅನುಮೋದಿಸಿ ಆಕೆಯಲ್ಲಿ ಸುತತ್ವೇನ ಆವಿರ್ಭವಿಸಿದನು. ಪ್ರಾರಂಭದಲ್ಲಿ ಕುಂತಿಯು ಸೂರ್ಯನನ್ನು ನಿರಾಕರಿಸಿದರೂ ಸಹಸ್ರ ವರ್ಮನ ಆವೇಶದಿಂದ ಸೂರ್ಯನು ಕುಂತಿಯ ಮಂತ್ರವನ್ನು ಸಫಲಗೊಳಿಸಿದನು.

**"ಪುರಾ ಸವಾಲಿ ಮಾರಣ ಪ್ರಭೂತ ದೋಷಕಾರಣಾತ್॥**
**ಸಹಸ್ರವರ್ಮ ನಾಮಿನಾಽ ಸುರೇಣಾವೇಷ್ಟಿತೋಽಜನಿ॥ ತಾ.ನಿ.೧೧-೧೫೬॥"**

ಹೀಗೆ ಹುಟ್ಟಿದ ಕರ್ಣನು ಇಂದ್ರನ ಮೇಲಿನ ಪೂರ್ವಾಗ್ರಹದಿಂದ ತದಂಶ ಸಂಭೂತನಾದ ಅರ್ಜುನನ ಮೇಲೆ ಸೇಡನ್ನು ತೀರಿಸಿಕೊಳ್ಳಲು ಸತತ ಪ್ರಯತ್ನವನ್ನು ಮಾಡಿದನು. ಪಾಂಡವರಲ್ಲಿ ಯಾರನ್ನು ಬೇಕಾದರೂ ಬಿಟ್ಟೇನು. ಅರ್ಜುನನನ್ನು ಮಾತ್ರ ಬಿಡುವುದಿಲ್ಲವೆಂದು ಕಠೋರ ಪ್ರತಿಜ್ಞೆಯನ್ನು ಮಾಡಿ, ದುರುದ್ದೇಶ ಪೂರ್ವಕವಾಗಿಯೇ ಬಹು ವಿಧ ದಾನ ಧರ್ಮಗಳನ್ನು ಮಾಡಿದನು. ಆದರೆ ಈ ವೇಳೆಗಾಗಲೇ ಅವನ ಪುಣ್ಯವು ನಷ್ಟವಾಗಿದ್ದುದರಿಂದ ಇವನ ಈ ಕರ್ಣ ಜನ್ಮದಲ್ಲಿ ಅರ್ಜುನನಿಂದಲೇ ಶಿರಚ್ಛೇದವಾಗಿ ಸಹಸ್ರವರ್ಮನ ಸಂಹಾರವಾಯಿತು. ಸೂರ್ಯನು ಆ ದೈತ್ಯನ ಆವೇಶದಿಂದ ಮುಕ್ತನಾದನು ಮತ್ತು ಮೂಲದಲ್ಲಿ ಅಂತರ್ಧಾನಾದನು.

ಯಾವ ಸಹಸ್ರವರ್ಮನ ಪುಣ್ಯವನ್ನು ನಾಶಮಾಡಿ ತನ್ನ ಪತಿಯಾದ ಇಂದ್ರನ ಜಯಕ್ಕೆ ಕಾರಣೀಭೂತಳಾದ

ವಾಲಿ ಪತ್ನಿ ಎನಿಸಿದ ತಾರಾದೇವಿಯು ಮಹಾಪತಿವ್ರತೆ ಎನಿಸಿ ಪ್ರಾತಃ ಸ್ಮರಣೀಯಳಾದಳು. ಸುಗ್ರೀವನಲ್ಲಿ ಇಂದ್ರಾವೇಶವೂ ಇತ್ತು. ಸೂರ್ಯನು ಉದಯಿಸುವ ಪೂರ್ವ ದಿಕ್ಪತಿಯು ಇಂದ್ರನೇ. ನಿಯತ ಪತಿ-ಪತ್ನಿನ್ಯಾಯದಿಂದ ಸುಗ್ರೀವನ (ಸೂರ್ಯ) ಮತ್ತು ಸಹಸ್ರವರ್ಮನ ಸಂಪರ್ಕವು ತಾರೆಗೆ ಇರಲೇ ಇಲ್ಲ ಬಾಹ್ಯ ಅಪವಾದ ಮಾತ್ರದಿಂದ ದೈತ್ಯನ ಪುಣ್ಯವು ನಾಶವಾಯಿತು. ದ್ವಾಪರದಲ್ಲಿ ಅವನ ಸಂಹಾರವಾಯಿತು.

ಇಷ್ಟು ಅಂಶದಿಂದ ತಿಳಿದು ಬರುವ ಅಂಶವೆಂದರೆ ಪರಮಾತ್ಮನು ಅಭಿನ್ನ ಭಕ್ತನಾದ ಹನುಮಂತನ ಪಕ್ಷಪಾತಿಯು. ಹನುಮಂತನಿದ್ದರೆ ಶ್ರೀರಾಮ. "ಹನುಮನ ಮತವೇ ಹರಿಯಾ ಮತವು। ಹರಿಯಾ ಮತವೇ ಹನುಮನ ಮತವು"

**ಹರೇರ್ವಿರುದ್ಧಂ ನಕರೋತಿ ವಾಯುಃ ॥ ವಾಯೋರ್ವಿರುದ್ಧಂ ನಕರೋತಿದೇವಃ ॥**

ಎಂದಂತೆ ಹನುಮಂತನನ್ನು ಆಶ್ರೈಸಿದ ಸುಗ್ರೀವನು ಶ್ರೀಹರಿಗೆ ಪ್ರೀತನಾಗಿದ್ದ. ಆದರೆ ವಾಲಿಯು ಹನುಮಂತನನ್ನು ಬಿಟ್ಟಿದ್ದು ಅಸುರಾವೇಶದಿಂದ ಹೊರತಾಗಿ ಬೇರೆಯಲ್ಲ. ವಾಲಿಯಲ್ಲಿ ಆ ಅಸುರಾವೇಶವು ಪ್ರಚುರವಾಗಿತ್ತು. ಅದಕ್ಕೇನೇ ಶ್ರೀರಾಮನು ಶೀಘ್ರವಾಗಿ ವಾಲಿಯನ್ನು ನಿಗ್ರಹಿಸಿ ಅಸುರಾವೇಶದಿಂದ ಮುಕ್ತನನ್ನಾಗಿ ಮಾಡಿದನು. ಆದರೆ ಸುಗ್ರೀವನಲ್ಲಿ ಅಸುರಾವೇಶವು ಸುಪ್ತವಾಗಿತ್ತು. ಆದ್ದರಿಂದ ಹನುಮಪ್ಪನನ್ನು ಆಶ್ರೈಸಿ ಇದ್ದನು. ಅದಕ್ಕೇ ಗೆದ್ದನು.

ಆದರೆ ದ್ವಾಪರಯುಗದಲ್ಲಿ ವಾಲಿಯೇ ಅರ್ಜುನನಾಗಿ ಹುಟ್ಟಿ ಭೀಮನನ್ನು ಆಶ್ರೈಸಿ ಶ್ರೀಕೃಷ್ಣನ ಪರಮಾನುಗ್ರಹಕ್ಕೆ ಪಾತ್ರನಾಗಿ ಧನ್ಯನೆನಿಸಿದನು. ಆದರೆ ಅದೇ ಸುಗ್ರೀವನು ಸಹಸ್ರವರ್ಮನ ಪ್ರಚುರ ಆವೇಶದಿಂದ ಮತ್ತನಾಗಿ ಭೀಮನನ್ನು ಬಿಟ್ಟು ದುಷ್ಟ ದುರ್ಯೋಧನನ ಪಕ್ಷವನ್ನು ಸೇರಿ ನಷ್ಟ ಪುಣ್ಯಘಟಿತ ಪಾಪಗಳಿಂದ ಸಂಹರಿಸಲ್ಪಟ್ಟನು. ಆದಾಗ್ಯೂ ಮುಕ್ತಿ ಯೋಗ್ಯನಾದ ಸೂರ್ಯನು ರಾಹು ಮುಕ್ತನಾದ ಸೂರ್ಯನಂತೆ ಸಹಸ್ರವರ್ಮನ ಆವೇಶದಿಂದ ಮುಕ್ತನಾದನು. ಸೂರ್ಯನು ತನ್ನ ಮೂಲದಲ್ಲಿ ಸೇರಿಕೊಂಡು ಮುಕ್ತಿ ಸಾಧನೆಯಲ್ಲಿ ತೊಡಗಿದನು. ಸಹಸ್ರವರ್ಮನು ಈ ಒಂದಂಶದಿಂದ ತಮೋದ್ವಾರದಲ್ಲಿ ಇಂದಿಗೂ ಬಿದ್ದಿರುವನು. ಅವನ ಕಲ್ಪಸಾಧನವು ಮುಗಿದ ಮೇಲೆ ಮೂಲರೂಪೀ ದೈತ್ಯನು ತಮೋದ್ವಾರವನ್ನು ತಲುಪಿದಾಗ ಆ ಮೂಲದಲ್ಲಿ ಈ ಅಂಶವು ಐಕ್ಯವನ್ನು ಹೊಂದಿ ವಾಯುದೇವರ ಗದಾ ಪ್ರಹಾರದಿಂದ ಲಿಂಗ ಭಂಗವನ್ನು ಹೊಂದಿ ಅಂಧಂತಮಸ್ಸನ್ನು ಸೇರುವನು.

ಹೀಗೆ ವಾಲಿಯು ಹನುಮಂತನನ್ನು ಅಸುರಾವೇಶದಿಂದ ಮಾತ್ರ ಬಿಟ್ಟಿದ್ದನೇ ಹೊರತು ಸ್ವರೂಪದಿಂದ ಅಲ್ಲವೆಂದು ತಿಳಿಯಬೇಕು. ಇಷ್ಟು ಮಾತ್ರದಿಂದಲೇ ಇದರ ಪರಿಣಾಮವು ಇಷ್ಟು ದೀರ್ಘವಾಗಿ ಪರಿಣಮಿಸಿತು.

ಮುಂದೆ ಪರಮಾತ್ಮನಿಗೆ, ಅರ್ಥಾತ್ ಶ್ರೀರಾಮನಿಗೆ ಸೀತೆಯನ್ನು ಹುಡುಕುವುದಕ್ಕೆ ಮತ್ತು ಸೇತುವೆಯನ್ನು ಕಟ್ಟಿ ದೈತ್ಯರೊಡನೆ ಯುದ್ಧಮಾಡಿ ಅವರನ್ನು ಸಂಹಾರ ಮಾಡಿ ಸೀತೆಯನ್ನು ಮರಳಿ ಪಡೆಯುವುದಕ್ಕೆ ವಾನರ, ಕರಡಿ, ದೈತ್ಯರ (ವಿಭೀಷಣ) ಸಹಾಯವು ಬೇಕಾಗಿತ್ತೇ?

"ಕ್ವಾಜ್ಞಾನಮಾಪದಪಿ ಮಂದ ಕಟಾಕ್ಷ ಮಾತ್ರಾತ್।
ಸರ್ಗಸ್ಥಿತಿ ಪ್ರಲಯ ಸಂಸೃತಿ ಮೋಕ್ಷಹೇತೋಃ॥
ದೇವ್ಯಾಹರೇಃ ಕಿಮು ವಿಡಂಬನ ಮಾತ್ರಮೇತತ್।
ವಿಕ್ರೀಡಿತೋಃ ಸುರ ನರಾದಿವ ದೇವತಸ್ಮಾತ್॥ ತಾ.ನಿ.೫–೩೯ ॥"

ಯಾವ ಮಹಾಲಕ್ಷ್ಮೀದೇವಿಯ ಕುಡಿಗಣ್ಣ ಕೃಪಾಕಟಾಕ್ಷ ಮಾತ್ರದಿಂದಲೇ ಜಗತ್ತಿನಲ್ಲಿ ಸೃಷ್ಟಿ ಸ್ಥಿತಿ ಲಯಾದಿಗಳು ಉಂಟಾಗುತ್ತವೋ ಅಂಥಾ ಲಕ್ಷ್ಮೀದೇವಿಗೇನೆ ಯಾವ ವಿಧವಾದ ಅಜ್ಞಾನ ಆಪತ್ತುಗಳು ಸುತಾರಂ ಇಲ್ಲ. ಇದಿರಲಿ ಶ್ರೀಹರಿ ಭಕ್ತರಿಗೇ ಇವು ಇಲ್ಲದಿರುವಾಗ, ಶ್ರೀ ಮಹಾಲಕ್ಷ್ಮೀ ದೇವಿಗೂ ಪೂಜ್ಯನಾದ ಶ್ರೀಹರಿಗೆ ಎಲ್ಲಿಯಾದರೂ ದುಃಖ ಉಂಟೇ? ಆತನಿಗೆ ಇನ್ನೊಬ್ಬರ ಸಹಾಯವು ಬೇಕೇ? ಎಂದಿಗೂ ಇಲ್ಲ.

"ವಿಶ್ವ ಸ್ಥಿತಿ ಪ್ರಳಯ ಸರ್ಗ ಮಹಾಭೂತಿವೃತ್ತಿ ಪ್ರಕಾಶ ನಿಯಮಾವೃತ ಬಂಧಮೋಕ್ಷಾಃ॥ ಯಸ್ಯಾಪಾಂಗಲವ ಮಾತ್ರತ ಊರ್ಜಿತಸಾ ಶ್ರೀರ್ಯತ್ಕಟಾಕ್ಷ ಬಲವತ್ಯ ಜಿತಂನಮಾಮಿ॥ ದ್ವಾಸ್ತೋ ೭–೧ ॥"

ಹಾಗಾದರೆ ಶ್ರೀರಾಮನು ಕಪಿವೀರರನ್ನೆಲ್ಲಾ ಸೇರಿಸಿದ್ದು ಯಾಕೆ? ಎಂದರೆ ಶ್ರೀರಾಮನಲ್ಲಿ ಏನೂ ಬಲವಿರಲಿಲ್ಲ. ಅವನೊಬ್ಬಯಕಃಶ್ಚಿತ್ ಮನುಷ್ಯನು. ಇವರ ಸಹಾಯದಿಂದಲೇ ಶ್ರೀರಾಮನು ತನ್ನ ಪತ್ನಿಯನ್ನು ಮರಳಿ ಪಡೆದನು ಎಂಬ ಅಯಥಾರ್ಥ ಜ್ಞಾನವು ದೈತ್ಯರಿಗೆ ಆಗಬೇಕೆಂದು ಆತನು ಹಾಗೆ ನಟಿಸಿದನು ಮತ್ತು ತನ್ನನ್ನು ನಂಬಿದ ಭಕ್ತ ಜನರ ಉದ್ಧಾರಾರ್ಥವಾಗಿ ಅವರಿಂದ ಸೇವೆಯನ್ನು ಸ್ವೀಕರಿಸಿದನು. "ದುರ್ಜನರ ಸೇವೆಯನೊಲ್ಲನ ಪ್ರತಿಮಲ್ಲ ಜಗಕೆಲ್ಲ॥ಹ.ಕಸಾ.॥"

ಹೇಗೆ ಪರಮಾತ್ಮನು ಮಂದ ಮತಿಗಳಾದ ದೈತ್ಯರನ್ನು ಮೋಹಿಸಲಿಕ್ಕಾಗಿ ಹೀಗೆ ನಟಿಸಿದನೋ ಅದೇ ಪ್ರಕಾರವಾಗಿ ಆತನ ಪ್ರೀತಿಗೆ ಅನುಗುಣವಾಗಿ ಹನುಮಂತನು ಸಹ ಮಹಾ ಶ್ರಮ ಪಟ್ಟವನಂತೆ ನಟಿಸಿ ದೈತ್ಯರನ್ನು ಮೋಹಗೊಳಿಸಿದನು.

ಆಮೇಲೆ ಪರಿಶುದ್ಧನೇ ಆಗಿದ್ದರೂ ವಂಚಕರಿಗೆ ವಂಚಕನಾದ ಆ ಹನುಮಂತನು ಸ್ನಾನ ಮಾಡಿ ಮಡಿಯಿಂದಲೇ ಬಂದನು. ನೋಡು ನೋಡುತ್ತ ಒಬ್ಬೊಬ್ಬನನ್ನೇ ಹಿಡಿದು ಮುಷ್ಟಿ ಪ್ರಹಾರವನ್ನು ನೀಡಲಾಗಿ ಕಾಲನೇಮಿಯನ್ನೊಳಗೊಂಡು ಅಲ್ಲಿದ್ದ ಸಮಸ್ತ ದೈತ್ಯರೆಲ್ಲರೂ ಮಡಿದರು. ಇಷ್ಟು ಕಾರ್ಯವನ್ನು ಮಾಡಿದ ಹನುಮಂತನು ಕ್ಷಣಾರ್ಧದಲ್ಲಿ ಇಡೀ ಸಂಜೀವನ ಪರ್ವತವನ್ನೇ ಕಿತ್ತಿ ತಂದು ಶ್ರೀರಾಮನ ಮುಂದಿರಿಸಿದನು. ಭಲೇ ಎಂದಿತು ಕಪಿ ಸ್ತೋಮ. ಇಲ್ಲಿ ಒಂದು ಮಾತು. ಸುಷೇಣನು ಹನುಮಂತನಿಗೆ ಹೇಳಿದ್ದು ಕೇಲವ ಒಂದು ಸಂಜೀವಿನಿ ಕಡ್ಡಿಯನ್ನು ಮಾತ್ರ ತರಲು. ಹೀಗಿದ್ದ ಮೇಲೆ ಮಾರುತಿಯು ಇಡೀ ಪರ್ವತವನ್ನೇ ಏಕೆ ತರಬೇಕಾಗಿತ್ತು? ಎಂದರೆ ಈ ಹನುಮಂತನಿಗೆ ಕಡ್ಡಿ ಎಷ್ಟೋ ಗುಡ್ಡವೂ ಅಷ್ಟೆ. ಹೆಚ್ಚಿನ ಶ್ರಮ, ಕಾಲ ವಿಳಂಬದ ಸಮಸ್ಯೆಯು ಆತನಿಗೆ ಇರಲಿಲ್ಲ. ಸುಷೇಣನು ಹೇಳಿದಂತೆ ಬರೀ ಕಡ್ಡಿಯನ್ನಷ್ಟೇ ತಂದಿದ್ದರೆ ಕೇವಲ ಲಕ್ಷ್ಮಣನು ಮಾತ್ರ ಬದುಕುತ್ತಿದ್ದನು. ಆದರೆ ಜೀವೋತ್ತಮನಾದ ಹನುಮಂತನಿಗೆ ಉಳಿದ ಕಪಿಗಳೆಲ್ಲರನ್ನೂ ಬದುಕಿಸಬೇಕೆಂಬ ಹಂಬಲವಿತ್ತು. ಈ ಋಜುಪ್ರಜ್ಞೆಯು ಪಾಪ! ಸುಷೇಣನಿಗೆ ಎಲ್ಲಿಂದ ಬರಬೇಕು. ಆ ಕೆಲಸವನ್ನು ಮಾರುತಿಯು ಮಾಡಿದನು. ಸುಷೇಣನು ಪ್ರಾಪ್ತವಾದ ಮೂಲಿಕೆಯಿಂದ ಲಕ್ಷ್ಮಣನನ್ನು ಎಚ್ಚರಗೊಳಿಸಿದನು ಮತ್ತು ಪರ್ವತದ ಔಷಧಮಯವಾದ ಗಾಳಿಯು ಬೀಸಿದುದರಿಂದ ಮೂರ್ಛಿತರಾಗಿದ್ದ ಸಕಲ ಕಪಿವೀರರೂ ಬದುಕಿ ಬಿಟ್ಟರು. ಆದರೆ ರಾಮನ ಸೈನಿಕರಿಂದ ಹತರಾಗಿದ್ದ ರಾಕ್ಷಸರನ್ನೆಲ್ಲಾ ವಿಭೀಷಣನ ಸಲಹೆಯಂತೆ ಸಮುದ್ರಕ್ಕೆ ಎಸೆದು ಬಿಟ್ಟಿದ್ದುದರಿಂದ ಅವರಾರೂ ಪುನಃ ಬದುಕಲಿಲ್ಲ.

ಲಕ್ಷ್ಮಣನು ಮೂರ್ಛೆ ಹೋಗಿದ್ದಾಗ ಲಕ್ಷ್ಮಣನನ್ನು ಅಪಹರಿಸಲು ದೈತ್ಯರು ಬಹು ಶ್ರಮ ಪಟ್ಟರು. ಆದರೆ ಯಾರಿಂದಲೂ, ಎಷ್ಟೋ ಸಂಖ್ಯೆಯ ದೈತ್ಯರಿಂದಲೂ ಆ ಲಕ್ಷ್ಮಣನ ಶರೀರವನ್ನು ಅಲುಗಾಡಿಸಲಾಗಲಿಲ್ಲ. ಕೊನೆಗೆ ರಾವಣನೇ ಬಂದು ಆ ಲಕ್ಷ್ಮಣನನ್ನು ಎತ್ತೊಯ್ಯಲು ಯತ್ನಿಸಿದಾಗ ಆ ರಾವಣನ ಕೈಯಿಂದಲೂ ಆತನನ್ನು ಅಲುಗಾಡಿಸಲಾಗಲಿಲ್ಲ. ಆಗ ರಾವಣನು "ಎಲಾ ಈ ಹುಲು ಮಾನವನು ಇಷ್ಟೊಂದು ಭಾರವೇ?" ಎಂದು ಬಹು ವಿಸ್ಮಿತನಾದನು. ಲಕ್ಷ್ಮಣನು ಮೂಲವನ್ನು ಸ್ಮರಿಸಿದುದರಿಂದ, ಈ ಭೂಮಂಡಲವನ್ನೇ ಹೊತ್ತ ಶೇಷನೇ ಈತನಾದುದರಿಂದ ಲಕ್ಷ್ಮಣನು ಅಷ್ಟು ಭಾರವಾಗಿದ್ದರೂ ಮಾರುತಿಯು ಆತನನ್ನು ತನ್ನ ಕಿರಿಬೆರಳಿನಿಂದ ಎತ್ತಿ ತಂದು ಶ್ರೀರಾಮನ ಮುಂದಿರಿಸಿದ್ದನು. ಇದನ್ನು ಕಂಡ ಆ ಅಸುರ ಪ್ರಭು ರಾವಣನು ಸಹ ಹನುಮಂತನ ಬಲವನ್ನು ಕಂಡು "ಭಲೇ ಹನುಮಾ, ಭಲೇ ಭಲೆ" ಎಂದು ಶ್ಲಾಘಿಸಿದನು. ಕಾರ್ಯಾನಂತರದಲ್ಲಿ ಶ್ರೀ ಹನುಮಂತನೇ ಪುನಃ ಆ ಪರ್ವತವನ್ನು ರಣರಂಗದಿಂದಲೇ ಅದಿದ್ದ ಸ್ಥಳವನ್ನು ಸೇರುವಂತೆ ಎಸೆದನು. ಹಾಗೆ ಎಸೆಯಲ್ಪಟ್ಟ ಪರ್ವತವು ಹೇಗೆ ಬಿದ್ದಿತೆಂದರೆ ಮೊದಲು ಅದು ಹೇಗೆ ಇತ್ತೋ ಹಾಗೇಯೇ, ಕಿತ್ತುದು ಸಹ ಗೊತ್ತಾಗದ ಹಾಗೆ, ಗುರುತು ಸಹ ಕಾಣದ ಹಾಗೆ ಸ್ವಸ್ಥಳವನ್ನು ಸೇರಿತು.

ಹನುಮಂತನು ಸೇತುಬಂಧನದ ಕಾಲದಲ್ಲಿ ತಂದೆಸೆದ ಬೃಹಚ್ಛಿಲಾ ಸಮೂಹಗಳಾಗಲೀ ಅಥವಾ ಸಂಜೀವನ ಪರ್ವತವೇ ಆಗಿರಲಿ ಅವು ಆತನಿಗೆ ಸಾಸುವೆ ಕಾಳಿಗಿಂತ ಹಗುರವಾಗಿ ಕಂಡವಂತೆ! ಯಾಕೆ ಎಂದರೆ ಆತನೇ ಹೇಳುತ್ತಾನೆ ನಾನು ಆ ಶಿಲೆಗಳನ್ನು ಹೊತ್ತಿದ್ದರೆ ತಾನೇ ನನಗೆ ಅವು ಭಾರವಾಗುತ್ತಿದ್ದುವು. ನಾನು ಅವುಗಳನ್ನು ಹೊತ್ತವನೂ ಅಲ್ಲ, ತೆತ್ತವನೂ ಅಲ್ಲ, ಎಲ್ಲವನ್ನೂ ಸರ್ವತಂತ್ರ ಸ್ವತಂತ್ರನಾದ ಶ್ರೀಹರಿಯೇ ನಿರ್ವಹಿಸಿರುವಾಗ ಅವು ನನಗೇಕೆ ಭಾರವಾಗುತ್ತವೆ? ನನ್ನನ್ನೊಳಗೊಂಡು ಎಲ್ಲವನ್ನೂ ಹೊತ್ತವನು, ಹೊತ್ತಿರುವವನೂ ಅವನೇ ಎಂದು. ಹೇಗಿದೆ ಋಜು ಜ್ಞಾನ!

"ಕ್ಷಿಪ್ತಃ ಪಶ್ಚಾತ್ಸಲೀಲಂ। ಶತಮತುಲಮತೇ। ಯೋಜನಾನಾಂಸಉಚ್ಚ।
ಸ್ತಾವದ್ವಿ ಸ್ತಾರವಾಂಶ್ಚಾ। ಪ್ಯುಫಲ ಲವ ಇವ। ವ್ಯಗ್ರಬುದ್ಧ್ಯಾತ್ವಯಾತಃ।
ಸ್ವಸ್ವಸ್ಥಾನ ಸ್ಥಿತಾತಿ । ಸ್ಥಿರ ಶಕಲ ಶಿಲಾ । ಜಾಲಸಂಶ್ಲೇಷನಷ್ಟ ॥
ಚ್ಛೇದಾಂಕಃ ಪ್ರಾಗಿವಾಭೂ । ತ್ಕಪಿವರ ವಪುಷಸ್ತೇ । ನಮಃ ಕೌಶಲಾಯ ॥ ವಾ. ಸ್ತು. ೧೯ ॥

ಹನುಮಂತನು "ಲಕ್ಷ್ಮಣ ಪ್ರಾಣ ದಾತಾಚ । ದಶಗ್ರೀವಶ್ಚ ದರ್ಪಹಾ" ಎಂದು ಶ್ಲಾಘಿತನಾದನು. ಏನು ಅದ್ಭುತ ಕಾರ್ಯವಪ್ಪಾ ಹನುಮಂತನದು ಎಂದು ನಾವು ಹುಬ್ಬೇರಿಸಬಹುದು. ಆದರೆ ಹನುಮಂತನು ಕೇವಲ ರಣರಂಗದಲ್ಲಿ ಮೂರ್ಛಿತರಾಗಿದ್ದ ಲಕ್ಷ್ಮಣ ಮತ್ತು ಕಪಿವೀರರನ್ನು ಮಾತ್ರ ಬದುಕಿಸಲು ಅಂಥಾ ಬೃಹತ್ಪರ್ವತವನ್ನೇ ತಂದು ಬಿಟ್ಟನು. ಆ ಕ್ಷಣದಲ್ಲಿ ಎಂದರೆ ಆತನು ತನ್ನ ಸೀಮಿತವಾದ ಆ ಬಲವನ್ನು, ಅದೂ ಸಂಜೀವನ ಮೂಲಿಕೆಯ ಸಹಾಯದಿಂದ ಎಂದು ತೋರಿಸಿರುವುದು ಕೇವಲ ಅಸುರ ಮೋಹನಾರ್ಥವಾಗಿ. ನಿಜವಾಗಿ ಹೇಳುವುದಾದರೆ ಬ್ರಹ್ಮನಲ್ಲೂ ಒಂದು ಬಗೆಯಿಂದ ವ್ಯಾಪಕನಾಗಿ ಇಡೀ ಬ್ರಹ್ಮಾಂಡದ ಸಕಲ ದೇವ, ದಾನವ, ಮಾನವ, ತಿರ್ಯಗ್ಜಂತು, ಜಂಗಮ, ಸ್ಥಾವರ, ದಿವಾ ರಾತ್ರಿಚರ, ಭೂ, ಗಗನ, ಸಲಿಲಸ್ಥ ಜೀವರ ನಿವಹಕ್ಕೆ ಸಂಜೀವಿನಿ ಸ್ವರೂಪರಾಗಿ ನಿತ್ಯವೂ ಶ್ವಾಸ ಜಪಗಳನ್ನು ಮಾಡುತ್ತಿರುವ ವಾಯು ಸಂಭೂತನಾದ ಈ ಹನುಮಂತನ ಬಲಕ್ಕೆ ಈ ಸಂಜೀವನ ಪರ್ವತವು ಅಳತೆ ಗೋಲಾಗಿ ನಿಲ್ಲವುದೇ? "ವಾಯುರನಿಲಮಮೃತಂ। ಯಥೇದಂ । ಭಸ್ಮಾಂತಂ ಶರೀರಂ ॥ ಈ.ವಾ॥

ಅತಿರೋಹಿತ ವಿಜ್ಞಾನಾತ್ । ವಾಯುರಪ್ಯಮೃತಃ ಸ್ಮೃತಃ ॥ ಮುಖ್ಯಾಮೃತಃ
ಸ್ವಯಂ ರಾಮಾ। ಪರಮಾತ್ಮಾ ಸನಾತನಃ ॥ ಇತಿ ರಾಮ ಸಂಹಿತಾಯಾಂ ॥ ಭಾಷ್ಯ ॥"

ಸಂಜಿವನ ಮೂಲಿಕೆಯಲ್ಲಿ ಶ್ರೀರಾಮನನ್ನು ಹೊತ್ತು ವ್ಯಾಪಕನಾಗಿ ಇರುವ ಹನುಮಂತನು ಸಂಜೀವಿನಿಗೆ ಸಂಜೀವಿನಿಯಾಗಿರುವನು. ನಿತ್ಯವೂ ಇಂದಿಗೂ ಸಕಲಜೀವರನ್ನು ಹನುಮಂತನು ರಕ್ಷಿಸುತ್ತಲೇ ಇರುವನು. ಇಂಥಾ ಮಹಾಮಹಿಮನು ರಣರಂಗದಲ್ಲಿ ಪರ್ವತವನ್ನು ತಂದಿರಿಸುವುದರ ಮೂಲಕ ತನ್ನ ಮಹಿಮೆಯನ್ನು ಅಸುರರಿಗೆ ಮರೆಮಾಚಿದನು. ಅಮೃತ ಸ್ವರೂಪಿಯೇ ಆಗಿರುವ ಹನುಮಂತನಿಗೆ ಅಂದು ಇಂದು ಎಂದೆಂದೂ ಈ ಜೀವ ರಕ್ಷಕ ವ್ಯಾಪಾರವು ಅನಾಯಸಕರವಾದುದೇ ಆಗಿದೆ. ಮೂಲಿಕೆಗಳಲ್ಲಿ ಔಷಧ ರೂಪಿಯಾಗಿ ಇರುವವನು ವಾಯುವೇ ಮೂಲಿಕೆಯ ದೆಶೆಯಿಂದ ಲಕ್ಷ್ಮನು ಬದುಕಿದನು ಎಂದು ಅಸುರರು ತಿಳಿಯಲೆಂದು ಹನುಮಂತನು ಅದನ್ನು ತಂದನು. ಮತ್ತು ಮೂಲಿಕಾಭಿ ಮಾನಿಗಳಿಗೆ ಕೀರ್ತಿಯನ್ನು ಇತ್ತನು. ಮತ್ತು ಸಾಮಾನ್ಯರಿಗೆ ಮೂಲಿಕೆಗಳನ್ನು ಆಶ್ರೈಸಲು ಮಾರ್ಗದರ್ಶನವನ್ನು ಮಾಡಿದನು. ರೋಗ ಮುಕ್ತರೂ, ನೀರೋಗಿಗಳೂ, ರೋಗಿಗಳೂ ಎಲ್ಲರೂ ಬದುಕಿರುವುದು ವಾಯುವಿನಿಂದಲೇ.

॥ ಪದ ॥ ಮುತ್ತು ಮಾಣಿಕ್ಯ ಬಿಟ್ಟು । ಒತ್ತಿದ ಪಾದವ ।
ಉತ್ಸಾಹವೆಂಬುದುಂಟೆ । ಸತ್ಯಾಧಿಪತ್ಯಕೆ ॥
ಮುಕ್ತಿ ಯೋಗ್ಯಗೆಸಂ । ಪತ್ತನೆ ಪಾಲಿನಿ ।
ಹತ್ತಿಲಿರುವೆನೆಂದು । ಎತ್ತುತ ಹಸ್ತವ ॥ ೧೭ ॥

**ಶಬ್ದಾರ್ಥ:** ಮುತ್ತು ಮಾಣಿಕ್ಯ = ರಾಜಾಧಿರಾಜರು ಕೊಡುವ ಅಮೂಲ್ಯ ರತ್ನಾಭರಣಗಳ ಬಹುಮಾನ; ಒತ್ತಿದ ಪಾದವ = ಪಾದ ಸೇವೆಯನ್ನು ಮಾಡಿದನು; ಉತ್ಸಾಹವೆಂಬುದುಂಟೆ = ಫಲಾಪೇಕ್ಷೆ ಇಲ್ಲದವನು; ಸತ್ಯಾಧಿಪತ್ಯಕೆ = ಬ್ರಹ್ಮ ಪದವಿಗೆ; ಮುಕ್ತಿ ಯೋಗ್ಯರಿಗೆ = ಸಾತ್ವಿಕರಿಗೆ; ಸಂಪತ್ತನೆ ಪಾಲಿಸಿ = ಜ್ಞಾನ, ಭಕ್ತಿ, ವೈರಾಗ್ಯ ಮತ್ತು ಭಾಗ್ಯಗಳನ್ನು ಇತ್ತು; ಹತ್ತಿಲಿರುವೆನೆಂದು = ಸದಾ ರಕ್ಷಕನಾಗಿ ಇರುತ್ತೇನೆಂದು; ಎತ್ತುತ ಹಸ್ತವ = ಶಪಥ ಮಾಡಿರುವನು.

**ಭಾವಾರ್ಥ:** ಲಂಕಾವಹದಲ್ಲಿ ಘೋರಯುದ್ಧವು ನಡೆದು ಆ ಕದನದಲ್ಲಿ ಇಂದ್ರಜಿತು, ಕುಂಭಕರ್ಣ ಮೊದಲಾದ ದೈತ್ಯ ಕೋಟಿಯೊಡನೆ ಕೊನೆಗೆ ರಾವಣನೂ ಸಂಹಾರವಾದನು. ಶ್ರೀರಾಮನು ಅಗ್ನಿ ಸಾಕ್ಷಿಯಾಗಿ ಶುದ್ಧಳೆನಿಸಿದ ಸೀತಾದೇವಿಯನ್ನು ಪರಿಗ್ರಹಿಸಿ ಸೀತಾಕೃತಿಯಲ್ಲಿದ್ದ ವೇದವತಿಯನ್ನು ಮುಂದಿನ ಕಲಿಯುಗದಲ್ಲಿ ಸ್ವೀಕರಿಸುತ್ತೇನೆಂದು ವರವನ್ನಿತ್ತನು.

ಶ್ರೀರಾಮನು ಪೂರ್ವ ಪ್ರತಿಜ್ಞೆಯಂತೆ ಲಂಕಾಧಿಪತ್ಯವನ್ನು ವಿಭೀಷಣನಿಗೆ ವಹಿಸಿ ತನ್ನ ಪರಿವಾರ ಸಹಿತವಾಗಿ ಅಯೋಧ್ಯೆಗೆ ಬಂದನು. ಇತ್ತ ಅಯೋಧ್ಯೆಯಲ್ಲಿ ರಾಮನ ಬರುವಿಗಾಗಿ ಕಾಯುತ್ತಿದ್ದ ಭರತನು ನಿನ್ನೆಗೇ ಹದಿನಾಲ್ಕು ವರ್ಷಗಳು ಮುಗಿದವು. ಇನ್ನೂ ರಾಮನು ಬರಲಿಲ್ಲ. ಪ್ರತಿಜ್ಞೆಯಂತೆ ನಾನು ಅಗ್ನಿ ಪ್ರವೇಶ ಮಾಡುತ್ತೇನೆಂದು ಭರತನು ಅಗ್ನಿಕುಂಡಕ್ಕೆ ಎರಡು ಪ್ರದಕ್ಷಿಣೆಗಳನ್ನು ಹಾಕಿ ಬಿಟ್ಟಿದ್ದನು. ಇನ್ನು ಮೂರನೇ ಪ್ರದಕ್ಷಿಣೆಯನ್ನು ಹಾಕಿ ಅಗ್ನಿಗೆ ಹಾರಬೇಕು ಎನ್ನುವಷ್ಟರಲ್ಲಿ ಗಗನಗಾಮಿಯಾಗಿ ಶೀಘ್ರವಾಗಿ ಬಂದ ಹನುಮಂತನು "ಬಂದನು ಶ್ರೀರಾಮನು" ಎಂದನು. "ಶ್ರೀರಾಮನು ಬಂದನು" ಎಂದು ಹೇಳದೆ ಬಂದನು ಎಂಬ ನುಡಿಯನ್ನು ಮೊದಲು ಹನುಮಂತನು ಏಕೆ ನುಡಿದನೆಂದರೆ "ರಾಮನು" ಎಂದರೆ ಮುಂದಿನ ಶಬ್ದವು ಏನು ಬೇಕಾದರೂ ಆಗಬಹುದು. "ಬಂದನು" ಎಂದರೆ ಶ್ರೀರಾಮನು ಸುರಕ್ಷಿತ ಎಂಬುದನ್ನು ಸೂಚಿಸುತ್ತದೆ. ಅಷ್ಟು ಕ್ಷಣವೂ ವ್ಯರ್ಥವಾಗಿದ್ದರೂ ಅನರ್ಥವಾಗುತ್ತಿತ್ತು. ಅಂತಲೇ ಜಾಣನಾದ. ಮುಖ್ಯ ಪ್ರಾಣನು" ಬಂದನು ಶ್ರೀರಾಮ ಎಂಬಲ್ಲಿ ಸಮಯವನ್ನು ಉಳಿಸಿ ಭರತನನ್ನು ಕಾಪಾಡಿದನು. ಹದಿನಾಲ್ಕು ವರ್ಷಗಳವರೆಗೆ ಅಯೋಧ್ಯೆಗೆ ಹೋಗದೇ ನಂದೀಗ್ರಾಮದಲ್ಲೇ ಭರತನಿದ್ದನು. ಶ್ರೀರಾಮನ ಬರುವಿಕೆಯನ್ನು ಹನುಮಂತನಿಂದ ತಿಳಿದ ಭರತನು ಮೊದಲು ಹನುಮಂತನಿಗೆ ಎರಗಿದನು. ತರುವಾಯ ಪೂರ್ಣ ಕುಂಭ ಮಂಗಳ ವಾದ್ಯಗಳೊಡನೆ ಶ್ರೀರಾಮನನ್ನು ಎದುರ್ಗೊಂಡು ಪಾದಪೂಜೆಯನ್ನು ಮಾಡಿ ಧನ್ಯನಾದನು. ತರುವಾಯ ಎಲ್ಲರೂ ಸಂಭ್ರಮದಿಂದ ಅಯೋಧ್ಯಾ ಪಟ್ಟಣವನ್ನು ಸೇರಿದರು. ಕುಲ ಗುರು ವಶಿಷ್ಠರೇ ಮೊದಲಾದ ಋಷಿನಿಕರ, ಬಂಧು, ಪರಿವಾರ, ಪ್ರಜೆಗಳಿಂದ ಯುಕ್ತನಾಗಿ ಶ್ರೀರಾಮನು ಅಯೋಧ್ಯೆಯನ್ನು ಸೇರಿ ಸಕಲ ಪ್ರಜಾನೀಕದ ಅನುಮೋದನೆ, ಹರ್ಷೋದ್ಗಾರಗಳ ನಡುವೆ ಪಟ್ಟಾಭಿಷಿಕ್ತನಾದನು. ಶ್ರೀರಾಮ ಪಟ್ಟಾಭೀಷೇಕವೆಂದರೆ ಇಂದಿಗೂ ಆತನ ಭಾವ ಚಿತ್ರವನ್ನಿಟ್ಟು ಪಟ್ಟಾಭಿಷೇಕವನ್ನು ಮಾಡಿ ಜನರು ಯಥೇಚ್ಛವಾಗಿ ದಾನ ಧರ್ಮಗಳನ್ನು ಆತನ ಹೆಸರಿನಲ್ಲಿ

ಮಾಡುತ್ತಿದ್ದಾರೆಂದ ಬಳಿಕ ಇನ್ನು ಶ್ರೀರಾಮನ ಸಾಕ್ಷಾತ್ ಪಟ್ಟಾಭಿಷೇಕವೆಂದರೆ ಇನ್ನು ಅದು ಹೇಗಿದ್ದಿರಬಹುದು ಎಂಬುದು ನಮ್ಮ ಊಹಾತೀವೇ ಸರಿ. ಬೇಡಿದವರಿಗೆ ಬೇಡಿದ್ದನ್ನು ನೀಡಿದನು. ಶ್ರೀರಾಮನು. ಶ್ರೀರಾಮನ ಅಂಗೈಯನ್ನೂ ಶ್ರೀಕೃಷ್ಣನ ಮುಂಗೈಯನ್ನೂ, ಅರ್ಜುನನ ಬೆನ್ನನ್ನೂ ಯಾರೂ ಕಂಡಿಲ್ಲವೆಂತೆ ಅಂದರೆ ಪರಮಾತ್ಮನು ಶ್ರೀರಾಮ ರೂಪದಿಂದ ಜನರಿಗೆ ನೀಡುವನೇ ಹೊರತಾಗಿ ಬೇಡುವುದಿಲ್ಲ. ಶ್ರೀಕೃಷ್ಣ ರೂಪದಿಂದ ಪರಮಾತ್ಮನು ಜನರಿಂದ ಕೃಷ್ಣಾರ್ಪಎನಿಸಿಕೊಳ್ಳುತ್ತಾನೆಯೇ ವಿನಃ ನೀಡುವುದಿಲ್ಲ. ಶ್ರೀರಾಮ, ಕೃಷ್ಣ ರೂಪಗಳಿಗೆ ಇರುವ ನಿಮಿತ್ತ ಭೇದವೆಂದರೆ ಇವೇ. ಇದು ಪ್ರಮೇಯ ಚಿಂತನೆಯ ಯಾವಾಗಲೂ ಕೊಡುವವರ ಕೈ ಮೇಲೆ ಇರುತ್ತದೆ. ತತ್ರಾಪಿ ಮುಂಗೈ, ಹೀಗಿರುವಾಗ ಆತನ ಅಂಗೈಯನ್ನು ಕಾಣುವುದಾದರೂ ಹೇಗ? ಮುಂಗೈಯೇ ಕಾಣುವುದು. ಒಂದು ವೇಳೆ ಶ್ರೀರಾಮನು ಅಂಗೈಯನ್ನು ತೋರಿದರೆ ಆಗ ಆತನಿಗೆ 'ಕೃಷ್ಣ'ನೆಂಬ ಹೆಸರಾಗುತ್ತದೆ. ಇದೇ ರೀತಿಯಾಗಿ ಕೃಷ್ಣನ ಮುಂಗೈಯನ್ನು ಕಾಣಲಾಗುವುದಿಲ್ಲ. ಏಕೆಂದರೆ ಆತನು ಸಕಲವನ್ನು "ಮದರ್ಪಿತಂ ಕುರು" ಎಂದು ಕೈಯೊಡ್ಡಿ ನಿಂತಿದ್ದಾನೆ ಹೀಗಿರುವಾಗ ಆತನ ಮುಂಗೈಯನ್ನು ಕಾಣುವದಾದರೂ ಹೇಗೆ? ಶ್ರೀಹರಿಯು ಶ್ರೀರಾಮ ರೂಪದಿಂದ ಬೇಡುವುದಿಲ್ಲ. ನೀಡುತ್ತಲೇ ಇರುತ್ತಾನೆ. ಹಾಗೆಯೇ ಶ್ರೀಕೃಷ್ಣ ರೂಪದಿಂದ ನೀಡುವುದೇ ಇಲ್ಲ. ಬೇಡುತ್ತಲೇ ಇರುತ್ತಾನೆ. ಶ್ರೀಕೃಷ್ಣನು ನೀಡಿದರೆ ಅವನು ಕೃಷ್ಣನಲ್ಲ. ಆಗ ಆತನು ರಾಮನೇ ಎನಿಸುತ್ತಾನೆ. ಶ್ರೀರಾಮನು ಬೇಡಿದರೆ ಅವನು ಶ್ರೀರಾಮನಲ್ಲಿ ಶ್ರೀಕೃಷ್ಣನೇ ಎನಿಸುತ್ತಾನೆ. ಶ್ರೀಹರಿಯು ಸ್ವಗತ ಭೇದ ವಿವರ್ಜಿತನಾದಾಗ್ಯೂ ಜಗದ್ವ್ಯಾ ಪಾರನಿಮಿತ್ತದಿಂದ ಭಿನ್ನರೂಪಗಳಿಂದ ಭಿನ್ನ ಕರ್ಮಗಳನ್ನು ಮಾಡುತ್ತಾನೆ. ಪರಮಾತ್ಮ ಈ ಲೀಲಾಮಯವಾದ ರೂಪಗಳನ್ನು ಕಾರಣ, ಕಾರ್ಯ, ಕಾರುಣಿಕ ರೂಪಗಳೆನ್ನುತ್ತಾರೆ. ಇನ್ನು ಅರ್ಜುನನ ಬೆನ್ನನ್ನು ಯಾರೂ ಕಂಡಿಲ್ಲವೆಂದರೆ ಶ್ರೀಕೃಷ್ಣ ರಕ್ಷಿತನಾದ ಪಾರ್ಥನಿಗೆ ಅಪಜಯವಿಲ್ಲ. ಅವನನ್ನು ಸೋಲಿಸಿದವರು ಯಾರೂ ಇಲ್ಲವೆಂದು ಅರ್ಥ.

ಹೀಗೆ ಕೊಡುಗೈ ದಾನಿಗಳರಸನಾದ ಶ್ರೀರಾಮನು ತನ್ನ ಪಟ್ಟಾಭಿಷೇಕ ಕಾಲದಲ್ಲಿ ಯಾರ್ಯಾರಿಗೆ ಏನೆಲ್ಲಾ ದಾನಗಳನ್ನು ಕೊಟ್ಟಿರಬಹುದು? ಜನರು ಕೇಳಿದ್ದನ್ನು, ತನಗೆ ತಿಳಿದುದ್ದನ್ನು ನೀಡಿದನು. ಸರಿ ಮುಂದೇನು? ಎಂದರ ಪ್ರಥಮ ಪುರಸ್ಕಾರರ್ಹನಾದ ಹನುಮಂತನಿಗೇ ಶ್ರೀರಾಮನು ಏನನ್ನೂ ಕೊಡದೇ ಮರೆತುಬಿಟ್ಟನು. ಆಗ ಕರುಣಾರ್ದ್ರ ಹೃದಯಿಯಾದ ಸೀತಾ ಮಾತೆಯು ಕನಿಕರದಿಂದ ಹನುಮಂತನನ್ನು ಹತ್ತಿರ ಕರೆದು "ಅಪ್ಪಾ ಹನುಮಾ, ಎಷ್ಟು ದುಡಿಸಿಕೊಂಡರೂ ಈ ಗಂಡಸರಿಗೆ ಅಂತಃ ಕರುಣವೆಂಬುದೇ ಇಲ್ಲ. ನೋಡು ಈ ಪ್ರಭುಗಳು ಯಾರ್ಯಾರಿಗೋ ಏನೇನೇನೆಲ್ಲಾ ಕೊಟ್ಟುಬಿಟ್ಟನು. ನಿನ್ನನ್ನು ಮಾತ್ರ ಮರೆತು ಬಿಟ್ಟಿದ್ದಾರೆ. ಹೋಗಲಿ ಬಾಪ್ಪಾ, ನಾನಾದರೂ ನಿನಗೆ ಈ ಬಹುಮಾನವನ್ನು ನೀಡುತ್ತೇನೆ. ತೆಗೆದುಕೋ ಎಂದು ಹೇಳುತ್ತಾ ತನ್ನ ಕಂಠದಲ್ಲೇ ಇದ್ದ ರತ್ನದ ಹಾರವನ್ನು ತೆಗೆದು ಹನುಮಂತನ ಕೊರಳಿಗೆ ಹಾಕಿಬಿಟ್ಟಳು.

"ರಾಜ್ಯಾಭಿಷೇಕೇ ವಸಿತೇತ್ರ ಸೀತಾ। ಪ್ರೇಪ್ಸಾಯ ನಸ್ತಾಂ ಭಜತಾಂದಿದೇತಿ ॥
ರಾಮಸ್ಯವಾಣ್ಯಾ ಮಣಿ ಮಂಜುಮಾಲಾ। ವ್ಯಾಜೇನ ದೀರ್ಘಾಂ ಕರುಣಾಂಬಬಂಧಃ॥

ಮಾತೆ ಸೀತಾದೇವಿಯಂತೂ ಹನುಮಂತನಿಗೆ ಮಣಿ ಮಾಲೆಯನ್ನು ತೊಡಿಸಿದಳು. ಆದರೆ ಹನುಮಂತನು ಆ ಮಾಲೆಯಲ್ಲಿದ್ದ ಒಂದೊಂದೇ ಮಣಿಯನ್ನು ಕಚ್ಚಿ ಕಚ್ಚಿ ನೋಡುತ್ತಾ ಪುಡಿ ಪುಡಿ ಮಾಡಿ ಎಸೆದುಬಿಟ್ಟನಂತೆ. ಇದನ್ನು ಕಂಡ ಮೂಲರೂಪೀ ದೈತ್ಯರು ಅಂದಿನಿಂದಲೇ " ಮಂಗನ ಕೈಗೆ ಮಾಣಿಕ್ಯವನ್ನು ಕೊಟ್ಟಂತಾಯಿತು" ಎಂಬ ಗಾದೆಯನ್ನು ಹುಟ್ಟು ಹಾಕಿದರಂತೆ! ಸೀತಾದೇವಿಯಾದರೂ "ಯಾಕಪ್ಪಾ ಹನುಮಪ್ಪಾ" ಅಂಥಾ ಬೆಲೆಬಾಳುವ ಮಣಿಗಳನ್ನು ಪುಡಿಪುಡಿ ಮಾಡಿ ಬಿಟ್ಟೆಯಲ್ಲಾ, ಯಾಕೆ?" ಎಂದು ಕೇಳಲಾಗಿ "ಅಮ್ಮಾ ನಾನು ಈ ಮಣಿಗಳಲ್ಲಿ ಶ್ರೀರಾಮನನ್ನು ಹುಡುಕಿದೆ. ಆದರೆ ಒಂದು ಮಣಿಯಲ್ಲಾದರೂ ಆತನೂ ಸಿಕ್ಕಲಿಲ್ಲ. ಆತನನ್ನು ಕಾಣದ ವಸ್ತುವು ಯಾವುದಿದ್ದರೂ ಏನು ಪ್ರಯೋಜನ ತಾಯೇ, ಅದು ನನಗೆ ಬೇಡ"ವೆಂದನು. ಸರ್ವತ್ರದಲ್ಲಿ ಶ್ರೀಹರಿಯನ್ನು ಕಾಣುವ ಹನುಮಂತನಿಗೆ ಆ ಮಣಿಗಳಲ್ಲಿ ಶ್ರೀರಾಮನನ್ನು ಕಾಣಲಾಗಲಿಲ್ಲವೇ ಎಂದರೆ ಹನುಮಂತನು ಭಿನ್ನಭಕ್ತನೆಂದು ದೈತ್ಯರು ತಿಳಿಯಲಿ ಎಂದು ಆತನು ಹಾಗೆ ಮಾಡಿದನು.

ಹನುಮಂತನು ಕೇವಲ ಹಾರ, ತುರಾಯಿಗಳನ್ನು ಮಾತ್ರವೇ ಬೇಡಿದ್ದರೆ ಇಡೀ ಶ್ರೀರಾಮನು ಆತನಿಗೆ ತನ್ನ ಸಾಮ್ರಜ್ಯವನ್ನೇ ಕೊಟ್ಟು ಬಿಡುತ್ತಿದ್ದನು.

**"ಪ್ರೇಷ್ಠೋನ ರಾಮಸ್ಯ ಒಭೂವತಸ್ಮಾ! ನ್ನ ರಾಮರಾಜ್ಯೇಸುಲಭಂಚ ಕಿಂಚಿತ್**
**ತತ್ಪಾದ ಸೇವಾರತಿರೇಷನೈಚ್ಛ । ತ್ತಥಾಪಿಭೋಗಾನ್ನನುಸಾವಿರಕ್ತೀಃ ॥"**

ಆದರೆ ಪರಮಾತ್ಮನಲ್ಲಿ ಹನುಮಂತನು ನಿರ್ವ್ಯಾಜ ಭಕ್ತಿಯನ್ನು ಬೇಡುವನೆ ಹೊರತಾಗಿ ಬೇರೆ ಏನನ್ನೂ ಬೇಡುವುದಿಲ್ಲ. ಶ್ರೀರಾಮನೇ ಹನುಮಂತನನ್ನು ಹತ್ತಿರದಲ್ಲಿ ಕರೆದು ತನ್ನ ಸಾಯುಜ್ಯ ಸ್ವರೂಪವಾದ ಆಲಿಂಗನವನ್ನು ಆ ಹನುಮಂತನಿಗೆ ನೀಡಿದನು. ಹನುಮಂತನು ಭೂಲೋಕದ ಸಾಮ್ರಾಜ್ಯದ ಪಟ್ಟದ ಸುಖವೇನು? ಬ್ರಹ್ಮ ಪದವಿಯನ್ನು ಬಯಸುವಂಥವನಲ್ಲ. ಒಬ್ಬ ತೃಣ ಜೀವನಿಗೆ ಮೋಕ್ಷದಲ್ಲಿ ಈ ಸುಖವು ಲಭಿಸುತ್ತದೆ. ಹೀಗಿರುವಾಗ ಇನ್ನು ಶತಾನಂದ ಪದ ಯೋಗ್ಯನಿಗೆ ಇನ್ನೆಷ್ಟು ಸುಖವು ಲಭಿಸಲಿಕ್ಕಿಲ್ಲ? ಆದರೆ ಹನುಮಂತನು ಬ್ರಹ್ಮ ಪದ ಯೋಗ್ಯನಾಗಿದ್ದರೂ ಅದನ್ನೇ ಬಯಸದ ಮಹಾ ವೈರಾಗ್ಯಶಾಲಿಯು. ಭಗವಂತನಲ್ಲಿ ಭಕ್ತಿಯು ಇದ್ದವರು ಬ್ರಹ್ಮ ಪದವಿ ಪರಿಯಂತವಾಗಿ ಯಾವ ಪದವಿಯನ್ನೂ ಬೇಡುವುದಿಲ್ಲ.

**"ನನಾಕಪೃಷ್ಟಂ ನಚ ಪಾರಮೇಷ್ಠ್ಯಂ । ನಸಾರಭೌಮಂ ನರಸಾದಿಪತ್ಯಂ ॥**
**ನಯೋಗ ಸಿದ್ದೀರಪುನರ್ಭವಂ ವಾ । ವಾಂಛಂತಿ ತದ್ಭಕ್ತಿರತಃ ಪ್ರಪನ್ನಾ ॥ ಭಾ ॥**

ಹನುಮಂತನು ಬ್ರಹ್ಮಪದವಿಯನ್ನು ಬೇಡುವ ಅವಶ್ಯಕತೆ ಇಲ್ಲ. ಅದು ಆತನಿಗೆ ತಾನಾಗಿಯೆ ತಪ್ಪದೇ ಸ್ವರೂಪಭೂತವಾಗಿ ಪ್ರಾಪ್ತವಾಗುತ್ತದೆ. ಆದರೂ ಹನುಮಂತನನ್ನು "ಪರಮೋತ್ಸಾಹ ವರ್ಜಿತಾತಿರಿಕ್ತ ದೋಷ ಸಂಘಾಯ" ಎಂದು ಶ್ರೀ ಚಂದ್ರಿಕಾಚಾರ್ಯರು ಸ್ತೋತ್ರಗೈದಿದ್ದಾರೆ. ಎಂದರೆ ವಾಯು ಸ್ವರೂಪರಾದ ಹನುಮಂತನಲ್ಲಿ "ಪರಮೋತ್ಸಾಹ ವರ್ಜಿತ"ರೆಂಬುದೊಂದನ್ನು ಬಿಟ್ಟರೆ ಮತ್ತಾವ ದೋಷಗಳೂ ಇಲ್ಲವೆಂದು ಸಾರಿರುತ್ತಾರೆ. ಶ್ರೀಹರಿ ಕಥಾಮೃತಸಾರದಲ್ಲಿಯೂ ಇದೇ ಮಾತನ್ನು ಹೇಳಿರುತ್ತಾರೆ.

**ಮಹಿತ ಋಜು ಗಣಕೊಂದೆ ಪರಮೋ। ತ್ಸಹ ವಿವರ್ಜಿತವೆಂಬ ದೋಷವು ।**
**ವಿಹತವೇ ಸರಿ ಇದನು ಪೇಳ್ದರೆ ಮುಕ್ತ ಬ್ರಹ್ಮರಿಗೆ॥**
**ಬಹುದು ಸಾಮ್ಯವು ಜ್ಞಾನ ಭಕುತಿಯು । ದ್ರುಹಿಣ ಪದ ಪರಿಯಂತ ವೃದ್ಧಿಯು॥**
**ಬಹಿರುಪಾಸನೆಯುಂಟನಂತರ ಬಿಂಬ ದರ್ಶನವು ॥ ಕ.ಸಾ.ಸಂ – ೩೪ ॥**

ಹೀಗೆ ಹೇಳಿದರೆ ಒಂದು ಪ್ರಶ್ನೆಯು ಬರುತ್ತದೆ. ಅದೇನೆಂದರೆ ಇಡೀ ಬ್ರಹ್ಮಾಂಡದಲ್ಲಿನ ಜೀವರಾಶಿಗಳಲ್ಲಿ ಏನಾದರೂ ಶಕ್ತಿ, ಚೈತನ್ಯ, ಉತ್ಸಾಹಗಳಿವೆ ಎಂದಾದರೆ ಅದು ಇರುವುದು ವಾಯುದೇವರಿಂದ. ಇನ್ನು ಇಂಥಾ ವಾಯುದೇವರೇ ಉತ್ಸಾಹ ವರ್ಜಿತರೆಂದರೆ ಹೇಗೆ? ಎಂದರೆ ವಾಯು ದೇವರು ತಾವು ಮಾಡುವ ಸಾಧನಗಳೆಲ್ಲವನ್ನೂ ಮಾಡುವವರಾಗಿದ್ದು ತಾನು ಹಾಗೆ ಮಾಡುವುದರಿಂದ ಮಾತ್ರ ತನಗೆ ಬ್ರಹ್ಮಪದವಿಯು ಸಿಗುತ್ತದೆ. ಇಲ್ಲವಾದರೆ ಇಲ್ಲ ಎಂದು ಬ್ರಹ್ಮ ಪದವಿಯ ಮೇಲಿನ ಆಸೆಯಿಂದ ಅವರು ತಮ್ಮ ಕರ್ತವ್ಯದಲ್ಲಿ ನಿರತರಾಗಿದ್ದಾರೆ ಎಂದು ತಿಳಿಯಬಾರದು ಎಂಬುದು ಇದರ ಅರ್ಥ. ಈ ದೋಷವನ್ನು ಶಾಸ್ತ್ರೀಯವಾಗಿ ಹೇಳಿದೆಯೇ ವಿನಃ ಅವರ ಸ್ವರೂಪವೇ ಹೀಗಿರುವುದರಿಂದ ಇದು ದೋಷವಲ್ಲ. ಶ್ರೀಮಹಾಲಕ್ಷ್ಮಿಯು ಪರಾಧೀನಳು ಎಂದ ಹಾಗೆ. ಇವರು ಫಲಾಪೇಕ್ಷೆ ರಹಿತರು ಎಂದು ಇದರ ಅರ್ಥ.

ಹೀಗೆ ಯಾರು ಶ್ರೀರಾಮನಲ್ಲಿಯೂ ತನ್ನಲ್ಲಿಯೂ ಯಥಾರ್ಥವಾದ ಜ್ಞಾನವನ್ನು ಹೊಂದಿ ಹಿಗ್ಗಿ ಭಕ್ತಿಯಿಂದ ಭಜಿಸುತ್ತಾರೋ ಅಂಥವರಿಗೆ ಇಹದಲ್ಲಿಯೂ ಪಾರಮಾರ್ಥಿಕದಲ್ಲಿಯೂ ಸೌಖ್ಯವನ್ನಿತ್ತು ಕಾಪಾಡುವೆನೆಂದು ಶಪಥವನ್ನು ಮಾಡುತ್ತ ಹನುಮಂತನು ಪ್ರತಿ ಪ್ರತಿ ಗ್ರಾಮಗಳಲ್ಲಿಯೂ ಹಸ್ತವನ್ನು ಮೇಲಕ್ಕೆತ್ತಿ ಪೂಜೆಗೊಳ್ಳುತ್ತಿದ್ದಾನೆ.

ಇಲ್ಲಿಗೆ ಶ್ರೀ ಮದ್ಹನುಮದಾವತಾರ ನಿಮಿತ್ತ ವರ್ಣನೆಯು ಸಂಕ್ಷೇಪಗೊಂಡಿರುತ್ತದೆ. ಮುಂದೆ ಭೀಮಾವತಾರದ ನಿಮಿತ್ತವು ವರ್ಣಿತವಾಗಿರುತ್ತದೆ.

**॥ ಪದ ॥ ಗರ್ಭಸ್ಥ ಜೀವರ। ನಿರ್ಭಯದಿ ಸಲಹುವ ।**
**ಉದ್ಭವಸಿದ ಕುಂತಿ । ಗರ್ಭದಲೆಂತೋ ॥**
**ಬರ್ಬರಗೊಳಿಸುವ । ಕಾರ್ಬೊಗೆಯುಂಡವ ।**
**ದುರ್ಬುದ್ಧಿ ಇಟ್ಟ ಗರಕೆ । ಮಬ್ಬುಗೊಂಡದ್ದೇಕೋ ॥ ೧೮ ॥**

**ಶಬ್ದಾರ್ಥ:** ಗರ್ಭಸ್ಥ = ತಂದೆ ಅಥವಾ ತಾಯಿಯೇ ಇರಲಿ. ಅವರ ಗರ್ಭದಲ್ಲಿ ರೇತಸ್ಸು; ಅಥವಾ ಭ್ರೂಣ ರೂಪದಿಂದ ಜೀವನಿದ್ದರೂ; ನಿರ್ಭಯದಿ ಸಲಹುವ = ಅಲ್ಲಿ ಜೀವಾಂತರ್ಯಾಮಿಯಾಗಿ ಇದ್ದು, ಅಲ್ಲಿ ತಾನು ಇದ್ದುದೇ ಆದರೆ ಎಲ್ಲಿ ತನಗೂ ಜೀವರಂತೆ ಆಯಾ ಗರ್ಭ ನಿಮಿತ್ತ ದುಃಖ ಉಂಟಾಗುತ್ತದೋ ಏನೋ ಎಂಬ ಭಯವಿಲ್ಲದ ವಾಯು; ಕುಂತಿಗರ್ಭದಲ್ಲಿ ತಾನೇ; ಉದ್ಭವಿಸಿದನೆಂತೋ = ಹೇಗೆ ಹುಟ್ಟಿದನೊ; ಬರ್ಬರಗೊಳಿಸುವ = ಮರಣ ಸಂಕಟವನ್ನೀಯುವ; ಕಾರ್ಬೊಗೆ = ಹಾಲಹಲವೆಂಬ ವಿಷಾನಿಲ; ಉಂಡವ = ಹೀರಿದವನು; ದುರ್ಬುದ್ಧಿ = ಕಲಿದುರ್ಯೋದನನು; ಇಟ್ಟ = ಉಣಿಸಿದ; ಗರಕೆ = ವಿಷದ ಕಜ್ಜಾಯಕ್ಕೆ; ಮಬ್ಬುಗೊಂಡದ್ದು = ಮೂರ್ಛೆ ಹೋದವನಂತೆ ನಟಿಸಿದ್ದು; ಯಾಕೋ = ಏನು ಕಾರಣ? ಲೀಲೆ ಇರಬಹುದು?

**ಭಾವಾರ್ಥ:** ವಾಯುದೇವರ ಅವತಾರ ತ್ರಯಗಳಲ್ಲಿ ಈಗ ಹನುಮದವತಾರದ ಲೀಲೆಯು ಮುಗಿದು "ಸಂತೋದ್ವಿತೀಯಂ ಪ್ರವದಂತಿ ಭೀಮಂ" ಎಂದಂತೆ ಭೀಮಾವತಾರವು ಪ್ರಾರಂಭವಾಗುವುದು. ಈ ಅವತಾರದಲ್ಲಿ ಶ್ರೀ ಹರಿ ಪ್ರೀತ್ಯರ್ಥವಾಗಿ ತೋರಿದ ಲೀಲೆಗಳು ಭಿನ್ನವಾದದ್ದಾಗಿ ಏನೂ ಇಲ್ಲ. ಇದು ಮುಂದುವರಿಸಿದ ಲೀಲೆಯಷ್ಟೆ.

ವಾಯುದೇವರಿಗೆ ಯಾವ ಕಾಲಕ್ಕೂ ಗರ್ಭ ದುಃಖವಿಲ್ಲವೆಂದು ಹೇಳುತ್ತಾರೆ. ಹಾಗೆ ಹೇಳುವಲ್ಲಿ ಹೆಚ್ಚಿನ ವಿಶ್ಲೇಷಣೆಯ ಅವಶ್ಯಕತೆ ಇದೆ. ಹನುಮಂತನಾಗಲೀ, ಭೀಮನಾಗಲೀ, ಶ್ರೀಮಧ್ವರೇ ಆಗಲಿ. ಅವರು ತಾಯಿಯ ಗರ್ಭದಿಂದ ಹುಟ್ಟಲಿಲ್ಲ. ಕೇವಲ ವಾಯುದೇವರು ಸ್ಪರ್ಶ ಮಾಡಿದ ಮಾತ್ರದಿಂದಲೇ ಪ್ರಾದುರ್ಭಾವ ರೂಪವನ್ನು ತಾಳಿಕೊಂಡು ಪ್ರಕಟಿತರಾದರು ಎಂದು ಹೇಳುತ್ತಾರೆ. ಹೀಗೆ ಹೇಳುವವರಲ್ಲಿ ಸ್ವಲ್ಪ ಅಳುಕು ಇಣಿಕಿರುವಂತೆ ತೋರುತ್ತದೆ. ಯಾಕೆಂದರೆ ಗರ್ಭದಲ್ಲಿ ಜೀವನಿದ್ದರೆ ಜೀವನಿಗೆ ಗರ್ಭಯಾತನೆಯಾಗುತ್ತದೆ. ವಾಯುದೇವರಿಗೆ ಗರ್ಭಯಾತನೆಯು ಇಲ್ಲ. ಅಂದ ಬಳಿಕ ಕಿರಿಕಿರಿ ಬೇಡಾ. ವಾಯು ದೇವರು ಗರ್ಭವನ್ನೇ ಪ್ರವೇಶಿಸಿಲ್ಲ. ಬಾಹ್ಯದಲ್ಲಿಯೇ ಪ್ರಾದುರ್ಭವಿಸಿದರು ಎಂದು ಬಿಟ್ಟರೆ ಸರಿಹೋಗುತ್ತದೆ ಎಂತ ತಿಳಿಯುವವರೂ ಇದ್ದಾರೆ. ಬಳಿತ್ಥಾ ಸೂಕ್ತದ ಪ್ರಕಾರ ವಾಯು ದೇವರಿಗೆ ಮೂರು ಅವತಾರಗಳಲ್ಲಿಯೂ ಸ್ತ್ರೀಯರಲ್ಲಿ ಅವತಾರ ಉಂಟು ಎಂದು ತಿಳಿಯುತ್ತದೆ. **"ಯದಿಮುಹ್ವರತೆ । ಸಾಧತೆ ಮತಿರುತಸ್ಯಧೇನಾ ಅನಯಂತ ಸಸ್ಸೃತಃ ॥ ಪೃಕ್ಷೋವಪುಃ ಪಿತುಮಾನ್ನಿತ್ಯ ಆಶಯೇ ದ್ವಿತೀಯಮಾಸಪ್ತ ಶಿವಾಸು ಮಾತೃಷು ॥ ತೃತೀಯ ಮಸ್ಯ ಖುಷಭಸ್ಯ ದೋಹಸೆ ದಶಪ್ರಮತಿಂ ಜನಯಂತ ಯೋಷಣಃ"** ಎಂಬಲ್ಲಿ ಸ್ಪಷ್ಟವಾಗಿ ಮೂರು ಅವತಾರಗಳಲ್ಲಿಯೂ ವಾಯುವಿಗೆ ಗರ್ಭವಾಸ ಉಂಟೆಂದು ತಿಳಿಯುತ್ತದೆ. ಹಾಗಾದರೆ "ಗರ್ಭ ದುಃಖ ವಿವರ್ಜಿತ" ಎಂಬುದಕ್ಕೆ ಏನರ್ಥವೆಂದರೆ ವಾಯುದೇವರು ಗರ್ಭದಲ್ಲಿ ಇದ್ದರೂ ಅವರಿಗೆ ತ್ರಿಧಾತು ಬಾಧೆ ಇಲ್ಲವೆಂದು ತಿಳಿಯಬೇಕು. ಗರ್ಭದಲ್ಲಿ ಇದ್ದಾಕ್ಷಣ ಗರ್ಭ ದುಃಖವು ಆಗಲೇಬೇಕೆಂದೇನೂ ಇಲ್ಲ. ಕೇವಲ ಅಪರೋಕ್ಷ ಜ್ಞಾನಿಗಳು ಅವತರಿಸುವಾಗ ಪ್ರಾರಬ್ಧ ನಿಮಿತ್ತವಾಗಿ ಗರ್ಭಯಾತನೆಯನ್ನು ಅನುಭವಿಸಿದರೂ ಅವರು ನಿರ್ಲಿಪ್ತರಾಗಿರುತ್ತಾರೆಂದ ಮೇಲೆ ಇನ್ನು

ವಾಯುದೇವರಿಗೆ ಎಲ್ಲಿದೆ ಗರ್ಭಯಾತನೇ? ಹಾಗೆ ನೋಡಿದರೆ ಸದಾಕಾಲವೂ ವಾಯು ದೇವರು ಗರ್ಭಗತರಾಗಿಯೇ ಇರುತ್ತಾರೆ. ಗರ್ಭದಲ್ಲಿ ಇರುವ, ಗರ್ಭದಿಂದ ಬರುವ, ಗರ್ಭವನ್ನು ಸೇರುವ ಎಂಭತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿ ಅನಂತ ಕೋಟಿ ಸಂಖ್ಯೆಗಳಲ್ಲಿ ಇರುವ ಜೀವರಲ್ಲಿ ವಾಯು ದೇವರು ನಿತ್ಯವೂ ಅಂತರ್ಯಾಮಿಯಾಗಿ ಇರುವವರೇ ಆಗಿದ್ದಾರೆ. ಅವರಿಲ್ಲದೆ ಭ್ರೂಣವು ಸಹ ವೃದ್ಧಿಯಾಗುವುದಾದರೂ ಎಂತು? ಆದ್ದರಿಂದ ವಾಯುದೇವರು "ಕುಂತೀ ಜಠರಾಂಬೋನಿಧಿ ಚಂದ್ರಮ"ನಾಗಿ ಅವತರಿಸಿದರೂ ಆತನಿಗೆ ಗರ್ಭ ದುಃಖವಿರಲಿಲ್ಲ ಎಂದು ತಿಳಿಯಬೇಕು. ಮಧ್ವಾವತಾರದಲ್ಲಿ ಮಾತ್ರ ಅವರು ಗರ್ಭವನ್ನು ಪ್ರವೇಶಿಸಲಿಲ್ಲ ಎಂಬ ನಿರೂಪಣೆಯೂ ಇದೆ. ಅದರ ಬಗ್ಗೆ ವಿವರಣೆಯನ್ನು ಮುಂದೆ ಆ ಸಂದರ್ಭದಲ್ಲಿ ನೀಡಲಾಗುವುದು.

ಸಮಸ್ತ ಜೀವರಾಶಿಗಳು ತಾಯಿ ಗರ್ಭದಲ್ಲಿ ಇರುವಾಗ ಅವರಲ್ಲಿ ಅಂತರ್ಯಾಮಿಯಾಗಿ ವಾಯುದೇವರು ಅಲ್ಲಿ ಇದ್ದೇ ಇರುತ್ತಾರೆ. ಅವರಿಗೆ ಯಾವ ಗರ್ಭ ಯಾತನೆಯೂ ಇಲ್ಲ. ಜೀವರಿಗೆ ಮಾತ್ರ ಉಂಟು. ಹೀಗಿದ್ದರೂ ಜೀವರ ಅಂತರ್ಯಾಮಿಯಾಗಿ ಅಲ್ಲದೆ ತಾನೇ ಗರ್ಭದುಃಖವನ್ನು ಅನುಭವಿಸಿ ಹುಟ್ಟಿದನೇನೋ ಎನ್ನುವಂತೆ ಕುಂತಿ ದೇವಿಯಲ್ಲಿ ಜನಿಸಿರುತ್ತಾನೆ. ನಮ್ಮಂತೆ ಈತನು ಎಂದು ಅಸುರರು ತಿಳಿಯಲಿ ಎಂದು. ದುರ್ಯೋಧನಾದಿಗಳು ಭೀಮನನ್ನು ತಮ್ಮಂತೇ ಇವನೂ ಒಬ್ಬ 'ಜಾತ' ನೆಂದೇ ಭಾವಿಸಿದರು.

ದೇವದಾನವರು ಯಾವಾಗಲೂ ಸ್ಪರ್ಧಿಗಳೇ. ಬಾಲ್ಯದಿಂದಾರಂಭಿಸಿ ಕೌರವ-ಪಾಂಡವರು ಪರಸ್ಪರ ವಿಭಿನ್ನ ಸ್ವಭಾವದಿಂದ ಇದ್ದುದರಿಂದ ಇವರು ಕೂಡಿ ಬಾಳಲಾಗಲಿಲ್ಲ. ಬಾಲಕ್ರೀಡೆ ಆಟ ಪಾಠಗಳಲ್ಲೂ ಪಾಂಡವರು ದೈತ್ಯಾಂಶ ಸಂಭೂತರಾದ ಕೌರವರನ್ನು ಯಾವಾಗಲೂ ಹಿಂದಿಕ್ಕಿರುತ್ತಿದ್ದರು. ಮರ ಮಂಗನಾಟದಲ್ಲಿ ಭೀಮನು ಕೌರವರನ್ನೆಲ್ಲಾ ಮರ ಹತ್ತಿ ಹಿಡಿಯುವುದರ ಬದಲು ಮರದ ಬುಡವನ್ನೇ ಅಲ್ಲಾಡಿಸಿ ಅವರನ್ನು ಕೆಳಗೆ ತರಗಲೆಗಳಂತೆ ಉದುರಿಸಿಬಿಡುತ್ತಿದ್ದನು. ದುರ್ಯೋಧನಾದಿಗಳು ಮನೆಗೆ ಹೋಗಿ ತಮ್ಮ ತಂದೆ ಧೃತರಾಷ್ಟ್ರನಿಗೆ ತಮ್ಮ ಮೈಗಾಯ, ಧೂಳಿಗಳನ್ನು ತೋರಿಸಿ ಭೀಮನ ಮೇಲೆ ದೂರನ್ನು ನೀಡುತ್ತಿದ್ದರು. ಆಗ ಭೀಮನೂ ಸಹ ತಾನೇ ಮುಳ್ಳು ಕಲ್ಲುಗಳಿಂದ ತನ್ನ ಮೈಯನ್ನು ಪರಚಿಕೊಂಡು ಧೂಳಿನಲ್ಲಿ ಹೊರಳಿ ತನ್ನನ್ನೂ ದುರ್ಯೋಧನಾದಿಗಳು ಹಿಂಸೆ ಪಡಿಸಿದ್ದಾರೆ ಎಂದು ತೋರಿಸುತ್ತಿದ್ದನು. "ನೋಡು ದೊಡ್ಡಪ್ಪಾ, ಅವರು ನೂರಾ ಒಂದು ಜನ. ಇವರನ್ನು ಎದುರಿಸಲು ಸಾಧ್ಯವಾಗದೆ ನನ್ನ ಅಣ್ಣ, ತಮ್ಮಂದಿರು ಓಡಿ ಹೋದರು ನಾನು ಒಬ್ಬನೇ ಇವರ ಕೈಗೆ ಸಿಕ್ಕಿ ಬಿದ್ದೆ. ಯಾರು ದುಷ್ಟಕಾರ್ಯವನ್ನು ಮಾಡಿರಬಹುದು? ನೀನೇ ಹೇಳು" ಎಂದು ಧೃತರಾಷ್ಟ್ರನ ಬಾಯಿಯನ್ನು ಮುಚ್ಚಿಸುತ್ತಿದ್ದನು. ಇಲ್ಲಿ ಭೀಮನು ಮಾಡಿದ ಭಗವತ್ಸೇವಯಾದ ಕಾರ್ಯವಾವುದೆಂದರೆ ವಜ್ರ ಶರೀರಿಯಾದ ಭೀಮನಿಗೆ ಗಾಯಗಳಾದುವು. ಅನಿಲ ಎಂದರೆ ಪರಿಶುದ್ಧ ಗಾತ್ರನಾದ ಭೀಮನ ಮೈ ಧೂಳಿಮಯವಾಯಿತು ಎಂಬ ಅಸಮಿಚೀನವಾದ ಜ್ಞಾನವು ದೈತ್ಯರಿಗೆ ಬರುವಂತೆ ನಟಿಸಿದ್ದು ಇಲ್ಲಿ ಸ್ಮರಿಸಲ್ಪಡಬೇಕು.

ಭೀಮನ ಏಳ್ಗೆಯನ್ನು ಸಹಿಸದ ದುರ್ಯೋಧನಾದಿಗಳು ಇನ್ನು ಭೀಮನನ್ನು ಮಾರಾಂತು ಎದುರಿಸಿ ಗೆಲ್ಲಲು ನಮ್ಮಿಂದ ಸಾಧ್ಯವಿಲ್ಲ. ಈತನು "ಪಾಂಡಿತ್ಯೇಚ। ಪಟುತ್ವೇಚ । ಶೂರತ್ವೇಚ। ಬಲೇಪಿಚ" ನಮಗೆ ನುಂಗಲಾಗದ ತುತ್ತಾಗಿರುವನು. ಆದ್ದರಿಂದ ಈತನನ್ನು ಉಪಾಯದಿಂದ ಕೊಂದೇ ಬಿಡಬೇಕೆಂದು ಬಯಸಿದರು. ಹಾಗೆ ಮಾಡಲು ಅವರು ಯುಕ್ತಿ ಭೋಜನ ಕೂಟವನ್ನು ಏರ್ಪಡಿಸಿ ಪಾಂಡವರೊಡನೆ ವನ ಭೋಜನಕ್ಕೆ ತೆರಳಿದರು. ಅಲ್ಲಿ ಎಲ್ಲರೂ ಭೋಜನವನ್ನು ಮಾಡುತ್ತಿರಲು ದುರ್ಯೋಧನನು ಭೀಮನಿಗೆ ವಿಷಪೂರಿತವಾದ ಲಡ್ಡುಗೆಗಳನ್ನು ನೀಡಿದನು. ಈ

ತತ ತಾಯಿಯು. ಆತತಾಯಿ ಎಂದರೆ ವಿಷವಿಕ್ಕುವವನು(ಳು). ಬೆಂಕಿ ಹಚ್ಚುವವನು (ಳು). ನೀರಿಗೆ ತಳ್ಳುವವನು (ಳು) ಸತಿ ಪತಿಗೆ ಭೇದವನ್ನು ಹುಟ್ಟಿಸುವವನು (ಳು) ಇತ್ಯಾದಿ. ಯಾವಾಗ ಭೀಮನು ಆ ಲಡ್ಡುಗೆಗಳನ್ನು ತಿಂದನೋ ಆ ಕ್ಷಣದಲ್ಲಿ ಮೂರ್ಛೆ ಹೋದವನಂತೆ ಮಲಗಿ ಬಿಟ್ಟನು. ಆಗ ದುರ್ಯೋಧನನು ತನ್ನ ಸಹೋದರರಿಂದ ಕೂಡಿಕೊಂಡು ಭೀಮನ ಕೈ, ಕಾಲುಗಳನ್ನು ಕಟ್ಟಿ ಅಲ್ಲೇ ಇದ್ದ ಪ್ರಮಾಣ ಕೋಟಿ ಎಂಬ ಸರೋವರಕ್ಕೆ ತಳ್ಳಿ ಏನೂ ಅರಿಯದವನಂತೆ ಪಲಾಯನ ಮಾಡಿಬಿಟ್ಟರು. ಭೀಮನಾದರೂ ಈ ಕೊಲೆ ಪಾತಕರು ಎಂಥವರೆಂಬುದನ್ನು ಜಗತ್ತಿಗೆ ಪ್ರಕಟಿಸಲು ಮತ್ತು ಇಂಥವರ ಕೃತ್ಯದಿಂದ ಜಗತ್ತಿನ ಮೇಲೆ ಯಾವ ಪರಿಣಾಮವಾಗಬಹುದು ಎಂಬುದನ್ನು ತೋರಿಸಲು ಸುಮ್ಮನಿದ್ದನು. ಇಲ್ಲಿ ಭೀಮನು ದುರ್ಯೋಧನನ ಯೋಗ್ಯತೆಯನ್ನು ಪ್ರಕಟಿಸಿದನು. ತನ್ನ ಯೋಗ್ಯತೆಯನ್ನು ಮರೆ ಮಾಚಿದನು ಮತ್ತು ದುಯೋಧನಾದಿ ದೈತ್ಯರಿಗೆ ಮೂಲ ರೂಪದಿಂದಲೂ ಭೀಮನು ತಪ್ಪುಂತೆ ಭೋಜನ ..... ವಿಷವಿಕ್ಕಿದರೆ ಸಾಯುವವನು ಎಂಬ ಅಯಥಾರ್ಥಜ್ಞಾನಾಭಿವೃದ್ಧಿಗಾಗಿ ಮೂರ್ಛಿತನಾದವನಂತೆ ನಟಿಸಿದನು.

ಸರಿ. ಪ್ರಮಾಣ ಕೋಟಿಯ ಆಳವು ಸಾಮಾನ್ಯವಾದುದೇ? ಅದರ ತಳವು ಪಾತಾಳವು. ಕೈಕಾಲುಗಳನ್ನು ಕಟ್ಟಿಸಿಕೊಂಡು ಕಲ್ಲಿನಂತೆ ನೀರಿನಲ್ಲಿ ಮುಳುಗಿದ ಭೀಮನು ಪಾತಾಳವನ್ನೇ ಸೇರಿದನು. ಅಲ್ಲಿದ್ದ ವಿಷಮಯ ಸರ್ಪಗಳು ಭೀಮನನ್ನು ಘೂತ್ಕಾರದಿಂದ ಅಪ್ಪಳಿಸಿದವು. ವಜ್ರ ಶರೀರಿಯಾದ ಭೀಮನಿಗೆ ಅವು ಎಷ್ಟು ರಭಸದಿಂದ ಅಪ್ಪಳಿಸಿದವೋ ಅಷ್ಟೇ ರಭಸದಿಂದ ಅವುಗಳ ವಿಷದಂತಗಳು ಪುಡಿ ಪುಡಿಯಾದವು. ಅಷ್ಟೇ ಅಲ್ಲ. ಭೀಮನು ಉರುಳಿದಂತೆಲ್ಲಾ ಆ ಸರ್ಪಗಳು ಆತನಡಿಗೆ ಸಿಕ್ಕು ಅಪ್ಪಚ್ಚಿಯಾದವು. ಇನ್ನೇನು ಶೇಷನ ಮೇಲೆ ಉರುಳಬೇಕು. ಅಷ್ಟರಲ್ಲೇ ಭಯಗಸ್ಥನಾದ ಶೇಷನು ಓಡಿ ಬಂದು ಭೀಮನಿಗೆ ಎರಗಿ ತನ್ನನ್ನೂ ತನ್ನ ಪರಿವಾರವನ್ನೂ ರಕ್ಷಿಸಬೇಕೆಂದು ಬೇಡಿಕೊಂಡನು. ಆಗ ಭೀಮನು ದುರ್ಧರ್ಮನು ಕಟ್ಟಿದ್ದ ಹಗ್ಗಗಳನ್ನು ಜೇಡ ಹುಳದ ತಂತುಗಳನ್ನು ಕತ್ತರಿಸುವಂತೆ ಕತ್ತರಿಸಿ ಎದ್ದು ಕುಳಿತನು. ಜೇಡನೂಲಿನಿಂದ ಆನೆಯನ್ನು ಕಟ್ಟಲಾದೀತೇ? ಆಗ ನಾಗರಾಜನು ಭೀಮಸೇನನಿಗೆ ಅರ್ಘ್ಯ. ಪಾದ್ಯದಿಗಳಿಂದ ಪಾದ ಪೂಜೆಯನ್ನು ಮಾಡಿ ರತ್ನ ಮಣಿಗಳನ್ನು ಕಾಣಿಕೆಗಳನ್ನಾಗಿ ಇತ್ತು ಮನ್ನಿಸಿ ಕಳುಹಿಸಿಕೊಟ್ಟನು. ತರುವಾಯ ಭೀಮನು ಬದುಕಿ ಬಂದುದನ್ನು ಕಂಡು ಕೌರವರಿಗೆ ಆಶ್ಚರ್ಯವಾಯಿತು. ಭೀಮನ ಈ ಲೀಲೆಯು ದೈತ್ಯರಿಗೆ ಆಶ್ಚರ್ಯಕರವಾದುದೇ ಸರಿ. ಭೀಮನಿಗಲ್ಲ.

ಯಾವ ಮೂಲಾವತಾರ ಭೇದ ವರ್ಜಿತರಾದ ಭೀಮಸೇನರು ಹಿಂದೆ ಸಮುದ್ರಮಥನ ಕಾಲದಲ್ಲಿ ಉದ್ಭವಿಸಿದ್ದ ಮೂರು ಲೋಕ ತಾಪದಾಯಕವಾದ ಹಾಲಾಹಲವನ್ನೇ ನುಂಗಿ ನಿರ್ಭಯದಿಂದ ಜಗತ್ತನ್ನು ರಕ್ಷಿಸಿದನೋ ಅಂಥಾ ಈತನಿಗೆ ದುರ್ಯೋಧನನು ಇತ್ತ ಆ ದುರ್ಬಲವಾದ ವಿಷದ ಧೂಳೀ ಕಣವು ಪರಿಣಾಮವನ್ನು ಬೀರಬಲ್ಲುದೇ? ಈ ಧೂಳೀ ಕಣದಿಂದ ಭೀಮನು ಮರಣವನ್ನು ಹೊಂದುವನೆಂದು ತಿಳಿದುದೇ ಆ ಪಾಪಿಯ ಮೌಢ್ಯಕ್ಕೆ ಹಿಡಿದ ಕನ್ನಡಿ. ಅವನ ಸ್ವರೂಪಕ್ಕೆ ಸಾಕ್ಷಿಯಾಗಿ ನಿಂತ ಕ್ಷ ಕಿರಣ ಅಮೃತ ಸ್ವರೂಪಿಯಾದ ಪ್ರಾಣದೇವರಿಗೆ ಮರಣ ಉಂಟೇ? ಆತನಿಗೆ ಮರಣವಾದರೆ ಜಗತ್ತು ಜೀವಿಸಿರುತ್ತದೆಯೇ? ಈ ಜ್ಞಾನವು ತಮೋ ಯೋಗ್ಯರಿಗೆ ಇದೆಯೇ?

**"ಭುಕ್ತಂಚ ಜೀರ್ಣಂ ಪರಿಪಂಥಿ ದತ್ತಂ । ವಿಷಂ ವಿಷಘ್ನೋ ವಿಷ ಬೃದ್ಗಣೋಥः॥**
**ಪ್ರಮಾಣಕೋಟೇः ಸಹಿಹೇಲ। ಯಾಗಾನ್ನೇದಂ ಜಗಜ್ಜೀವನದೇತ್ರ ಚಿತ್ರಂ ॥"**

ಎಂದಿತು ಜ್ಞಾನಿ ಕುಲವು.

ಸಮುದ್ರ ಮಥನಾನಂತರದಲ್ಲಿ ಉದ್ಭವಿಸಿದ ವಿಷವನ್ನು ಪಾನ ಮಾಡಿದುದು ಶಂಕರನು. ಮಾಧ್ವರು ಮಾತ್ರ ವಿಷವನ್ನು ಪಾನ ಮಾಡಿದುದು ವಾಯುದೇವರೆಂದು ಹೇಳುತ್ತಾರೆ. ಬೇರೆ ಯಾರೂ ಹಾಗೆ ಹೇಳುವುದಿಲ್ಲ. ಒಂದು ವೇಳೆ ವಿಷವನ್ನು ವಾಯುದೇವರೇ ಕುಡಿದಿದ್ದುದಾಗಿದ್ದರೆ ಹಾಗೆ ವಾಯುದೇವರು ವಿಷವನ್ನು ಕುಡಿದಿದ್ದುದು ಎಂಬುದೇ ಯಾಕೆ ಪ್ರಚಾರಕ್ಕೆ ಬರಲಿಲ್ಲ? ಹಾಗೂ ರುದ್ರದೇವರು ವಿಷವನ್ನು ಕುಡಿದರೆಂಬ ಪ್ರತೀತಿಯು ಏಕೆ ಪ್ರಚಾರಕ್ಕೆ ಬಂದಿತು? ಎಂಬ ಪ್ರಶ್ನೆಗಳು ಇವೆ. ಇದಕ್ಕೆ ಉತ್ತರವಾಗಿ ಹೇಳುತ್ತಾರೆ. ಇಲ್ಲಾ ವಿಷವನ್ನು ಕುಡಿದದ್ದು ವಾಯುದೇವರೇ. ಆದರೆ ಸ್ವಲ್ಪವನ್ನು ಮಾತ್ರ ರುದ್ರ ದೇವರಿಗೆ ಕೊಟ್ಟು ಉಳಿದ ಬಹು ಭಾಗವನ್ನು ತಾನೇ ಕುಡಿದನು ಎಂದು ಹೇಳುತ್ತಾರೆ. ಇದಕ್ಕೆ ಮರು ಪ್ರಶ್ನೆಯು ಬಂದೇ ಬರುತ್ತದೆ. ವಿಷವನ್ನು ಪಾನ ಮಾಡುವುದಿದ್ದರೆ ಪೂರ್ತಿಯಾಗಿ ವಾಯುವೇ ಮಾಡಬೇಕಾಗಿತ್ತು ಅಥವಾ ರುದ್ರ ದೇವರು ಮಾಡಬೇಕಾಗಿತ್ತು. ಅದನ್ನು ಬಿಟ್ಟು ಮಧ್ಯಂತರವಾಗಿ ವಾಯುವು ವಿಷದ ಬಹುಬಾಗವನ್ನು ಪಾನ ಮಾಡಿ ಸ್ವಲ್ಪವನ್ನು ಮಾತ್ರ ಶಂಕರನಿಗೆ ಕೊಟ್ಟನೆಂದರೆ ನಂಬಲಿಕ್ಕೆ ಸಾಧ್ಯವೇ? ವಾಯುದೇವರು ಸ್ವಲ್ಪವನ್ನು ಮಾತ್ರ ರುದ್ರದೇವರಿಗೆ ಯಾಕೆ ಕೊಟ್ಟರು? ಎಂಬುದಕ್ಕೆ ರುದ್ರ ದೇವರಿಗೆ ಕೀರ್ತಿ ಬರಲೆಂದು ಕೊಟ್ಟರೆಂದು ಹೇಳುತ್ತಾರೆ. ಇದು ಸರಿಯಾದ ಉತ್ತರವೇ? ಕೀರ್ತಿ ಬರಲೆಂದು ಯಾರಾದರೂ ವಿಷವನ್ನು ಕೊಡುತ್ತಾರೆಯೇ ॥ ಇದರಿಂದ ಕೀರ್ತಿಯು ಯಾರಿಗೆ ಬರುತ್ತದೆ. ವಿಷವೆಂದರೆ ಅದೇನು ಪಾನಕವೇ? ಮಜ್ಜಿಗೆಯೇ? ಕಟ್ಟು ಕಥೆಯನ್ನು ಎಷ್ಟು ಚೆನ್ನಾಗಿ ಹೆಣೆದಿದ್ದಾರೆ ನೋಡಿ ಎಂದರೆ ಏನೆಂದು ಉತ್ತರವನ್ನು ಕೊಡಬಹುದು? ನಿಜವಾಗಿ ಹೇಳುವುದಾದರೆ ವಾಯುದೇವರು ಹಾಲಾಹಲದ ಬಹುಭಾಗವನ್ನು ತಾವೇ ಪಾನ ಮಾಡಿ ಸ್ವಲ್ಪವನ್ನು ಮಾತ್ರ ರುದ್ರ ದೇವರಿಗೆ ಕೊಟ್ಟರು ನಿಜ. ಅವರು ಯಾಕೆ ಹಾಗೆ ಮಾಡಿದರೆಂದರೆ ಒಂದು ವೇಳೆ ಪೂರ್ತಿಯಾಗಿ ವಿಷವನ್ನು ವಾಯುದೇವರೇ ಕುಡಿದುಬಿಟ್ಟಿದ್ದರೆ ಅಸುರರೂ ವಾಯುದೇವರಲ್ಲಿಗೆ ಬಂದು ಶರಣಾಗತರಾಗಿ ಸೇವೆಯನ್ನು ಪ್ರಾರಂಭಿಸುತ್ತಿದ್ದರು. ಅದಕ್ಕಾಗಿ ಅವರು ಗುಪ್ತವಾಗಿ ಎಲ್ಲವನ್ನೂ ತಾವೇ ಪಾನ ಮಾಡಿ ಸ್ವಲ್ಪವನ್ನು ಮಾತ್ರ ರುದ್ರದೇವರಿಗೆ ಬಹಿರಂಗವಾಗಿ ಇತ್ತರು. ಹಾಗೆ ಇತ್ತ ಅಲ್ಪಾಂಶ ವಿಷವನ್ನು ಪಾನ ಮಾಡಿದ ರುದ್ರನನ್ನು ಕಂಡ ದೈತ್ಯರು ಓಹೋ ಶಂಕರನೇ ವಿಷಪಾನವನ್ನು ಮಾಡಿ ನಮ್ಮನ್ನು ರಕ್ಷಿಸಿದನು. ಆತನೇ ಸರ್ವೋತ್ತಮನು ಎಂದು ತಿಳಿದರು. ದೇವತೆಗಳೂ ಈ ದೈತ್ಯರ ಅಜ್ಞಾನವನ್ನು ದಟ್ಟಣೆ ಮಾಡಲಿಕ್ಕಾಗಿ ತಾವೂ ಸಹ ಶಂಕರನನ್ನು ವಿಷಕಂಠನೆಂದು ಸ್ತುತಿ ಮಾಡಿದರು.

ವಾಯುದೇವರು ಪೂರ್ತಿಯಾಗಿ ವಿಷವನ್ನು ಪಾನ ಮಾಡಿಬಿಟ್ಟಿದ್ದರೆ ವಾಯುವಿಗೂ ಮತ್ತು ಶಂಕರನಿಗೂ ಇರುವ ವ್ಯತ್ಯಾಸವು ದೇವತೆಗಳಿಗೆ ತಿಳಿಯುತ್ತಿರಲಿಲ್ಲ. ಅಸುರಾವೇಶ ನಿಮಿತ್ತ ಶಿವ ಸರ್ವೋತ್ತಮನೆಂದು ದೇವತೆಗಳಿಗೆ ಮೋಹಕವು ಕವಿದಿದ್ದಿತು.

ಪ್ರಚಂಡವಾಗಿ ಕ್ಷುದ್ರದೇವತೆಗಳನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುವಾಗ ಅದನ್ನು ನೋಡಿ ನಮಗೂ ಅವುಗಳೀಗೆ ನಮನ ಮಾಡಬೇಕೆಂಬ ಮೋಹವು ಹುಟ್ಟಿ ಬಿಡುತ್ತದೆ. ಇದನ್ನು ಬಿಡಿಸಲಿಕ್ಕಾಗಿಯೇ ವಾಯುದೇವರು ಸ್ವಲ್ಪ ಮಾತ್ರ ವಿಷವನ್ನು, ಅದನ್ನೂ ಉಪಮರ್ದಮಾಡಿ ಶಂಕರನಿಗೆ ಕೊಟ್ಟರು. ಅಷ್ಟು ಮಾತ್ರವನ್ನೇ ಸ್ವೀಕರಿಸಿದ ಶಂಕರನು ಮೂರ್ಛಾವಸ್ಥೆಯನ್ನು ಹೊಂದಿದನು. ಆಗ ಶ್ರೀರಾಮ ನಾಮ ಸ್ಮರಣೆಯಿಂದ ಗಿರಿಜೆಯು ಪರಮ ಮಂಗಳೆಯಾಗಿ ಶಿವನ ಕಂಠವನ್ನು ಬಿಗಿ ಹಿಡಿದುದರಿಂದ ಆ ವಿಷವು ಕಂಠದಲ್ಲೇ ಉಳಿದು ಬಿಟ್ಟಿತು. ಆಗ ಆ ಕಂಠವು ನೀಲವರ್ಣವಾಯಿತು. ಅಂದಿನಿಂದ ಶಿವನು ನೀಲಕಂಠನೆಂದು ಪ್ರಸಿದ್ಧಿಯಾದನು. ಭಯಂಕರವಾದ ಪೂರ್ಣ

ಪ್ರಮಾಣದ ವಿಷವನ್ನು ಪಾನ ಮಾಡಿದ ವಾಯುವಿನ ಸಾಮರ್ಥ್ಯವನ್ನು ಅಲ್ಪಾಂಶ ಮಾತ್ರದಿಂದ ಬಳಲಿದ ಶಂಕರನ ಸಾಮರ್ಥ್ಯವನ್ನೂ ತುಲನಾತ್ಮಕವಾಗಿ ಕಂಡ ದೇವತೆಗಳು ತಮ್ಮ ಅಜ್ಞಾನವನ್ನು ತೊಲಗಿಸಿಕೊಂಡು ಶುದ್ಧವಾದ ಜ್ಞಾನದಿಂದ "ವಾಯು ಜೀವೋತ್ತುಮ"ರೆಂದು ಕೊಂಡಾಡಿದರು.

ಅಗಾಧವಾದ ವಿಷವನ್ನು ಪಾನ ಮಾಡಿದ ವಾಯುದೇವರು ಪ್ರಸಿದ್ಧಿಗೆ ಬಾರದಿರಲು ಕಾರಣವೇನೆಂದರೆ ಮೊದಲನೆಯದಾಗಿ ಅಸುರರು ತನ್ನನ್ನು ಯಥಾರ್ಥವಾಗಿ ತಿಳಿಯಬಾರದು ಎಂದು ಗುಪ್ತವಾಗಿ ಪಾನ ಮಾಡಿದರು. ಶಿವ ಸರ್ವೋತ್ತುಮನೆಂದು ಅವರು ಉಪಾಸನೆ ಮಾಡಲು ಅನುಕೂಲವಾಗಲೆಂದು ಶಿವನಿಗೆ ಅಲ್ಪಾಂಶವನ್ನಿತ್ತು ಅವರನ್ನು ಜಗತ್ತಿನಲ್ಲಿ ಪ್ರಕಟನೆ ಮಾಡಿದರು.

ಅಲ್ಪ ವಿಷವನ್ನು ಪಾನ ಮಾಡಿದ ಶಂಕರನು ಪ್ರಸಿದ್ಧಿಗೆ ಬರಲು ಮತ್ತೊಂದು ಕಾರಣವೇನೆಂದರೆ ಒಂದು ಉದಾಹರಣೆಯ ಮೂಲಕವಾಗಿ ಇದನ್ನು ವಿಶದಪಡಿಸಿಕೊಳ್ಳೋಣ. ತಂದೆ ಮತ್ತು ಮಗು ಊಟಕ್ಕೆ ಕುಳಿತಾಗ ನಾಲ್ಕು ಲಾಡನ್ನು ತಿಂದ ತಂದೆಯು ಸುಲಭವಾಗಿ ಅದನ್ನು ಅರಗಿಸಿಕೊಂಡು ಬಿಟ್ಟರೆ ಯಾರೂ ಆತನನ್ನು ಲಾಡು ತಿಂದನೆಂದು ಗಮನಕ್ಕೆ ತಂದು ಕೊಳ್ಳುವುದಿಲ್ಲ. ಆದರೆ ಗಂಜಿ ಕುಡಿಯುವ ಮಗುವು ಅರ್ಧ ಲಾಡನ್ನು ತಿಂದರೆ ಅದಕ್ಕೆ ಖಂಡಿತವಾಗಿಯೂ ಅಜೀರ್ಣ ದೋಷವು ಬಾಧಿಸುತ್ತದೆ. ಆಗ ಆ ಮಗುವನ್ನು ವೈದ್ಯರ ಬಳಿಗೆ ಕೊಂಡೊಯ್ದರೆ ನೆರೆ ಹೊರೆಯವರೆಲ್ಲಾ ಅದನ್ನು ಗಮನಿಸುತ್ತಾರೆ. ಈ ಪ್ರಕರಣವು ಬಹು ಪ್ರಚಾರವನ್ನು ಪಡೆಯುತ್ತದೆ. ನಾಲ್ಕು ಲಾಡನ್ನು ತಿಂದು ಅರಗಿಸಿಕೊಂಡ ತಂದೆಯ ಭೋಜನವು ಯಾಕೆ ಪ್ರಸಿದ್ಧಿಗೆ ಬರುತ್ತದೆ? ಹಾಗೆಯೇ ಕಲ್ಪಾತ್ಮಕವಾದ ವಿಷವನ್ನು ಭಂಜಿಸುವ ಸಾಮರ್ಥ್ಯವುಳ್ಳ, ಪ್ರಭಂಜನ ನಾಮಕರಾದ ಋಜುಪುಂಗವ ವಾಯುದೇವರು ಉದ್ದೇಶಪೂರ್ವಕವಾಗಿಯೇ ಹಲವು ಕಾರಣಗಳಿಂದ ಸ್ವ ಇಚ್ಛೆಯಿಂದಲೇ ತಮ್ಮ ಮಹಿಮೆಗಳನ್ನು ಕೇವಲ ಮುಕ್ತಿ ಯೋಗ್ಯರಿಗೆ ಮಾತ್ರ ತೋರಗೊಟ್ಟಿರುತ್ತಾನೆ. ದೈತ್ಯರಿಗಲ್ಲ. ಇಲ್ಲಿನ ಪ್ರಮೇಯವನ್ನು ತಿಳಿಯುವುದು ಮುಖ್ಯ. ಸಮುದ್ರ ಮಥನವೆಂದರೆ ಶಾಸ್ತ್ರಾಭ್ಯಾಸ. ಶಾಸ್ತ್ರಗಳನ್ನು ಜಿಜ್ಞಾಸ ಮಾಡುವಾಗ ವಿಪರೀತ ಜ್ಞಾನ, ಸಂಶಯ ಜ್ಞಾನ ಮತ್ತು ಯಥಾರ್ಥ ಜ್ಞಾನ ಎಂಬ ಮೂರು ಬಗೆಯ ಜ್ಞಾನಗಳು ಬರುತ್ತವೆ. ವಿಪರೀತ ಜ್ಞಾನವೇ ಹಾಲಾಹಲ. ಸಂಶಯ ಜ್ಞಾನವೇ ಸುರಾ. ಯಥಾರ್ಥ ಜ್ಞಾನವೇ ಅಮೃತವು. ವಿಪರೀತ ಜ್ಞಾನವನ್ನು ನಿರಾಕರಿಸುವ (ಭಂಜಿಸುತ) ಶಕ್ತಿಯು ವಾಯುದೇವರಿಗೆ ಮಾತ್ರ ಇದೆ. ಮತ್ತು ದೈತ್ಯರಿಗೆ ವಿಪರೀತ ಜ್ಞಾನದಲ್ಲೇ ಅಭಿರುಚಿಯನ್ನು ಹುಟ್ಟಿಸಲು ಪ್ರೇರಕ ಶಕ್ತಿಯು ಇರುವುದು ಸಹ ವಾಯುದೇವರಿಗೇನೇ. ಆದರೆ ಭಗವದಿಚ್ಛೆಯಂತೆ **"ಪಂಚವಕ್ತ್ರ ಮಹಾಬಾಹೋ ಮೋಹಶಾಸ್ತ್ರಾಣಿಕಾರಯು"** ಎಂದಂತೆ ವಾಯುದೇವರು ಶಂಕರನಿಗೆ ಅಲ್ಪಾಧಿಕಾರವನ್ನು ಇತ್ತು ಮೋಹಕ ಶಾಸ್ತ್ರವನ್ನು ದೈತ್ಯರಿಗೆ ಉಪದೇಶಿಸಲು ಪಾಶುಪತಾದಿ ಗ್ರಂಥಗಳನ್ನು ರಚಿಸಲು ಅವಕಾಶವನ್ನು ನೀಡಿದನು. ಆದೇ ವಿಷಲೇಶದ ಕಾಲ್ಪನಿಕ ವಿಷವು ರುದ್ರ ದೇವರ ಕಂಠದಲ್ಲಿ ನಿಂತಿತು ಎಂದರೆ ರುದ್ರ ದೇವರು ಮೋಹಕ ಶಾಸ್ತ್ರವನ್ನು ತಮ್ಮ ಕಂಠಮಟ್ಟದಲ್ಲಿಯೇ ಹೇಳಿರುವರೇ ಹೊರತಾಗಿ ತಮ್ಮ ಹೃದಯ ಮಟ್ಟದಿಂದ ಅಲ್ಲವೆಂಬುದೇ ಇದರ ಸಂಕೇತ. ಅರ್ಥಾತ್ ಕುಶಾಸ್ತ್ರಗಳು ಮನಸಾ ಶಂಕರನಿಗೆ ಸಮ್ಮತವಾದುವಲ್ಲವೇ ಅಲ್ಲ. ಭಗವದಾಜ್ಞೆಯಂತೆ ಅಸುರ ಮೋಹನಾರ್ಥವಾಗಿ ಹೇಳಿದ ಶಾಸ್ತ್ರಕ್ಕೆ ಶಂಕರನು ಪ್ರತಿಕ್ಷಣದಲ್ಲೂ ಮರುಗುತ್ತಾನಂತೆ. ಅದೇ ಆತನಿಗೆ ಮೂರ್ಛೆ ಸದೃಶವಾದುದು. ಅದಕ್ಕೇನೇ ಆತನು ತನ್ನ ಮೋಹಕ ಶಾಸ್ತ್ರ ಬೋಧನೆಗೆ ಪ್ರಾಯಶ್ಚಿತ್ತ ರೂಪವಾಗಿ ಸದಾ ಶ್ರೀರಾಮನಾಮವನ್ನು ಜಪಿಸುತ್ತ ಮುಕ್ತಿ ಯೋಗ್ಯರಿಗೆ ಉಪದೇಶಿಸುತ್ತಾ ಪೂಜ್ಯನಾಗಿರುವನು. "ಅಹಂಬ್ರಹ್ಮಾಸ್ಮಿ"

ಎಂದಾಗ ಬರುವ ಪಾಪವನ್ನೂ ಮತ್ತು ಮೂರ್ಛೆಯನ್ನೂ ಕಳೆದುಕೊಳ್ಳಲು ತಕ್ಷಣವೇ ಆತನು "ಶ್ರೀರಾಮ ಶ್ರೀರಾಮ" ಎಂದು ಜಪಿಸುವನು. ಶಂಕರನು "ಅಹಮಬ್ರಹ್ಮಾಸ್ಮಿ" ಎಂದಾಗ 'ವಿಷಕಂಠ'ನೆಂದೂ 'ಶ್ರೀರಾಮ ಶ್ರೀರಾಮ' ಎಂದಾಗ ಶ್ರೀಕಂಠನೆಂದೂ ಕರೆಸುತ್ತಾನೆ. ಅಹಂಬ್ರಹ್ಮಾಸ್ಮಿ ಎಂದಾಗ ಆತನಕ ಕಣ್ಣಲ್ಲಿ ದುಃಖಾಶ್ರುಗಳೂ, ಶ್ರೀರಾಮ ಎಂದಾಕ್ಷಣ ಆನಂದಾಶ್ರುಗಳೂ ಉದುರುತ್ತಲಿರುತ್ತವೆ. ಹೀಗೆ ಅಳುತ್ತಲಿರುವುದರಿಂದ ಶಂಕರನಿಗೆ "ರುದತೀತಿರುದಃ" ಎಂಬ ಹೆಸರು ಬಂದಿರುತ್ತದೆ. "ಅಹಮಬ್ರಹ್ಮಾಸ್ಮಿ" ಎಂಬುದು ನಿಶ್ವಾಸ. 'ಶ್ರೀರಾಮ' ಎಂಬುದು ಉಚ್ಛ್ವಾಸ. ಅಹಂಬ್ರಹ್ಮಾಸ್ಮಿ ಎಂದು ನುಡಿದುದರಿಂದ ನಿಮಿತ್ತವಾಗಿ ಒಳಸೇರಿದ ಪಾಪವು 'ಶ್ರೀರಾಮ' ಎಂಬುದರಿಂದ ನಿಶ್ವಾಸ ರೂಪದಿಂದ ಹೊರಗೆ ಹಾಕಲ್ಪಡುತ್ತದೆ. ಇದು ಶಂಕರನಿಗೆ ಶ್ವಸೋಚ್ಛ್ವಾಸ ರೂಪವಾದುದೆಂದರೆ ತಪ್ಪಲ್ಲ. ಇದನ್ನು ಹೀಗೂ ತಿಳಿಯಬಹುದು. ಅಹಂಬ್ರಹ್ಮಾಸ್ಮಿ ಎಂಬ ಹಿಂಗಾರಾಮ್ಲವು (ವಿಷ) ಶ್ರೀರಾಮ ಎಂಬ ಆಮ್ಲಜನಕ (ಅಮೃತ)ವು ಹೃದಯ ಪ್ರವೇಶ ಮಾಡಿದ ಕೂಡಲೇ ಹೊರ ಹೊರಟು ರಕ್ತವು ಶುದ್ಧವಾಗುವಂತೆ ನಮ್ಮ ಜ್ಞಾನವು ಶುದ್ಧರಾಗುತ್ತದೆ ಎಂದು ತಿಳಿಯಬೇಕು. ಭೀಮಸೇನನು ದುರ್ಯೋಧನನು ಉಣಿಸಿದ ವಿಷದ ಲಡ್ಡುಗೆಗಳಿಂದ ಮೂರ್ಛೆ ಹೋದನೆಂಬುದೂ ಮತ್ತು ಒಂದು ಕಾಳು ಗಸಗಸೆಯನ್ನು ನುಂಗಿದ ಆನೆಯು ಅಜೀರ್ಣಗೊಂಡು ನರಳಿತು ಎಂಬುದೂ ಎರಡೂ ಒಂದೇ. ಶ್ರೀವಾಯು ಶಂಕರರು ಶ್ರೀಹರಿ ಪ್ರೀತ್ಯರ್ಥವಾಗಿ ಮೋಹಕಶಾಸ್ತ್ರ ಪ್ರವರ್ತಕಧಾರಿಗಳೆಂದು ಶ್ರೀಹರಿ ಕಥಾಮೃತಸಾರದಲ್ಲಿ ಹೀಗೆ ಹೇಳಿರುತ್ತಾರೆ.

> "ಕಲಿಯೆ ಮೊದಲಾ ಖಿಳದಾನವ। ರೊಳಗೆ ಬ್ರಹ್ಮ ಭವಾದಿ ದೇವ।
> ರ್ಕಳು ನಿಯಾಮಕರಾಗಿ ಹರಿಯಾಜ್ಞೆಯಲಿ ಅವರವರ ॥
> ಕಲುಷ ಕರ್ಮವ ಮಾಡಿ ಮಾಡಿನಿ । ಜಲರುಹೇಕ್ಷಣ ಗರ್ಪಿತ ನಿ ।
> ಶ್ಚಲ ಸುಭಕ್ತಿ ಜ್ಞಾನಪೂರ್ಣರು ಸುಖಿಪರವರೊಳಗೆ ॥ ೧೦-೯ ॥"

ಭೀಮನ ಹೊರತಾಗಿ ಬೇರೆಯವರು ದುರ್ಯೋಧನನ ಕೈಗೆ ಸಿಕ್ಕಿದ್ದರೆ ಅವರ ಅವಸ್ಥೆ ಏನಾಗುತ್ತಿತ್ತೆಂಬುದನ್ನು ಭೀಮಸೇನನು ಇಲ್ಲಿ ಬಹಿರಂಗ ಪಡಿಸಿದ್ದಾನೆ. ಶ್ರೀ ವಾಯುದೇವರೇ ವಿಷವನ್ನು ಪಾನ ಮಾಡಿದರೆಂಬುದನ್ನು ವೇದವೇ ಹೇಳುತ್ತದೆ. "ವಾಯುರಾಸ್ಮ ಉಪಾಮಂಥತ್। ಪಿನಿಷ್ಟಿಸ್ಮಾ ಕುನನ್ನಮಾ ॥ ಕೇಶಿ ವಿಷಸ್ಯ ಪಾತ್ರೇಣಾ । ಯದುದ್ರೇಣ ಪಿಬತ್ಸ ಹ ॥ ಋಗ್ವೇದ, ೧೦ನೇ ಮಂಡಲ ೧೩೬ ನೇ ಸೂಕ್ತ ೭ನೇ ಮಂತ್ರ ॥

॥ ಪದ ॥ ಬಲ್ಲಿದ ಲೋಕಾಂತ। ದಳ್ಳುರಿ ಎನಿಪಗೆ।
ಕೊಳ್ಳಿ ಬೇಕಾಯಿತೆ । ಕಳ್ಳರ ದಹಿಸಲು॥
ಡೊಳ್ಳೊಡಲೊಳು ಹೆ । ಬೆಳ್ಳಷ್ಟು ಧರಿಸಿಹ ।
ಎಳ್ಳಷ್ಟೆನಿಸದೆ । ಬಳ್ಳ ಬಳ್ಳೋದನ ॥ ೧೯ ॥

**ಶಬ್ದಾರ್ಥ:** ಬಲಶಾಲಲಿಯಾದ ಭೀಮಸೇನನು ಸಾಮಾನ್ಯನಲ್ಲ; ಪ್ರಳಯಕಾಲದ ಬಡಬಾಗ್ನಿ, ಲೋಕಾಂತ = ಪ್ರಳಯ; ದಳ್ಳುರಿ = ದಟ್ಟವಾದ ಉರಿ, ಬಡಬಾಗ್ನಿ; ಕೊಳ್ಳಿ = ಉರಿಯುತ್ತಿರುವ ಕಟ್ಟಿಗೆ; ಕಳ್ಳರು = ಪುರೋಚನಾದಿ ದೈತ್ಯರು; ದಹಿಸಲು = ಸುಡಲು; ಡೊಳ್ಳೊಡಲು = ದೊಡ್ಡ ಹೊಟ್ಟೆಯು ಬ್ರಹ್ಮಾಂಡೋದರ; ಹೆಬ್ಬೆಳ್ಳಷ್ಟು = ಅಧ್ಯಾಹಾರದಿಂದ ತಿಳಿಯುವುದು ಹೆಬ್ಬೆರಳಿನಷ್ಟು ಗಾತ್ರದ ಜಠರಾಗ್ನಿಯುಳ್ಳವನು ಭೀಮನು; ಎಳ್ಳಷ್ಟು = ಅತ್ಯಲ್ಪ; ಬಳ್ಳ ಬಳ್ಳ = ಖಂಡುಗಗಟ್ಟಲೆ; ಓದನ = ಆಹಾರ (ಅನ್ನ-ಸಾಧನ).

**ಭಾವಾರ್ಥ:** ತಂದೆಯನ್ನು ಕಳೆದುಕೊಂಡ ಪಾಂಡವರು ಕುಂತೀದೇವಿಯ ಸಹಿತವಾಗಿ ಧೃತರಾಷ್ಟ್ರನ ಅರಮನೆಯಲ್ಲೇ ಆಶ್ರಯವನ್ನು ಪಡೆದುಕೊಂಡು ಇದ್ದರು. ಆದರೆ ವಿಷ-ಅಮೃತಗಳು ಒತ್ತಟ್ಟಿಗೇ ಇರಲು ಸಾಧ್ಯವಿಲ್ಲ ತಾನೆ? ಪ್ರತಿ ನಿತ್ಯದಲ್ಲೂ ಆಟ, ಪಾಠ, ಊಟಗಳಲ್ಲಿ ಕೌರವರಿಗೂ ಪಾಂಡವರಿಗೂ ಬಡಿದಾಟವೇ ಸಾಗುತ್ತಿತ್ತು. ಅದರಲ್ಲೂ ವೈರ ವಿಶೇಷತೆ ಇದ್ದುದು ಭೀಮ ದುರ್ಯೋಧನರಲ್ಲಿ. ಇವರಲ್ಲಿ ಇಲ್ಲದ ಹೊಂದಾಣಿಕೆಯು ಸ್ವರೂಪಭೂತವಾಗಿತ್ತು ಅಂದ ಮೇಲೆ ಕೇಳಬೇಕೆ? ಇವರನ್ನು ಬೇರೆ ಬೇರೆ ವಾಸ ಸ್ಥಳಗಳಲ್ಲಿ ಇಡಬೇಕೆಂದು ಧೃತರಾಷ್ಟ್ರನು ಬಗೆದನು. ಈ ಧೃತರಾಷ್ಟ್ರನು ಸಂಪೂರ್ಣವಾಗಿ ಕಲಿಯ ಆವೇಶದಿಂದ ಆವೃತನಾಗಿಬಿಟ್ಟಿದ್ದನು. ಮುಕ್ತಿ ಯೋಗ್ಯನಾದ ಧೃತರಾಷ್ಟ್ರ ನಾಮಕನಾದ ಗಂಧರ್ವನೇ ಈತನಾಗಿದ್ದರೂ ಇಲ್ಲಿ ನಾವು ತಿಳಿದುಕೊಳ್ಳಬೇಕಾದ ಅಂಶವೇನಿದೆ ಎಂದರೆ ಕಲಿಯಿಂದ-ಅವನ ಪರಿವಾರ ದೈತ್ಯರಿಂದ ಆವಿಷ್ಟರಾದರೆ ಮುಕ್ತಿ ಯೋಗ್ಯರು ಸಹ ಹೇಗೆ ದುಷ್ಟ ಪ್ರವೃತ್ತಿಯುಳ್ಳವರಾಗುತ್ತಾರೆ ಎಂಬುದು ಮುಖ್ಯ

ಧೃತರಾಷ್ಟ್ರನು ತನ್ನಾಮಗಂಧರ್ವನು –

"ಧೃತರಾಷ್ಟ್ರಃ ಪುರಾ ಪ್ರೋಕ್ತೋ। ಗಂಧರ್ವಸ್ತು ಸನಾಮಕಃ ॥ ಬಲವಾನ್
ವ್ಯಾಸವರತೋ। ವಾಯೋರಾವೇಶಯುಕ್ತದಾ ॥ ಪ.ಪು ॥"

"ಧೃತರಾಷ್ಟ್ರ ಗಂಧರ್ವ ವಾಯುನಾವೇಶದಿಂ । ಧೃತರಾಷ್ಟ್ರನೆನಿಸಿದನು ನಕ್ರ ದೃಪದಾ॥
ಕ್ಷಿತಿಪರೀರ್ವರು ಹೂ ಹೂ ಗಂಧರ್ವಽ ಹವ ಮರುತ ।
ಯುತನಾಗಿ ಜನಿಸಿದನು ಹರಿ ಸೇವೆಗೆಂದು ॥ ತಾತ.ಸ್ತೋ ೫೯. ಶ್ರೀ ಜ ದಾ॥

"ದೃಪದಶ್ಚಪುರಾಪ್ರೋಕ್ತಃ । ಸಹೂಹೂನಾಮಗಾಯಕಃ ॥ಪ.ಪು.॥"
"ವಾಯುಯತಧೃತರಾಷ್ಟ್ರದಿವಿಜರ । ಗಾಯಕನು ಧೃತರಾಷ್ಟ್ರನಕ್ರನು।
ರಾಯದ್ರುಪದನು ವಹವಶಿಷ್ಟಾ ಹೂಹುಗಂಧರ್ವ ॥ ಬೃ.ತಾ.ಸಂ ೪೧ ॥"

ಪ್ರಬುದ್ಧರಾದ ಕೌರವ ಪಾಂಡವರನ್ನು ನೋಡಿ ಧೃತರಾಷ್ಟನು ಧರ್ಮಸುತನ ಸೌಜನ್ಯವನ್ನೂ ಭೀಮ ಪಾರ್ಥರ ಪರಾಕ್ರಮವನ್ನೂ ನೋಡಿ ಮತ್ತು ನ್ಯಾಯ ಸಮ್ಮತವಾಗಿಯೂ, ರಾಜ್ಯವು ಬಲಿಷ್ಠವಾಗಿಯೂ, ಸಂಪದ್ಭರಿತವಾಗಿಯೂ ಕೀರ್ತಿಶಾಲಿಯೂ ಆಗುತ್ತದೆಂದೂ ಭಾವಿಸಿ ಧರ್ಮರಾಜನಿಗೆ ಯುವರಾಜ ಪಟ್ಟವನ್ನು ಕಟ್ಟಿದನು.

"ಧೃತರಾಷ್ಟ್ರೋ ಬಲಂ ಜ್ಞಾತ್ವಾ । ಬಹುಶೋ ಭೀಮ ಪಾರ್ಥಯೋಃ॥
ದೈವತ್ವಾಚ್ಚ ಸ್ವಭಾವೇನ । ಜೇಷ್ಠತ್ವಾದ್ಧರ್ಮಜಸ್ಯಚ ॥
ಸುಪ್ರೀತ ಏವತಂ ಚಕ್ರೇ । ಯೌವ ರಜ್ಯೇಭಿಷೇಕಿಣಂ" ॥ ತಾ.ನಿ.೧೮-೧೬೭ ॥

ಇಷ್ಟು ಮಾತ್ರದಿಂದ ಕಪಟಿಯೂ, ಸ್ವಾರ್ಥಿಯೂ, ವಂಚಕನೂ ಆದ ನೀಚ ದುರ್ಯೋಧನನು ಮನಸ್ಸಿನಲ್ಲಿ ನೊಂದು ಕ್ರೋಧ ವಶನಾದನು. ಶಕುನಿ ಮೊದಲಾದ ದುಷ್ಟರಿಂದ ಕೂಡಿಕೊಂಡು ಬಂದು ತನ್ನ ತಂದೆಯ ಮುಂದೆ ನಿಂದು

"ಜೇಷ್ಠಸ್ಯತೇಽಪಿಹಿ ವಯಂ । ಹೃದಯ ಪ್ರಜಾತಾ ॥
ನಾರ್ಹತ್ಯಮೇವಗಮಿತಾ । ಭವತೈವ ರಾಜ್ಯೇ ॥"

ಅಪ್ಪಾ ಜೇಷ್ಠನಾದ ನಿನ್ನ ಹೊಟ್ಟೆಯಲ್ಲಿ ಹುಟ್ಟಿದ್ದರೂ ನೀನು ಧರ್ಮರಾಜನಿಗೆ ಯುವರಾಜ ಪಟ್ಟವನ್ನು ಕಟ್ಟಿದೆ. ಬಲಿಷ್ಠರಾದ ಪಾಂಡವರಿಗೆ ಅಧಿಕಾರವನ್ನು ನೀನು ಕೊಟ್ಟ ಮೇಲೆ ಇನ್ನು ನಮ್ಮದೇನು ಉಳಿಯಿತು? ಆಗಲಿ, ನಾವು ಮುಂದೆ ನಿನ್ನ ಸಂತತಿಯವರೆಲ್ಲಾ ಪಾಂಡವರ ಮತ್ತು ಅವರ ಸಂತಿಯವರ ಸೇವೆಯಲ್ಲಿಯೇ ಹುಟ್ಟಿ ಸಾಯುತ್ತೇವ. ನಿನ್ನ ಹೊಟ್ಟೆಯಲ್ಲಿ ಹುಟ್ಟಿದಕ್ಕೆ ಸಾರ್ಥಕವಾಯಿತು ಎಂದು ಹೀನಾಯವಾಗಿ ದೂಷಿಸಿದನು. ಇವನ ಮುಂದೆ ಧೃತರಾಷ್ಟನ ಬುದ್ಧಿವಾದವು ಬದುಕಲಿಲ್ಲ. ಪಾಂಡವರನ್ನು ಹಸ್ತಿನಾಪುರದಿಂದ ಹೊರದೂಡುವುದು ಹೇಗೆಂದು ಚಿಂತಾಕ್ರಾಂತನಾದನು. ಆಗ ದುರ್ಯೋಧನನು ಹೇಳುತ್ತಾನೆ "ಅಪ್ಪಾ, ಪಾಂಡವರು ಹಸ್ತಿನಾಪುರಕ್ಕೆ ಬಂದು ಹದಿಮೂರು ವರ್ಷಗಳಾದುವು. ಅವರನ್ನು ಹೊರಹಾಕಲು ಸಾಕಷ್ಟು ಉಪಾಯವು ನನ್ನಲ್ಲಿ ಇದೆ. ನೀನೂ, ನಾವೂ ಹಸ್ತಿನಾಪುರದಲ್ಲಿ ಇರೋಣ. ಪಾಂಡವರನ್ನು ವಾರಣಾವತಕ್ಕೆ ಕಳಿಹಿಸೋಣ. ಅವರು ಅಲ್ಲಿಂದ ರಾಜ್ಯಭಾರ ಮಾಡಲಿ." ಎಂದು ಸಲಹೆಯನ್ನು ನೀಡಿದನು. ಪುತ್ರವ್ಯಾಮೋಹದಿಂದ ಧೃತರಾಷ್ಟನು ಅದಕ್ಕೆ ಒಪ್ಪಿದನು. ಆದರೆ ಭೀಮನು ಇದಕ್ಕೆ ಒಪ್ಪಲಿಲ್ಲ. ಭಿಕ್ಷೆ ಬೇಡಿ ಬದುಕುವುದು ಕ್ಷಾತ್ರ ಧರ್ಮವಲ್ಲ ಎಂದನು. ಅದಕ್ಕೆ ದುರ್ಯೋಧನನು ಸಕಲ ಸೌಕರ್ಯಯುಕ್ತವಾದ ಅರ(ಗಿನ) ಮನೆಯನ್ನೂ ಸಾಮಾಗ್ರಿಗಳನ್ನು ಒದಗಿಸಿ ಕೊಡುತ್ತೇವೆ" ಎಂದನು ದೊಡ್ಡಪ್ಪನು ಅದಕ್ಕೆ ಒಪ್ಪಿದನು. ಧರ್ಮಜನು ಹಿರಿಯಪ್ಪನ ಮಾತಿಗೆ ಮಣಿದನು. ಋಜುಪುಂಗವನಾದ ಭೀಮನು ತಾನು ಧರ್ಮಜನಿಗಿಂತಲೂ ಅವರನ್ನು ಎಂಬ ಭ್ರಾಂತಿಯನ್ನು ದುರ್ಯೋಧನಾದಿಗಳಿಗೆ ಹುಟ್ಟಿಸಲು ಮತ್ತು ಪುರೋಚನಾದಿ ದೈತ್ಯರನ್ನು ಸಂಹರಿಸಲು ಶ್ರೀಹರಿಯಿತ್ತ ಅವಕಾಶ (ಆಜ್ಞೆ) ಇದು ಎಂದೂ ಒಪ್ಪಿಕೊಂಡನು.

"ಹಂತವ್ಯತಾ ಮುಪಗತೇಷು। ಸುಯೋಧನಾದಿ ।
ಷ್ವನೋವಧಾನ್ನಹಿ ಭವೇ । ನ್ನಿಜ ಧರ್ಮಏವ ॥ ೧೯-೩೧ ॥"

ತರುವಾಯ ಧರ್ಮಜನು ತನ್ನ ಅನುಜ – ಮಾತೆ ಕುಂತಿಯರೊಡಗೂಡಿ ವಾರಣಾವತಕ್ಕೆ ಹೊರಟನು.

ವಾರಣಾವತದಲ್ಲಿದ್ದ ಮನೆಯೋ! ಆಹಾ! ಅದೇನು ವೈಭವೋಪೇತವಾಗಿತ್ತು ! ಎಲ್ಲಿ ನೋಡಿದರೂ ರತ್ನ ಖಚಿತ ಕಂಭಗಳು, ಸುವರ್ಣಚಿತ್ರಿತವಾದ ಬಾಗಿಲುಗಳು, ಗೋಡೆಗಳು, ಉದ್ಯಾನ, ಅತಿ ಮನೋಹರ, ಅವರ್ಣನೀಯ. ಅಂಥಾ ಮನೆಯನ್ನು ಯಾರೂ ಬೇಡವೆನ್ನಲಾರರು. ಅಲ್ಲಿಗೆ ಹೋಗುವ ಮುನ್ನ ವಿದುರನು ಧರ್ಮ ನಂದನನನ್ನು ಕುರಿತು ಆ ದುರ್ಯೋಧನನು ನಿರ್ಮಿಸಿರುವ ಮನೆಯು ಅರಗಿನ ಮನೆಯೆಂದೂ, ಶೀಘ್ರ ದಹ್ಯ ಪದಾರ್ಥಗಳಾದ ಮೇಣೆಣ್ಣೆ, ಸ್ಫೋಟಕಗಳಿಂದ ಯುಕ್ತವಾಗಿದೆ ಎಂದೂ ತಿಳಿಸಿದ್ದಲ್ಲದೆ ಆ ಅರಗಿನ ಮನೆಯಲ್ಲಿ ಪಾಂಡವರನ್ನು ಜೀವಂತವಾಗಿ ದಹಿಸುವ ಯೋಚನೆಯನ್ನು ದುರ್ಯೋಧನನು ಹೊಂದಿರುವನೆಂದು ತಿಳಿಸಿ ಎಚ್ಚರಿಕೆಯಿಂದ ಇರಬೇಕೆಂದು ಹೇಳಿದನು. ಅಷ್ಟೇ ಅಲ್ಲ, ಪಾಂಡವರಿಗೆ ಅಡಿಗೆ ಮಾಡುವವಳು ವಿಷ ಪ್ರಯೋಗ ಮಾಡುವವಳೆಂದೂ ತಿಳಿಸಿದನು. ಇದನ್ನು ಕೇಳಿ ಭೀತನಾದ ಧರ್ಮರಾಯನು ಈ ವಿಷಯವನ್ನು ಸರ್ವಜ್ಞ ಶಿರೋಮಣಿಯಾದ ಭೀಮಸೇನನಿಗೆ ತಿಳಿಸಿದನು.

ಸಜ್ಜನ ಹಿತಾಕಾಂಕ್ಷಿಯಾದ ವಿದುರನು ಇಷ್ಟನ್ನು ಹೇಳಿದ್ದು ಮಾತ್ರವಲ್ಲದೆ ಖನಕನೊಬ್ಬನನ್ನು ಕರೆದು ಲಾಕ್ಷಾಗೃಹಕ್ಕೆ ಪ್ರಾಕಾರವನ್ನು ಕಟ್ಟುವನೆಂಬ ನೆಪದಿಂದ ಆ ಗೃಹದಲ್ಲಿ ಗುಪ್ತವಾಗಿ ಬಿಲವೊಂದನ್ನು ಕೊರೆಯಲು ಹೇಳಿ ಆ ಬಿಲದ ದ್ವಾರದಿಂದ ಪಾರಾಗಲು ಪಾಂಡವರಿಗೆ ತಿಳಿಸಿದನು. ಎಲ್ಲವನ್ನೂ ಅರಿತ ಪಾಂಡವರು ಆ ಅಪಾಯಕರವಾದ ಗೃಹದಲ್ಲಿ ಉಪಾದೇಯವನ್ನು ಅನುಭವಿಸುತ್ತ ಉಪಾಯದಿಂದ ಇದ್ದರು. ಇತ್ತ ದುರ್ಯೋಧನನು ಪಾಂಡವರಿಗೆ ವಿಷವನ್ನಿಕ್ಕಲು ಹಾಗೂ ಗೃಹಕ್ಕೆ ಬೆಂಕಿಯನ್ನು ಹಾಕಲು ಪುರೋಚನನೆಂಬ ದೈತ್ಯನನ್ನೂ ಹಾಗೂ ಅವನ ಸಹೋದರಿಯನ್ನೂ ನೇಮಿಸಿದನು. ಪುರೋಚನನು ಪಾಂಡವರಲ್ಲಿಗೆ ಬಂದು ಹಿತನುಡಿಗಳನ್ನು ಆಡುತ್ತ ದುಯೋಧನನನ್ನು ದೂಷಿಸುತ್ತ ನಯ ವಂಚನೆಯಿಂದ ಅವರೊಡನೆ ವಿಹರಿಸಿದನು. ಐದು ಮಕ್ಕಳ ತಾಯಿಯಾಗಿದ್ದ ಪುರೋಚನನ ಸಹೋದರಿಯು ವಿಷ ಪ್ರಯೋಗ ಮಾಡಲು ಹೊಂಚು ಹಾಕುತ್ತಿದ್ದಳು.

> "ಭೀಮಃ ಪುರೋಚನ ಉಭಾವಪಿತೌ ವಧಾಯ ।
> ಛಿದ್ರಾರ್ಥಿನೌಮಿಥ ಉತೋಷತುರಬ್ದಕಾರ್ಧಂ॥ ೩೭ ॥"

ಎಂಬಂತೆ ಪಾಂಡವನ್ನು ಕೊಲ್ಲುವುದಕ್ಕೆ ಪುರೋಚನರೂ, ಇವರನ್ನು ಸಂಹರಿಸಲಿಕ್ಕೆ ಭೀಮನೂ ಪರಸ್ಪರ ಹೊಂಚು ಹಾಕುತ್ತಾ ಆ ಮೃತ್ಯುಗೇಹದಲ್ಲಿ ಆರು ತಿಂಗಳು ಕಾಲ ಕಳೆದರು.

ಪರಮ ನೀಚನಾದ ಈ ಪುರೋಚನನು ತ್ರೇತಾಯುಗದಲ್ಲಿ ಪ್ರಹಸ್ತನೆಂಬ ಹೆಸರನ್ನು ಹೊಂದಿದ್ದ ದೈತ್ಯನು. ಇವನು ಈಗ ಲಾಕ್ಷಾ ಗೃಹದಲ್ಲಿ ಪಾಂಡು ತನಯರಿಗೆ ಮಂತ್ರಿಯಾಗಿ ಹಿತ ಶತ್ರುವಾಗಿದ್ದನು.

> "ಪೂರ್ವಂ ಪ್ರಹಸ್ತ ಇತಿಯ । ಸ್ವಭವತ್ಸುಪಾಪಃ ॥
> ಸೋಽಬ್ಯೈತ್ಯಪಾಂಡುತನಯಾ । ನಭವಚ್ಚ ಮಂತ್ರೀ ॥" ೧೯–೩೩ ॥

ಪಾಪಿಷ್ಠೆಯಾದ ಪುರೋಚನನ ಸಹೋದರಿಯು ಸಾಮಾನ್ಯಳಲ್ಲ. ಇವಳು ತಾನು ಅದಿತಿಯಾಗಬೇಕು. ತನ್ನ

ಮಕ್ಕಳು ದೇವತೆಗಳಾಗಬೇಕು. ಅರ್ಥಾತ್ ದೇವತೆಗಳನ್ನು ನಿಗ್ರಹಿಸಿ ದೇವತಾ ಸ್ಥಾನಗಳನ್ನು ತನ್ನ ಮಕ್ಕಳು ಅಲಂಕರಿಸಬೇಕು ಎಂದು ಒಂದು ವರ್ಷ ತಪಸ್ಸನ್ನಾಚರಿಸಿದ್ದಳು. ಅನಧಿಕಾರಿಯಾದ ಇವಳು ತಾನು ಸಹಿತ ತನ್ನ ಮಕ್ಕಳು ಅಮರರಾಗಬೇಕೆಂದು ಬಯಸಿದುದರಿಂದಲೇ ರುದ್ರದೇವರು "ನೀನು ನಿನ್ನ ಮಕ್ಕಳ ಸಹಿತವಾಗಿ ಏಕ ಕಾಲದಲ್ಲಿ ಮರಣವನ್ನು ಹೊಂದದೆ ಇದ್ದರೆ (ಏಕ ಕಾಲದಲ್ಲಿ ಇವಳು ತನ್ನ ಸುತರೊಡನೆ ಮರಣವನ್ನು ಹೊಂದುತ್ತಾಳೆಂದೇ ತಿಳಿದು) ನೀನು ಅದಿತಿಯಾಗುವಿ. ನಿನ್ನ ಮಕ್ಕಳು ಆದಿತೇಯರು (ದೇವತೆಗಳು) ಆಗುವರೆಂದು ವರವನ್ನಿತ್ತನು.

ಒಂದು ದಿನ ಇವಳು ಅಡಿಗೆಯಲ್ಲಿ ಕಾರ್ಕೋಟಕ ವಿಷವನ್ನು ಬೆರೆಸಿಟ್ಟಳು. ಇದನ್ನು ವಿದುರ (ನಿಮಿತ್ತ ಮಾತ್ರ)ನಿಂದ ಅರಿತ ಭೀಮನು ಎಚ್ಚರಿಕೆಯಿಂದ ಇದ್ದು ಅಂದಿನ ದಿನ ಸ್ವಲ್ಪವೂ ಆಹಾರವು ಉಳಿಯದಂತೆ ಭುಂಜಿಸಿ ಅರಗಿಸಿ ಕೊಂಡು ಬಿಟ್ಟನು. ಮತ್ತು ಮಧ್ಯರಾತ್ರಿಯಲ್ಲಿ ಎಲ್ಲರೂ ಮಲಗಿ ನಿದ್ರಿಸುತ್ತಿದ್ದಾಗ ಭೀಮಸೇನನು ಒಂದು ಉರಿಯುಳ್ಳ ಕೊಳ್ಳಿಯನ್ನು ಹಿಡಿದುಕೊಂಡು ಮಾರ್ಮಿಕವಾದ ಸ್ಥಳಕ್ಕೆ ಅಗ್ನಿ ಸ್ಪರ್ಶವನ್ನು ಮಾಡಿದನು ಮತ್ತು ಅತಿ ಶೀಘ್ರವಾಗಿ ಖನಕನಿಂದ ನಿರ್ಮಿತವಾಗಿದ್ದ ಸುರಂಗ ಮಾರ್ಗವನ್ನು ಅನುಸರಿಸಿ ತನ್ನ ತಾಯಿ ಮತ್ತು ಸಹೋದರರನ್ನು ನಿದ್ರೆಯು ಸಹ ಕೆಡದಷ್ಟು ಸೂಕ್ಷ್ಮವಾಗಿ ಹೆಗಲ ಮೇಲೆ ಧರಿಸಿಕೊಂಡು ಅಲ್ಲಿಂದ ಪಾರಾದನು.

ಇತ್ತ ಅಗ್ನಿಸ್ಪರ್ಶವಾದ ಕೂಡಲೇ ಕ್ಷಣಾರ್ಧದಲ್ಲಿ ಅಗ್ನಿಜ್ವಾಲೆಗಳು ದಶದಿಕ್ಕುಗಳನ್ನು ಆವರಿಸಿಕೊಂಡು ಆ ಅರಗಿನ ಮನೆಯನ್ನು ಆಹುತಿ ತೆಗೆದು ಕೊಂಡಿತು. ಆ ಅರಗಿನ ಮನೆಯಲ್ಲಿ ಗಾಢ ನಿದ್ರೆಯಲ್ಲಿದ್ದ ಪುರೋಚನ ಅವನ ಸಹೋದರಿ ಮತ್ತು ಅವಳ ಐದು ಜನ ಮಕ್ಕಳು ಬೆಂದು ಬೂದಿಯಾದರು. ಮರುದಿನ ಭಾರೀ ಗಾತ್ರದ ಅರಮನೆಯು ಉರಿ ಮನೆಯಾದುದನ್ನು ಕಂಡು ಅದರಲ್ಲಿ ಪಾಂಡವರು ಕುಂತೀ ಸಹಿತವಾಗಿ ಬೆಂದು ಹೋದರೆಂದು ಜನರು ಮರುಗಿದರು. ದುರ್ಯೋಧನಾದಿಗಳು ಒಳಗೊಳಗೇ ಹಿಗ್ಗಿ ಹೀರೇಕಾಯಿಯಾಗಿ ಬಾಹ್ಯದಲ್ಲಿ "ಅಯ್ಯೋ, ಅಯ್ಯೋ" ಎಂದು ಜನ ತೋರ್ಷಣಾರ್ಥವಾಗಿ ಕೂಗಿದರು. ವಾಸ್ತವಾಂಶವನ್ನು ತಿಳಿದಿದ್ದ ಭೀಷ್ಮ, ವಿದುರಾದಿಗಳು ಒಳಗೊಳಗೇ ಹಿಗ್ಗಿ ಬಾಹ್ಯದಲ್ಲಿ ದುರ್ಯೋಧನಾದಿಗಳ ತೋರ್ಷಣಾರ್ಥವಾಗಿ "ಅಯ್ಯೋ, ಅಯ್ಯೋ" ಎಂದು ಅವರೂ ಅತ್ತರು. ಅಂತೂ ಇಂತೂ ಕಪಟ ನಾಟಕ ಪಾತ್ರಧಾರಿಗಳಾದ ಉಭಯರೂ ಪಾಂಡವರಿಗೆ ತಿಲಾಂಜಲಿಯನ್ನು ನೀಡಿ ತೃಪ್ತರಾದರು. ಕೌರವನ ಮೌಢ್ಯದಾರ್ಢ್ಯತೆಗಾಗಿ ಭೀಷ್ಮಾದಿಗಳು ಹಾಗೆ ಮಾಡಿದರು. ಭೀಷ್ಮ-ದುರ್ಯೋಧನಾದಿಗಳ ವರ್ತನೆಯು ಬಾಹ್ಯದಲ್ಲಿ ಒಂದೇ ತೆರನಾಗಿದ್ದರೂ ಅಂತರಂಗದಲ್ಲಿ ಮಾತ್ರ ಭಿನ್ನವೇ ಆಗಿತ್ತು. ಇದೇ ದೇವ-ದಾನವರ ಕರ್ಮಗಳಿಗೆ ಫಲ ವ್ಯತ್ಯಾಸವಾಗಲು ಕಾರಣ.

ಅಗ್ನಿ ಸ್ಪರ್ಶ? ಯಾವ ಅಗ್ನಿ ಸ್ಪರ್ಶ? ಯಾವ ವಿಶ್ವ ಕರ್ಮನಿಂದ ನಿರ್ಮಿತವಾಗಿದ್ದ ಲಂಕಾಪಟ್ಟಣವನ್ನು ಜಡಾಗ್ನಿಯು ಸುಡಲಿಲ್ಲವೋ ಆ ಕ್ಷಣದಲ್ಲಿ ತನ್ನ ಒಂದು ರೋಮ ತೇಜಸ್ಸಿನ ಮಾತ್ರದಿಂದಲೇ ಸುಟ್ಟು ಬೂದಿ ಮಾಡಿದ ಈ ಮಾರುತನಿಗೆ ಲಕ್ಷಾಗೃಹವನ್ನು ಸುಡುವುದೊಂದು ಘನ ತರವಾದ ಕಾರ್ಯವೇ? ಪ್ರಳಯ ಕಾಲದಲ್ಲಿ ಶಂಕರನಿಂದ ಅಥವಾ ಶೇಷನ ವಿಷದಿಂದ ಪ್ರಾದುರ್ಭವಿಸಿದ ಸಂಹೃತಾಗ್ನಿಯಿಂದಲೂ ಸಹ ಸುಡಲು ಸಾಧ್ಯವಾಗದಿದ್ದಾಗ ಯಾವ ಈ ಮಹಾಮಹಿಮನಾದ ವಾಯುದೇವರು ಶ್ರೀ ತ್ರಿನೇತ್ರಧಾರಿ ನರಸಿಂಹ ಮತ್ತು ದುರ್ಗಾದೇವಿಗೆ ಅಧಿಷ್ಠಾನ ಭೂತರಾಗಿ ಸಂಕರ್ಷಣನೆಂಬ ಹೆಸರಿನಿಂದ ಈ ಜಗತ್ತನ್ನು ಭಸ್ಮಗೊಳಿಸಿ, ಶೇಷ ರುದ್ರರಿಗೆ ಪ್ರಳಯ ಕರ್ತರೆಂಬ ಕೀರ್ತಿಯನ್ನು ಇತ್ತು ಮನ್ನಿಸಿದರೋ, ಸ್ವಯಂ ಅಮೂಲ್ಯ ಕರ್ತೃಗಳಾದ ಶೇಷ, ರುದ್ರರೂ ಸಹ

ಪಶ್ಚಾತ್ ಪ್ರಳಯದಲ್ಲಿ ಮೂರ್ಛಿತರಾದರೋ ಅಂಥಾ ಪ್ರಳಯದಲ್ಲಿಯೂ ಸಹ "ಮುಖ್ಯ ಪ್ರಾಣನೊಬ್ಬನು ಎಚ್ಚೆತ್ತಿಪ್ಪನು ಗಡಾ" "ಪ್ರಲಯ ಕಾಲೇಪಿ ಪ್ರತಿಭಾತಪರಾವರಾಯ" ಎಂದು ಕೀರ್ತಿ ಪಡೆದ ಈ ಭೀಮಸೇನನಿಗೆ ಯಕಶ್ಚಿತ್ ಕಾಷ್ಟಾಗ್ನಿಯೊಂದು ಸಹಾಯಕ ಸಾಧನವಾಯಿತೇ? ಪ್ರಳಯಕಾಲದಲ್ಲಿಯೂ ನಿದ್ರೆಗೆ ವಶನಾಗದವನು ಈ ಕರಾಳ (ಅಮಾವಾಸ್ಯೆ) ಮಧ್ಯರಾತ್ರಿಯಲ್ಲಿ ನಿದ್ರಾ ವಶನಾಗುವನೆ? ಹಾಗೆ ವಶರಾಗಿ ಹತರಾದವರು ಪುರೋಚನಾದಿಗಳು. ಭೀಮನಲ್ಲ ಆತನನ್ನು ನಂಬಿದ ಪಾಂಡವರಲ್ಲ. ಇಲ್ಲಿ ಭೀಮನಿಗೆ ಸಕಾಲಕ್ಕೆ ಕೊಳ್ಳಿಯು ಸಿಕ್ಕಿರದಿದ್ದರೆ ಪಾಂಡವರು ದಹಿಸಿ ಹೋಗುತ್ತಿದ್ದರು ಎಂದು ಕಲ್ಯಾದಿ ದೈತ್ಯರು ಮೂಲರೂಪದಲ್ಲಿ ಚಿಂತಿಸಿ ತಮಸ್ಸಾಧನೆಯನ್ನು ಬಲಪಡಿಸಿಕೊಂಡರು. ವಾಯುದೇವರ ನಿಜ ಸಾಮರ್ಥ್ಯವನ್ನರಿಯದ ಅಸುರರಿಗೆ ಕೊಳ್ಳಿಯೇ ಪ್ರಧಾನವಾಯಿತು. ಅವರು ಹಾಗೆ ಚಿಂತಿಸಬೇಕೆಂದೇ ಭೀಮಸೇನನು ಕೊಳ್ಳಿಯನ್ನು ಕೈಯಲ್ಲಿ ಹಿಡಿದು ಅರಗಿನ ಮನೆಯನ್ನು ಸುಟ್ಟು ಪಾರಾದನು. ಮೂಲ ಭೇದವರ್ಜಿತನಾದ ಭೀಮಸೇನನೇ ತೃತೀಯ ಅಗ್ನಿಯು. ನಮ್ಮ ಸಾಮಾನ್ಯ ಅಗ್ನಿಯು ಚತುರ್ಥನು.

ಸುರಂಗ ಮಾರ್ಗದಿಂದ ನಿರ್ಗಮಿಸಿದ ಭೀಮನು ತನ್ನ ಮಾತೆ, ಸಹೋದರರೊಡಗೂಡಿ ಯೋಗ್ಯರಾದ ನಾವಿಕರ ಮುಖಾಂತರವಾಗಿ ಗಂಗಾನದಿಯನ್ನು ದಾಟಿ ಅರಣ್ಯವನ್ನು ಸೇರಿದನು. ಬಾಯಾರಿದ ತನ್ನ ಆಶ್ರಿತರಿಗೆ ಕಮಲ ಪತ್ರದಲ್ಲಿ ನೀರನ್ನು ತಂದೊದಗಿಸಿದನು.

ಆ ಅರಣ್ಯವಾದರೋ ಹಿಡಂಬಾಸುರನ ಅಧಿಪತ್ಯದಲ್ಲಿ ಇತ್ತು. ಅವನ ತಂಗಿ ಹಿಡಂಬಿ. ಪಾಂಡವರನ್ನು ಕಂಡ ಕೂಡಲೇ ಆ ಹಿಡಂಬಾಽಸುರನು ಅವರನ್ನು ನುಂಗಬೇಕೆಂದು ಬಯಸಿ ಅವರನ್ನು ಹಿಡಿತರಲು ತನ್ನ ತಂಗಿಗೆ ಹೇಳಿದನು. ಅವನಿಗೆ ಹಿಡಂಬಾ ಎಂಬ ಹೆಸರು ಯಾಕೆ ಬಂದಿರಬಹುದು ಎಂದರೆ ಅವನು ತನ್ನ ತಂಗಿಗೆ ಪಾಂಡವರನ್ನು 'ಹಿಡಕೊಂಬಾ' ಎಂದು ಹೇಳಿದನು. ಇಲ್ಲಿ 'ಕೊ' ತೆಗೆದು ಹಾಕಿದರೆ 'ಹಿಡಂಬಾ' ಎಂದೇ ಆಗುತ್ತದೆ. ಅದಕ್ಕೆ ಭಾರತೀ ದೇವಿಯ ಆವೇಶ ಉಳ್ಳವಳು ಈ ಹಿಡಂಬಿ. ಪೂರ್ವದಲ್ಲಿ ಇಂದ್ರ ಲೋಕದಲ್ಲಿ ಶಚಿಯೊಡನೆ ಈಕೆಯು ಇಂದ್ರ ಸಾನ್ನಿಧ್ಯ ಪ್ರಸಂಗದಲ್ಲಿ ಸ್ಪರ್ಧೆಗೆ ನಿಂತ ಪ್ರಯುಕ್ತ ಶಾಪಗ್ರಸ್ಥಳಾಗಿ ಈಗ ರಾಕ್ಷಸಿಯಾಗಿ ಹುಟ್ಟಿದ್ದಳು. ಈಕೆಯು ಅಪ್ಸರಸ್ತ್ರೀಯು. ನಿರ್ದೋಷ (ಅನಿಲ) ನಾದ ಭೀಮನ ಸ್ಪರ್ಶದಿಂದ ಶಾಪ ವಿಮೋಚನೆಯಾಗುವುದು ವಿದಿತವಾಗಿತ್ತು. ಅಂತೆಯೇ ಅಣ್ಣನ ಅನುಜ್ಞೆಯನ್ನು ಪಡೆದು ಬಂದವಳು ದ್ವಾತ್ರಿಂಶಲ್ಲ ಕ್ಷಣಯುತನಾದ ಭೀಮಸೇನನನ್ನು ಕಂಡು ಮೋಹಿತಳಾಗಿ ಭೀಮನಿಗೆ ಎರಗಿ ಹಿಡಂಬನಿಂದ ತನ್ನನ್ನು ರಕ್ಷಿಸಿ ಪರಿಗ್ರಹಿಸಬೇಕೆಂದು ಬೇಡಿಕೊಂಡಳು. ಆಗ ಭೀಮಸೇನನು ಹಿಡಂಬನ ಹತ್ತಿರಕ್ಕೆ ಹೋಗಿ ಹೋರಾಡಿದನು. ರುದ್ರವರ ಬಲಗರ್ವಿತನಾದ ಆ ಹಿಡಂಬಾಸುರನನ್ನು ರುದ್ರಾತ್‌ಪರನಾದ ಭೀಮಸೇನನು ಸಂಹಾರ ಮಾಡಿದನು. ತರುವಾಯ ಹಿಡಂಬಿಯು ತನ್ನನ್ನು ವರಿಸಬೇಕೆಂದು ಬೇಡಿದ್ದಳು. ಕುಂತೀ ಧರ್ಮಜರನ್ನು ಕಾಡಿದಳು. ಕೊನೆಗೆ ವೇದವ್ಯಾಸರ ಅಪ್ಪಣೆಗೆ ಮಣಿದ ಭೀಮಸೇನನನ್ನು ಕೂಡಿದಳು. ತರುವಾಯು ರುದ್ರಾವೇಶದಿಂದ ಯುಕ್ತನಾದ ದೇವ ಸ್ವಭಾವ-ದೈತ್ಯ ದೇಹಉಳ್ಳ ಪರಾಕ್ರಮಶಾಲಿಯಾದ ನಿಋುಋುತಿಯ ಅಂಶಜನಾದ ಘಟೋತ್ಕಚನಿಗೆ ಜನ್ಮವನ್ನು ನೀಡಿದಳು. ತರುವಾಯ ಶ್ರೀವೇದವ್ಯಾಸರ ಆಜ್ಞೆಯಂತೆ ಸ್ವರ್ಗಕ್ಕೆ ಪ್ರಯಾಣ ಮಾಡಿದಳು.

"ಹಿಡಂಬೀ ಭೀಮಭಾರ್ಯಾಯ । ರಾಕ್ಷಸೀ ಕಾಮರೂಪಿಣೀ ॥
ಅಪ್ಸರಾ ಶಕ್ರಭಾರ್ಯಾಸಾ । ಭಾರತ್ಯಾವೇಶ ಸಂಯುತಾ ॥ ೮೯ . ಪ.ಪು॥"

ಶಚಿಯೊಡನೆ ರೂಪ ಸ್ಪರ್ಧೆಗೆ ಇಳಿದು ಶಾಪಗ್ರಸ್ಥಳಾದಳು ಎಂಬುದು ಅಸುರ ಮೋಹಕವು. ಈ ಅಪ್ಸರೆಯು ತನ್ನ ಪ್ರಾರಬ್ಧದಲ್ಲಿ ಅಸುರೆಯಾಗಿರ ಬೇಕಾಗಿದ್ದುದು ವಿದಿತ ಸಾಧನೆಯಾಗಿದ್ದಿತು. ಇಂದ್ರ ಸೇವಾ ನಿಮಿತ್ತವಾಗಿ ಈಕೆಯು ಶಚಿಯಿಂದ ವರವನ್ನೇ ಪಡೆದು ಹಿಡಂಬಿಯಾಗಿ ಜನಿಸಿದಳು. ಪ್ರಹ್ಲಾದನು ಬ್ರಹ್ಮನ ಶಾಪ (ಅಲ್ಲ ವರವನ್ನಿ)ದಂತೆ ದೈತ್ಯನಾಗಿ ಹುಟ್ಟಿದ ರೀತಿಯಲ್ಲಿ ! ಹಿಡ (ಕೊ)ಂಬಾ ಎಂದು ಹಿಡಂಬಾಸುರನು ಹೇಳಿದ್ದಕ್ಕೆ ಹಿಡಂಬಿಯು ಭೀಮನ ಪಾದಗಳನನು ಹಿಡಕೊಂಡಳು. ಈ ಅಪ್ಸರೆಯು ಅಸುರ ಮೋಹನಾರ್ಥವಾಗಿ ಶಚಿಯೊಡನೆ ಸ್ಪರ್ಧೆ ಮಾಡಿದಂತೆ ನಟಿಸಿ ಶಾಪಗ್ರಸ್ಥಳೆನಿಸಿದಳು. ಒಡತಿ (ಸೋತ್ತಮರು)ಯೊಡನೆ ಕಲಹ (ಅವಜ್ಞತೆ) ಸಲ್ಲದೆಂಬ ಲೋಕ ಶಿಕ್ಷಣ ರೀತಿಯಲ್ಲಿ ನಡೆದು ತನ್ನ ಪ್ರಾರಬ್ಧದಲ್ಲಿ ಅಸುರೆಯಾಗಿದ್ದರೂ ಭಾರತೀಯ ಆವೇಶದಿಂದ ನೀನು ಧನ್ಯಳೆನಿಸುವಿ ಎಂಬ ಅಂತರಂಗದ ಶಚಿಯ ವರದಿಂದ ಭೀಮ ಸತಿಯಾಗಿ ಭಗವತ್ಪ್ರೀತಿಗೆ ಪಾತ್ರಳಾದಳು. ಅಪರೋಕ್ಷ ಜ್ಞಾನಿಗಳು ಪ್ರಾರಬ್ಧ ಭೋಗವನ್ನು ನಿರ್ವಿಕಾರ ಮನಸ್ಸಿನಿಂದ ಭೋಗಿಸುತ್ತಾರೆ. (ಉಪಮರ್ದ ಎನ್ನುತ್ತಾರೆ) ಇದು ಸ್ವರೂಪಕ್ಕೆ ಸೇರಿದ್ದಲ್ಲವೆಂದು ನಿಶ್ಚಿಂತರಾಗಿರುತ್ತಾರೆ.

ಹೀಗೆ ಪುರೋಚನ – ಹಿಡಂಬಾಸುರರನ್ನು ಸಂಹರಿಸಿದ ಮೇಲೆ ಶ್ರೀ ವೇದ ವ್ಯಾಸರಿಂದ ಕೂಡಿಕೊಂಡು ಪಾಂಡವರು ಏಕಚಕ್ರ ನಗರವನ್ನು ಕುರಿತು ಪ್ರಯಾಣ ಮಾಡಿದರು. ಅಲ್ಲಿ ಪಾಂಡವರು ಬ್ರಾಹ್ಮಣರ ವೇಷವನ್ನು ಧರಿಸಿಕೊಂಡು ನಿತ್ಯವೂ ಭಿಕ್ಷೆ ಬೇಡುತ್ತ ಜೀವನವನ್ನು ಸಾಗಿಸಿದ್ದರು.

ಕ್ಷತ್ರಿಯರಿಗೆ ಭಿಕ್ಷೆಬೇಡುವುದು ನಿಷಿದ್ಧವಲ್ಲವೇ? ಹಾಗಾದರೆ ಪಾಂಡವರು ಅದ್ಹೇಗೆ ಭಿಕ್ಷೆಯನ್ನು ಬೇಡಿದರು? ಎಂದರೆ ಭೀಮಸೇನನು ಮೃದ್ಭಾಂಡವನ್ನು ಧರಿಸಿ ವೈಶ್ಯರಲ್ಲಿಗೆ ಹೋಗಿ ಹುಂಕಾರದಿಂದ (ಕಂದಾಯ ವಸೂಲಿಯ ತರಹ) ಪಾತ್ರೆಯನ್ನು ಮುಂದೆ ಒಡ್ಡುತ್ತಿದ್ದನು. ಜನರು ಈತನಿಗೆ ಹೆದರಿ ಭಿಕ್ಷೆಯನ್ನು ಹಾಕುತ್ತಿದ್ದರು.

ಸಕಲ ಜಗತ್ತಿಗೆ ಸಕಲ ಸೌಭಾಗ್ಯವನ್ನು ಕೊಟ್ಟು ಜೀವ ಸಂಕುಲವನ್ನು ಸಂರಕ್ಷಿಸುತ್ತಿರುವ ವಾಯ್ವವತಾರನಾದ ಭೀಮನಿಗೆ ಸಕಲ ಜಗತ್ತು ಆತನ ಕೃಪಾ ಪಾತ್ರವೇ. ಕೃಪಾ ಪೋಷಿತವೇ. ತದ್ವಶವೇ. ಭಿಕ್ಷೆ ಬೇಡಿದ್ದು ಕೇವಲ ಅಸುರ ಮೋಹಕವು.

ಭೀಮನ ಬಲ ಪ್ರದರ್ಶನವು ಕೌರವರಿಗೆ ಗೊತ್ತಾದರೆ ಅವರು ಇವನನ್ನು ಭೀಮನೆಂದೇ ಪತ್ತೆ ಹಚ್ಚುವರೆಂದು ಧರ್ಮರಾಯನು ಹೆದರಿದನು ಮತ್ತು ಭೀಮನನ್ನು ತಡೆದು ತಾನೇ ಭಿಕ್ಷೆಗೆ ಹೋಗುತ್ತಿದ್ದರು. "ಭಿಕ್ಷಾಂದೇಹೀ" ಎನ್ನುತ್ತಿರಲಿಲ್ಲ. ಬಂದುದರಲ್ಲೇ ಬಾಳುತ್ತಿದ್ದರು. ಮೌನವಾಗಿ ಕೈಯ್ಯೊಡ್ಡುತ್ತಿದ್ದನು.

ಒಂದು ದಿನ ತಾಯಿ ಮತ್ತು ಭೀಮಸೇನರು ಮಾತ್ರ ಮನೆಯಲ್ಲಿದ್ದರು. ಆಗ ತಮಗೆ ಆಶ್ರಯವನ್ನು ನೀಡಿದ್ದ ಬ್ರಾಹ್ಮಣನ ಮನೆಯಿಂದ ರೋದನ ಶಬ್ದವು ಬರುತ್ತಿತ್ತು. ಇದನ್ನು ಕೇಳಿಸಿಕೊಂಡ ಭೀಮಸೇನನು ಕಾರಣವನ್ನು ತಿಳಿದು ಕೊಂಡು ಬರಲು ಅಮ್ಮನಿಗೆ ಹೇಳಿದನು. ತಕ್ಷಣವೇ ಕುಂತಿಯು ಬಂದು ಆ ಬ್ರಾಹ್ಮಣ ದಂಪತಿಗಳು ಅಳುತ್ತಿರುವುದಕ್ಕೆ ಕಾರಣವೇನೆಂದು ಕೇಳಿದಳು. ಅದಕ್ಕೆ ಆ ಬ್ರಾಹ್ಮಣನು ಹೇಳುತ್ತಾನೆ. "ತಾಯಿ. ಏನು ಹೇಳೋಣವಮ್ಮಾ ಈ ಊರಿನಲ್ಲಿ ಬಕಾಸುರನೆಂಬುವನಿದ್ದಾನೆ. ಅವನಿಗೆ ಪ್ರತಿಯೊಬ್ಬರು ಒಂದೊಂದು ದಿನಕ್ಕೆ ಬಂಡಿ ಅನ್ನ. ಎರಡು ಕೋಣ. ಒಬ್ಬ ನರ

ಬಲಿಯನ್ನು ಕೊಡಬೇಕು. ಇಲ್ಲವಾದರೆ ಅವನು ಊರನ್ನೇ ನಾಶ ಮಾಡುತ್ತಾನೆ. ಹಾಗೇ ಎಷ್ಟೋ ಜನರು ತಮ್ಮ ಪ್ರಾಣಗಳನ್ನು ಕಳೆದುಕೊಂಡಿದ್ದಾರೆ. ಇವತ್ತು ನಮ್ಮ ಪಾಳಿಯು ಬಂದಿದೆ. ನಮ್ಮ ಮನೆಯಲ್ಲಿ ಇರುವವರು ಅಪ್ಪ, ಅಮ್ಮ, ನಮ್ಮ ಏಕೈಕ ಪುತ್ರನು ಮಾತ್ರ. ಈ ಮೂವರಲ್ಲಿ ಯಾರು ಬಲಿಯಾಗಬೇಕು ಎಂದು ಚಿಂತೆಯಿಂದ ರೋದಿಸುತ್ತಿದ್ದೇವೆ. ಯಾರೊಬ್ಬರು ಹೋದರೂ ಉಳಿದವರು ಅನಾಥ, ತಬ್ಬಲಿಗಳಾಗುತ್ತೇವೆ. ಇದೇ ನಮ್ಮ ರೋದನಕ್ಕೆ ಕಾರಣ" ಎಂದು ಹೇಳಿದನು. ಈ ಬಕಾಸುರನು ಹಿಂದೆ ರಾವಣನಿಗೆ ಸೋದರ ಮಾವನಾಗಿದ್ದನು. ಶ್ರೀರಾಮನ ಬಲಕ್ಕೆ ಹೆದರಿ ಅಡಗಿ ಕೊಂಡಿದ್ದನು. ರಾಮಾವತಾರವು ಮುಗಿದ ಮೇಲೆ ಬಕಾಸುರನೆಂಬ ಹೆಸರಿನಿಂದ ಉದ್ಧಟನಾಗಿ, ಹರವರ ಬಲಗರ್ವಿತನಾಗಿ ನರ ಬಲಿ ಮೊದಲಾಗಿ ಕಪ್ಪವನ್ನು ಗ್ರಹಿಸುತ್ತಿದ್ದನು.

ಇವನ ವಾರ್ತೆಯನ್ನು ಕೇಳಿದ ಕುಂತಿದೇವಿಯು ಭೀಮಸೇನನಿಗೆ ಈ ವಿಷಯವನ್ನು ಹೇಳಿದಳು. ಭೀಮನಂತೂ ಬಹು ಸಂತೋಷಭರಿತನಾದನು. "ಅಪ್ಪಾ ಭೀಮಾ, ಆ ವಿಪ್ರನ ದುಃಖವನ್ನು ನೋಡಲಾರದೆ ನಾನು ಆತನಿಗೆ ಸಮಾಧಾನವನ್ನು ಹೇಳಿ ನನಗೆ ಐದು ಜನ ಮಕ್ಕಳಿದ್ದಾರೆ. ಅದರಲ್ಲಿ ಬಹು ಭಕ್ಷಕನಾದ ಭೀಮನನ್ನು ನಿಮ್ಮ ಪರವಾಗಿ ನೀಡುತ್ತೇನೆ ಎಂದು ಹೇಳಿ ಬಿಟ್ಟೆ" ಎಂದಳು. ಆಗ ಧರ್ಮರಾಜನು "ಅಮ್ಮಾ, ಎಂಥಾ ಕೆಲಸವನ್ನು ಮಾಡಿಬಿಟ್ಟೆ. ನಾವೇ ಬಹು ಶತ್ರು ಸಂಕಟದಲ್ಲಿ ಸಿಲುಕಿ ಒದ್ದಾಡುತ್ತಿದ್ದೇವೆ. ಭೀಮನೇ ನಮ್ಮ ರಕ್ಷಕ. ಇಂಥಾದ್ದರಲ್ಲಿ ಭೀಮನನ್ನು ಬಕನಿಗೆ ಒಪ್ಪಿಸಿದರೆ ನಮಗಾರು ಗತಿ" ಎಂದು ರೇಗಿದನು. ಆಗ ಕುಂತಿಯು ಹೇಳುತ್ತಾಳೆ. "ಹೇ ಧರ್ಮನಂದನಾ ಈ ಭೀಮನು ಎಂಥಹವನು ಎಂಬುದನ್ನು ನಾನು ಅವನು ಹುಟ್ಟಿದಾಗಲೇ ಗ್ರಹಿಸಿರುವೆನು.

"ಸರ್ವೈಃ ಸುರೈರಸುರ । ಯೋನಿಭಿರಪ್ಯನೇನ ॥
ಚೂರ್ಣೀಕೃತೋಹಿ ಶತಶೃಂಗ ಗಿರಿಃ ಪ್ರಸೂತ್ಯಾಂ ॥"

ಹುಟ್ಟಿದಾಗಲೇ ನನ್ನ ಕೈಯಿಂದ ಕೆಳಗೆ ಜಾರಿ ಬಿದ್ದ ಮಾತ್ರದಿಂದ ಪರ್ವತವೇ ಸಿಡಿದು ಶತಶೃಂಗವಾಯಿತು. ಇನ್ನು ಇವನು ಈ ಬಕನನ್ನು ಸಂಹರಿಸುವಲ್ಲಿ ಯಾವ ಸಂಶಯವೂ ಇಲ್ಲ" ಎಂದು ಹೇಳಿದಳು.

ಇತ್ತ ಭೀಮಸೇನನಿಗೆ ಆನಂದವೋ ಆನಂದ. ನೋಡುವವರ ಕಣ್ಣಿಗೆ ಊಟ ಸಿಗುತ್ತದೆಂದು. ಅಂತರಂಗದಲ್ಲಿ ದುಷ್ಟ ನಿಗ್ರಹಾತ್ಮಕವಾದ ಭಗವತ್ಸೇವಾನುಕೂಲವು ಲಭ್ಯವಾಯಿತೆಂದು ಹೀಗೆ ಚಿಂತಿಸುತ್ತ

"ಗತ್ವಾತ್ವರನ್‌ಬಕ ವನಸ್ಯ । ಸಕಾಶಮಾಶು ॥
ಭೀಮಃ ಸಪಾಯಸ ಭಕ್ಷ್ಯ । ಪಯೋ ಘಟಾದ್ಯೈಃ ॥
ಯುಕ್ತಂಡ ಶೈಲ ನಿಭಮುತ್ತಮ । ಮನ್ನ ರಾಶಿಂ ॥
ಸ್ಪರ್ಶಾತ್ ಪುರೈವ ನರ ಭಕ್ಷಿತು । ರತ್ತುಮೈಚ್ಛನ್ ॥ ೧೯ – ೮೮ ॥

ಬ್ರಾಹ್ಮಣನಾದರೂ ಸಂತೋಷದಿಂದ ನಾನಾ ವಿಧವಾದ ಭಕ್ಷ್ಯಗಳನ್ನು ಅಂದರೆ ಹೋಳಿಗೆ, ಕಡುಬು, ಜಿಲೇಬಿ, ಲಾಡು, ಚಿರೋಟಿ, ಫೇಣಿ, ಗಿಲಗಿಂಚಿ, ಕೋಡುಬಳೆ, ಚಕ್ಕುಲಿ, ಬೇಸನ್ ಉಂಡೆ, ರವೆಉಂಡೆ, ಚಿತ್ರಾನ್ನ, ಬುರುಬುರಿ, ಬುಟ್ಟಿಗಟ್ಟಲೆ ಕೋಸುಂಬ್ರಿ, ಕೊಳಗ ಗಟ್ಟಲೆ ಪಾಯಸ, ಪರ್ವತಕ್ಕೆ ಸಮನಾದ ಅನ್ನದ ರಾಶಿಯೊಂದಿಗೆ ಕೊಬ್ಬಿದ

ಜೋಡೆತ್ತುಗಳನ್ನು ಹೊಂದಿಸಿ. ಎಲ್ಲಕ್ಕೂ ಭೂಷಣಪ್ರಾಯವೇ ಆದ ಸರ (ಭೀಮ)ನನ್ನೇ ಕಳುಹಿಸಿ ಕೊಟ್ಟನು. ಇಂದು ಬಕಾಸುರನು ಅದೃಷ್ಟವೇ ಅದೃಷ್ಟ. ಇಂಥಾ ಊಟವನ್ನು ಅವನು ಹಿಂದೆ ಕಂಡಿರಲಿಲ್ಲ. ಮುಂದೆ ಕಾಣಲೇ ಇಲ್ಲ. ಹಾ. ಮರತೆ. ಒಂದು ಪಿಪಾಯಿ ತುಂಬಾ ಮಜ್ಜಿಗೆ ಪಳಿದ್ಯವು ಇತ್ತು. ಅದರಲ್ಲಿ ಇಡೀ ಇಡೀ ಬೂದು ಕುಂಬಳಕಾಯಿಗಳನ್ನೂ ಹಾಕಿತ್ತು. ಹೋಳು ಮಾಡದೆ.

ಭಾರಿ ಗಾಡಿಯೊಂದಿಗೆ ತಡವಾಗಿ ಬಕವನವನ್ನು ಪ್ರವೇಶಿಸಿದನು ಭೀಮ. ಈತನನ್ನು ಕಂಡ ಕೂಡಲೇ ಬಕಾಸುರನು ಕೆಂಡಗಣ್ಣಿನಿಂದ ಹುಂಕಾರನಾದ ಮಾಡಿದನು. ಭೀಮನಾದರೋ ನಿರ್ವಿಕಾರ ಭಾವದಿಂದ ಆ ರಾಕ್ಷಸನು ಮುಂದೆ ಬರುವಷ್ಟರೊಳಗೆ ಸಕಲ ಆಹಾರ ಪದಾರ್ಥಗಳನ್ನು ಸ್ವಾಹಾಕಾರ ಮಾತ್ರದಿಂದಲೇ ಸ್ವೀಕರಿಸಿಬಿಟ್ಟನು. ಎರಡೆತ್ತುಗಳನ್ನು ಮಾತ್ರ ಬಿಟ್ಟು. ರಾಕ್ಷಸ ಸ್ಪರ್ಶದಿಂದ ಅನ್ನವು ಅಪವಿತ್ರವಾಗಬಾರದೆಂದು ಬೇಗನೇ ಭುಂಜಿಸಿ ಪಾತ್ರೆಗಳನ್ನು ಮಗುಚಿಟ್ಟನು. ಇದರಿಂದ ಕ್ರೋಧವಶನಾದ ಬಕಾಸುರನು ಮರಗಳನ್ನು ಕಿತ್ತಿ ತಂದು ಭೀಮನಿಗೆ ಅಪ್ಪಳಿಸಿದನು. ಭೀಮನು ಅವನ ಪೆಟ್ಟುಗಳಿಗೆ ಸ್ವಲ್ಪವೂ ಅಳುಕದೆ ಅವನ ದುಷ್ಟ ಶಕ್ತಿ, ಯುಕ್ತಿಗಳನ್ನು ದೇವತೆಗಳಿಗೆ ಪರಿಚಯಿಸುವುದಕ್ಕೋಸ್ಕರ್ರಲುವಾಗಿ ಸ್ವಲ್ಪ ಹೊತ್ತು ಹೋರಾಟವನ್ನು ನಡೆಸಿ ಕೊನೆ ಅವನ ಒಂದು ಕಾಲನ್ನು ತುಳಿದು ಮತ್ತೊಂದು ಕಾಲನ್ನು ಹಿಡಿದು ಅವನನ್ನು ದಂಟನಂತೆ ಸೀಳಿ ಬಗೆದನು. ತರುವಾಯ ಆ ದೈತ್ಯನು ಅಂಧಂತಮಸ್ಸಿನ ದ್ವಾರವನ್ನು ಸೇರಿ ಅಲ್ಲಿ ತನ್ನಂಶದರಾಶಿಯಲ್ಲಿ ಬಿದ್ದನು.

ಇತ್ತ ಭೀಮಸೇನನು ಬಕಾಸುರನ ಶರೀರವನ್ನು ಬಂಡಿಯ ಮೇಲೆ ಹಾಕಿಕೊಂಡು ಬಂದು ಊರ ಮುಂಬಾಗಿಲ ಮುಂದೆ ನಿಲ್ಲಿಸಿ ಮನೆಯನ್ನು ಸೇರಿದನು. ಆದರೆ ಜನರು ಆ ಶರೀರವನ್ನು ಕಂಡು ಭೀತರಾಗಿ ನಡುಗುತ್ತಿರಲು ಪಾಂಡವರಿಗೆ ಆಶ್ರಯ ನೀಡಿದ ಬ್ರಾಹ್ಮಣನ ಮುಖೇನ ಬಕನು ನಿಧನ ಹೊಂದಿದ ವಾರ್ತೆಯನ್ನು ಕೇಳಿ ಎಲ್ಲರೂ ಸಂತೋಷದಿಂದ ಭೀಮನಿಗೆ ನೈವೇದ್ಯವನ್ನಿತ್ತರು. ಆಗ ಆ ಭೀಮಸೇನನು ಆ ನೈವೇದ್ಯವನ್ನು ಆ ಊರಿನಲ್ಲಿ ಪ್ರತಿಷ್ಠಿತನಾಗಿದ್ದ ನರಸಿಂಹ ದೇವರಿಗೆ ಅರ್ಪಿಸಿ ಮುಂದೆ ಶ್ರೀವೇದ ವ್ಯಾಸರ ಆಜ್ಞೆಯಂತೆ ಪಾಂಚಾಲ ನಗರಕ್ಕೆ ಕುಟುಂಬ ಸಮೇತವಾಗಿ ಧಾವಿಸಿದನು.

ಇಲ್ಲಿ ಭೀಮಸೇನನು ಬಂಡಿ ಅನ್ನವನ್ನು ಉಂಡನು. ಅಬ್ಬಾ ಎಂಥಾ ಹೊಟ್ಟೆ! ಎಷ್ಟು ಬಲಶಾಲಿ ಎಂಬುದು. ಅಸುರರಿಗೆ ಕೌತುಕಮಯವಾದುದು. "ಬಂಡಿ ಅನ್ನವನ್ನುಂಡನು । ಬಕನ ಪ್ರಾಣ ಕೊಂಡನು" ಎಂಬುದು ಮಕ್ಕಳ ಮನರಂಜನೆಗೆ ಮಾತ್ರ. ಆದರೆ ಮೂಲಾವತಾರ ಭೇದವರ್ಜಿತನಾದ ಭೀಮನ ಜಠರಾಗ್ನಿಯು ಬಂಡಿ ಅನ್ನಕ್ಕೆ ಮಾತ್ರ ಸೀಮಿತವೇ? ಕೂದಲೆಳೆ ತಂತುವಿನ ವಿದ್ಯುತ್ತು ಆನೆಯ ಪ್ರಾಣವನ್ನು ಹೀರುವಂತಿರುವಾಗ ಹೆಬ್ಬರಳ ಗಾತ್ರದ ಬೃಹತ್ ತಂತುವಿನ ಶಕ್ತಿಯನ್ನು ಹೇಗೆ ಅಳೆಯಲಾದೀತು? ಹಾಗೆಯೇ ಅತ್ಯಂತ ಸೂಕ್ಷ್ಮವಾದ ಜಠರಾಗ್ನಿಯುಳ್ಳ ಅಜ ಗಜಾದಿಗಳು ಕ್ಷಣ ಕ್ಷಣಕ್ಕೂ ಹಸಿವೆ ಎನ್ನುತ್ತಿರುವಾಗ ಇನ್ನು **"ಅಂಗುಷ್ಠ ಮಾತ್ರೇ ಜಠರೇ ನಿಧಾಯ" "ಜಾಜ್ವಲ್ಯಮಾನಂ ಮಮ ಜಾತವೇದಸಂ॥"** ಎಂದು ಭೀಮನೇ ಆದ ಶ್ರೀ ಮಧ್ವಾಚಾರ್ಯರು ಹೇಳಿರುವಾಗ ಹೆಬ್ಬೆರಳಿನ ಗಾತ್ರದಿಂದ ವೈಶ್ವಾನರ ರೂಪಿಯಾದ ಶ್ರೀಹರಿಯನ್ನು ಉಪಾಸಿಸುತ್ತಿರುವ ಈ ಭೀಮನಿಗೆ ಒಂದು ಬಂಡಿ ಅನ್ನ ಇತರ ಪದಾರ್ಥಗಳು ಹೆಚ್ಚೇ? ಆನೆಗೆ ಒಂದೇ ಒಂದು ಎಳ್ಳುಕಾಳನ್ನು ತಿನ್ನಿಸಿದರೆ ಅದಕ್ಕೆ ಅಜೀರ್ಣವಾಗುತ್ತದೆಯೇ? ಹಾಗೆಯೇ ಭೀಮನ ಜಠರಾಗ್ನಿಯು. ಇದನ್ನೇ ವಾಯುವಿನ ಅವತಾರ ತ್ರಯಗಳನ್ನು

ಬಣ್ಣಿಸುವ ಬಳಿತ್ಥಾ ಸೂಕ್ತವು ವಾಯುವಿನ ಜಠರ ವಿಭೂತಿಯನ್ನೇ ಭೀಮಾವತಾರಕ್ಕೆ ಮೀಸಲಾಗಿರಿಸಿರುತ್ತದೆ. "ಪ್ರಕ್ಷೋವಮಃ ಪಿತುಮಾನ್ನಿತ್ಯ ಆಶಯೇ । ದ್ವಿತೀಯಮಾಸಪ್ತ ಶಿವಾಶುಮಾತೃಷ್ಟು" ಎಂಬುದೇ ಈ ಸೂಕ್ತದ ಉದ್ಘೋಷ.

ಭೀಮನು ಬಂಡಿ ಅನ್ನವನ್ನೇನೋ ಉಂಡನು. ಭಲೇ ಭಲೇ ಅನ್ನೋಣವೇ? ಅಂದರೆ ಭೀಮನ ಜಠರವು ಬಂಡಿ ಅನ್ನಕ್ಕೆ ಮಾತ್ರ ಸೀಮಿತವೇ? ಅಂದಿಗೆ ಆ ಮಹಿಮೆಯು ಮುಗಿಯಿತೇ? ಎಂದರೆ ಈ ಬ್ರಹ್ಮಾಂಡದಲ್ಲಿ ಇರುವ ಸಕಲ ಚರಾಽಚರ ಜೀವರಾಶಿಗಳು, ದೇವ, ದಾನವ, ಖಗ, ಮೃಗ, ಜಲಚರ, ಜಂಗಮ, ಸ್ಥಾವರ, ದಿವಾಚರ, ನಿಶಾಚರಾದಿ ಸಕಲ ಜೀವರೂ ಪ್ರತಿನಿತ್ಯವೂ ಸ್ವೀಕರಿಸುತ್ತಿರುವ ಲಕ್ಷಾಂತ್ತರ ಮಣಗಟ್ಟಲೆ ಆಹಾರಗಳನ್ನು ಅವರವರಲ್ಲಿ ಅಂತರ್ಯಾಮಿಯಾಗಿದ್ದು ಜೀರ್ಣಿಸಿ ಸುಖ ಕೊಡುತ್ತಿರುವವನು ಈ ವಾಯುದೇವನೇ. ಅಂದಿಗೂ, ಇಂದಿಗೂ ಎಂದೆಂದಿಗೂ, ಸತ್ವ, ರಾಜಸ, ತಾಮಸಾಹಾರಗಳನ್ನು ಸ್ವೀಕರಿಸಿ ತ್ರಿವಿಧ ಜೀವರಿಗೆ ಉಚಿತರರ ಸವಿಭಾಗವನ್ನು ಮಾಡಿ, ನೀಡಿ, ಅವರವರ ಸಾಧನೆಯನ್ನು ಮಾಡಿಸುತ್ತಿರುವ ತೃತೀಯ ವೈಶ್ವಾ ನರನೇ ಈ ವಾಯುವು (ಮುಖ್ಯ ವೈಶ್ವನರನು ಪರಮಾತ್ಮ, ದ್ವೀತೀಯ ಲಕ್ಷ್ಮೀ) ಅದಕ್ಕೇ ಶ್ರೀವ್ಯಾಸರಾಯರು ವಾಯು ಗದ್ಯದಲ್ಲಿ ಈ ವಾಯುವನ್ನು "ಸರ್ವಸಾರ ಭೋಕ್ತಾಯ । ಭೋಗ್ಯ ಭೋಕ್ತ್ಯ ರೂಪಾಯ" ಎಂದು ಕೊಂಡಾಡಿರುತ್ತಾರೆ. ಈ ಭೀಮಾವತಾರದಲ್ಲಿ ತೋರಿಸಿದ ಭೋಕ್ತೃತ್ವವು ಕೇವಲ 'ಲೇಶತಃ' ಮಾತ್ರವೇ ಹೊರತಾಗಿ 'ಶಕ್ತಿತಃ' ಅಲ್ಲ. ಹಾಗಾದರೆ ಪ್ರತಿ ದಿನದಲ್ಲೂ ಈ ಬ್ರಹ್ಮಾಂಡದಲ್ಲಿ ಎಷ್ಟು ಖಂಡುಗ ಆಹಾರವು ಶ್ರೀವಾಯು ದೇವರಿಂದ ಜೀರ್ಣ ಮಾಡಿಸಲ್ಪಡುತ್ತಿದೇ? ಎಂದರೆ ರುದ್ರಾದಿಗಳಿಗೂ ಸಾಕಲ್ಯೇನ ಅಗಮ್ಯವಾದ ಮಹಿಮೆಯು ಶ್ರೀವಾಯು ದೇವನದು.

**॥ ಪದ ॥ ಯಾವ ಬಕಾಸುರನ । ತಾ ವುಡುಗಿಸಿದನೊ ।**
**ಆವನಿವನಿಗೀಡು । ಭಾವಿಸಿ ನೋಡಲು ॥**
**ಪಾವನ ಮಾಡಿದ । ಪಾರ್ವನ ಕುಲವನು ।**
**ತಾ ವರನೆನಿಸುತ । ಪಾವಕ ಜಾತೆಗೆ ॥ ೨೦ ॥**

**ಶಬ್ದಾರ್ಥ:** ಯಾವ = ಬಲಾಢ್ಯನಾದ; ಬಕಾಸುರನ = ಏಕಚಕ್ರ ನಗರಕ್ಕೆ ಕಂಟಕ ಪ್ರಾಯನಾಗಿದ್ದ ಬಕನಾಮಕ ಈ ದೈತ್ಯನನ್ನು; ತಾ = ಭೀಮನು; ಉಡುಗಿಸಿದನೋ = ಸಂಹಾರ ಮಾಡಿದನೋ; ಆವನಿವನಿಗೆ = ಈ ಭೀಮಸೇನನಿಗೆ ಸಮಾನ ಪರಾಕ್ರಮಿಯು; ಈಡು = ಸಮಾನನು; ಯಾರಿದ್ದಾರೆ? (ಯಾರೂ ಇಲ್ಲವೆಂದರ್ಥ); ಪಾವನ ಮಾಡಿದ = ವಿಪತ್ತನ್ನು ಪರಿಹರಿಸಿ ಪಾರ್ವನ ಕುಲವನ್ನು = ಬ್ರಾಹ್ಮಣನ ವಂಶವನ್ನು; ತಾ = ತಾನು (ಭೀಮ); ವರನೆನಿಸುತ = ಪತಿಯಾಗಿ; ಪಾವಕ ಜಾತೆಗೆ = ಅಗ್ನಿ ಸಂಭೂತಳಾದ ದ್ರೌಪದಾ ದೇವಿಗೆ.

**ಭಾವಾರ್ಥ:** ಹಿಂದಿನ ಪದ್ಯದಲ್ಲಿ ಹೇಳಿದಂತೆ ಏಕಚಕ್ರನಗರದಲ್ಲಿ ಭೀಮನು ಭಗವದರ್ಪಿತವಾದ ನೈವೇದ್ಯವನ್ನು ಬಕಾಸುರನಿಗೆ ದಕ್ಕಗೊಡದೆ ತಾನೇ ಅದನ್ನು ಭುಂಜಿಸಿ ದೈತ್ಯ ಸಂಹಾರವನ್ನು ಮಾಡಿ ಆಶ್ರಯದಾತನಾಗಿದ್ದ ಬ್ರಾಹ್ಮಣ ಪುತ್ರನಿಗೆ ಪ್ರಾಪ್ತವಾಗಿದ್ದ ಬಕಗ್ರಾಸ ವಿಪತ್ತನ್ನು ಪರಿಹರಿಸಿ ಆ ಬ್ರಾಹ್ಮಣನ ವಂಶವನ್ನು ಉದ್ಧರಿಸಿದನು. ಇಂಥಾ ವಾಯು ದೇವರಿಗೆ ಸಮಾನರಾದ ಪರಾಕ್ರಮಿಗಳು ಈ ಬ್ರಹ್ಮಾಂಡದಲ್ಲಿಯೇ ಇಲ್ಲ. **"ವಾಯುವಿಗೆ ಸಮರಿಲ್ಲ ಜಗದೊಳು। ವಾಯು ದೇವರೆ ಬ್ರಹ್ಮರೋ".** (ಭಾವಿ) ಈ ಭೀಮಸೇನನು ಶ್ರೀವೇದವ್ಯಾಸರ ಸಲಹೆಯಂತೆ ಅಣ್ಣ, ತಮ್ಮಂದಿರಿಂದ, ತಾಯಿಯ ಸಹಿತವಾಗಿ ದ್ರೌಪದಿಯ ಸ್ವಯಂವರಕ್ಕಾಗಿ ದ್ರುಪದನ ರಾಜಧಾನಿಗೆ ದಯಮಾಡಿಸಿದನು. ದ್ರುಪದನ ವೃತ್ತಾಂತ : ದ್ರುಪದನು ಬಾಲ್ಯದಲ್ಲಿ ಭಾರಧ್ವಾಜ ಮುನಿಗಳ ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮಾಡಿದನು. ಗುರುಪುತ್ರನಾದ ದ್ರೋಣನಲ್ಲಿ ಬಹುಮೈತ್ರಿ ಇತ್ತು. ವಿದ್ಯಾಭ್ಯಾಸಾನಂತರದಲ್ಲಿ ದ್ರುಪದನು ದ್ರೋಣನಿಗೆ ತನ್ನ ಅರಮನೆಗೆ ಬರಲು ಆಹ್ವಾನವನ್ನಿತ್ತನು. ಮೊದಮೊದಲು ರಾಜಮೈತ್ರಿಗೆ ಹೆದರಿದ ದ್ರೋಣನು ಬಹು ಒತ್ತಾಯಕ್ಕೆ ಮಣಿದು ಪ್ರಸಂಗವಶಾತ್ ದ್ರುಪದನ ಅರಮನೆಗೆ ಬರುವುದಾಗಿ ಒಪ್ಪಿಕೊಂಡನು. ದ್ರೋಣಾಚಾರ್ಯರ (ಬೃಹಸ್ಪತಿ) ಪತ್ನಿ ಕೃಪಾಚಾರ್ಯರ ಸಹೋದರಿಯಾದ ಕೃಪಿ (ತಾರಾದೇವಿ). ಇವರ ಪುತ್ರನೇ ಅಶ್ವತ್ಥಾಮ (ರುದ್ರದೇವರು) ಇವರು ಹುಟ್ಟಿದಾಗ ಕುದುರೆಯಂತೆ ಕೆನೆಯುತ್ತ ರೋದಿಸಿದುದರಿಂದ ಈತನಿಗೆ ಅಶ್ವತ್ಥಾಮನೆಂಬ ('ಬೃಹಸ್ಪತೇ') ಹೆಸರು ಬಂದಿತು. ""**ದ್ರೋಣ ಪತ್ನೀ ಕೃಪೀ ತಾರ । ಪೂರ್ವಂ ಭಾರ್ಯಾ ಬೃಹಸ್ಪತೇಃ ॥"**

ಕೌರವ – ಪಾಂಡವರು ಬಾಲಾಟಗಳಲ್ಲಿ ತೊಡಗಿದ್ದಾಗ ಕ್ರೀಡಾವಾಸನದಲ್ಲಿ ಅವರು ಹಾಲನ್ನು ಕುಡಿಯುತ್ತಿದ್ದರು. ಇದೇ ರೀತಿಯಾಗಿ ಅಶ್ವತ್ಥಾಮನೂ ತಾಯಿಯ ಬಳಿ ಬಂದು ಹಾಲನ್ನು ಕೇಳಿದರೆ ಕೃಪಾದೇವಿಯು ಮನೆಯಲ್ಲಿ ಹಾಲಿರಲಿಲ್ಲವಾದ್ದರಿಂದ ನಿತ್ಯವೂ ಒಟ್ಟನ್ನು ನೀರಿನಲ್ಲಿ ಕದಡಿ ಅದನ್ನೇ ಹಾಲೆಂದು ಕೊಡುತ್ತಿದ್ದಳು. ಮಗನು ಹಾಲೆಂದೇ ಅದನ್ನು ನಂಬಿದ್ದನು. ಒಂದು ದಿನ ಆಕಸ್ಮಿಕವಾಗಿ ದುರ್ಯೋಧನನು ಅಶ್ವತ್ಥಾಮನಿಗೆ ತನ್ನ ಹಾಲಿನಲ್ಲಿ ಪಾಲನ್ನು ಕೊಟ್ಟನು. ಈ ಹಾಲಿನ ರುಚಿಯನ್ನು ಕಂಡ ಅಶ್ವತ್ಥಾಮನು ತನ್ನ ತಾಯಿಯಲ್ಲಿ ನಿಜವಾದ ಹಾಲಿಗಾಗಿ ಹಟ ಹಿಡಿದನು. ತನ್ನ ಬಡತನಕ್ಕೆ ಮರುಗಿ ಪುತ್ರವಾತ್ಸಲ್ಯದಿಂದ ಕರಗಿ ನೀರಾದ ಕೃಪಾದೇವಿಯು ಪತಿ ದ್ರೋಣರಲ್ಲಿ

ವಿಜ್ಞಾಪಿಸಿಕೊಂಡಳು. "ಸ್ವಾಮಿ, ಭೂಪಕುಲತಿಲಕ ದ್ರುಪದನಲ್ಲಿಗೆ ಹೋಗಿ ಬಂದು ಗೋವನ್ನು ಬೇಡಿಕೊಂಡು ತಂದು ಏಕೈಕ ಪುತ್ರನನ್ನು ಪ್ರೀತಿ ಬಡಿಸಬೇಕೆಂದು". ಆಗ ದ್ರೋಣಾಚಾರ್ಯರಿಗೆ ಮಿತ್ರನ ಆಮಂತ್ರಣವು ಜ್ಞಾಪಕಕ್ಕೆ ಬಂದು ನೆಪವೂ ಸಿಕ್ಕಿತೆಂದು ಹಿಗ್ಗಿ ದ್ರುಪದನಲ್ಲಿಗೆ ಹರ್ಷಚಿತ್ತರಾಗಿ ನಡೆತಂದರು. ಆದರೆ ವಿಧಿ ವಿಲಾಸವು ಬೇರೆಯೇ ಆಗಿತ್ತು. ರಾಜಭಟರು ಆಚಾರ್ಯರನ್ನು ದ್ವಾರದಲ್ಲಿಯೇ ತಡೆದರು. ಆಚಾರ್ಯರ ದೈನ್ಯ ನುಡಿಗಳಿಗೆ ಮನ್ನಣೆ ಸಿಗಲಿಲ್ಲ. ಕ್ಷಣಾರ್ಧದಲ್ಲಿ ಆಚಾರ್ಯರು ಭಟ, ಸೈನಿಕರನ್ನು ದಿಗ್ಬಂಧನ ಮಾಡಿ ಅರಮನೆಯನ್ನು ಪ್ರವೇಶಿಸಿದರು. ಆದರೇನು? ಆಚಾರ್ಯರಿಗೆ ರಾಜ ಸಮ್ಮುಖದಲ್ಲಿ ಹೆಚ್ಚಿನ ನಿರಾಸೆಯು ಕಾದಿತ್ತು. ಮಿತ್ರನೂ ಗುರುಪುತ್ರನೂ ಆದ ದ್ರೋಣಾಚಾರ್ಯರನ್ನು ಬಲವಂತ ಮಾಡಿಕೊಟ್ಟ ಆಮಂತ್ರಣವನ್ನೂ ರಾಜ ಮುಕುಟವು ಮರೆಸಿಬಿಟ್ಟಿತ್ತು. ಮದಭರಿತನಾದ ದ್ರುಪದನು ಆಚಾರ್ಯರನ್ನು ಹೀಯಾಳಿಸಿದನು. ಮೂದಲಿಸಿದನು.

ಅರಮನೆಯನ್ನು ಪ್ರವೇಶಿಸಿದ ಆಚಾರ್ಯರು ರಾಜ ಸಮ್ಮುಖದಲ್ಲಿ ನಿಂತೇ ಮಾತನಾಡಲಾರಂಭಿಸಿದರು.

**ದ್ರೋಣ:** "ಮಹಾರಾಜನ್ ಶುಭಂ ಭೂಯಾತ್ । ಶುಭಂ ಭೂಯಾತ್" ಎಂದರು.

ಆಗ ರಾಜನು ಬಂದ ಬ್ರಾಹ್ಮರಿಗೆ ದಿಗ್ಗನೆ ಎದ್ದು ಸಿಂಹಾಸನದಲ್ಲಿ ಕೂಡಿಸಿ ಅರ್ಘ್ಯಾರಿಗಳನ್ನು ಕೊಟ್ಟು ಮೃದುಮಧುರ ಭಾಷೆಗಳಿಂದ ಸಂತೈಸುವುದನ್ನು ಬಿಟ್ಟು ಭಗ್ಗೆಂದು ಎದ್ದು ಹೂಂಕರಿಸಿ

**ದ್ರುಪದ** : "ಭವನ್ ಕಃ? ಭವಂತಂ ಕೈಃ ಅಂತಃ ಪ್ರವೇಶಿತಂ?" (ನೀನು ಯಾರು? ನಿನ್ನನ್ನು ಯಾರು ಒಳಗೆ ಬಿಟ್ಟರು? ಎಂದು ಗರ್ಜಿಸಿದನು. ಆಗ ಆಚಾರ್ಯರು,

**ದ್ರೋಣ:** "ಅಹಂ ತವ ಮಿತ್ರಃ ಅಸ್ಮಿ, ತಥಾಚ ಗುರು ಪುತ್ರಃ ದ್ರೋಣಾಚಾರ್ಯೋಸ್ಮಿ (ನಾನು ನಿನ್ನ ಮಿತ್ರ, ಗುರುಪುತ್ರ, ದ್ರೋಣಾಚಾರ್ಯನಿರುವೆನು)" ಎಂದರು.

ಆಗ ದ್ರುಪದನು: "ಭವಾನಪಿ ದರಿದ್ರಯಾ, ಪೀಡ್ಯ ಮನೋ ಬ್ರಾಹ್ಮಣ್ಯೋ ಅಥಾಪಿ ಭವಾನ್ ಕಪಟೋಸಿ ಇಭಾತಿಮೇ, ಭವತಾಂ ಅಪೇಕ್ಷಾ ಕಾ? (ದರಿದ್ರ ಬ್ರಾಹ್ಮಣಾ, ನೀನು ನನಗೆ ಮಿತ್ರನಾ? ಕಪಟಿಯೇ? ನೀನು ಬಂದ ಉದ್ದೇಶವೇನು?)" ಎಂದು ಕೇಳಿದನು.

ಅದಕ್ಕೆ ದ್ರೋಣರು: "ರಾಜನ್, ಅತ್ರ ಭವತಾಮ ಆಮಂತ್ರಣಾನು ಸಾರೇ ಅಹಮತ್ರ ಉಪಸ್ಥಿತೋಸ್ಮಿ ಸಮಾಗತೋಸ್ಮಿಚ (ರಾಜನೇ, ನಾನು ನಿನ್ನ ಆಮಂತ್ರಾಣನುಸಾರವಾಗಿಯೇ ಇಲ್ಲಿಗೆ ಬಂದಿರುತ್ತೇನೆ)" ಎಂದು ಮುಂದುವರಿಯುತ್ತಿರುವಷ್ಟರಲ್ಲಿಯೇ

**ದ್ರುಪನು:** "ಶೀಘ್ರಮೇವ ಇತಃ ಉಪಸರತುನೋ ಚೇತ್ ಕಾರಾಗೃಹ ವಾಸೋ ಭವೇತ್ (ಶ್ರೀಘ್ರವಾಗಿ ಇಲ್ಲಿಂದ ತೊಲಗು. ಇಲ್ಲವಾದರೆ ನಿನಗೆ ಕಾರಾಗೃಹವಾಸವು ಕಾದಿದೆ)" ಎಂದು ಗರ್ಜಿಸಿದನು. ದಾನ ಕೊಡದೆ ಅಪಮಾನಿಸಿದನು. ಬ್ರಹ್ಮದತ್ತವಾದ (ಪರಶುರಾಮನಿಂದ) ಈ ಭೂಮಿಯಲ್ಲಿ ಇದ್ದುಕೊಂಡು ಬ್ರಾಹ್ಮಣರಿಗೆ ಅಪಮಾನ! ದ್ರೋಣಾಚಾರ್ಯರು ಸಹಿಸದಾದರು. ಅವರು ಇಷ್ಟಪಟ್ಟಿದ್ದರೆ ಶರ ಸಂಧಾನದಿಂದ ದ್ರುಪದನನ್ನೇ ನಿಗ್ರಹಿಸಿ

ಕಾರಾಗೃಹದಲ್ಲಿಟ್ಟು ಸಿಂಹಾಸನವನ್ನೇರ ಬಹುದಾಗಿತ್ತು. ಆದರೆ ಅದು ಬ್ರಾಹ್ಮಣರಿಗೆ ಧರ್ಮವಲ್ಲ. ಆ ಕೆಲಸವನ್ನು ಕ್ಷತ್ರಿಯರಿಂದಲೇ ಮಾಡಿಸುತ್ತೇನೆಂದು ಶಪಥವನ್ನು ಮಾಡಿ ದ್ರೋಣರು ಬರಿಗೈಯಲ್ಲಿ ಹಿಂದಿರುಗಿದರು. ಪಾಪ!

ತರುವಾಯ ದ್ರೋಣರು ನೇರವಾಗಿ ಹಸ್ತಿನಾಪುರಕ್ಕೆ ಬಂದರು. ಆಗ ಅಲ್ಲಿ ಚಂಡಾಡುತ್ತಿದ್ದ ಕುರು, ಪಾಂಡವ ಬಾಲಕರ ಚೆಂಡು ಸೇದೋ ಬಾವಿಯಲ್ಲಿ ಬಿದ್ದುಬಿಟ್ಟಿತು. ಮಕ್ಕಳ ಅಸಾಯಕರಾಗಿ ಅಳುತ್ತಿದ್ದರು. ಅದನ್ನು ದ್ರೋಣಾಚಾರ್ಯರು ನೋಡಿದರು. ಶರ (ದರ್ಭೆ) ಪ್ರಯೋಗದಿಂದ ಉಪಾಯವಾಗಿ ಆ ಚೆಂಡನ್ನು ಮೇಲೆತ್ತಿ ಬಾಲಕರ ಕೈಗೆ ಇತ್ತರು. ಹರ್ಷನಿರ್ಭರರಾದ ಆ ಬಾಲಕರು ಆಚಾರ್ಯರ ಕೌಶಲ್ಯಕ್ಕೆ ಬೆರಗಾಗಿ ಅವರಿಗೆ ಏನು ಕೊಡಬೇಕೆಂದು ಕೇಳಿದರು. ಅದಕ್ಕೆ ದ್ರೋಣಾಚಾರ್ಯರು ನನಗೆ ನಿಮ್ಮ ಹಿರಿಯರಿಂದ ಅನುಮತಿಯನ್ನು ಕೊಡಿಸಿದರೆ ನಾನು ನಿಮ್ಮನ್ನು ಶಸ್ತ್ರ ವಿದ್ಯಾಪಾರಂಗತರನ್ನಾಗಿ ಮಾಡುವೆನೆಂದು ಹೇಳಿದರು. ಆಗ ಆ ಬಾಲಕರು ಮನೆಗೆ ಹೋಗಿ ನಡೆದ ವೃತ್ತಾಂತವನ್ನು ಪಿತಾಮಹ ಭೀಷ್ಮರಿಗೂ ಅಲ್ಲೇ ಇದ್ದ ವಿದುರನಿಗೂ ತಿಳಿಸಿದರು. ಇದನ್ನು ಕೇಳಿದ ಭೀಷ್ಮರು ತಮ್ಮನ್ನು ತಾವೇ ನಂಬಲಿಲ್ಲ. ಗುರುಕುಲಕ್ಕೆ ನಾವೇ (ಕ್ಷತ್ರಿಯರು) ಹೋಗಿ ಅಂಗಲಾಚಿದರೂ ಕೈಯೊಡ್ಡದ ಬ್ರಾಹ್ಮಣರು ಶಿಕ್ಷಣ ವೃತ್ತಿಯನ್ನು ಯಾಚಿಸಿಕೊಂಡು ಈಗ ತಾವೇ ನಮ್ಮ ಅರಮನೆಯವರೆಗೆ ಬಂದಿರುವರೆಂದರೆ ಕಲಿಯು ಭೂಲೋಕದಲ್ಲಿ ಈಗ ಹುಟ್ಟಿರಬೇಕು (ದುರ್ಯೋಧನ). ಇಲ್ಲಿಂದ ಬ್ರಾಹ್ಮಣರ ಅವನತಿಯು ಪ್ರಾರಂಭವಾಯಿತೆಂದು ಭೀಷ್ಮರು ವಿದುರನಿಗೆ ಹೇಳಿದರು. ತರುವಾಯ ಭೀಷ್ಮ – ವಿದುರಾದಿಗಳು ಸಕಲ ರಾಜ ಮರ್ಯಾದೆಗಳಿಂದ ದ್ರೋಣಾಚಾರ್ಯರನ್ನು ಸ್ವಾಗತಿಸಿ ತಮ್ಮ ಮಕ್ಕಳನ್ನು ಆಚಾರ್ಯ ದ್ರೋಣರಲ್ಲಿ ಶಸ್ತ್ರ ವಿದ್ಯಾಭ್ಯಾಸಕ್ಕಾಗಿ ಬಿಟ್ಟರು. (ಕಲಿಯುಗದಲ್ಲಿ ಬ್ರಾಹ್ಮಣರಿಗೆ ರಾಜಾಶ್ರಯವು ಸಿಕ್ಕಲಾರದು. ಆದುದರಿಂದ ಸ್ವಾವಲಂಬಿಗಳಾಗಲು ಬ್ರಾಹ್ಮಣರಿಗೆ ದ್ರೋಣಾಚಾರ್ಯರು ಮಾರ್ಗದರ್ಶಿಗಳಾದರೆಂದು ತಿಳಿಯಬೇಕು).

ವಿದ್ಯಾಭ್ಯಾಸವು ಮುಗಿದ ಮೇಲೆ ಗುರು ದಕ್ಷಿಣೆಯ ಪ್ರಕ್ರಿಯೆಯು ತಲೆದೋರಿತು. ಆಗ ಆಚಾರ್ಯರು ತಮ್ಮ ಪ್ರತಿಜ್ಞೆಯನ್ನು ತಿಳಿಸಿ ದ್ರುಪದನನ್ನು ಜೈಸಿ ಅವನನ್ನು ಬಂಧಿಸಿ ನನ್ನ ಅಡಿಗಳಲ್ಲಿ ಮಡಗಿಸಬೇಕೆಂದು ಕೇಳಿದರು. ಆಗ ಕೌರವರು ದ್ರುಪದ ಮೇಲೆ ದಾಳಿ ಮಾಡಿ ಪರಾಭವಗೊಂಡು ಹಿಂದಿರುಗಿದರು. ಆದರೆ ಗುರು ದಕ್ಷಿಣೆಯ ಪ್ರಕ್ರಿಯೆಯು ಬಲವಾಯಿತು.

ಅದಕ್ಕೆ ಅರ್ಜುನನು ಮಾತ್ರ ಒಡಂಬಟ್ಟು ಶೀಘ್ರವೇ ಪಾಂಚಾಲ ದೇಶಕ್ಕೆ ದಾಳಿ ಇಟ್ಟು ದ್ರುಪದನನ್ನು ಜೈಸಿ ಕಟ್ಟಿ ತಂದು ಆಚಾರ್ಯರ ಅಡಿದಾವರೆಗಳಿಗೆ ಎರಗಿಸಿದನು. ತಕ್ಷಣವೇ ಆಚಾರ್ಯರು ಸಿಂಹಾಸನವನ್ನೇರಿ ಕುಳಿತು ದ್ರುಪದನಿಗೆ "ಕ್ಷತ್ರಿಯೂ, ನೀನು ನನಗೆ ಕೊಟ್ಟ ಮಾತಿನಂತೆ ಗೋ(ಹಸು) ದಾನವನ್ನು ಕೊಡಲಿಲ್ಲ. ಇಗೋ ನೋಡು ನಾನೇ ನೀನಗೆ ಈಗ ಗೋ(ಭೂಮಿ) ದಾನವನ್ನು ನೀಡುತ್ತಿದ್ದೇನೆ ತೆಗೆದುಕೋ" ಎಂದು ಹೇಳಿ ಅರ್ಧ ರಾಜ್ಯವನ್ನು ಕಸಿದುಕೊಂಡು ಸಿಂಹ ವಿಷ್ಟರದಿಂದ ಇಳಿದು ಹೊರಟು ಹೋದರು. ದ್ರುಪದನು ಲಜ್ಜಾ, ಕ್ರೋಧಗಳಿಂದ ಯುಕ್ತನಾಗಿ ತಾನೂ ಶಪಥ ಮಾಡಿದನು. ಆತನು ತನ್ನ ಶಪಥದಂತೆ ಅರ್ಜುನನಿಗೆ ಕೊಡುವುದಕ್ಕಾಗಿ ಮಗಳು ಹುಟ್ಟಬೇಕು. ದ್ರೋಣನನ್ನು ಸಂಹರಿಸಲಿಕ್ಕಾಗಿ ಪುತ್ರನನ್ನು ಪಡೆಯಬೇಕು ಎಂದು ಯಜ್ಞವನ್ನು ಮಾಡಿದನು. ಸಂಕಲ್ಪ ಪೂರ್ವಕವಾಗಿ ಯಜ್ಞದಲ್ಲಿ ಪೂರ್ಣಾಹುತಿಯನ್ನು ಹಾಕಿದ ಕೂಡಲೇ ಸರ್ವಲಕ್ಷಣ ಸಂಪನ್ನಳಾದ ಕನ್ಯಾಮಣಿಯೂ, ಕಿವಿಗಳಲ್ಲಿ ಕುಂಡಲಭೂಷಣನಾಗಿ ಕೈಯಲ್ಲಿ ಖಡ್ಗನ್ನು ಝಳಪಿಸುತ್ತ ದುರಂತ ವೀರ್ಯನಾದ ಪುತ್ರನೂ ಹುಟ್ಟಿದನು. ಪುತ್ರಿಯೇ

ದ್ರೌಪದಿ ಎನಿಸಿದಳು. ಪುತ್ರನೇ ದುಷ್ಟದ್ಯುಮ್ನನೆನಿಸಿದನು. ಈತನ ಸೋದರಿಯೇ ಭಾರತೀ ಅವತಾರಳಾದ ದ್ರೌಪದಿಯು. "ದ್ರೌಪದೀ ಭಾರತಿ ಪ್ರೋಕ್ತಾ । ಶ್ಯಮಲೋಷಾದಿಭಿರ್ಯುತಾ ॥

**ದ್ರುಪದಶ್ಚ ಪುರಾ ಪ್ರೋಕ್ತಾ । ಸಹೂಹೂನಾಮಗಾಯಕಃ ॥**
**"ನಕ್ರನುಽರಾಯ ದ್ರುಪದನು ವಹವಿಶಿಷ್ಟಾ ಹೂಹೂ ಗಂಧರ್ವಾ ॥ಹ.ಸ.ಸಾ."**
**"ದುಷ್ಟದ್ಯುಮ್ನಸ್ತಥಾಽನಲಃ" ಈತನು ಅಗ್ನಿಯೇ.**

ಇಲ್ಲಿ ಒಂದು ವಿಚಾರವನ್ನು ಮಂಡಿಸುವಾ. ದ್ರೋಣರು ಸಾಕ್ಷಾತ್ ಬೃಹಸ್ಪತಿಗಳು. ದ್ರುಪದನು ಹೂ ಹೂ (ನಕ್ರ) ಗಂಧರ್ವನು. ಇವರು ಹೇಗೆ ಪರಸ್ಪರವಾಗಿ ದ್ವೇಷವನ್ನು ಸಾಧಿಸಿದರು? ಎಂದರೆ ದೇವತೆಗಳು ಒಂದು ಕಾರ್ಯವನ್ನು ಮಾಡಲು ಮೂರು ಕಾರಣಗಳನ್ನು ಹೊಂದಿರುತ್ತಾರೆ. ೧. ಅಸುರ ಮೋಹನಾರ್ಥವಾಗಿ; ೨. ಲೋಕ ಶಿಕ್ಷಣಾರ್ಥವಾಗಿ; ೩. ಪ್ರಾರಬ್ಧ ಭೋಗಾರ್ಥವಾಗಿ. ಈ ಪ್ರಸಂಗದಲ್ಲಿ ಈ ಮೂರು ಅಂಶಗಳೂ ಅಡಗಿವೆ. ದ್ರೋಣ, ದ್ರುಪದರು ವೈರ ಸಾಧಿಸಿದರು ಎಂಬುದು ಅಸುರ ಮೋಹಕವು. ಹೋರಾಡಿ ಪರಸ್ಪರ ನಷ್ಟಗಳನ್ನು ಅನುಭವಿಸಿದರು. ಹಾಗೆ ಮಾಡಬಾರದೆಂಬುದು ಲೋಕ ಶಿಕ್ಷಣಾತ್ಮಕವಾದುದು. ಇನ್ನು ಮೂರನೆಯದು ಅವರವರ ಪ್ರಾರಬ್ಧ ಭೋಗಕ್ಕಾಗಿ. ಈ ಪ್ರಾರಬ್ಧದಲ್ಲಿ ಸುಖ ಪ್ರಾರಬ್ಧ, ದುಃಖ ಪ್ರಾರಬ್ಧ ಬಗೆಯಿಂದ ಎರಡು (ಅಪರೋಕ್ಷ ಜ್ಞಾನಿಗಳಿಗೆ ಸ್ವರೂಪೇತರವಾದ ಪ್ರಾರಬ್ಧ ಭೋಗದ ಕಡೆಗೆ ಅಭಿಮಾನವಿರುವುದಿಲ್ಲ) ದ್ರುಪದನ ಪ್ರಾರಬ್ಧದಲ್ಲಿ ಅವಮಾನ ಭೋಗವಿತ್ತು. ದ್ರೋಣಾಚಾರ್ಯರಿಗಾದರೂ ದುರ್ಮರಣವಿತ್ತು. ಮತ್ತು ದುಷ್ಟರ ಸಹವಾಸವನ್ನು ಮಾಡಿದರೆ ಬ್ರಾಹ್ಮಣನಾದರೂ ಸೋಚಿತಕರ್ಮ ಭ್ರಷ್ಟನಾಗುತ್ತಾನೆಂಬುದನ್ನು ಜಗತ್ತಿಗೆ ತೋರಿಸಬೇಕಾಗಿತ್ತು. ಅದಕ್ಕಾಗಿಯೇ ಗುರುಕುಲದಿಂದ ಹೊರಡುವ ಮುನ್ನವೇ ದ್ರುಪದನು ದ್ರೋಣರಿಗೆ ಆಹ್ವಾನವನ್ನಿತ್ತು ಹೋದನು. ಹಾಗೆ 'ಗೋ' ನೆಪವನ್ನು ಮಾಡಿಕೊಂಡು ಬಂದು ನಿರಾಶೆಯಿಂದ ಹಿಂದಿರುಗಿದ ದ್ರೋಣರು ದ್ರುಪದನನ್ನು ಅವಮಾನಿಸಿ ಅವನ ಪ್ರಾರಬ್ಧ ಭೋಗಕ್ಕೆ ನೆರವಾದರು. ಇದೇ ರೀತಿಯಾಗಿ ದ್ರೋಣರ ದುರ್ಮರಣ ಪ್ರಾರಬ್ಧ ಭೋಗಾರ್ಥವಾಗಿ ದ್ರೋಣರನ್ನು ಸಂಹರಿಸಲಿಕ್ಕಾಗಿಯೇ ದ್ರುಪದನು ಯಜ್ಞವನ್ನು ಮಾಡಿ ದುಷ್ಟ ದ್ಯುಮ್ನನನ್ನು ಪಡೆದನು. (ಕಾಲಾಂತರದಲ್ಲಿ ಕುರುಕ್ಷೇತ್ರದಲ್ಲಿ ದ್ರೋಣಾಚಾರ್ಯರು ಪಾಂಚಜನ್ಯ ಧ್ವನಿಯಿಂದ ವಂಚಿತರಾಗಿ, (ಹಾಗೆ ನಟಿಸಿ), ಪಾಂಡವರ ಯಶಸ್ಸನ್ನು ಕೋರಿ ಯೋಗ ಸಾಮರ್ಥ್ಯದಿಂದ ದೇಹತ್ಯಾಗವನ್ನು ಮಾಡಿದರು. ತರುವಾಯ ದುಷ್ಟದ್ಯುಮ್ನನು ಅವರ ನಿರ್ಜೀವ ದೇಹವನ್ನು ಕೊಚ್ಚಿದನು. ದುಷ್ಟದ್ಯುಮ್ನನು ಸಾಕ್ಷಾತ್ತಾಗಿ ದ್ರೋಣಾಚಾರ್ಯರನ್ನು ಕೊಲ್ಲಲಿಲ್ಲ. ದುರ್ಯೋಧನನ ಮೋಹನಾರ್ಥವಾಗಿ ದ್ರೋಣಾಚಾರ್ಯರು ಶುನ (ನಾಯಿ) ಕಾಯವನ್ನು ಪ್ರವೇಶಿಸಿ ಛಿದ್ರ ದೇಹ ಸಂಗ್ರಹಣೆಗೆ ತೊಡಗಿದಾಗ ಶ್ರೀಕೃಷ್ಣನ ಸಲಹೆಯಂತೆ ಶುನಕ ದೇಹವನ್ನು ವಿಸರ್ಜಿಸಿ ಮೂಲವನ್ನು ಸೇರಿದರು. ಇದು ಪೂರ್ವನಿಯೋಜಿತ ಒಪ್ಪಂದದ ನಿರ್ವಹಣೆಯೇ ವಿನಃ ವೈರಸಾಧನೆಯೆಂದು ಮುಮುಕ್ಷುಗಳು ತಿಳಿಯಬಾರದು. "ಕುಂದು ಸಜ್ಜನ ರಲ್ಲಿ ನುಡಿಯದಿಪ್ಪುದೆ ಹಬ್ಬ" ಎಂದರು ಶ್ರೀವಿಜಯದಾಸರು)

**ದ್ರೌಪದೀ ವೃತ್ತಾಂತಃ** ಒಮ್ಮೆ ದೇವತಾಸ್ತ್ರೀಯರಾದ ಪಾರ್ವತಿ, ಶಚಿ, ಶ್ಯಾಮಲಾ, ಉಷಾದೇವಿ (ಜೀವದ್ವಯ ಸಂಯುಕ್ತ)ಯರು ಏಕ ದೇಹ ವಿಶಿಷ್ಟರಾಗಿ ಬ್ರಹ್ಮನ ಸಮ್ಮುಖದಲ್ಲಿ ನಿಂತರು. ಬ್ರಹ್ಮನು ತಮ್ಮನ್ನು ಗುರುತಿಸುವನೋ ಇಲ್ಲವೋ ಎಂದು ಪರೀಕ್ಷೆ ಮಾಡಲು ಹಾಗೆ ಮಾಡಿದರು. ಇದರಿಂದ ಕುಪಿತಗೊಂಡ ಬ್ರಹ್ಮನು ನಿಮಗೆ ಐದು ಜನ

ಪತಿಗಳಾಗಲಿ ಎಂದು ಶಾಪವನ್ನಿತ್ತನು. ತರುವಾಯ ಪಶ್ಚಾತ್ತಾಪದಿಂದ ಬ್ರಹ್ಮನನ್ನು ಪ್ರಾರ್ಥಿಸಲಾಗಿ ಅವರಿಗೆ "ಭಾರತೀ ದೇವಿಯನ್ನು ಆಶ್ರೈಸಿಕೊಂಡು ಸ್ವಪತಿಗಳಿಂದ ಕೂಡಿದವರಾಗಿ ಕೃತಾರ್ಥರಾಗಿರಿ" ಎಂದು ವರವನ್ನು ಇತ್ತು ಕಳುಹಿಸಿದನು. ಈ ಕಥೆಯು ಹೀಗಿದ್ದರೂ ಬ್ರಹ್ಮನನ್ನು ಪರೀಕ್ಷೆ ಮಾಡುವಂಥಾ ದುರ್ಬುದ್ಧಿಯು ಈ ದೇವತಾ ಸ್ತ್ರೀಯರಿಗೆ ಹೇಗೆ ಉಂಟಾಗುತ್ತದೆ? ಅವರು ಅಸುರಾವೇಶದಿಂದ ಹೀಗೆ ಮಾಡಿದರೆಂದು ಕೆಲವರು ಹೇಳುತ್ತಾರೆ. ಆದರೆ ಅದು ಹಾಗಲ್ಲ. ಅವರು ಅಸುರ ಮೋಹನಾರ್ಥವಾಗಿ ಹಾಗೆ ಮಾಡಿದರು ಮತ್ತು ಪ್ರಾರಬ್ಧಸೂಚಕವಾಗಿ ತಮಗೆ ಪ್ರಾಪ್ತವಾಗಲಿರುವ ಏಕದೇಹ ವಿಶಿಷ್ಟತ್ವದ ವಿಡಂಬನೆಯನ್ನು ಮಾಡಿಕೊಂಡು ಬ್ರಹ್ಮನ ಸಮ್ಮುಖದಲ್ಲಿ ನಿಂತು ಕೊಂಡು ತಮ್ಮನ್ನು ತತ್ತ್ವಸಂಗದಲ್ಲಿ ಉದ್ಧರಿಸಬೇಕೆಂದು ಬೇಡಿಕೊಂಡರು. ಸಂತುಷ್ಟನಾದ ಬ್ರಹ್ಮನು ಅವರಿಗೆ ಭಾರತೀ ದೇವಿಯನ್ನು ಆಶ್ರೈಸಿಕೊಂಡು ದೋಷ ದೂರವಾಗಲು ವರವನ್ನಿತ್ತು ಕಳುಹಿಸಿದನು. ಇದನ್ನು ಹೀಗೆಯೇ ಅರ್ಥಮಾಡಬೇಕು. ದೇವತೆಗಳು ಮೂರ್ಖರಲ್ಲ. ಸೋತ್ತುಮರು ನೀಡುವ ವರ (ಪುಣ್ಯ)ದಿಂದ ಸ್ವಾವರ ಪ್ರಾರಬ್ಧ ಭೋಗವು ಉಪಮರ್ದವಾಗುತ್ತದೆ.

ತರುವಾಯ ಈ ಐದು ಜನರು ಒಟ್ಟಿಗೆ ಹೋಗಿ ಭಾರತೀದೇವಿಯನ್ನು ಪ್ರಾರ್ಥಿಸಲಾಗಿ ಆ ತಾಯಿಯು ಐವರನ್ನು ತನ್ನ ಉದರದಲ್ಲಿ ಇಟ್ಟುಕೊಂಡು ದ್ರುಪದನ ಯಜ್ಞಕುಂಡದಿಂದ ಅಯೋನಿಜೆಯಾಗಿ ಯಜ್ಞ ಸೇನೆ ಎಂಬ ಹೆಸರಿನಿಂದ ಪ್ರಾದುರ್ಭವಿಸಿದಳು. ಪೂರ್ವದಲ್ಲಿ ಈ ಮಹಾತಾಯಿಯು ಕಾಶಿ ರಾಜನಲ್ಲಿ ಕಾಳಿಯಾಗಿಯೂ, ಶಿವನಾಮಕ ಬ್ರಾಹ್ಮಣನ ಮನೆಯಲ್ಲಿ ಶಿವಕನ್ಯೆ ಎಂಬುದಾಗಿಯೂ ನಳ ಚಕ್ರವರ್ತಿಯಲ್ಲಿ ಇಂದ್ರಸೇನೆ ಎಂಬುದಾಗಿಯೂ, ಮೂಲ ರೂಪದಿಂದಲೇ ಅವತರಿಸಿ ಈಗ ಪಂಚ ಕನ್ನಿಕೆಯರಿಂದ ಯುಕ್ತಳಾಗಿ ಆ ದ್ರುಪದನ ಯಜ್ಞೆಯ ದೆಶೆಯಿಂದ ದ್ರೌಪದಿ ಎಂಬುದಾಗಿ ಅವತರಿಸಿದಳು.

ಹುಟ್ಟಿದ ಮಗಳು ವಿವಾಹ ಯೋಗ್ಯಳಾದ ಪ್ರಯುಕ್ತ ದ್ರುಪದನಿಗೆ ದ್ರೌಪದಿಯ ಸ್ವಯಂವರದ ಚಿಂತೆಯು ಕಾಡಲಾರಂಭಿಸಿತು. ದ್ರೌಪದಿಯನ್ನು ಅರ್ಜುನನಿಗೇ ಕೊಡಬೇಕೆಂಬ ಉದ್ದೇಶದಿಂದಲೇ ಯಜ್ಞವನ್ನು ಮಾಡಿ ಪಡೆದ ಮಗಳಿಗೆ ಸ್ವಯಂವರವೇಕೆ? ಎಂದರೆ ಪಾಂಡವರು ಅರಗಿನ ಮನೆಯಲ್ಲಿ ಸುಟ್ಟು ಹೋದರೆಂಬ ವದಂತಿಯಿಂದ ಚಿಂತಾಕ್ರಾಂತನಾಗಿ ದ್ರುಪದನು ಸ್ವಯಂವರವನ್ನು ಹೂಡಿದನು. ದೃಷ್ಟದ್ಯುಮ್ನನು ಸ್ವಯಂವರದ ಕಟ್ಟಳೆಯಾಗಿ ರುದ್ರವರ ಪ್ರಸಾದ ರೂಪವಾದ ಧನಸ್ಸನ್ನು ಹಿಡಿದು ಗಗನದಲ್ಲಿ ಭ್ರಮಿಸುತ್ತಿದ್ದ ಮತ್ಸ್ಯ ಯಂತ್ರವನ್ನು ನೆಲದ ಮೇಲೆ ಇಟ್ಟಿದ್ದ ತೈಲ ತಾಂಬಾಣದಲ್ಲಿ, ಕಾಣುವ ಪ್ರತಿಬಿಂಬವನ್ನು ನೋಡಿ ಭೇದನ ಮಾಡಬೇಕೆಂದೂ ಹಾಗೆ ಮಾಡಿದ ರಾಜಕುವರನು ದ್ರುಪದ ಜಾಮಾತನಾಗುತ್ತಾನೆ. ಇಲ್ಲವಾದರೆ ದ್ರುಪದಜಾ ಮಾತ ಆಗುತ್ತಾಳೆ ಎಂದೂ ಸಾರಿದನು. ಮತ್ತು ದ್ರೌಪದಿಗೆ ವರನಾಗುವವನು ಕ್ಷತ್ರಿ ಅಥವಾ ಬ್ರಾಹ್ಮಣರಾಗಿರ ಬೇಕೆಂಬ ಕಟ್ಟಳೆಯನ್ನೂ ಹಾಗಿದ್ದನು. ಆ ಸ್ವಯಂವರಕ್ಕೆ ಶಿಶುಪಾಲ, ಶಲ್ಯ, ಜರಾಸಂಧ, ಕರ್ಣ, ದುರ್ಯೋಧನಾದಿಗಳನ್ನು ಮೊದಲು ಮಾಡಿ ಛಪ್ಪನ್ನಾರು ದೇಶದ ರಾಜ-ರಾಜ ಕುಮಾರರು ಆಗಮಿಸಿದ್ದರು. ಹಾಗೆಯೇ ಛದ್ಮ (ಬ್ರಾಹ್ಮಣ) ವೇಷಧಾರಿಗಳಾಗಿದ್ದ ಪಾಂಡವರೂ ಸಹ ಅಲ್ಲಿಗೆ ಬಂದಿದ್ದರು. ಮತ್ಸ್ಯಯಂತ್ರ ಭೇದನ ಯತ್ನದಲ್ಲಿ ಉಕ್ತ ರಾಜರನ್ನೊಳಗೊಂಡು ಸರ್ವರೂ ವಿಫಲರಾದರು. ಶ್ರೀಕೃಷ್ಣನು ಯಾದವರಿಗೆ ನಾವು ನೋಡಲಿಕ್ಕೆ ಮಾತ್ರ ಬಂದವರೆಂಬುದನ್ನು ಬಲರಾಮನಿಗೆ ಜ್ಞಾಪಿಸಿ ಕೈ ಸನ್ನೆಯಿಂದ ಅರ್ಜುನನಿಗೆ ಸೂಚಿಸಿದನು. ಬ್ರಾಹ್ಮಣರ ಗುಂಪಿನಿಂದ ಎದ್ದ ಅರ್ಜುನನನ್ನು ನೋಡಿದ ಬ್ರಾಹ್ಮಣರು ಬೆಚ್ಚಿ ಬಿದ್ದರು. ಕುಲಕ್ಕೆ ಅವಮಾನವಾದರೆ ಏನು ಗತಿ ಎಂದು ಕೆಲವರು ಗೊಣಗಿದರು. ಕೆಲವರು ಭಲೇ ಭಲೇ ಎಂದರು. ಶ್ರೀಕೃಷ್ಣ, ಭೀಮರ

ಆಶೀರ್ವಾದದಿಂದ ಪಾರ್ಥನು ಲೀಲಾಜಾಲವಾಗಿ ಆ ಮತ್ಸ್ಯ ಯಂತ್ರವನ್ನು ಒಂದೇ ಬಾಣದಿಂದ ಭೇದಿಸಿ ಬಿಟ್ಟನು. ಸಭೆಯು ಚಪ್ಪಾಳೆ ಜಯ ಜಯಾಕಾರಗಳಿಂದ ಭೋರ್ಗುಟ್ಟಿತು. ತರುವಾಯ ದ್ರೌಪದಿಯು ಅರ್ಜುನನ ಕೊರಳಿಗೆ ಮಾಲೆಯನ್ನು ಹಾಕಿದಳು. ಇದನ್ನು ಕಂಡ ಕೌರವಾದಿ ಹಲವು ರಾಜರು ದಾಳಿ ಎಸಗಲುದ್ಯುಕ್ತರಾದರು. ಆದರೆ ವೃಕ್ಷ, ಧನುರ್ಧಾರಿಗಳಾಗಿ ನಿಂತ ಭೀಮಾರ್ಜುನರ ಮುಂದೆ ಏನನ್ನೂ ಮಾಡಲಾಗದೆ ಪಲಾಯನ ಮಾಡಿದರು. ಇತ್ತ ಧರ್ಮರಾಯನು ಗೆಲುವಿನ ಸಂಭ್ರಮದಿಂದ ತಮ್ಮಂದಿರೊಡಗೂಡಿ ದ್ರೌಪದಿಯ ಸಹಿತವಾಗಿ ತಾಯಿಯ ಬಳಿಗೆ ಬಂದು ನಡೆದ ವೃತ್ತಾಂತವನ್ನು ಹೇಳುತ್ತಿರುವಾಗ ಕುಂತೀ ದೇವಿಯು ಗೆಲುವಿನ ಫಲವನ್ನು ಐವರು ಭೋಗಿಸಿರೆಂದೇ ಹೇಳಿಬಿಟ್ಟಳು. ಆಗ ಧರ್ಮಜನು ಮಾತೃವಚನ ಪರಿಪಾಲನೆಯ ನೆಪವನ್ನೊಡ್ಡಿ ಪುನಃ ದ್ರುಪದನಲ್ಲಿಗೆ ಹೋಗಿ ತನ್ನ ಮಗಳನ್ನು ಐವರಿಗೆ ಮದುವೆ ಮಾಡಿಕೊಡಬೇಕೆಂದು ಕೇಳಿದನು. ಈ ವಿಚಿತ್ರವಾದ ಬೇಡಿಕೆಗೆ ದಿಗ್ಭ್ರಾಂತನಾದ ದ್ರುಪದನು ಆಕ್ಷೇಪವನ್ನು ಮಾಡಲಾಗಿ ಅಲ್ಲಿಗೆ ಶ್ರೀವೇದವ್ಯಾಸ ದೇವರು ಬಂದು ಪಾಂಡವರ ಸ್ವರೂಪವನ್ನು ಅಭಿವ್ಯಕ್ತ ಮಾಡಿದರು. ಯಮಧರ್ಮನೇ ಧರ್ಮರಾಯನು, ಭೀಮಸೇನನೇ ವಾಯುದೇವರು, ಅರ್ಜುನನೇ ಇಂದ್ರನು ಮತ್ತು ನಕುಲ ಸಹದೇವರು ನಾಸತ್ಯ–ದಸ್ರರೆಂಬ ಅವಳಿ ಅಶ್ವಿನೀ ದೇವತೆಗಳು. ಅದೇ ರೀತಿಯಾಗಿ ದ್ರೌಪದಿ ದೇವಿಯಲ್ಲಿ ಶ್ಯಾಮಲಾದೇವಿ, ಭಾರತೀದೇವಿ, ಶಚೀದೇವಿ ಮತ್ತು ಉಷಾದೇವಿಯು ಇರುವುದನ್ನು ತೋರಿಸಿದರು. ಈ ಪರಸ್ಪರ ದೇವ–ದೇವಿಯರು ನೀತ ಪತಿ ಪತ್ನಿಯರಾಗಿರುವುದರಿಂದ ವಿವಾಹವನ್ನು ಮಾಡಿಕೊಡಲು ಅಡ್ಡಿ ಇಲ್ಲವೆಂದು ತಿಳಿಸಿದರು. ಆಗ ದ್ರುಪದನು ಬೇರೆ ಬೇರೆ ದೇವ–ದೇವತೆಗಳಿದ್ದಾಗ್ಯೂ ಏಕ ದೇಹ ದೆಸೆಯಿಂದ ಪರಪುಷ ಸಂಸರ್ಗ ದೋಷವನ್ನು ಶಂಕಿಸಲಾಗಿ ಭಾರತೀದೇವಿಯದು ಅನಭಿಮಾನಾತ್ಮಕವಾದ ಶರೀರವು. ವಾಯುದೇವರ ವಿನಃ ಭಾರತಿಗೆ ಅನ್ಯ ಪುರಷರ ಸಂಪರ್ಕವು ಸುತರಾಂ ಆಗುವುದಿಲ್ಲ. ಅಷ್ಟೇ ಅಲ್ಲ, ಆಕೆಯ ದೇಹವನ್ನು ಆಶ್ರೈಸಿರುವ ಇತರ ದೇವತಾ ಸ್ತ್ರೀಯರಿಗೂ ಸ್ವಪತ್ನಿಯ ವಿನಃ ಅನ್ಯ ಪುರುಷರ ಸಂಪರ್ಕದ ಸೋಂಕೇ ಆಗುವುದಿಲ್ಲ. ಋಜುಗಣಸ್ಥರಿಗೆ "ಅನಭಿಮಾನ ಶರೀರಾಯ" ಎಂಬ ಸ್ತೋತ್ರವಿದೆ. ಇಲ್ಲಿ ಆಯಾ ಪುರುಷರು ತಮ್ಮ ನಿಯತ ಪತ್ನಿಯರನ್ನು ಮಾತ್ರ ನಿರ್ದುಷ್ಟವಾಗಿ ಹೊಂದುವವರಾಗಿ ಇರುವುದರಿಂದ ದೋಷವಿಲ್ಲೆಂದು ಶ್ರೀವೇದವ್ಯಾಸರು ಸಮಾಧಾನವನ್ನು ಹೇಳಲಾಗಿ ತೃಪ್ತನಾದ ದ್ರುಪದನು ಸಂತೋಷದಿಂದ ಐವರಿಗೆ ದ್ರೌಪದಿಯನ್ನು ಮದುವೆ ಮಾಡಿಕೊಟ್ಟನು.

ಒಳರಹಸ್ಯವನ್ನು ತಿಳಿಯದೇ ದುರ್ಯೋಧನಾದಿಗಳು "ಒಬ್ಬ ಹೆಂಗಸಿಗೆ ಐದು ಜನ ಗಂಡಂದಿರು 'ಥೂ' ಎಂದು ಜರಿದು ಅಯಥಾರ್ಥವಾದ ಜ್ಞಾನವನ್ನು ಹೊಂದಿ ತಮಸ್ಸನ್ನು ಹೊಂದಲೆಂದೇ ವೇದವ್ಯಾಸರು ಇಲ್ಲಿ ಈ ತಂತ್ರವನ್ನು ಹೂಡಿ ಮದುವೆ ಮಾಡಿಸಿದ್ದು ಪರಮ ಮುಖ್ಯ. ಆವೇಶವಿರದ ವಿನಃ ಅನ್ಯರ ಸಂಪರ್ಕವು ನಿಯತ ಪತಿ ಪತ್ನಿಯರಿಗೆ ಆಗುವುದೇ ಇಲ್ಲ. ಇದು ಸಿದ್ಧಾಂತ. ಉದಾಹರಣೆಗೆ – ಸೂರ್ಯನ ಕಿರಣದಲ್ಲಿ ಅಗ್ನಿ, ಸೂರ್ಯ (ಇಂದ್ರನು) ಸಹ ಇರುತ್ತಾರೆ. ಇದನ್ನು ಭೂತ ಕನ್ನಡಿ ಮತ್ತು ಸೌರಶಕ್ತಿ ವಿದ್ಯುದುಪಕರಣಗಳಿಂದ ತಿಳಿಯಬಹುದು. ಸೂರ್ಯನಿಂದ ಬೆಳಕು, ಬೆಂಕಿ ವಿದ್ಯುಯತ್ತನ್ನು ಹೊಂದುತ್ತಿದ್ದೇವೆ. ಬೆಳಕಿಗೆ ಸೂರ್ಯನೂ, ಅಗ್ನಿಗೆ ಅಗ್ನಿಯೂ, ವಿದ್ಯುತ್ತಿಗೆ ಇಂದ್ರನೂ ಅಭಿಮಾನಿಗಳು. ಒಬ್ಬರು ಕಾರ್ಯತತ್ಪರರಾದಾಗ ಉಳಿದಿಬ್ಬರು ಸುಪ್ತರಾಗಿರುತ್ತಾರೆ. ಸೂರ್ಯನು ಬೆಳಕನ್ನು ನೀಡುತ್ತಿರುವಾಗ ಅಗ್ನಿ, ಇಂದ್ರರಿಬ್ಬರು ಸುಪ್ತರಾಗಿರುತ್ತಾರೆ. ಆಗ ಬೀಜಗಳನ್ನು ಒಣಗಿಸಿದರೆ ಬೀಜಗಳು ಬಲಿಷ್ಟವಾಗುತ್ತವೆ. ಬೆಂದು ಹೋಗುವುದಿಲ್ಲ. ಬಟ್ಟೆಗಳು ಒಣಗುತ್ತವೆ. ಸುಟ್ಟು ಹೋಗುವುದಿಲ್ಲ. ಆದರೆ ಅದೇ ಸಮಯದಲ್ಲಿ ಭೂತಕನ್ನಡಿಯಿಂದ ಸೂರ್ಯ ಕಿರಣಗಳನ್ನು ಕ್ರೋಢೀಕರಿಸಿದರೆ ಅಗ್ನಿಯು ಉತ್ಪನ್ನವಾಗುತ್ತದೆ. ಬೀಜಗಳು, ಬಟ್ಟೆಗಳು ಸುಟ್ಟು ಹೋಗುತ್ತವೆ. ವಿದ್ಯುದುಪಕರಣಗಳಿಂದ ವಿದ್ಯುಚ್ಛಕ್ತಿಯು ಉತ್ಪನ್ನವಾಗುತ್ತದೆ. ಒಬ್ಬರ

ಕಾರ್ಯ ಕ್ಷೇತ್ರದಲ್ಲಿ ಮತ್ತೊಬ್ಬರ ಹಸ್ತಕ್ಷೇಪವಿರುವುದಿಲ್ಲ. ಬೇಕೆನಿಸಿದಾಗ ಭೂತಕನ್ನಡಿಯ ಸಹಾಯದಿಂದ ಅಗ್ನಿಯನ್ನು ಪಡೆಯಬಹುದು. ಇಲ್ಲವಾದರೆ ಅಗ್ನಿಯು ಸುಪ್ತನಾಗಿರುತ್ತಾನೆ. ಅಂತೆಯೇ ಬಿಸಿಲಿಗೆ ಬಿದ್ದ ಬೀಜಗಳು ಮೊಳೆಯುತ್ತವೆ. ಅಗ್ನಿ ಸೂರ್ಯ ಇಂದ್ರರು ಒಂದೇ ಅಲ್ಲ. ಏಕದೇಶದಲ್ಲಿ ಇದ್ದರೂ ಪರಸ್ಪರ ನಿರ್ಲಿಪ್ತರು. ಭಿನ್ನಗುಣ ಸಂಪನ್ನರು ಅದೇ ರೀತಿಯಾಗಿ ದೇವತೆಗಳು ಆವೇಶ ಕ್ರಮದಿಂದ ಏಕದೇಶ (ದೇಹ)ದಲ್ಲಿ ಇದ್ದರೂ ಒಬ್ಬರ ಕಾರ್ಯತತ್ಪರತೆಯು ಮತ್ತೊಬ್ಬರಿಗೆ ಅಡಚಣೆಯಾಗುವುದಿಲ್ಲ. ಇದೇ ರೀತಿಯಾಗಿ ದ್ರೌಪದಿ ದೇವಿಯಲ್ಲಿದ್ದ ದೇವತಾ ಸ್ತ್ರೀಯರು (ಪಾರ್ವತಿ, ಶ್ಯಾಮಲಾದೇವಿ, ಶಚಿದೇವಿ, ಉಷಾದೇವಿಯರಿಗೆ ಅವರವರ ನಿಯತ ಪತಿಗಳೆನಿಸಿದ್ದ ಪಾಂಡವರಿಗೂ ನಿರ್ದುಷ್ಟವಾಗಿ ಸಂಬಂಧವಿದ್ದುದಾಗಿತ್ತು (ಪ್ರಮೇಯ ಕುಸುಮಾಕರ ಗ್ರಂಥದಿಂದ)

ಮೊದಲೇ ಧರ್ಮರಾಜನು ತಾವು ಪಾಂಡವರೆಂಬುದನ್ನು ಬಹಿರಂಗ ಪಡಿಸಿದ್ದುದರಿಂದ ದ್ರುಪದನು ಸಂತೋಷಗೊಂಡಿದ್ದನು. ಇನ್ನು ವಿಶೇಷವಾದ ಮತ್ತೊಂದು ಪ್ರಕ್ರಿಯೆ ಏನು ಎಂದರೆ ಅಶ್ವಿನಿ ದೇವತೆಗಳಾದ ನಾಸತ್ಯ-ದಸ್ರರು ಯಮಲರೆನಿಸಿದರೂ ಅಲ್ಲಿ ಇಬ್ಬರಿದ್ದಾರೆ. ಇವರಿಬ್ಬರಿಗೆ ಉಷಾದೇವಿಯೊಬ್ಬಳೇ ಹೇಗೆ ಪತ್ನಿಯಾಗುತ್ತಾಳೆ? ಎಂಬುದಕ್ಕೆ ಪರಿಹಾರವು ಹೀಗಿದೆ.

ನಕುಲ, ಸಹದೇವರು (ಅಶ್ವಿನಿ ದೇವತೆಗಳು) ಹೇಗೆ ಯಮಳರೋ ಹಾಗೆಯೇ ಉಷಾದೇವಿಯಲ್ಲಿ ಜೀವ ದ್ವಯರಿದ್ದಾರೆ. ಅವರೂ ಯಮಳರೇ. ಅವರು ಯಾರೆಂದರೆ ಜರಾಸಂಧನ ಪುತ್ರಿಯಾದ ಪಾರ್ವತಿ ಮತ್ತು ಶಲ್ಯ ಪುತ್ರಿಯಾದ ರೇಣುಮತಿ; "ಪಾರ್ವತೀ ನಕುಲ ಸ್ತ್ರೀಯಾ। ನಾಮ್ನಾ ಪೂರ್ವಂ ತಿಲೋತ್ತುಮಾ ॥ ಪ.ಪು ॥" ಜರಾಸಂಧಸ್ಯ ಪುತ್ರೀಚ ಶಲ್ಯಶ್ಯಚ ತಥಾತ್ಮಜಾ ॥ ಉಭೇ ಅಪ್ಯಶ್ವಿನೀ ಭಾರ್ಯೋಽ ಷಾಸಾಪೂರ್ವಂತುರೇಣುಕಾ ॥

**ನಕುಲಃ ಸಹದೇವಶ್ಚ । ನಾಸತ್ಯೌ ಸಂಪ್ರಕೀರ್ತಿತಃ ॥**
**ವಿವಿದ ಮೈಂದಶ್ಚ ನಾಸತ್ಯೌ ಸಂಪ್ರಕೀರ್ತಿತಃ ॥ ಪ.ಪು ॥"**

ವಿವಿದ ಮೈಂದರು ನಕುಲ ಸಹದೇ। ವ ವಿಭು ತ್ರಿಶಿಖಾಶ್ವಿನಿಗಳಿವರೊಳು । ದಿವಿಪನಾವೇಶವಿಹುದೆಂದಿಗು ದ್ಯಾವಾಪೃಥಿವಿ ॥ ಹ.ಕ.ಸಾ.ಬ್ಯ.ಸಂಧಿ ॥ "ಸುದರುಶನ ಶಕ್ರಾದಿಯುತ । ಬುಧನು ತಾನಭಿಮನ್ಯುವೆನಿಸುವ । ಬುಧನಿಗಿಂದಶ್ವನೀ ಭಾರ್ಯಾ ಶಲ್ಯ ಮಾಗಧರ ॥

**ಉದರ ಜೋಷಾದೇವಿಗಿಂದಲಿ । ಅಧಮನೆನಿಸುವ ಶನೈಶ್ಚರನು ...." ॥ಹ.ಕ.ಸಾ ॥**
**"ತಿಲೋತ್ತಮೆಯು ಪೂರ್ವದಲಿ ನಕುಲನ । ಲಲನೆ ಪಾರ್ವತಿ ಎನಿಸುವಳು" ॥**
**ಹ.ಕ.ಸಾ ॥"**

ಮೇಲೆ ವಿವರಿಸಿದ ಪ್ರಸ್ತಾಪದಲ್ಲಿ ಭಾರತಿ – ಭೀಮ, ಧರ್ಮರಾಜ – ಶ್ಯಾಮಲ, ಅರ್ಜುನ-ಶಚಿ, ನಕುಲ-ಪಾರ್ವತಿ, ಸಹದೇವ-ಕರೇಣುಮತಿ ಹೀಗೆ ಐದು ಜೋಡಿಗಳಾಯಿತು. ಆದರೆ ಇಲ್ಲಿ ಶಂಕರ – ಪಾರ್ವತಿಯರ ಜೋಡಿಯನ್ನೂ ಹೇಳಬೇಕಾಗಿತ್ತು ಯಾಕೆಂದರೆ ಭಾರತೀ ದೇವಿಯಲ್ಲಿ ಪಾರ್ವತಿಯೂ ಇದ್ದಳಲ್ಲವೇ? ಹಾಗಿದ್ದ ಮೇಲೆ ಪಾಂಡವರ ಮಧ್ಯದಲ್ಲಿ ಶಂಕರನಿಗೆ ಯಾವ ಸ್ಥಾನವೂ ಇಲ್ಲವಲ್ಲಾ? ಎಂದರೆ ಶಂಕರನ ಪ್ರಾರಬ್ಧದಲ್ಲಿ ಅಶ್ವತ್ಥಾಮನಾಗಿ

ಹುಟ್ಟಿ ಕಲ್ಯಾವೇಶದಿಂದ ದುರ್ಯೋಧನನ ಪಕ್ಷವನ್ನು ವಹಿಸಿ ಅಧರ್ಮ ಯುದ್ಧ, ಶಿಶುಹತ್ಯಾದಿ ಕರ್ಮಗಳನ್ನು ಮಾಡಬೇಕಿತ್ತು. ಕಲ್ಯಾವೇಶಯುತರು ಋಜುಪುಂಗವಳಾದ ಭಾರತೀ (ದ್ರೌಪದೀ) ದೇವಿಯ ಸಾನಿಧ್ಯವನ್ನು ಹೊಂದಲಾರರು. ಆದ್ದರಿಂದ ಶಂಕರನು ಪಾಂಡವೇತರನಾಗಿ ಅಶ್ವತ್ಥಾಮರಾಗಿ ಹುಟ್ಟಿದನು. ಭಾರತೀದೇವಿಯಲ್ಲಿ ಆಶ್ರಯವನ್ನು ಪಡೆದ ಪಾರ್ವತಿಯು ಅಲ್ಲಿ ಸುಪ್ತಳಾಗಿ ಪರ ಪುರುಷರಾದ। ಧರ್ಮಾದಿಗಳ ಸೋಂಕಿಲ್ಲದಂತೆ ಭಾರತಿಯ ಅನುಗ್ರಹದಿಂದ ಉದ್ಧೃತಳಾದಳು. ಪಾರ್ವತಿಯ ಪಾರಬ್ಧದಲ್ಲಿ ಈ ಅವತಾರ (ಅವಸರ)ದಲ್ಲಿ ಪತಿ ವಿರಹಿತತೆಯನ್ನು ಅನುಭವಿಸಬೇಕಾಗಿತ್ತು. ಹಾಗೆಯೇ ಅಶ್ವತ್ಥಾಮನು ಕೂಡಾ. ಅದಕ್ಕೇನೇ ಪಾರ್ವತಿಯು ದ್ರೌಪದಾ ದೇವಿಯಲ್ಲಿ ನಿದ್ರಾವಸ್ಥೆಯಲ್ಲೇ ಕಾಲವನ್ನು ಕಳೆದಳು. ಈ ಪ್ರಸಂಗವು ಹೀಗಿರುವಾಗ ಕೆಲವಡೆ ತಾಮಸಾರ್ಥಗಳನ್ನು ಹೇಳುತ್ತಾ ಒಮ್ಮೆ ದ್ರೌಪದಿಯು ಕೃಷ್ಣನ ಮುಂದೆ

"ಪಂಚಮೇ ಪತಯಃ ಸಂತಿ । ಮಹ್ಯಂ ಷಷ್ಠೋಪಿ ರೋಚತೆ ॥
ಪುರುಷಾಣಾಮಯಭಾವೇನಾ । ಸರ್ವ ನಾರ್ಯಾ ಪತಿವ್ರತಾ ॥"

ಎಂದು ಹೇಳಿದಳು. ಇದರ ಅರ್ಥವೇನೆಂದರೆ "ಹೇ ಕೃಷ್ಣಾ, ನನಗೆ ಈಗ ಐದು ಜನ ಪತಿಗಳಿದ್ದರೂ ಆರನೇಯವನನ್ನೂ ಅಪೇಕ್ಷಿಸುತ್ತೇನೆ. ಏನು ಮಾಡಲಿ. ಜಗತ್ತಿನಲ್ಲಿ ಪುರುಷರೇ ಇಲ್ಲವಾಗಿದ್ದರೆ ಎಲ್ಲಾ ಸ್ತ್ರೀಯರೂ ಪತಿವ್ರತೆಯರಾಗಿಯೇ ಇರುತ್ತಿದ್ದರು ಎಂದು ಹೇಳಿದಳು. ಆಕೆಯ ಮನಸ್ಸಿನಲ್ಲಿ ಇದ್ದ ಆ ಆರನೇ ಪುರುಷನು ಯಾರು? ಎಂದರೆ ಕರ್ಣನೇ ಆಗಿದ್ದ ಎಂದು ಹೇಳುತ್ತಾರೆ. ದ್ರೌಪದಿಯನ್ನು ಶ್ರೀಮಧ್ವಾಚಾರ್ಯರ ವಾಕ್ಯದಂತೆ ಅರಿಯದ ತಾಮಸಿಗಳ ವ್ಯಾಖ್ಯಾಕ್ಕೆ ಇದು ಸಾಕ್ಷಿ. ದ್ರೌಪದಿಯನ್ನು ಸಾಮಾನ್ಯ ಸ್ತ್ರೀ ಎಂದೇ ಇವರುಗಳು ತಿಳಿದಿರುತ್ತಾರೆ. ಈ ಪ್ರಸಂಗದಲ್ಲಿ ಕರ್ಣನ ಸ್ಮರಣೆಗೆ ಅವಕಾಶವೇ ಇಲ್ಲ. ದ್ರೌಪದಾದೇವಿಯು ಹೇಳಿದ ಮಾತು ತನ್ನಲ್ಲಿ ಆಶ್ರಯವನ್ನು ಪಡೆದಿದ್ದ ಪಾರ್ವತಿಯ ನಿಮಿತ್ತ ಶಂಕರನೂ ಪಾಂಡವರಲ್ಲಿ ಸೇರಿದ್ದರೆ ಉಚಿತವೆನಿಸುತ್ತಿತ್ತು. ಎಂಬುದೇ ಹೊರತಾಗಿ ಸುತರಾಂ ಕರ್ಣನ ಅಪೇಕ್ಷೆಯ ಪ್ರಸಂಗವು ಇಲ್ಲಿ ಇಲ್ಲ. ದ್ರೌಪದೀ ಸ್ವಯಂವರದಲ್ಲಿ ರಾಜಕುಮಾರರು ವಿಫಲರಾದಾಗ ಕರ್ಣನು ಮೇಲೆದ್ದು ಒಂದು ಮತ್ಸ್ಯಯ ಯಂತ್ರವನ್ನು ಭೇದಿಸಲು ಹವಣಿಸಿದನು. ಆಗಲೇ ದ್ರೌಪದೀ ದೇವಿಯು ಕರ್ಣನಿಗೆ ನೀನು ಸೂತ ಕುಲದವನಾಗಿ (ವಿನಾ ಬ್ರಾಹ್ಮಣ-ಕ್ಷತ್ರಿಯ)ನೀನು ಮುಂದೆ ಹೆಜ್ಜೆ ಇಡಲು ಅನರ್ಹನೆಂದು ಜರಿದು ಬಿಟ್ಟಿದ್ದಳು. ಇಂಥವನನ್ನು ದ್ರೌಪದಿಯು ಅಪೇಕ್ಷಿಸಿದ್ದಳೆಂಬ ವ್ಯಾಖ್ಯಾನವು ದಾನವರಿಂದ ಮಾತ್ರ ಸಾಧ್ಯ.

ಇನ್ನು ಭಾರತೀದೇವಿಯು ತನ್ನಲ್ಲಿ ಐದು ಜನರನ್ನು ಹೊಂದಿರುವ ಉದ್ದೇಶವೇನೆಂದರೆ ಆ ಐದು ಜನ ಸ್ತ್ರೀಯರ ಸಾಧನ ಸಿದ್ಧಿಗಾಗಿ ಮತ್ತು ಏಕ ತನು ಪ್ರಕಟನೆಯಿಂದ ತಮೋ ಯೋಗ್ಯರು ದ್ರೌಪದಿಯನ್ನು ಪಂಚ ಭರ್ತೃಕಳು ಎಂದು ದೂಷಿಸುತ್ತಾ ತಮಸ್ಸಾಧನೆಯನ್ನು ಮಾಡಿಕೊಳ್ಳಲಿ ಎಂದೂ ಹಾಗೆ ಮಾಡಿರುತ್ತಾಳೆ. ಭಾರತೀ-ರಮಣರಿಗೆ ಏಕ ಕಾಲದಲ್ಲಿ ಒಂದೊಂದು ಕೆಲಸದಿಂದಲೂ ದೇವ-ದಾನವರ ಸಾಧನೆಯನ್ನು ಮಾಡಿಸುತ್ತಿರುವುದೇ ಭಗವದಾರಾಧನೆಯಾಗಿರುತ್ತದೆ.

ನಮ್ಮ ಅನುಭವದಲ್ಲಿ ಗಗನಮಂಡಲದಲ್ಲಿ ಅನಂತ ಶಬ್ದ, ರೂಪಗಳು ಸಮ್ಮಿಳಿತವಾಗಿದ್ದರೂ ದೂರದರ್ಶನ ಮತ್ತು ಆಕಾಶವಾಣಿಗಳನ್ನು ನಮಗೆ ಬೇಕಾದ ಕೇಂದ್ರದಿಂದ ಮಾತ್ರ ಪಡೆಯುತ್ತೇವೆ. ನಮ್ಮ ಅಪೇಕ್ಷಿತವಾದುದೊಂದು ಹೊರತಾಗಿ ಬೇರೆ ಯಾವ ರೂಪ ಶಬ್ದಗಳು ನಮ್ಮ ಉಪಕರಣದಲ್ಲಿ ಬರುವುದಿಲ್ಲ. ಉಪಕರಣವು

ನಿರ್ದೋಷಿತವಾದುವುಗಳು. ಇದೇ ರೀತಿಯಾಗಿ ಅನಭಿಮಾನಿತವಾದ ದ್ರೌಪತಿಯಲ್ಲಿ ಇದ್ದ ಸ್ತ್ರೀಯರು ಪರಮಪುರುಷ ಸಂಪರ್ಕವಿಲ್ಲದಂತೆ ಸ್ವಪತಿಗಳಿಂದ ಮಾತ್ರ ಕ್ರೀಡಿತರಾಗಿ ಆನಂದದಿಂದ ಇದ್ದರು. ಮೇಲಾಗಿ ದೇವತೆಗಳ ಕ್ರೀಡೆಯು ಮನುಷ್ಯರಂತೆ ಅಲ್ಲವೇ ಅಲ್ಲ. ಈ ದೇವ ರಹಸ್ಯವು ಮುಮುಕ್ಷುಗಳಿಗಲ್ಲದೆ ತಮೋ ಯೋಗ್ಯರಿಗೆ ಅರ್ಥವಾಗುವುದೂ ಇಲ್ಲ.

ಶ್ರೀಜಗನ್ನಾಥದಾಸರು ದ್ರೌಪದಿಯು ಯಾರೆಂಬುದನ್ನು ಹೀಗೆ ತಿಳಿಸುವವರಾಗಿದ್ದಾರೆ.

"ವಂದಿಪೆ ನಿನಗಿಂದ್ರಶಯನಾ। ನಳ । ನಂದಿನಿ ಕರುಣಿಸು ಜ್ಞಾನಾ । ಶ್ರೀಮು ।
ಕುಂದನ ಪರಮ ಕಲ್ಯಾಣಾ । ಗುಣ । ಸಿಂಧುವಿನೊಳಗೆ ಪಾಠೀನಾ ॥ ಆಹಾ ॥
ನಂದದಿ ಚರಿಸುವ । ಗಂಧವಾಹನ ರಾಣಿ । ಸಿಂಧೂರ ಗಮನೆ ಪು ।
ರಂದರರಾಧಿತೇ ॥ ಭಾರತೀ । ಮಜ್ಜನನಿಯೇ ಭಾರತೀ ॥"
"ಕಾಳಿ ದ್ರೌಪದಿ ಶಿವಕನ್ಯಾ। ಮನ್ಮನಾಲಯದೊಳು ನಿಲ್ಲೆ ಘನ್ನಾ।ಪ್ರಾಜ್ಞ
ಮೌಳಿಮಣಿಯೆ ನಿತ್ಯೆ ಎನ್ನಾ । ಪರಿ। ಪಾಲಿಸು ನಂಬಿದೆ ನಿನ್ನಾ ॥ ಆಹಾ ॥
ಶೈಲಜೆ ಶ್ಯಾಮಲೆ । ಪೌಲೋಮಿ ಉಷರಿಂದ । ಓಲಗ ಕೈಕೊಂಬ ।
ಕಾಲಾಭಿಮಾನಿಯೇ । ಭಾರತೀ । ಮಜ್ಜನನಿಯೇ ಭಾರತೀ ॥"
"ಕಾಳಿ ಕಾಶಿಜೆ ವಿಪ್ರಜಾ ಪಾಂ। ಚಾಲಿ ಶಿವಕನ್ಯೇಂದ್ರಸೇನಾ।
ಕಾಲಮಾನೀ ಚಂದ್ರದ್ಯುಸಭಾ ನಾಮ ಭಾರತಿಗೆ ॥
ಘಾಳಿ ಬ್ರಹ್ಮರ ಯುವತಿಯರು ಏಳೇಳು ಐವತ್ತೊಂದು ಗುಣದಿಂ।
ಕೀಳೆನಿಪರು ತಮ್ಮ ಪತಿಗಳಿಂದಲಾವಾಗ ॥ ಬೃ.ತಾ.ಸಂ. ೧೦॥"

ಪರಮಾತ್ಮನ ಸ್ಮರಣೆಯೊಂದಲ್ಲದೆ ಅನ್ಯ ವಿಷಯವಿಲ್ಲದ ಪಾಂಡವರು ಅರಗಿನ ಮನೆಯ ವಿಪತ್ತನ್ನು ನಿವಾರಿಸಿಕೊಂಡು ಹಿಡಂಬ, ಬಕರನ್ನು ಸಂಹರಿಸಿ ಪಾಂಚಾಲ ರಾಜಕನ್ನಿಕೆಯನ್ನು ವಿವಾಹ ಮಾಡಿಕೊಂಡು ಬದುಕಿ ಬಂದುದನ್ನು ಕಂಡು ದುರ್ಯೋಧನನು ಮಮ್ಮಲ ಮರುಗಿದನು. ಪಾಂಡವರು ದ್ರೌಪದಿಯುಕ್ತರಾಗಿ ಹಸ್ತಿನಾಪುರಕ್ಕೆ ಬಂದು ದೊಡ್ಡಪ್ಪನ ಅರಮನೆಯಲ್ಲೇ ವಾಸಿಸತೊಡಗಿದರು.

ಇಪ್ಪತ್ನಾಲ್ಕು ಗುಣೋಪಾಸನೆಯನ್ನು ಮಾಡುವ ಭಾರತೀ ದೇವಿಯ ಅವತಾರ ಸ್ವರೂಪಳಾದ ದ್ರೌಪದಿಗೆ ನಲವತ್ತೆಂಟು ಗುಣೋಪಾಸಕನಾದ ಭೀಮಸೇನನು ಪತಿಯಾದುದರಲ್ಲಿ ಆಶ್ಚರ್ಯವೇನಿದೆ. ಆದಿ ನಿಯತ ಪತಿ ಪತ್ನಿಯರು ಇವರಲ್ಲವೇ?

॥ ಪದ ॥ ಕುಳಿತೆವೆ ಇಕ್ಕಲು। ಅಳಿವುದು ಜಗತ್ರಯ ।
ಖಳನೊಳು ಕಾದೂ । ಬಳಲಿದನೇಕೋ ॥
ಇಳೆಯಾಣ್ಮಾಸೂಯಕೆ । ನಳಿನಾಕ್ಷನಿರುತಿರೆ ।
ಹಳೆಯ ರೂಪಕೆ ನಮಿಸಿ । ಎಳೆತಂದನೇಕೋ ॥ ೨೧ ॥

**ಶಬ್ದಾರ್ಥ:** ಕುಳಿತೆವೆ ಇಕ್ಕಲು = ಭೀಮನು ಯಾವ ಕಷ್ಟವೂ ಇಲ್ಲ ಹಾಗೆ; ಎವೆ ಇಕ್ಕಲು = ಕಣ್ಣಿನ ರೆಪ್ಪೆಯನ್ನು ಹೊಡೆದ ಕ್ಷಣದಲ್ಲಿ; ಅಳಿವುದು ಜಗತ್ರಯ = ಮೂರು ಲೋಕದಲ್ಲಿ ನೆಲೆಸಿರುವ ದೇವ, ದಾನವ, ಮಾನವ ಕುಲಗಳು ನಾಶವನ್ನು ಹೊಂದುತ್ತವೆ; ಖಳನೊಳು ಜರಾಸಂಧನಲ್ಲಿ; ಕಾದು = ಯುದ್ಧವನ್ನು ಮಾಡಿ; ಬಳಲಿದ = ಆಯಾಸವನ್ನು ಹೊಂದಿದನು; ಏಕೋ = ಬಳಲುವವನಲ್ಲವಾದರೂ ಏಕೆ ಬಳಲಿದನು; ಇಳೆಯಾಣ್ಮಾಸೂಯಕೆ = ರಾಜಸೂಯ ಯಾಗಕ್ಕೆ; ನಳಿನಾಕ್ಷ = ಶ್ರೀಕೃಷ್ಣ; ಇರುತಿರೆ = ಎದುರಿಗೇ ಇರುತ್ತಿರಲಾಗಿ; ಹಳೆಯ ರೂಪಕ್ಕೆ = ಹನುಮಂತನಿಗೆ; ನಮಿಸಿ = ನಮಸ್ಕಾರವನ್ನು ಮಾಡಿ; ಎಳೆತಂದನು = ಮೂರು ಎಳೆ ರೋಮಗಳನ್ನು ಪಡೆದುಕೊಂಡು (ಅಥವಾ ಪುರುಷಾಮೃಗವನ್ನು ಭೂಲೋಕಕ್ಕೆ ಎಳೆದು) ತಂದುದು; ಏಕೋ = ಅವಶ್ಯಕತೆ ಇಲ್ಲವಾಗಿದ್ದರೂ ಏತಕ್ಕಾಗಿ ಹಾಗೆ ಮಾಡಿದನು; ಪುರುಷಾಮೃಗದ ಕೆಲಸವನ್ನು ತಾನೇ ಮಾಡಲು ಸಮರ್ಥನಾಗಿದ್ದನು.

**ಭಾವಾರ್ಥ:** ದ್ರೌಪದಾದೇವಿಯನ್ನು ಸ್ವಯಂವರದಲ್ಲಿ ಪಡೆದ ಪಾಂಡವರು ಪೂರ್ವೋಕ್ತ ರೀತಿಯಲ್ಲಿ ದ್ರುಪದನಿಂದ ಅನರ್ಘ್ಯವಾದ ಧನ, ಕನಕ, ಮುತ್ತು ರತ್ನ, ವಜ್ರ, ವೈಢೂರ್ಯ, ಸೈನ್ಯ, ಸೇವಕ, ಸೇವಕಿಯರೆಂಬ ಬಳುವಳಿಯನ್ನು ಯಥೇಚ್ಛವಾಗಿ ಪಡೆದರು. ಅದರಾತೆ ಶ್ರೀಕೃಷ್ಣನೂ ಬಲರಾಮ, ಯಾದವರಿಂದ ಕೂಡಿಕೊಂಡು ಬಂದು ತಾನೂ ವಿಪುಲವಾದ ಬಳುವಳಿಗಳನ್ನು ನೀಡಿದನು. ಪಾಂಡವರು ಪಾಂಚಾಲನಲ್ಲಿ ಸುಖವಾಗಿ ಒಂದು ವರ್ಷ ಕಾಲವಿದ್ದರು.

ಇದನ್ನು ತಿಳಿದು ಸಹಿಸದ ದುರ್ಯೋಧನನು ಸೈನ್ಯ ಸಜ್ಜಿತನಾಗಿ ದ್ರುಪದನನ್ನೂ ಪಾಂಡವರನ್ನೂ ಕೊಲ್ಲಲಿಕ್ಕಾಗಿ ದಾಳಿ ಮಾಡಿದನು. ಇವನ ಸಹಾಯಕ್ಕಾಗಿ ಶಕುನಿ, ಜಯದ್ರಥ, ಕರ್ಣ ಭೂರಿಶ್ರವ ಮೊದಲಾದವರು ಹಿಂಬಾಲಿಸಿದರು.

"ವೈಚಿತ್ರವೀರ್ಯ ತನಯಾ। (ದುರ್ಯೋಧನ)। ಸಹಸಾ ಬಲೇನ (ಶಕುನಿ)॥
ಕರ್ಣೇನ ಸಿಂಧುಪತಿ (ಜಯದ್ರಥ-ಸೈಂಧವ)ನಾ।ರಥ ಹಸ್ತಿಯೋಧೈಃ ॥
ಭೂರಿಶ್ರವಃ ಪ್ರಭುತಿಶ್ಚ । ಸಹೈವ ಹಂತುಂ ॥
ಪಾಂಚಾಲರಾಜ ಮಗುರೇತ್ಯ । ಪುರೀಂ ಪುನಸ್ತೆ ॥ ೧೯ – ೧೬೬ ॥"

ಸ್ವಯಂವರದಲ್ಲಿ ಸೋತು ಕದನದಲ್ಲಿ ಪರಾಜಯವನ್ನು ಹೊಂದಿ ಪಲಾಯನ ಮಾಡಿದ್ದ ಇವರು ಪುನಃ ಯುದ್ಧಕ್ಕೆ ಬಂದದ್ದನ್ನು ನೋಡಿ ದ್ರುಪದನು ತಾನೂ ಯುದ್ಧವನ್ನು ಮಾಡಿದನು. ಈ ಯುದ್ಧದಲ್ಲಿ ದ್ರುಪದನ ಚಿತ್ರ ಮತ್ತು ಚಿತ್ರಕೇತು ಎಂಬ ಇಬ್ಬರು ಮಕ್ಕಳು ಹತರಾದರು. ದ್ರುಪದನಿಗೆ ಪಲಾಯನವೂ ಸಹ ಸಾಧ್ಯವಿಲ್ಲದಂತಾಗಲು ಪಾಂಡವರು ಸಹಾಯಕ್ಕೆ ಬಂದರು. ಆದರೆ ಅರ್ಜುನನ ರಥವು ಪುಡಿಪುಡಿಯಾಯಿತು. ಭೀಮನು ಮಾತ್ರ ಭಾರಿ

ಗಾತ್ರವಾದ ಮರವನ್ನು ಕಿತ್ತಿ ತಂದು ದುರ್ಯೋಧನಾದಿಗಳನ್ನು ಹಿಮ್ಮೆಟ್ಟಿಸಿದನು. ವಿದುರನು ಧೃತರಾಷ್ಟನಿಗೆ ದ್ರೌಪದೀ ಸ್ವಯಂವರದಲ್ಲಿ ನಿನ್ನ ಮಕ್ಕಳು ಗೆದ್ದರು ಎಂದು ಹೇಳಿದ್ದನ್ನು ಕೇಳಿಸಿಕೊಂಡು ಬಹಳ ವಿಧವಾದ ಆಭರಣಗಳನ್ನು ದ್ರೌಪದಿಗೆ ನೀಡಲು ಆಜ್ಞೆ ಇತ್ತನು, ತಪ್ಪು ಗ್ರಹಿಕೆಯಿಂದ.

ತರುವಾಯ ತನ್ನ 'ಮಕ್ಕಳು' ಎಂಬುವವರು ಪಾಂಡವರೆಂದು ತಿಳಿದು ಒಳಗೊಳಗೇ ಮರುಗಿದನು. ಬಾಹ್ಯದಲ್ಲಿ ಹಾ, ಪಾಂಡವರು ಸಾಯಲಿಲ್ಲವೇ ಸಂತೋಷ" ಎಂದನೇ ಹೊರತಾಗಿ "ದ್ರೌಪದಿಯನ್ನು ಗೆದ್ದರೇ, ಸಂತೋಷ" ಎನ್ನಲಿಲ್ಲ.

ಪಾಂಡವರ ಪರಾಕ್ರಮವನ್ನು ವರ್ಣಿಸುತ್ತ ವಿದುರನು ಧರ್ಮರಾಯನನ್ನು ಗೌರವಾದರಗಳಿಂದ ಊರಿಗೆ ಕರೆಸಿಕೊಂಡು ಅರ್ಧ ರಾಜ್ಯವನ್ನು ಅವರಿಗೆ ನೀಡು. ಇಲ್ಲವಾದರೆ ಮಹಾವಿಪತ್ತು ನಿಶ್ಚಯವೆಂದು ಹೇಳಿದನು. ಧೃತರಾಷ್ಟನು ಒಲ್ಲದ ಮನಸ್ಸಿನಿಂದಲೇ ಜನರ ಮೆಚ್ಚಿಗೆಗಾಗಿ ಪಾಂಡುಸುತರನ್ನು, ಕುಂತಿ, ದ್ರೌಪದಿಯರ ಸಹಿತವಾಗಿ ಮೆರವಣಿಗೆಯಲ್ಲಿ ಹಸ್ತಿನಾಪುರಕ್ಕೆ ಬರಮಾಡಿಕೊಂಡನು.

ಕೆಲವು ದಿನಗಳು ಗತಿಸಲು ಅವಿಭಕ್ತ ಕುಟುಂಬದ ವಿದ್ಯಮಾನಗಳನ್ನು ಗಾಂಧಾರಿಯು ಗಮನಿಸಿದಳು. ದ್ರೌಪದಿಯ ಸೌಂದರ್ಯಲಾವಣ್ಯಾದಿಗಳನ್ನೂ, ಸುತ ದುರ್ಯೋಧನನ ದುರ್ಬುದ್ಧಿಯನ್ನೂ, ಭೀಮನ ಪ್ರತಿಕ್ರಿಯೆಯನ್ನೂ ವಿಮರ್ಶಿಸಿ ಇನ್ನು ತಾವು ಏಕತ್ರದಲ್ಲಿ ಇದ್ದುದೇ ಆದರೆ ಶೀಘ್ರದಲ್ಲಿಯೇ ದುರ್ಯೋಧನನ ಇತಿ ಶ್ರೀ ಖಂಡಿತವೆಂದು ಭಾವಿಸಿ ಕುಂತಿದೇವಿಯಲ್ಲಿ ಈ ವಿಚಾರವನ್ನು ಮಂಡಿಸಿ ಆಕೆಯು ತನ್ನ ಸುತ, ಸೊಸೆಯರೊಡನೆ ಬೇರೆಯಾಗಿಯೇ ಸಂಸಾರವನ್ನು ಹೂಡಬೇಕೆಂದು ತಿಳಿಸಿದಳು.

**"ಕುಂತಿ ಪ್ರಯಾಹಿ ಸಹಿತಾ। ಸ್ನುಷಯಾಗೃಹಂಸ್ವಂ ।**
**ಭೀಮಾದ್ಬಿಭೇಮಿ । ನಿಜ ಪುತ್ರಕ ದುರ್ವಿನೀತ್ಯಾ ॥**
**ಕೃಷ್ಣಾ ತ್ರಿಲೋಕ ವನಿತಾऽಧಿಕ ರೂಪಸಾರಾ ।**
**ಯಸ್ಮಾದಿತಿಸ್ಮಸಸುತಾ ಪ್ರಯಯೌ ಗೃಹಂಸಾ ॥ ೧೯ –೧೮೨ ॥**

ಪಾಂಡವರ ಪತ್ನಿಯಾದ ದ್ರೌಪದಿಯ ಸ್ವರೂಪವನ್ನು ಹಿಂದೆ ಹೇಳಲಾಗಿದೆಯಲ್ಲವೇ? ಈಗ ದುರ್ಯೋಧನ ಮತ್ತು ಅವನ ಪತ್ನಿ ಭಾನುಮತಿ, ಸುತ ಲಕ್ಷ್ಮಣ, ಸುತೆ ಲಕ್ಷ್ಮಣೆ, ಹಾಗೂ ಸಹೋದರ ದುಶ್ಶಾಸನ ಮತ್ತು ಸಹೋದರಿ ದುಶ್ಶಲೆಯರ ಸ್ವರೂಪವನ್ನು ತಿಳಿಯುವಾ.

ದುರ್ಯೋಧನನು ಕಾಶೀರಾಜನ ಮಗಳಾದ ಭಾನುಮತಿಯನ್ನು ಬಲಾತ್ಕಾರವಾಗಿ ಅಪಹರಿಸಿ ಮದುವೆಯಾದವನು. ಭಾನುಮತಿಯು ಮೂಲತಃ ಕಲಿಭಾರ್ಯೆಯೇ ಆದ ಅಲಕ್ಷ್ಮೀಯು. ಇವಳಲ್ಲಿ ಅಕ್ಷಕುಮಾರನ ಮತ್ತು ಗಿರಿಜಾ ದೇವಿಯ ಆವೇಶವಿತ್ತು. ಇವಳೇ ಹಿಂದೆ ಕೈಕೇಯಿಲ್ಲಿ ಅಪ್ಸರಳಾಗಿ ಸೇವೆ ಮಾಡಿಕೊಂಡಿದ್ದ ಮಂಥರೆಯು. **"ಮಂಥರಾತ್ಮಪ್ಸರಾಃ ಪೂರ್ವಂಸ್ಯಾऽಲಕ್ಷ್ಮೀಃ ಪರಿಕೀರ್ತಿತಃ ॥ ಪು.ಪಾದ್ಮ ॥" "ಉದ್ವಾಹ್ಯ ಕಾಶಿತನಯಾಂ । ಗಿರಿಜಾಭಿವಿಷ್ಟಾಂ ॥ ಸಾಕ್ಷಾನ್ನರೇಷು ಜನಿತಾಂ । ಪ್ರಥಮಾಮಲಕ್ಷ್ಮೀಂ ॥** ತಾ.ನಿ.

೧೯-೨೦೦॥". ದುರ್ಯೋಧನನು ಸ್ವಯಂ ಕಲಿಯೇ ಆಗಿರುವನು. **"ದುರ್ಯೋಧನಃ ಕಲಿಃ ಪ್ರೋಕ್ತಾ। ಬ್ರಹ್ಮ ವಾಯ್ವೋರಾವೇಶಯುಕ್ಸದಾ** ॥ ಇವರ ಮಗನಾದ ಲಕ್ಷ್ಮಣನೇ ಹಿಂದೆ ಮಂಥರೆಯಲ್ಲಿ ಆವಿಷ್ಟನಾಗಿದ್ದ ಅಕ್ಷಯಕುಮಾರನು. **"ತಸ್ಯಾಂ ಸುತಂ ತ್ವಜನಯು ತ್ಪುರ ಆಸಯೋಽಕ್ಷಃ"** ಇವರ ಮಗಳಾದ ಲಕ್ಷಣೆಯು ರತಿದೇವಿಯ ಅಂಶಸಂಭೂತಳು. **"ಕನ್ಯಾಂ ಪುರಾ ಪ್ರಿಯತಮಾಂಚ ಷಡಾನನಶ್ಚ"** . **ಕಾಮ ಭಾರ್ಯಾ ರುಗ್ಮವತಿಸ। ನ್ನಾಮ ಲಕ್ಷಣಳೆನಿಸುವಳು ಪೌ । ಲೋಮಿ ಚಿತ್ರಾಂಗದಳು ತಾರಾ ಎರಡು ಪೆಸರುಗಳು ॥ ಬೃ.ತಾ.ಸಮ ॥"**

ದುಶ್ಶಾಸನನೇ ತ್ರೇತಾಯುಗದ ಇಂದ್ರಜಿತ್ತು. **"ದುಶ್ಯಾಸನಃ ಪುರಾಪ್ರೋಕ್ತಾಶ್ಚೇಂದ್ರಜಿನ್ನಾಮರಾಕ್ಷಸಃ"** ದುರ್ಯೋಧನನ ತಂಗಿಯಾದ ದುಶ್ಶಲೆಯು ವೃಷಾಭಿಮಾನಿಯು. **"ವೃಷಾಭಿಮಾನೀ ಪೂರ್ವಂ। ಸಾಪ್ರಜಾಯಾ ದುಶ್ಶಲಾ ॥"** ಇವಳು ಸೈಂದವನ ಪತ್ನಿ. ದುಶ್ಶಲೆಯ ಗಂಡನಾದ ಸೈಂದವನೇ ಕಾಲಕೇಯ ದೈತ್ಯನು. **"ಸೈಂಧವಃ ಕಾಲಕೇಯಶ್ಚ। ದಾನವಃ ಪರಿಕೀರ್ತಿತಃ ॥ ಪ.ಪು.॥"** ಈ ರೀತಿಯಾಗಿ ಪಾಂಡವರೂ ಕೌರವರೂ ತಮ್ಮ ತಮ್ಮ ಭಾರ್ಯ, ಭ್ರಾತೃಗಳಿಂದ ಕೂಡಿದವರಾಗಿ ಸಂಸಾರವನ್ನು ಸಾಗಿಸುತ್ತಿರುವಾಗ ಹಲವು ಕಾರಣಗಳಿಂದ ದುಯೋಧನನಿಗೆ ಜರಾಸಂಧ ಕರ್ಣ ಮೊದಲಾದವರು ಆತ್ಮೀಯರಾದರು. ಪಾಂಡವರ ಮೇಲಿನ ದ್ವೇಷದಿಂದ ಕುದಿಯ ತೊಡಗಿದರು.

ದುರಾತ್ಮನಾದ ದುರ್ಯೋಧನನು ಒಮ್ಮೆ ಬಲತ್ಕಾರವಾಗಿ ಕಳಿಂಗ ದೇಶದ ಅರಸನಾಗಿದ್ದ ಸುವ್ರಜನನ ಮಗಳನ್ನು ಸ್ವೀಕರಿಸಿದನು. ಸುವ್ರಜನು ಜರಾಸಂಧನ ಸಹಾಯದಿಂದ ಕೌರವನನ್ನು ಸದೆಬಡಿದು ಕಾರಾಗ್ರಹದಲ್ಲಿಟ್ಟನು. ಆಗ ಧರ್ಮರಾಯನ ಆಜ್ಞೆಯಂತೆ ಭೀಮನು ಕಳಿಂಗರಾಜನನ್ನು ಸಂಹರಿಸಿ, ಜರಾಸಂಧನನ್ನು ಹಿಮ್ಮೆಟ್ಟಿಸಿ ದುರ್ಯೋಧನಾದಿಗಳನ್ನು ಬಿಡಿಸಿಕೊಂಡು ಬಂದನು. ಪಾಂಡವರ ಪರಾಕ್ರಮವನ್ನು ಕಂಡು ಧೃತರಾಷ್ಟನು ಒಳಗೊಳಗೇ ಇವರು ತನ್ನ ಮಕ್ಕಳ ಅಭ್ಯುದಯಕ್ಕೆ ಈ ಪಾಂಡವರು ಕಂಟಕರೆಂದು ಬಗೆದನು. ಪಾಂಡವರನ್ನು ತನ್ನ ರಾಜ್ಯದಿಂದ ಬೇರೆ ಕಳುಹಿಸಲು ಗಾಂಧಾರಿಯ ಹಾಗೂ ಧೃತರಾಷ್ಟನ ಭೀತಿಗಳು ಕಾರಣವಾದುವು.

ಒಂದು ದಿನ ಧೃತರಾಷ್ಟನು ಸಾವಧಾನವಾಗಿ ಧರ್ಮಜನನ್ನು ಹತ್ತಿರ ಕರೆದು "ಧರ್ಮಾ ನಿಮ್ಮ ಏಳ್ಗೆಯನ್ನು ಕಂಡು ನನಗೆ ಬಹಳ ಸಂತೋಷವಾಯಿತು. ಚಿಕ್ಕಂದಿನಲ್ಲಿ ನಿಮ್ಮನ್ನು ಸಾಕಿ ಸಲಹಿದೆನು. ಈಗ ನೀವು ಪ್ರೌಢರಾಗಿರುವುದರಿಂದ ನೀವು ಸ್ವತಂತ್ರವಾಗಿ ಬಾಳಬೇಕೆಂದು ನನ್ನ ಇಚ್ಛೆ. ಅದಕ್ಕಾಗಿ ನಾನು ನಿನಗೆ ನಿನ್ನ ತಂದೆ ಭಾಗದಂತೆ ಅರ್ಧ ರಾಜ್ಯವನ್ನು ನಿನಗೆ ಕೊಡುತ್ತಿದ್ದೇನೆ. ನೀನು ನಿನ್ನ ರಾಜ್ಯಕ್ಕೆ ಇಂದ್ರಪ್ರಸ್ಥವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ನಿನ್ನ ತಮ್ಮಂದಿರು ಹಾಗೂ ತಾಯಿಯೊಡನೆ ಇಂದ್ರಪ್ರಸ್ಥಕ್ಕೆ ಹೋಗಿ ಅಲ್ಲಿ ನೆಲೆಸಿರಿ" ಎಂದು ಹೇಳಿದನು. ಹಿರಿಯರಿಗೆ ಎದುರುತ್ತರವನ್ನು ನೀಡಿ ಗೊತ್ತಿರದ ಧರ್ಮಜನು ದೊಡ್ಡಪ್ಪನ ಮಾತಿಗೆ ಸಮ್ಮತಿಸಿದನು. ಒಂದು ಸುಮುಹೂರ್ತದಲ್ಲಿ ಧೃತರಾಷ್ಟನು ಯುಧಿಷ್ಠಿರಗೆ ಇಂದ್ರಪ್ರಸ್ಥ ಭೂಭಾಗವನ್ನು ಒಪ್ಪಿಸಿ ಪಟ್ಟವನ್ನು ಕಟ್ಟಿದನು. ಈ ಪಟ್ಟಾಭಿಷೇಕ ಮುಹೂರ್ತದಲ್ಲಿ ಪರಮಾತ್ಮನು ಯಾದವ ಕೃಷ್ಣ, ವಾಸಿಷ್ಠ ಕೃಷ್ಣರೆಂಬ ಎರಡು ರೂಪಗಳಿಂದ ಭಾಗವಹಿಸಿ ಧರ್ಮರಾಯನಿಗೆ ಯಜ್ಞ, ಯಾಗ, ದಿಗ್ವಿಜಯಾದಿಗಳನ್ನು ಮಾಡಿ ಪ್ರಜಾರಂಜಕವಾಗಿ, ಕೀರ್ತಿವಂತನಾಗಿ ಸುಖವಾಗಿ ಬಾಳೆಂದು ಆಶೀರ್ವದಿಸಿದನು ಮತ್ತು ಯುವರಾಜ ಪಟ್ಟದಲ್ಲಿ ಭೀಮಸೇನನನ್ನು ಕುಳ್ಳಿರಿಸಿದರು.

ಧರ್ಮರಾಜನೇನೋ ಇಂದ್ರಪ್ರಸ್ಥಕ್ಕೆ ರಾಜನಾಗಿ, ಭೀಮಸೇನನು ಯುವರಾಜನಾದನು. ಆದರೆ ಇವರ ಪಾಲಿಗೆ ಬಂದ ಭೂ ಪ್ರದೇಶವು ಎಂಥಾದ್ದಾಗಿತ್ತು? ಕಲ್ಲು, ಬಂಡೆ, ಮರಳು, ಬಂಜರು, ಬೆಂಗಾಡಾಗಿತ್ತು. ಅಲ್ಲಿದ್ದ ಪ್ರಜೆಗಳ ಗೋಳು ಹೇಳತೀರದು. ಈಗಿನ ಒರಿಸ್ಸಾ, ಬಿಹಾರಗಳಂತೆ ಇತ್ತು ಆ ರಾಜ್ಯ. ಆದರೆ ದೈವಭಕ್ತರಾದ ಪಾಂಡವರ ಸತತವಾದ ಪ್ರಯತ್ನದಿಂದ ಈ ನಾಡು ಸಮೃದ್ಧವಾಯಿತು. ಸಕಲೈಶ್ವರ್ಯದಿಂದ ಯುಕ್ತವಾದ ಆ ನಾಡಿನಲ್ಲಿ ಲಕ್ಷ್ಮೀದೇವಿಯು ತಾಂಡವಾಡಲಾರಂಭಿಸಿದಳು. ದಂಗೇಕೋರ, ಕಳ್ಳಕಾಕರ, ಪ್ರಜಾಪೀಡಕರಾಗಿದ್ದ ಸಾಮಂತರನ್ನು ಸದೆಬಡಿದು ರಾಜ್ಯದಲ್ಲಿ ಧರ್ಮಸಂಸ್ಥಾಪನೆಯನ್ನು ಮಾಡಿದರು. ಹಸ್ತಿನಾವತಿಗೆ ಇಮ್ಮಡಿ ಐಶ್ವರ್ಯವು ಇಂದ್ರಪ್ರಸ್ಥ ರಾಜ್ಯದಲ್ಲಿ ನಲಿಯಲಾರಂಭಿಸಿತು. "ಬ್ರಾಹ್ಮಣಾಸಂತು ನಿರ್ಭಯಾ" ಎಂದಾಯಿತು ರಾಜ್ಯ. ದುರ್ಬಲರಲ್ಲಿ ಅಗ್ರಗಣ್ಯರು ಬ್ರಾಹ್ಮಣರು. ದುರ್ಬಲರನ್ನು ರಕ್ಷಿಸುವ ರಾಜ್ಯವೇ ರಾಜ್ಯವು. ಪಾಂಡವರು ಊರನ್ನು ಬಿಟ್ಟ ಮೇಲೆ ಅನೇಕ ಪ್ರಜೆಗಳು ಹಸ್ತಿನಾವತಿಯನ್ನು ಬಿಟ್ಟು ಪಾಂಡವರನ್ನು ಕುರಿತು ಹೊರಟು ಹೋದರು. ಆಗ ದುರ್ಯೋಧನನು ಯಾರೂ ರಾಜ್ಯವನ್ನು ಬಿಟ್ಟು ಹೋಗಬಾರದು. ಹಾಗೆ ಮಾಡಿದರೆ ನಿಮ್ಮ ಆಸ್ತಿಯನ್ನೆಲ್ಲಾ ಅಪಹರಿಸುತ್ತೇನೆ ಎಂದು ಹೇಳಿದನು. ಆದರೂ ಜನರು ಅವನ ಮಾತಿಗೆ ಹೆದರದೆ ಊರನ್ನು ಬಿಟ್ಟರು. ಇತ್ತ ಧೃತರಾಷ್ಟ್ರನು ತನ್ನ ಮಗ ದುರ್ಯೋಧನನಿಗೆ ರಾಜ್ಯ ಪಟ್ಟವನ್ನೂ ದುಶ್ಶಾಸನನಿಗೆ ಯುವರಾಜ ಪಟ್ಟವನ್ನೂ ಕಟ್ಟಿದನು.

ಸಂಪದ್ಭರಿತವಾದ ಸಾಮ್ರಾಜ್ಯಕ್ಕೆ ಭೂಷಣಪ್ರಾಯವಾಗಿ ಶ್ರೀವ್ಯಾಸ, ಶ್ರೀ ಕೃಷ್ಣರ ಆಜ್ಞೆಯಂತೆ ಇಂದ್ರಪ್ರಸ್ಥದಲ್ಲಿ ವಿಶ್ವಕರ್ಮನಿಂದ ಭವ್ಯವಾದ ಅರಮನೆಯು ಸ್ಥಾಪಿಸಲ್ಪಟ್ಟಿತು. ಆ ಗೃಹವನ್ನು ವರ್ಣಿಸಲು ಹತ್ತು ಕವಿಗಳು ಒಂದು ವರ್ಷಕಾಲದವರೆಗೆ ವರ್ಣಿಸಿದರೂ ಮುಗಿಯಲಾರದಂತಿತ್ತು ಆ ಅರಮನೆಯು.

ಯುಧಿಷ್ಠಿರನು ರಾಜಾ ಬಹುವಲ್ಲಭ ಎಂಬಂತೆ ಶಿಶುಪಾಲನ ಪುತ್ರಿಯಾಗಿದ್ದ (ಯಮಧರ್ಮನ ಪತ್ನಿಯೇ ಆದ ಶ್ಯಾಮಲಾದೇವಿಯ ಅವತಾರಳು) ದೇವಕೀ ಎಂಬುಳನ್ನು ಮದುವೆಯಾದನು. **"ದೇವಕೀ ಶಿಶುಪಾಲಸ್ಯ ಪುತ್ರೀ ಸಾ। ಶ್ಯಾಮಲಾ ಸ್ಮೃತಃ ॥ ಪು.ಪಾದ್ಮ ॥"** ಭೀಮಸೇನನು ಕಾಶಿ ರಾಜನ ಮಗಳಾದ ಕಾಳಿಯನ್ನು ವಿವಾಹ ಮಾಡಿಕೊಂಡನು. ಈ ಸಂದರ್ಭದಲ್ಲಿ ಜರಾಸಂಧನು ವಿಷ್ಣುವನ್ನೂ, ವೈಷ್ಣವ ಶಿರೋಮಣಿಯಾದ ಭೀಮಸೇನನನ್ನೂ ಬಹುವಾಗಿ ನಿಂದಿಸಿದ್ದಲ್ಲದೆ ರುದ್ರದೇವರನ್ನು ಸರ್ವೋತ್ತುಮತ್ವದಿಂದ ಕೊಂಡಾಡಿದನು. ಕಾಳಿಯು ವೈಷ್ಣವರಿಗೆ ಸಲ್ಲತಕ್ಕವಳಲ್ಲವೆಂದು ವಾದವನ್ನು ಹೂಡಿದನು. ಆಗ ಭೀಮಸೇನನು ವಾಗ್ವಾದದಲ್ಲಿ ನಿರ್ದುಷ್ಟವಾದ ವೇದ, ಪುರಾಣ ಇತರ ಸದ್ಗ್ರಂಥಗಳನ್ನು ಉದಾಹರಿಸಿ ಜರಾಸಂಧನನ್ನು ನಿರುತ್ತರನನ್ನಾಗಿ ಮಾಡಿದನು. ಸೋತು ಸಂಕಟಪಟ್ಟು, ಪಾತಕವನ್ನು ಒಡಲೊಳಗಿಟ್ಟು ಕೊಂಡಿದ್ದ ಜರಾಸಂಧನು ಭೀಮನೊಡನೆ ಯುದ್ಧಕ್ಕೆ ಬಂದನು. ಆಗ ಭೀಮಸೇನನು ತನ್ನ ಗದೆಯಿಂದ ಆ ಜರಾಸಂಧನನ್ನು ಗಂಗಾನದಿಗೆ ತಳ್ಳಿಬಿಟ್ಟನು. ಇದರಿಂದ ಬಹುನಾಚಿಗೆಗೊಂಡ ಜರಾಸಂಧನು ತನ್ನ ರಾಜ್ಯಕ್ಕೆ (ಮಗಧ) ಓಡಿಹೋದನು. ಕಾಳಿಯು ಸಾಕ್ಷಾತ್ ಮೂಲರೂಪೀ ಭಾರತಿಯೇ (ದ್ರೌಪದಿಯಂತೆ ಸಂಯುಕ್ತಳಲ್ಲ). ಆಕೆಯು ಭೀಮನ ನಿಯತ ಪತ್ನಿಯು **"ಕೃಷ್ಣಾ ಸೈವಾಪ್ಯನ್ಯ ರೂಪೇಣ ಜಾತಾ। ಕಾಶೀಶ ಪುತ್ರೀಯಾಂ ಪ್ರವದಂತಿ ಕಾಲೀಂ ॥ತಾ.ನಿ.॥ "ಕಾಲೀ ಪೂರ್ವಂ ಭೀಮ ಭಾರ್ಯಾ । ಭಾರತೀಸಾ ಪ್ರಕೀರ್ತಿತಾ ॥ ಪ.ಪು. ॥**

ದುರ್ಯೋಧನನು ಒಂದು ಹಂತದಲ್ಲಿ ಬಲರಾಮನ ಸ್ನೇಹವನ್ನು ಬೆಳೆಸಿ ಆತನಲ್ಲಿ ಗದಾಯುದ್ಧವನ್ನು ಕಲಿತನು. ಅದು ಹೇಗೆಂದರೆ ಸತಧನ್ವನಿಂದ ತಂದ ಶಮಂತಕಮಣಿಯನ್ನು ಕೃಷ್ಣನು ಆಕ್ರೂರನಿಗೆ ಕೊಟ್ಟಿದ್ದನು. ಆ ಮಣಿಯು ಎಲ್ಲಿದೆ ತೋರಿಸೆಂದು ಬಲರಾಮನು ಕೇಳಲು ಕೃಷ್ಣನು ಆಕ್ರೂರನ ವಸ್ತ್ರಗಳನ್ನು ಪರೀಕ್ಷೆ ಮಾಡಿದಂತೆ ನಟಿಸಿ ಆ ಮಣಿಯು ಇಲ್ಲವೆಂದು ಹೇಳಿದನು. ಆಗ ಬಲರಾಮನು ಕೃಷ್ಣನ ಮಾತನ್ನು ನಂಬದೆ ಸಿಟ್ಟಿನಿಂದ ವಿದೇಹನಗರಕ್ಕೆ ಹೊರಟು ಹೋದನು. ಇದೇ ಸಂದರ್ಭವನ್ನು ನೋಡಿಕೊಂಡು ದುರ್ಯೋಧನನು ಕೃಷ್ಣನಂತೂ ತನ್ನ ವಶವರ್ತಿಯಾಗುವುದಿಲ್ಲ. ಬಲರಾಮನಲ್ಲಿಗೆ ಹೋಗಿ ಅವನಲ್ಲಿ ಶಿಷ್ಯತ್ವವನ್ನೂ ಸಂಬಂಧವನ್ನೂ ಬೆಳಸಬೇಕೆಂದು ವಿದೇಹನಗರಕ್ಕೆ ಹೋಗಿ ಬಲರಾಮನನ್ನು ಒಲಿಸಿದನು. (ವಶಮಾಡಿ ಕೊಂಡನು) (ಗರುಡ, ಶೇಷ, ರುದ್ರರ ಪರಿಯಂತವಾಗಿ ಆವೇಶಕ್ಕೆ ಕಲಿಗೆ ಅವಕಾಶ ಉಂಟು) ಬಲರಾಮನಲ್ಲಿ ಗದಾಯುದ್ಧವನ್ನು ಕಲಿತು ಬಲರಾಮನ ತಂಗಿಯಾದ ಸುಭದ್ರಾ ದೇವಿಯನ್ನು ತನಗೆ ಕೊಟ್ಟು ಮದುವೆ ಮಾಡಬೇಕೆಂದು ಕೇಳಿ ದುರ್ಯೋಧನನು ಬಲರಾಮನಿಂದ ಪ್ರತಿಜ್ಞೆಯನ್ನು ಮಾಡಿಸಿದನು.

ಈ ಸುಭದ್ರೆಯು ಯಾರು? ಸಾಕ್ಷಾತ್ ಇಂದ್ರನ ಪತ್ನಿಯಾದ ಶಚಿ ದೇವಿಯೇ ಈಕೆಯು. ಈಕೆಯು ತ್ರೇತಾಯುಗದಲ್ಲಿ ಇಂದ್ರಾಂಶ ಸಂಭೂತನಾದ ವಾಲಿಯ ಪತ್ನಿ ತಾರಾ, ಸೀತಾದೇವಿಯ ಸೇವಾರ್ಥವಾಗಿ ಅಶೋಕವನದಲ್ಲಿ ಒಂದು ರೂಪದಿಂದಿದ್ದು ತ್ರಿಜಟಾ, ದ್ವಾಪರ ಯುಗದಲ್ಲಿ ಸುಭದ್ರಾ ಮತ್ತು ಚಿತ್ರಾಂಗದೆ ಎಂಬುದಾಗಿ ಅವತರಿಸಿದವಳು. ಈಕೆಯು ಇಂದ್ರ, ಇಂದ್ರಾವತಾರಿಗಳ ನೀತ ಪತ್ನಿಯೇ ಹೊರತಾಗಿ ಅದ್ಹೇಗೆ ದುರ್ಯೋಧನನಿಗೆ ಸಲ್ಲುತ್ತಾಳೆ? ಕಾಲಾಂತರದಲ್ಲಿ ಈಕೆಯು ಅರ್ಜುನನನ್ನೇ ವಿವಾಹವಾಗುತ್ತಾಳೆ. ಈಕೆಯಲ್ಲಿ ಉಮಾದೇವಿಯ ಆವೇಶವಿರುತ್ತದೆ.

"ಜಾತಾ ದೇವಕ್ಯಾಂ ಸಸುಭದ್ರೇತಿ ನಾಮ್ನಾ ।
ಭದ್ರಾರೂಪೇಣಾನಕ ದುಂದುಭೇಸ್ತಾಂ ॥
ಕೃತ್ವಾ ಪುತ್ರೀಂ ರೋಹಿಣೇ ಸ್ವಾಮ ರಕ್ಷತ್ ।
ಪೂರ್ವಂತು ಯಾಸೀತ್ತ್ರಿಜ ಟೈವ ನಾಮ್ನಾ ॥ ತಾ.ನಿ.೨೦-೩೨ ॥"

"ಉಮಾವೇಶಾದ್ರೂಪ ಗುಣೊನಾಪಪನ್ನಾ । ಪದ್ಯೇಕ್ಷಣಾ ಚಂಪಕನಾಮ ಗೌರೀ ॥"
"ತಾರಾ ಪೂರ್ವಂ ಶಚೀಪ್ರೋಕ್ತಾ । ತ್ರೀಶಿಖಶ್ಚ ವಿಭುರ್ಯಮೌ ॥
ಸುಭದ್ರಾ ತ್ರಿಜಟಾ ಪ್ರೋಕ್ತಾ । ಸ್ಕಂಧಃ ಷಣ್ಮುಖ ಉಚ್ಯತೇ ॥ ಪ.ಪು ॥"

ಅಂತೂ ಇಂತೂ ಕೌರವ ಪಾಂಡವರು ವಿವಾಹಗಳನ್ನು ಮಾಡಿಕೊಂಡು ಮಕ್ಕಳನ್ನೂ ಹೊಂದಿದರು. ದುರ್ಯೋಧನನಿಗೆ ಲಕ್ಷಣ – ಲಕ್ಷಣಾ ಎಂಬ ಇಬ್ಬರು ಮಕ್ಕಳಾದರೆಂದು ಈ ಮೊದಲೇ ಹೇಳಲಾಗಿದೆ. ಇತ್ತ ಪಾಂಡವರಿಗೂ ಮಕ್ಕಳಾದುವು. ಧರ್ಮರಾಜನಿಗೆ ದೇವಕಿಯಲ್ಲಿ ಸುಹೋತ್ರನೆಂಬ (ಚಿತ್ರಗುಪ್ತನು) ಪುತ್ರನು ಹುಟ್ಟಿದನು.

**ಧರ್ಮರಾಜ**

- ದ್ರೌಪದಿ (ಶ್ಯಾಮಲ) ಪತ್ನಿ — ಪ್ರತಿವಿಂಧ್ಯ (ಪುತ್ರ)
- ದೇವಕಿ (ಪತ್ನಿ) — ಸುಹೋತ್ರ (ಪುತ್ರ)

**ಭೀಮಸೇನ**

- ಹಿಡಂಬಿ (ಪತ್ನಿ) — ಘಟೋತ್ಕಚ
- ದ್ರೌಪದಿ (ಭಾರತಿ) — ಶ್ರುತಸೋಮ (ಸುತ)

**ಅರ್ಜುನ**

- ದ್ರೌಪದಿ (ಶಚಿ) — ಶ್ರುತಕೀರ್ತಿ
- ಸುಭದ್ರ — ಅಭಿಮನ್ಯು
- ಚಿತ್ರಾಂಗದೆ — ಬಬ್ರುವಾಹನ
- ಉಲೂಪಿ — ಇರಾವಂತ

**ನಕುಲ**

- ಪಾರ್ವತಿ (ದ್ರೌಪದಿ) — ಶತಾನೀಕ

**ಸಹದೇವ**

- ದ್ರೌಪದಿ (ರೇಣುಕ) — ಶ್ರುತಕೀರ್ತಿ

ಮಕ್ಕಳಿಂದ ಚೊಕ್ಕವಾಗಿ ರಕ್ತಸಾಂತಕನನ್ನು ಸ್ಮರಿಸುತ್ತ ರಾಜ್ಯ ಭಾರ ನಿರತರಾಗಿದ್ದ ಪಾಂಡವರು ಮಯ ನಿರ್ಮಿತವಾಗಿದ್ದ ಸಭಾಮಂಟಪದಲ್ಲಿ ವಿರಾಜಮಾನರಾಗಿರುವಾಗ ಅಮರಾವತಿಯಿಂದ ನಾರದರು ಆಗಮಿಸಿದರು. ಬಂದ ಮುನಿಗಳಿಗೆ ಎರಗಿದ ಪಾಂಡು ನಂದನರು ಅವರಿಗೆ ಅರ್ಘ್ಯಪಾದ್ಯಾದಿಗಳನ್ನು ನೀಡಿ ಕುಶಲ ಪ್ರಶ್ನೆ ಮಾಡಿದರು ಮತ್ತು ಸ್ವರ್ಗದಿಂದ ಬಂದಿದ್ದ ಆ ಮುನಿಶ್ರೇಷ್ಠರನ್ನು ಕುರಿತು ಸ್ವರ್ಗ ಲೋಕದ ವಿದ್ಯಮಾನಗಳನ್ನು ತಿಳಿಸಲು ಧರ್ಮರಾಯನು ಬೇಡಿದನು. ಆಗ ನಾರದರು ಸ್ವರ್ಗದ ವೈಭವವನ್ನೂ ಅಲ್ಲಿ ಇಂದ್ರಾದಿ ಸಕಲ ಸುರಶ್ರೇಷ್ಠರಿಂದ ಸೇವ್ಯಮಾನನಾದ ವಾಮನ ರೂಪೀ ಶ್ರೀ ಕೃಷ್ಣನ ಕರುಣಾಮಯವಾದ ಲೀಲೆಯನ್ನೂ ವರ್ಣಿಸುತ್ತ ಅಲ್ಲಿಯೇ ಇಂದ್ರ ಸಭಾಮಾನಿತನಾದ ಹರಿಶ್ಚಂದ್ರರಾಜನ ಸ್ಥಾನಮಾನ, ಭಾಗ್ಯಗಳನ್ನು ವರ್ಣಿಸಿದರು. ಬಹು ರಾಜಪ್ರಶಂಸೆಯು ಆ ನಾರದರಿಂದ ಬಹುಪರಿಯಾಗಿ ವರ್ಣಿತವಾದರೂ ಧರ್ಮಾದಿಗಳ ತಂದೆಯಾದ ಪಾಂಡುರಾಜನ ಪ್ರಸಕ್ತಿಯು ಮಾತ್ರ ನಾರದರ ಬಾಯಿಂದ ಹೊರಡಲಿಲ್ಲ. ಆಗ ಧರ್ಮರಾಜನು "ಸ್ವಾಮಿ, ಎಲ್ಲಾ ರಾಜರೂ ಇಂದ್ರ ಸಭಾಮಾನಿತರಾಗಿರುವಾಗ ನಮ್ಮ ತಂದೆಯ ಹೆಸರು ಮಾತ್ರ ನಿಮ್ಮ ಮುಖದಿಂದ ಬರಲೇ ಇಲ್ಲ. ಹಾಗಾದರೆ ನಮ್ಮ ತಂದೆಗೆ ಆ ಸಭೆಯಲ್ಲಿ ಸ್ಥಾನವಿಲ್ಲವೇ? ಒಂದು ವೇಳೆ ಸ್ಥಾನವು ಇಲ್ಲವಾದರೆ ಅದಕ್ಕೆ ಕಾರಣವೇನು?" ಎಂದು ಕೇಳಿದನು. ಅದಕ್ಕೆ ನಾರದರು ಹೇಳುತ್ತಾರೆ. "ಹೇ, ಧರ್ಮಜಾ ಇತ್ತ ಕೇಳು. ನಾನು ಅದನ್ನು ತಿಳಿಸಲಿಕ್ಕಾಗಿಯೇ ಇಲ್ಲಿಗೆ ಬಂದಿರುವೆನು. ಅಲ್ಲಿ ನಿಮ್ಮ ತಂದೆಯಾದ ಪಾಂಡುರಾಜನು ಬಹಳ ದುರವಸ್ಥೆಯಲ್ಲಿ ಇರುವನು. ಹರಿಶ್ಚಂದ್ರನ ಸ್ಥಾನವೆಲ್ಲಿ? ಪಾಂಡುರಾಜನ ಸ್ಥಾನವೆಲ್ಲಿ? ಆತನು ಎಲ್ಲರಿಂದಲೂ ಮಾನಿತನಾದರೆ ಪಾಂಡು ರಾಜನು ಎಲ್ಲರಿಂದಲೂ ಉದಾಶೀನನಾಗಿರುವನು. ಇದಕ್ಕೆ ಕಾರಣವೇನೆಂದರೆ ಹರಿಶ್ಚಂದ್ರಾದಿ ರಾಜರು ರಾಜಸೂಯ ಯಾಗವನ್ನು ಮಾಡಿ ದೇವತೆಗಳನ್ನೂ, ಭಗವಂತನನ್ನೂ ತೃಪ್ತಿ ಬಡಿಸಿ ಈ ಭಾಗ್ಯವನ್ನು ಪಡೆದಿರುವರು. ನಿಮ್ಮ ತಂದೆಯು ರಾಜಸೂಯ ಯಾಗವನ್ನು ಮಾಡಲಿಲ್ಲವಲ್ಲಾ? ಆತನಿಗೆ ಇಂದ್ರ ಸಭಾ ಪ್ರವೇಶವು ಹೇಗೆ ಸಾಧ್ಯ? ಇದಕ್ಕಾಗಿಯೇ ಪಾಂಡುರಾಜನು ನೀವು ರಾಜಸೂಯ ಯಾಗವನ್ನು ಮಾಡಿ ಆತನಿಗೆ ಇಂದ್ರ ಸಭೆಯಲ್ಲಿ ಹರಿಶ್ಚಂದ್ರ ಮಹಾರಾಜರ ಸ್ಥಾನವನ್ನು ಕೊಡಿಸಬೇಕೆಂಬ ಸಂದೇಶವನ್ನು ನನ್ನ ಮುಖಾಂತರವಾಗಿ ನಿಮಗೆ ಸಲ್ಲಿಸಿರುವನು. ಪ್ರಜೆಗಳ ಹಿತಾರ್ಥವಾಗಿ, ದುಷ್ಟರಾಜ, ರಾಜ ಪರಿವಾರದವರನ್ನು ಶಕ್ತಿ ಇದ್ದೂ ನಿಗ್ರಹಿಸದೇ ಇದ್ದರೆ ಅದಕ್ಕಿಂತ ದೊಡ್ಡ ಪಾಪವು ಕ್ಷತ್ರಿಯರಿಗೆ ಬೇರೊಂದು ಇಲ್ಲ. ಯೋಗ್ಯರಾದ ಬ್ರಾಹ್ಮಣ ವಿದ್ವಾಂಸರಿಗೆ ವಿದ್ವತ್ಸಭಾದಲ್ಲಿ ಸಾನವನ್ನು ನೀಡದೆ ವಂಚನೆಯನ್ನು

ಮಾಡಿದ ಪಾಪಕ್ಕೂ, ಕೃತಕ ಕ್ಷಾಮವನ್ನು ಸೃಷ್ಟಿಸುವ ವೈಶ್ಯನ ಪಾಪಕ್ಕೂ, ದುರ್ವಿನೀತನಾದ ಶೂದ್ರನ ಪಾಪಕ್ಕೂ, ದುಷ್ಟನಿಗ್ರವನ್ನು ಕೈಬಿಟ್ಟ ಕ್ಷತ್ರಿಯನ ಪಾಪಕ್ಕೂ ವ್ಯತ್ಯಾಸವಿಲ್ಲ. ಪರಮ ಸಮರ್ಥರಾದ ನೀವು ವಿಳಂಬ ಮಾಡದೆ ರಾಜಸೂಯ ಯಾಗವನ್ನು ಮಾಡಿದರೆ ನಿಮ್ಮ ಪುಣ್ಯ ಕೀರ್ತಿ, ಐಶ್ವರ್ಯ, ಸಮಸ್ತಗಳೂ ಬೆಳಗುವುದರಲ್ಲಿ ಸಂಶಯವಿಲ್ಲ. ಖಂಡಿತವಾಗಿಯೂ ಪಾಂಡುರಾಜನು ಇಂದ್ರಸಭೆಯಲ್ಲಿ ಅಗ್ರಗಣ್ಯನಾಗಿ ಮಾನಿತನಾಗುವುದರಲ್ಲಿಯೂ ಸಂದೇಹವಿಲ್ಲ. ನಿಮ್ಮ ಪಿತೃಗಳು ಉತ್ತಮ ಲೋಕಗಳನ್ನು ಹೊಂದುತ್ತಾರೆ ಎಂದು ತಿಳಿಸಿದರು.

**"ಕರೋತು ರಾಜಸೂಯಂ ಮೇ । ಪುತ್ರೋ ಜ್ಯೇಷ್ಠೋऽ ನುಜಾರ್ಚಿತಃ ॥**
**ಪಾಲಿತೋ ವಾಸುದೇವೇನ । ಕಿಂ ತಸ್ಯಾऽಸಾಧ್ಯಮತ್ರಹಿ ॥ ೨೧-೨೩ ॥**

ಹೀಗೆ ಪಾಂಡುರಾಜನು ಹೇಳಿ ಕಳುಹಿಸಿದ್ದನ್ನು ನಾರದರ ಮುಖಾಂತರವಾಗಿ ಕೇಳಿ ತಿಳಿದುಕೊಂಡ ಧರ್ಮರಾಜನು ಭೀಮಾರ್ಜುನಾದಿಗಳಲ್ಲಿ ಈ ಪ್ರಸ್ತಾಪವನ್ನೆತ್ತಿ "ರಾಜಸೂಯ ಯಾಗವನ್ನು ಮಾಡುವುದು ಬಹು ಶ್ರೇಷ್ಠವು. ಇದನ್ನು ನಾವು ಯಾಕೆ ಮಾಡಬಾರದು? ಮಾಡೋಣವೆಂದು ಹೇಳಲಾಗಿ ಸರ್ವರೂ ಬಹು ಸಂತೋಷವನ್ನು ವ್ಯಕ್ತ ಮಾಡಿದರು. ನಿಶ್ಚಿತ ಮನಸ್ಸುಳ್ಳವರಾಗಿ ಅವರು ತಮ್ಮಲ್ಲಿಗೆ ಶ್ರೀಕೃಷ್ಣ ಪರಮಾತ್ಮನನ್ನು ಕರೆ ತರಲು ದೂತನನ್ನು ಕಳುಹಿಸಿದರು.

ಇದೇ ಸಂದರ್ಭದಲ್ಲಿ ಯಾವ ನರಕಾಸುರನು ಹದಿನಾರು ಸಾವಿರದ ಮೇಲೆ ಒಂದು ನೂರು ಜನ ರಾಜಕನ್ನಿಕೆಯರನ್ನು ಸೆರೆಹಿಡಿದು ಅವರನ್ನು ಬಲಿಕೊಡಬೇಕೆಂದು ಭಾವಿಸಿದ್ದನೋ ಆ ನರಕಾಸುರನ ಸಂಹಾರಾನಂತರದಲ್ಲಿ ಜರಾಸಂಧನೂ ಆ ರಾಜ ಕನ್ನಿಕೆಯರ ಪಿತೃ, ಭ್ರಾತೃ ಮತ್ತು ಧರ್ಮದಿಂದ ರಾಜ್ಯ ಪರಿಪಾಲನೆಯನ್ನು ಮಾಡುತ್ತಿದ್ದ ಹದಿನಾರು ಸಾವಿರ ಇತರ ರಾಜಕುಮಾರರನ್ನೂ ಸೆರೆಹಿಡಿದು ಅವರನ್ನು ರುದ್ರ ಕಾಳಿಕಾದೇವಿಗೆ ಬಲಿ ಕೊಡಬೇಕೆಂದು ಬಗೆದು ಕಾರಾಗೃಹದಲ್ಲಿ ಇರಿಸಿದ್ದನು.

ಧರ್ಮರಾಜನ ಆಮಂತ್ರಣದ ಮೇರೆಗೆ ಶ್ರೀಕೃಷ್ಣನು ದ್ವಾರಕಾ ಪಟ್ಟಣದಿಂದ ಆಗಮಿಸಿದನು. ಆಗ ಧರ್ಮರಾಯನು ಕೃಷ್ಣನಿಗೆ ಪೂಜೆಯನ್ನು ಸಲ್ಲಿಸಿ ತನ್ನ ಸಂಕಲ್ಪವನ್ನು ತಿಳಿಸಿದನು. ಆಗ ಶ್ರೀ ಕೃಷ್ಣನು ಧರ್ಮರಾಯನಿಗೆ "ಹೇ ಧರ್ಮಜಾ ನಿನ್ನ ಇಚ್ಛೆಯೇನೋ ಯೋಗ್ಯವಾದುದೇ. ಆದರೆ ಯಾವ ನನ್ನ ಅಣ್ಣ ಬಲರಾಮನಿಂದಲೂ ಜೈಸಲಿಕ್ಕೆ ಅಸಾಧ್ಯವಾದ ಜರಾಸಂಧನು ಇರಲಿಕ್ಕೆ ನೀನು ಹೇಗೆ ತಾನೇ ರಾಜಸೂಯ ಯಾಗವನ್ನು ಮಾಡುತ್ತೀ? ಅವನನ್ನು ಜಯಿಸದೇ ನಿನ್ನ ಯಜ್ಞವು ಹೇಗೆ ತಾನೇ ಯಶಸ್ವಿಯಾಗುತ್ತದೆ? ಎಂದು ಪ್ರಶ್ನಿಸಿದನು. ಆ ಜರಾಸಂಧನ ಹೆಸರನ್ನು ಕೇಳಿಯೇ ನಡುಗಿದ ಧರ್ಮರಾಜನು ತನ್ನ ಸಂಕಲ್ಪವನ್ನು ಕೈಬಿಡುತ್ತೇನೆಂದು ಹೇಳಿದನು. "ಹರಿಶ್ಚಂದ್ರನ ಕಾಲದಲ್ಲಿ ಜರಾಸಂಧನಿರಲಿಲ್ಲ. ಅದಕ್ಕಾಗಿ ಆತನು ರಾಜಸೂಯವನ್ನು ಮಾಡಿದನು. ಈಗ ಹೇ ಕೃಷ್ಣಾ, ನೀನೆಂದ ಪ್ರಕಾರವಾಗಿ ಆ ಯೋಚನೆಯನ್ನು ಕೈಬಿಡುವುದೇ ಲೇಸು" ಎಂದನು.

ಇಷ್ಟು ಮಾತ್ರವನ್ನು ಕೇಳಿಸಿಕೊಂಡ ಭೀಮಸೇನನು ತಕ್ಷಣದಲ್ಲಿ ಎದ್ದು ನಿಂತು "ಅಣ್ಣಾ, ದೈವಾನುಗ್ರಹ ಮತ್ತು ಇಚ್ಛೆ ಇವೆರಡು ಇದ್ದರೆ ಇಲ್ಲಿ ಯಾವ ಕಾರ್ಯವು ತಾನೆ ಕಠಿಣವಾದೀತು? ರಾಜಸೂಯ ಯಜ್ಞಕ್ಕೆ ಪ್ರಬಲ ಪ್ರತಿಬಂಧಕನು ಕಲಿಯೇ. ಆ ಯಜ್ಞವನ್ನು ಪೂರ್ತಿ ಮಾಡುವವರು ಕಲಿಭಂಜಕರಾದ ಋಜುಗಣಸ್ಥರ ಹೊರತಾಗಿ

ಬೇರೊಬ್ಬರಿಂದ ಸಾಧ್ಯವಿಲ್ಲ. ಹರಿಶ್ಚಂದ್ರಾದಿಗಳೂ ಋಜುಗಳ ಆವೇಶ ಉಳ್ಳವರ ಸಹಾಯದಿಂದಲೇ ಆ ಯಜ್ಞವನ್ನು ಮಾಡಿದನು. ಇರಲಿ. ಶ್ರೀಕೃಷ್ಣನ ದಯಾ ಪಾತ್ರನಾದ ನಾನಿರಲಿಕ್ಕೆ ಈ ಯಜ್ಞವು ಯಶಸ್ಸನ್ನು ಕಾಣಲು ಸಂಶಯವಿಲ್ಲ. ಮಾಡಿದ ಸಂಕಲ್ಪವನ್ನು ಹಿಂದೆಗೆಯುವ ಮಾತೇ ಬೇಡ. ಕಲಿಯ ತರುವಾಯದ ಪಾಪಿ ಎಂದರೆ ಈ ಜರಾಸಂಧನೇ. ಇವನ ಪ್ರತಿಬಂಧಕವು ನಮಗೆ ಇದ್ದೇ ಇದೆ. ಶ್ರೀಕೃಷ್ಣನ ಕರುಣೆಯಿಂದ ನೀಗುತ್ತದೆ.

"ಸ ಏಕ ಏವ ಪುರುಷೋ। ಜರಾಸುತೋಽದ್ಯವರ್ತತೆ ॥
ಸಮಸ್ತ ಸದ್ವಿರೋಧೀನಾಂ । ಬಲಂ ಕಲೇರನಂತರಂ ॥ ೨೧-೧೦೦ ॥

ಹೇ ಅಣ್ಣಾ, ಈಗ ದುರಾತ್ಮರಲ್ಲಿ ಅಗ್ರಗಣ್ಣನಾದ ಸಮಸ್ತ ದುರಾತ್ಮರಿಗೆ ಅಧಿಪತಿಯಾದ ಆ ಜರಾಸಂಧನೊಬ್ಬನೇ ಇರುವಂತೆ ಅವನನ್ನು ಧ್ವಂಸ ಮಾಡಲು ನಾನೊಬ್ಬನೇ ಇರುವೆನೆಂದು ತಿಳಿ ಎಂದು ಹೇಳಿದನು. ಆಗ ಭಯಗ್ರಸ್ಥನಾದ ಧರ್ಮರಾಯನು ಕೃಷ್ಣನಿಗೆ ಹೇಳುತ್ತಾನೆ. "ಹೇ ವಾಸುದೇವ, ನೀನೇವೇ ಆ ಜರಾಸಂಧನ ಭಯಕ್ಕೆ ಹದಿನೆಂಟು ಸಲ ದ್ವಾರಾವತಿಯನ್ನು ಬಿಟ್ಟೋಡಿ ಸಮುದ್ರವನ್ನು ಸೇರಿದೆ. (ಶ್ರೀ ಕೃಷ್ಣನು ಜರಾ ಸ್ಕಂದನು ದಾಳಿ ಮಾಡಿದೆಂತೆಲ್ಲಾ ಒಟ್ಟಿಗೆ ಹದಿನೆಂಟು ಸಲ ದ್ವಾರಕೆಯನ್ನು ಬಿಟ್ಟು ಓಡಿಹೋದನು. ಹಾಗಾದರೆ ಕೃಷ್ಣನು ಜರಾಸಂಧನಿಗಿಂತ ದುರ್ಬಲನೇ ಅಥವಾ ಶ್ರೀಕೃಷ್ಣನಗಿಂತ ಜರಾಸಂದನು ಪ್ರಬಲನೇ ಎಂದರೆ ಸಾರ್ಥನಕ್ಕೆ ಫಲ ಕೊಡುತ್ತೇನೆಂದು ದೈವ ಸಂಕಲ್ಪವಿದೆ. ಜರಾಸಂಧನು ಬ್ರಾಹ್ಮಣರಿಗೆ ಸುವರ್ಣವನ್ನು ಯಥೇಚ್ಛವಾಗಿ ದಾನಕೊಟ್ಟು ಬಹು ಪುಣ್ಯವನ್ನು ಸಂಪಾದಿಸಿದ್ದು ಅಜೇಯನಾಗಿದ್ದನು. ಶ್ರೀಕೃಷ್ಣನು ತನಗಿಂತ ದುರ್ಬಲನು, ಹೇಡಿ ಎಂಬ ಅಯಥಾರ್ಥವಾದ ಜ್ಞಾನವನ್ನು ಹೊಂದಿ ಅವನ ಪುಣ್ಯವು ನಾಶವಾಗಲೆಂದು ಮೋಹ ಕಲ್ಪಿಸಿ ಶ್ರೀಕೃಷ್ಣನು ಪಲಾಯನ ಮಾಡಿದನು. ಅಷ್ಟೇ.) ಹೀಗಿರುವಾಗ ನಾವು ಆ ಜರಾಪೋಷಿತನನ್ನು ಹೇಗೆ ತಾನೇ ಜೈಸಬಲ್ಲೆವು? ಇರುವ ಭೀಮಾರ್ಜುನರು ನನಗೆ ಇರುವ ಎರಡು ಕಣ್ಣುಗಳಂತೆ. ಅವರನ್ನು ಕಳೆದುಕೊಂಡು ನಾನೇನು ಮಾಡಲಿ? ಆದ್ದರಿಂದ ಕೃಷ್ಣಾ, ನನಗೆ ಈ ಯಾಗವು ಬೇಡವೇ ಬೇಡವೆಂದನು. ಅದಕ್ಕೆ ಶ್ರೀಕೃಷ್ಣ ಹೇಳುತ್ತಾನೆ. "ಹೇ ಧರ್ಮನಂದನಾ, ಕೇಳು, ನೀನು ಭಯಪಡಬೇಡ. "ವ್ರಜಾಮಹೇ ಅವಯಂ ತ್ರಯಃ। ಅಹಂಚ ಭೀಮ ಫಲ್ಗುನೌ । ನಿಹಂತು ಮೇವ ಮಾಗಧಂ । ವೃಕೋದರೇಣ ಹನ್ಯತೇ । ಯದಿಸ್ಮ ಮಾಗಧಾಧಿಪಃ ॥ ಮಖಶ್ಚ ಸೇತ್ಸ್ಯಧ್ರುವಂ । ಜಗಚ್ಚ ತೇ ವಶೇ ಭವೇತ್ ॥ ೨೧ – ೧೦೮ ॥"

ನಾನು ಭೀಮ ಮತ್ತು ಅರ್ಜುನ ಮೂವರು ಕೂಡಿ ಆ ಜರಾಸಂಧನೊಡನೆ ಯುದ್ಧಕ್ಕಾಗಿ ಹೋಗುತ್ತೇವೆ. ಭೀಮನು ಆ ದುರಾತ್ಮನನ್ನು ಸಂಹರಿಸುವನು. ಇಡೀ ಜಗತ್ತು ನಿನ್ನ ವಶವಾಗುವುದು" ಎಂದು ಹೇಳಿದನು. ಈ ಮಾತನ್ನು ಕೇಳಿದ ಧರ್ಮರಾಯನು ಹರ್ಷಚಿತ್ತನಾಗಿ ಯಜ್ಞವನ್ನು ಮಾಡಲು ಇಚ್ಛಿಸಿ ಜರಾಸಂಧನ ನಿಗ್ರಹಕ್ಕಾಗಿ ಒಪ್ಪಿದನು.

ಇತ್ತ, ತರುವಾಯ ಕೃಷ್ಣ, ಭೀಮ, ಅರ್ಜುನರು ಜರಾಸಂಧನೊಡನೆ ಯುದ್ಧವನ್ನು ಮಾಡಲು ಮಾಗಧಪುರಿಗೆ ಹೊರಟರು. ಶಿವಭಕ್ತಿ ಪರಾಕಷ್ಠೆಯಲ್ಲಿ ಶಿವಲಿಂಗದಂತೆ ಇದ್ದ ಪರ್ವತಕ್ಕೆ ಬಹುಬಗೆಯ ಪುಷ್ಪಾಲಂಕಾರಗಳನ್ನು ಮಾಡಿ ಅಲ್ಲಿ ವಾಸವಾಗಿದ್ದ ಜರಾಸಂಧನ ಅರಮನೆಗೆ ಕೃಷ್ಣ, ಭೀಮಾರ್ಜುನರು ಧಾವಿಸಿದರು. ಅವರು ಆ ಪಟ್ಟಣವನ್ನು ನೇರವಾಗಿ ಮಹಾ ದ್ವಾರದಿಂದ ಪ್ರವೇಶಿಸದೇ "ಅದ್ವಾರ ತಸ್ತೇ। ನಗರಂ ಪ್ರವಿಶ್ಯ" ಎಂಬಂತೆ ಕೋಟೆಯ

ಗೋಡೆಗಳನ್ನು ಒಡೆದು ಒಳ ಪ್ರವೇಶಿಸಿದರು. ಆ ದೇಶದ ದುಷ್ಟವಾದ ಶಿಲಾಶಾಸನಗಳನ್ನು ಹುಡಿಗುಟ್ಟಿ ಬಾರಿಸಿದರೆ ಇಡೀ ಮಾಗಧ ದೇಶಕ್ಕೇ ಕೇಳಿಸುವಂಥಾ ಮೂರು ಭಯಂಕರಗಳಾದ ಭೇರಿಗಳನ್ನು ಬಾರಿಸಿದರು. ಅಂಗಡಿಯಲ್ಲಿದ್ದ ಪದಾರ್ಥಗಳನ್ನು ಅಪಹಾರ ಮಾಡಿದರು. ಪುಷ್ಪ ಮಾಲಿಕೆಯನ್ನು ಬಲಾತ್ಕಾರವಾಗಿ ಪಡೆದು ಬ್ರಾಹ್ಮಣ ವೇಷವನ್ನು ಧರಿಸಿಕೊಂಡು ಜರಾಸಂಧನ ಎದುರಿಗೆ ಬಂದು ನಿಂತರು. ಇವರನ್ನು ಕಂಡ ಜರಾಸಂಧನು ಆಶ್ಚರ್ಯಭರಿತನಾದನು. ಇದೇನಿದು? ಇವರು ವೇಷದಲ್ಲಿ ಬ್ರಾಹ್ಮಣರು ಮೈಕಟ್ಟನ್ನು ನೋಡಿದರೆ ಇವರು ಕ್ಷತ್ರಿಯರಲ್ಲದೆ ಬೇರೆಯಲ್ಲ ಎಂದು ತಿಳಿದು ಅವರನ್ನು ಕುರಿತು "ಕೇಷ್ಠಾಥ ಕಿಂ ಹೇತುತ ಆಗತಾಷ್ಠ?" ನೀವು ಯಾರು? ಯಾವ ಅಪೇಕ್ಷೆಯಿಂದ ಇಲ್ಲಿಗೆ ಬಂದಿರುವಿರಿ? "ಕುತಶ್ಚಮೇ ಪರ್ವತ ಲಿಂಗಭೇದನಂ? "ನನ್ನ ಆರಾಧ್ಯ ದೈವವಾದ ಲಿಂಗದಂತಿರುವ ಪರ್ವತವನ್ನು ಏತಕ್ಕಾಗಿ ಭಂಗಿಸಿದಿರಿ? ಕೃತಂಭವದ್ಧಿಃ ಕುತ ಏವ ದುರ್ನಯಾ" ಅತಿಯಾದ ದುರ್ನಡತೆಯುಳ್ಳ ನೀವು ಏತಕ್ಕಾಗಿ ಇಲ್ಲಿಗೆ ಬಂದಿರುವಿರಿ? **"ಕೃತಾಸ್ಥತಾನ್ಯೇ ದ್ವಿಜ ವರ್ಯ ವೇಷ್ಟೇಃ"** ಬ್ರಾಹ್ಮಣ ವೇಷಧಾರಿಗಳಾದ ನೀವು ಏತಕ್ಕಾಗಿ ಇಂಥಾ ಹಾನಿಯನ್ನು ಮಾಡಿದಿರಿ? ಎಂದು ಕೇಳಿದನು. ಅದಕ್ಕೆ ಕೃಷ್ಣನು" **ಕಾರ್ಯಂ ಶತ್ರೋದಖಿಲಂ ಪ್ರತೀಪಂ"** ಶತ್ರುವಿನ ಪ್ರತೀಕಾರಕ್ಕಾಗಿ ನಾವು ಇಲ್ಲಿಗೆ ಬಂದು ಈ ಕೃತ್ಯವನ್ನೆ ಸಾರಿದ್ದೇವೆ ಎಂದು ಹೇಳಿದನು. ಅದಕ್ಕೆ ಜರಾಸಂಧನು **"ನಹಿ ಶತ್ರುರಹಂ ವಿಪ್ರೋ। ಕುತೋವಾ ಮಮ ಶತ್ರುತಾ ಭವೇತ್"**. ಬ್ರಾಹ್ಮಣರಿಗೆ ಶತ್ರುವೇ ಅಲ್ಲದ ನಾನು ಅದ್ಹೇಗೆ ನಿಮ್ಮ ಶತ್ರುವಾದೆ? ಎಂದು ಕೇಳಿದನು. ಅದಕ್ಕೆ ಕೃಷ್ಣನು ಹೇಳಿದನು. **"ಮದ್ಬಾಂಧವಾನ್ನಃ । ಪಿಶಿತಾಶಿ ಧರ್ಮತೋ। ರೌದ್ರೇ ಮಖೇ ಕಲ್ಪಯಿತುಂ ಪಶುತ್ವೇ॥"** ಎಲೊ ಜರಾಸಂಧನೇ, ನೀನು ನಿರಪರಾಧಿಗಳೂ ಧರ್ಮಭೀರುಗಳೂ ಆದ ನನ್ನ ಬಂಧುಗಳನ್ನು ಅಧರ್ಮದಿಂದ ಸೆರೆಹಿಡಿದು ವಾಮಾಚಾರವೇ ಆದ ಮಹಾರುದ್ರ ಯಾಗವನ್ನು ಹಮ್ಮಿಕೊಂಡು ರುದ್ರದೇವರಿಗೆ ಅವರನ್ನು ಬಲಿಕೊಡಲು ಹವಣಿಸಿರುವಿ. ಈಗ ನೀನು ಅವರನ್ನು ಬಿಟ್ಟು ಬಿಡು ಇಲ್ಲವೇ ನಮ್ಮೊಡನೆ ಯುದ್ಧ ಮಾಡು. ನಾನು ಕೃಷ್ಣನೂ, ಈತನು ಭೀಮನೂ ಮತ್ತು ಈತನು ಅರ್ಜುನನೂ ಇರುವೆವು. ನೀನು ಈ ಮೂವರಲ್ಲಿ ಯಾರೊಬ್ಬರನ್ನಾದರೂ ಸಾಯುಧ, ನಿರಾಯುಧ, ಸಸೈನ್ಯ ಅಥವಾ ನಿಃಸೈನ್ಯಯುತನಾಗಿ ಹೋರಾಡಬಹುದು. ನಿನಗಿಷ್ಟ ಬಂದದ್ದನ್ನು ಆರಿಸಿಕೋ" ಎಂದು ಹೇಳಿದನು.

ಜರಾಸಂಧನು **"ನಹಿ ವಿಪ್ರ ಶತ್ರುರಹಂ"**– ನಾನು ಬ್ರಾಹ್ಮಣ ಶತ್ರುವಲ್ಲ" ಎಂದು ಯಾಕೆ ಹೇಳಿದನೆಂದರೆ ಅವನು ಮಹಾರುದ್ರ ಯಾಗವನ್ನು ಕೈಕೊಂಡು ಅದರಲ್ಲಿ ಸಮಸ್ತ ಕ್ಷತ್ರಿಯರನ್ನು ಬಲಿಕೊಡಬೇಕೆಂದು ಬಯಸಿದ್ದನು. ಯಜ್ಞವು ಯಶಸ್ವಿಯಾಗಬೇಕಾದರೆ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನವನ್ನು ಕೊಡಬೇಕು. ಬ್ರಾಹ್ಮಣರಿಂದಲೇ ಮಂತ್ರಪಠಣವಾಗಬೇಕು. ಅದಕ್ಕಾಗಿ ಮಾತ್ರ ಅವನು ಬ್ರಾಹ್ಮಣರನ್ನು ಸಾಕಿದ್ದನು. ಅವರಿಗೆ ಭೂದಾನ, ಗೋದಾನ ಅತಿಶಯವಾಗಿ ಹಿರಣ್ಯದಾನವನ್ನು ಕೊಟ್ಟಿದ್ದನು. ಕೊಡುತ್ತಲೂ ಇದ್ದನು. ಸದಾಚಾರಿಗಳಾದ ಬ್ರಾಹ್ಮಣರಿಂದಲೇ ತನ್ನ ಕಾರ್ಯಸಿದ್ಧಿ ಎಂದು ತಿಳಿದು ಅವರು ಸದಾಚಾರಿಗಳಾಗಿ ಇರಲು ನಿರ್ಬಂಧವನ್ನು ವಿಧಿಸಿದ್ದನು. ಬ್ರಾಹ್ಮಣರಿಗೆ ಇವನಿಂದ ಕೊಡಲ್ಪಟ್ಟಷ್ಟು ದಾನವು ಮತ್ತಾರಿಂದಲೂ ಸಿಕ್ಕಿರಲಿಲ್ಲ ಎನಿಸಿದ್ದನು. ಕಾರ್ಯವು ಒಳ್ಳೆಯದಾದರೂ ಉದ್ದೇಶವು ಮಾತ್ರ ಘೋರವಾಗಿತ್ತು. ಹಿರಣ್ಯ ದಾನ ರಾಜ ಬಲಿಗಳಿಂದ ರುದ್ರನನ್ನು ಮೆಚ್ಚಿಸಿ ವರಬಲದಿಂದ ಕೃಷ್ಣನನ್ನು ಸಂಹರಿಸಬೇಕು. ಎಂಬುದೇ ಅವನ ಉದ್ದೇಶವಾಗಿತ್ತು. ಹಿಂದೊಮ್ಮೆ ಇವನು ಇಂತಹ ಯಾಗವನ್ನು ಮಾಡಿ ರುದ್ರನಿಂದ ಮಹಾಗದೆಯನ್ನು ಪಡೆದು ದ್ವಾರಕೆಯ ಮೇಲೆ ಪ್ರಯೋಗಿಸಿದ್ದನು. ಆದರೆ ದ್ವಾರಕೆಯ ದೂರವನ್ನು ನಾರದರ ಮುಖದಿಂದ ತಪ್ಪಾಗಿ ತಿಳಿದು ಗದಾಪ್ರಹಾರವನ್ನು ಮಾಡಿದ್ದನು. ಆ ಪ್ರಹಾರದ ತಪ್ಪಿನ ಫಲವಾಗಿಯೇ ಇವನ ಸಾಕು ತಾಯಿಯಾಗಿದ್ದ ಜರಾನಾಮಕಳಾದ ದೈತ್ಯಳನ್ನು ಸಮೂಲವಾಗಿ ಸಪರಿವಾರ ಸಮೇತವಾಗಿ ನಾಶಮಾಡಿ

ಕೈಲಾಸಕ್ಕೆ ತೆರಳಿ ಬಿಟ್ಟಿತು. ಇವನು ಕೈಕೊಂಡ ದುರುದ್ದೇಶದ ಸತ್ಕಾರ್ಯವು ಪಾಪಮಯವಾದುದೇ ಹೊರತಾಗಿ ಬೇರೆಯಲ್ಲ. **"ಪಾಪಿಗಳ ಸತ್ಪುಣ್ಯ ಕರ್ಮವು ಪಾಪವೆನಿಸುವುದು॥ ಹ.ಕ.ಸಾ॥" "ಬಲಿರಾಯ ಮುಕುಟ ಕದ್ದೊಯ್ಯೆ ಪಾತಾಳಕ್ಕೆ ಸಲೆ ಭಕ್ತನೆಂದು ಬಾಗಿಲ ಕಾಯಿದೇ ॥ ಇಳೆಯೊಳು ಸುರರಿಗೆ ಗೋ ಭೂ ಹಿರಣ್ಯವನಿತ್ತ। ಖಳ ಜರಾಸಂಧನ ಕೊಲಿಸಿದೆ ಹೋಗೀ ॥ ನಿನ್ನವರಾಽಧರ್ಮ ವಿಹಿತವಾವುವದು ಮ । ತ್ತನ್ಯರಾಚರಿಸಿದ ಧರ್ಮ ಅಧರ್ಮ ॥"** (ಶ್ರೀಜ.ದಾಸರು).

ಒಂದು ವಿಧದಲ್ಲಿ ಬ್ರುಹದ್ರಥನ ತನಯನಾದ ಜರಾಸಂಧನು ಬ್ರಾಹ್ಮಣರನ್ನೂ ಸೆರೆಹಿಡಿದಿಟ್ಟಿದ್ದನೆನ್ನಬಹುದು. ಹೇಗೆಂದರೆ ದುಷ್ಟಾನ್ನ (ರುದ್ರ ನಿವೇದಿತ, ಮೃಷ್ಟಾನ್ನ, ರುದಾರ್ಪಿತ)–ದುಷ್ಟ ದಾನಗಳಿಂದ ಮತ್ತು ಶಿವರಾತ್ರಿಯಂದು ಉಪವಾಸ ಜಾಗರಣೆಗಳನ್ನು ಕಡ್ಡಾಯಗೊಳಿಸಿದ್ದನು ಮತ್ತು ಶ್ರೀಹರಿಯ ನಾಮೋಚ್ಚಾರಣೆಯು ಮರಣದಂಡನೆಗೆ ಗುರಿಯಾಗಿತ್ತು. ಇಂಥಾ ಜರಾಸಂಧನನ್ನು ಶ್ರೀಕೃಷ್ಣನು ಯುದ್ಧಕ್ಕೆ ಆಹ್ವಾನಿಸಿದನು. ಅವನು ಕರ್ಮದಿಂದ ಬ್ರಾಹ್ಮಣಪ್ರಿಯನಾಗಿ ಧರ್ಮ(ಜ್ಞಾನ)ದಿಂದ ಬ್ರಾಹ್ಮಣರ ದ್ವೇಷಿಯೂ ಆಗಿದ್ದನು ಮತ್ತು "ನಿನ್ನನ್ನು ಸಂಹರಿಸಲು ನಾರುಡೆಯ ಬ್ರಾಹ್ಮಣರೇ ಸಾಕು ಎನ್ನಲಿಕ್ಕೆ ನಾವು ವಿಪ್ರವೇಷದಿಂದ ಬಂದಿದ್ದೇವೆ. (ದುಶ್ಶಾಸ್ತ್ರ ನಿಮಿತ್ತ ಪ್ರಬಲ ಪ್ರತಿವಾದಿಯಾದ ನಿನ್ನನ್ನು ಬ್ರಾಹ್ಮಣರು ಸಚ್ಛಾಸ್ತ್ರ ಶಸ್ತ್ರದಿಂದ ನಿಗ್ರಹಿಸ ಬಲ್ಲರೆಂದು ತಾತ್ಪರ್ಯ). ನಿನ್ನನ್ನು ಸೈನ್ಯವಿಲ್ಲದೇ ಸಂಹರಿಸ ಬಲ್ಲೆವೆಂದು ನಾವು ನಿಃಸೈನಿಕರಾಗಿಯೇ ಬಂದಿದ್ದೇವೆ. ನಿನ್ನನ್ನು ಸಂಹರಿಸಲು ಯಾವ ಆ ಯುಧವೂ ಬೇಡವೆಂದು ನಿರಾಯುಧರಾಗಿಯೂ ನಾವು ಬಂದಿದ್ದೇವೆ. ನೀನು ಬೇಕಾದರೆ ಸೈನ್ಯವನ್ನೊಡಗೊಂಡು ಬಾ. ಅಥವಾ ನಿಸ್ಸೈನ್ಯದಿಂದಲಾದರೂ ಸರಿ. ಶಸ್ತ್ರದಿಂದ ಯುಕ್ತನಾಗಿಯಾದರೂ ಬಾ. ಇಲ್ಲವಾದರೆ ಮೊದಲೇ ಹೇಳಿದಂತೆ ರಾಜಕುವರರನ್ನು ಮುಕ್ತರನ್ನಾಗಿ ಮಾಡಿ ಧರ್ಮರಾಜನಿಗೆ ಶರಣಾಗತನಾಗಿ ಕಪ್ಪವನ್ನು ನೀಡು" ಎಂದು ಹೇಳಿದನು.

ಇಷ್ಟು ಮಾತುಗಳನ್ನು ಕೇಳಿದ ಜರಾಸಂಧನು **"ಜಾನನ್ ಕೃಷ್ಣೋಣಬಲಂ ಘೋರಂ"** ಎಂದಂತೆ ದುರಂತ ಶಕ್ತನಾದ ಶ್ರೀಕೃಷ್ಣನೊಡನೆ ಹೋರಾಡಿದರೆ ಕ್ಷಣಾರ್ಧದಲ್ಲಿ ನನ್ನ ಕಥೆಯು ಮುಗಿಯುತ್ತದೆ. ಅರ್ಜುನನಲ್ಲಿ ಹೋರಾಡಿ ಸೋತರೆ ಅಪಮಾನವಾಗುತ್ತದೆ. ಗೆದ್ದರೂ ಚಿಕ್ಕವನನ್ನು ಸೋಲಿಸಿದುದಕ್ಕೆ ಮಾನವು ಬರುವುದಿಲ್ಲ. ಏನಾದರಾಗಲಿ ಭೀಮನೇ ನನಗೆ ಸಮಾಳೆಂದು ಭಾವಿಸಿ ತಾನು ಭೀಮನೊಡನೆ ಹೋರಾಡುವೆನೆಂದು ಹೇಳಿದನು. ಜರಾಸಂಧನು ಭೀಮನನ್ನೇ ಯುದ್ಧಕ್ಕೆ ಆಯ್ದು ಕೊಳ್ಳುವುದಕ್ಕೆ ಮುಖ್ಯ ಕಾರಣವೆಂದರೆ ಋಜುಗಣಸ್ಥರ ದ್ವೇಷವು ದೈತ್ಯರಿಗೆ ಸಮಿಚೀನವಾದುದು. ತರುವಾಯ ಭೀಮನೊಡನೆ ಮುಷ್ಟಿ ಯುದ್ಧಕ್ಕೆ ಒಳಗೊಳಗೆ ಹೆದರಿ ಯುದ್ಧವು ಅಸಾಧ್ಯವೆಂಬುದು ಧೃಡವಾಗಿದ್ದರೂ ಕೇವಲ ವೈಷ್ಣವ ದ್ವೇಷ ಭೂ ಇಷ್ಟ ಮಾತ್ರದಿಂದಲೇ ಯುದ್ಧಕ್ಕೆ ಸನ್ನದ್ಧನಾಗಿ ಭೀಮನನ್ನು ಗದಾಯುದ್ಧಕ್ಕಾಗಿ ಕರೆದನು. ತಾನೊಂದು ಗದೆಯನ್ನು ಧರಿಸಿ ಭೀಮನಿಗೂ ಒಂದು ಗದೆಯನ್ನು ನೀಡಿದನು. ಇಲ್ಲಿ ಗದಾಯುದ್ಧದ ಪ್ರಾವೀಣ್ಯತೆಯ ಪ್ರದರ್ಶನವು ಸ್ಪರ್ಧೆಯಾಗಿತ್ತು. ಜರಾಸಂಧನು ಶಿವಸರ್ವೋತ್ತುಮತ್ವ ಘೋಷಣೆಯಿಂದ ಯುದ್ಧವನ್ನಾರಂಭಿಸಿದರೆ ಭೀಮನು ವೇದಶಾಸ್ತ್ರ ವಚನಗಳಿಂದ ಹರಿಸರ್ವೋತ್ತುಮತ್ವ ಘೋಷಣೆಯಿಂದ ಯುದ್ಧವನ್ನಾರಂಭಿಸಿದನು. ಈ ವಾಗ್ವಾದಲ್ಲಿ ಭೀಮನು ಸಹಜವಾಗಿಯೇ ಗೆದ್ದನು. ಗದಾಯುದ್ಧವು ಪ್ರಾರಂಭವಾಯಿತು. ಭೀಮ ಜರಾಸಂಧರಿಬ್ಬರ ಶರೀರಗಳು ವಜ್ರಾತ್ ಕಠಿಣಗಳಾಗಿದ್ದುದರಿಂದ ಪರಸ್ಪರರು ಹೊಡೆದ ಗದೆಗಳು ಅವರ ಶರೀರವನ್ನು ತಾಕಿ ಬಣೆಚು ಕಲ್ಲಿನ ಚೂರುಗಳಂತೆ ಪುಡಿಪುಡಿಯಾದುವು. ಇಬ್ಬರ ಗದೆಗಳೂ ಪುಡಿ ಪುಡಿಯಾದ ಮೇಲೆ **"ವೀರಾಮುಷ್ಟಿಭಿರ್ಜಘ್ನತುರ್ಮಿಥ"** ಎಂದಂತೆ ಅವರು ಮುಷ್ಟಿ ಯುದ್ಧಕ್ಕೆ ತೊಡಗಿದರು.

ಬ್ರಹ್ಮಾಂಡವು ಸ್ಫೋಟವಾಗುವ ರೀತಿಯಲ್ಲಿ ಕೇಶವ-ಕೈಟಭರಂತೆ ಭೀಮ-ಜರಾಸಂಧರು ಹೋರಾಡಿದರು. ಭೂಮಿಯು ಬೆದರಿತು. ಕುಲಗಿರಿಗಳಲ್ಲಾಡಿದುವು. ಬ್ರಹ್ಮ ರುದ್ರೇಂದ್ರಾದಿ ದೇವತೆಗಳೂ, ದಾನವರೂ ಗಗನ ಮಂಡಲದಲ್ಲಿ ನಿಂತು ಇವರ ಕದನವನ್ನು ಎವೆ ಇಕ್ಕದೆ ನೋಡಿದರು. ದೇವತೆಗಳು ಭೀಮಸೇನನಿಗೆ ಜಯಕಾರವನ್ನು ಹಾಕಿದರೆ ದೈತ್ಯರು ಜರಾಸಂಧನಿಗೆ ಜಯಕಾರಗಳನ್ನು ಹಾಕುತ್ತಿದ್ದರು. ಇಂತು ಇವರೀರ್ವರ ಹೋರಾಟವು ಹದಿನೈದು ದಿನಗಳವರೆಗೆ ಸಾಗಿತು. ಬ್ರಹ್ಮದೇವರ ವರದ ದೆಸೆಯಿಂದ ಭೀಮನು ಜರಾಸಂಧನನ್ನು ಕೊಲ್ಲದೆ ಯುದ್ಧ ಮಾಡಿದನು. ಹದಿನೈದು ದಿನಗಳ ತರುವಾಯ ಬ್ರಹ್ಮನವರ ಮರ್ಯಾದೆಯು ಮುಗಿದ ತಕ್ಷಣವೇ ಭೀಮನು ಶ್ರೀಕೃಷ್ಣನಿಗೆ ನಮಸ್ಕರಿಸಿ ಅರ್ಜುನನನ್ನು ಆಲಂಗಿಸಿ ಪುನಃ ಜರಾಸಂಧನೊಡನೆ ಯುದ್ಧಕ್ಕೆ ಬಂದನು.

ಮೂಲತಃ ಜರಾಸಂಧನು ವಿಪ್ರಚಿತ್ತಿನಾಮಕ ದೈತ್ಯನು. ("ಜರಾಸಂಧೋ ವಿಪ್ರಚಿತ್ತಿಃ" ಪ.ಪು.) ಇವನು ಕಲಿಭಾರ್ಯೆಯ ತರುವಾಯ ದೈತ್ಯ ತಾರತಮ್ಯದಲ್ಲಿ ಮೂರನೇ ಕಕ್ಷದವನು. ಕಲಿಭಾರ್ಯೆಗಿಂತ ನೂರು ಗುಣ ನೀಚನಾದವನು). ಇವನು ಹುಟ್ಟಿದಾಗ ಎರಡು ಹೋಳಾಗಿ ಬಿದ್ದಿದ್ದುದರಿಂದ ಇವನ್ನು ತಿಪ್ಪೆಗೆ ಬಿಸಾಡಿದ್ದರು. ಆ ಸ್ಥಳದಲ್ಲಿ ರಾತ್ರಿಯಲ್ಲಿ ಸಂಚರಿಸುತ್ತಿದ್ದ ಜರಾನಾಮಕ ದೈತ್ಯಳು ಎರಡು ಹೋಳುಗಳನ್ನು ಜೋಡಿಸಲಾಗಿ ಅಲ್ಲಿ ಪ್ರಾಣವು ಬಂದಿತು. ತಕ್ಷಣವೇ ಅವಳನ್ನು ಹೊಂದಿ ಅವಳಿಂದ ಪೋಷಿತನಾದ ಈ ದೈತ್ಯನು ಜರಾಸಂಧನೆಂದು ಪ್ರಸಿದ್ಧನಾಗಿ ಮಗಧ ದೇಶಕ್ಕೆ (ಬಿಹಾರ) ರಾಜನಾಗಿದ್ದನು. ಹದಿನಾರನೇ ದಿನದ ಯುದ್ಧದಲ್ಲಿ ಭೀಮನು ಜರಾಸಂಧನನ್ನು ಸೀಳಿ ಹುಟ್ಟಿನಲ್ಲಿ ವಿರುದ್ಧ ದಿಕ್ಕಿನಲ್ಲಿ ಬಿದ್ದಿದ್ದ ಶರೀರ ಭಾಗಗಳಂತೆ ಇವನ ಶರೀರ ದ್ವಯ ಭಾಗಗಳನ್ನು ವಿರುದ್ಧ ಭಾಗದಲ್ಲಿ ಅಂದರೆ ಒಂದು ಭಾಗದ ಕಾಲು ಮತ್ತೊಂದು ಭಾಗದ ತಲೆ ತಾಗುವಂತೆ ಬಿಸಾಡಿದನು. ಅಲ್ಲಿಗೆ ಜರಾಸಂಧನ ಉಪಟಳವು ನಂದಿ ಹೋಯಿತು. ಜರಾಸಂಧನು ಅಂಧಂತಮಸ್ಸಿನ ಹಾದಿಯನ್ನು ಹಿಡಿದನು. ಇತ್ತ ಶ್ರೀಕೃಷ್ಣ ಭೀಮಾರ್ಜುನರ ದಯೆಯಿಂದ ಮೃತ್ಯು ಸನ್ನಿಹಿತರಾಗಿದ್ದ ರಾಜಕುಮಾರರು ಕಾರಾಗೃಹದಿಂದ ಮುಕ್ತರಾದರು. ಭೀಮಸೇನನು ದುಷ್ಟ ಸಂಹಾರ ರೂಪವಾದ ಯಜ್ಞವನ್ನು ಮಾಡಿ ಶ್ರೀಕೃಷ್ಣನಿಗೆ ಅರ್ಪಿಸಿದನು. ಮತ್ತು ಅರ್ಜುನನಿಂದ ನಮಸ್ಕೃತನಾದನು. ಹೀಗೆ ಭೀಮಸೇನನಿಗೆ ಭಗವತ್ಪ್ರೀತ್ಯರ್ಥವಾಗಿ ರುದ್ರ, ಬ್ರಹ್ಮದೇವರ ವರಗಳನ್ನು ಉಲ್ಲಂಘಿಸುವ ಸಾಮರ್ಥ್ಯವಿರುವುದನ್ನು ಭೀಮನು ಪ್ರಕಟಿಸಿದನು. ಜರಾಸಂಧನ ಸಂಹಾರಾನಂತರದಲ್ಲೇ ಜರಾಸಂಧನ ಪುತ್ರಿಯಾದ ಪಾರ್ವತಿ ಎಂಬುವಳನ್ನು ಸಹದೇವನೆಂಬ ಜರಾಸಂಧನ ಪುತ್ರನು (ಮುಕ್ತಿಯೋಗ್ಯನು) ಭೀಮನ ತಮ್ಮನಾದ ಸಹದೇವನಿಗೆ ಇತ್ತು ಮದುವೆ ಮಾಡಿದನು. (ಅಶ್ವಿನೀ ದೇವತೆಗಳ ಪತ್ನಿಯಾದ ಉಷಾ ಈಕೆಯು ಈ ಮೊದಲೇ ಹೇಳಿದಂತೆ ನಕುಲನ ಪತ್ನಿ ಕರೇಣುಕಾ ಎನಿಸಿದಳು. ಮತ್ತು ಈಕೆಯೇ ಶಲ್ಯನ ಪುತ್ರಿಯು. ಈಕೆಯೇ ಸಹದೇವನ ಪತ್ನಿ ಪಾರ್ವತಿ ಎನಿಸಿ ಜರಾಸಂಧನ ಪುತ್ರಿಯಾಗಿಯೂ ಅವತರಿಸಿದಳು. ಆದರೆ ಇದೇ 'ಉಷಾ' ನಾಮಕಳಾದ ಬಾಣಸುರನ ಪುತ್ರಿಯು ಹತ್ತನೇ ಕಕ್ಷದ ಮಾರ ಪುತ್ರನಿರುದ್ಧನ ಪತ್ನಿಯು. ಸುತಾರಂ ಇವರು ಬೇರೆ ಬೇರೆಯವರೇ. ಅಂದರೆ ಶಲ್ಯ-ಜರಾಸಂಧರ ಪುತ್ರಿ ಉಷಾ (ಎರಡು ರೂಪಯುಕ್ತಳು) ಮತ್ತು ಬಾಣಾಸುರನ ಪುತ್ರಿ ಉಷಾ ಇವರು ಬೇರೆ ಬೇರೆ ಎಂದರ್ಥ. ಬ್ರಾಹ್ಮಣರಿಗೆ ಶ್ರೀಹರಿಯ, ನಾಮಾ ನೈವೇದ್ಯಗಳು ಪ್ರಾಪ್ತವಾದುವು.

ಜರಾಸಂಧನ ಮರಣಾನಂತರದಲ್ಲಿ ಭೀಮನು ಅತುಳವಾದ ಐಶ್ವರ್ಯವನ್ನು ತಂದು ಧರ್ಮರಾಜನಿಗೆ ಒಪ್ಪಿಸಿದನು. ತರುವಾಯ ಇತರ ರಾಜರನ್ನು ಸೋಲಿಸಿ ಧನಸಂಗ್ರಹಣ ಮಾಡಲು ವೇದವ್ಯಾಸರು ಭೀಮನನ್ನೇ ನೇಮಿಸಿದರು. ಆಗ ಅರ್ಜುನನು ನಾನೇಕೆ ಹೋಗಬಾರದು? ಆ ಕೆಲಸವು ನನ್ನಿಂದಾಗದೇ? ಎಂದು ಕೇಳಿದನು.

ಅದಕ್ಕೆ ಶ್ರೀವ್ಯಾಸರು ಹೇಳಿದರು. ಸಾಧಾರಣವಾದ ರಾಜರನ್ನು ಅರ್ಜುನನು ಜೈಸಬಹುದು. ಆದರೆ ಕೀಚಕ (ಹರ ವರಯುಕ್ತ), ಕರ್ಣ (ಕವಚ-ಕುಂಡಲಯುಕ್ತ), ಬಾಣಾಸುರ (ಕೀಚಕ ಬಾಣಾಸುರ ಇಬ್ಬರೂ ಒಂದೇ. ದೇವತೆಗಳಂತೆ ದೈತ್ಯರೂ ಸಾಂಶರೇ. ಏಕಕಾಲದಲ್ಲಿ ಬಹುರೂಪಗಳಿಂದ ಹುಟ್ಟಬಲ್ಲರು. ಯಮಧರ್ಮನು ಹೇಗೆ ಧರ್ಮರಾಯ- ವಿದುರ ಎಂಬುದಾಗಿ ಹುಟ್ಟಿದ್ದನೋ ಹಾಗೇ ಕೀಚಕ-ಬಾಣಾಸುರ ಇಬ್ಬರೂ ಒಂದೇ. "ಬಾಣಾಸ್ತು ತತ್ಸಮೋಜ್ಞೇಯ। ಕೀಚಕೋ ನಾಮ ದೈತ್ಯರಾಟ್)" (ಗಾರುಡೇ, ಬ್ರಹ್ಮಕಾಂಡೇ). ಶಕುನಿಯು ಸಾಮಾನ್ಯನಲ್ಲ. ಪೌಂಡ್ರಕ ಶಿಶುಪಾಲರು (ಜಯಾಽವಿಷ್ಟ) ಕೃಷ್ಣನಿಗೆ ಮೀಸಲಾದವನು. ಇವರೆಲ್ಲರನ್ನೂ ಈಗ ನಿಗ್ರಹಿಸಲು ಸಾಧ್ಯವಿಲ್ಲ. ಈಗಲೇ ಭೀಮನಿಂದಲೂ ಕಷ್ಟವೇ. ಅಂದರೆ ಈಗ ಅವರ ವಧೆಯು ಸಕಾಲವಲ್ಲ ಮತ್ತು ಇವರು ಅರ್ಜುನನಿಗೆ ಹೆದರುವವರಲ್ಲ. ಭೀಮನಾದರೂ ಇವರೆಲ್ಲರಲ್ಲಿ ಈಗಾಗಲೇ ಜರಾಸಂಧನ ಪ್ರಕರಣದಿಂದ ಭೀತಿಯನ್ನು ಹುಟ್ಟಿಸಿರುತ್ತಾನೆ. ಆದ್ದರಿಂದ ಈಗ ಎಲ್ಲರೂ ಭೀಮನಿಗೆ ಹೆದರಿ ತಪ್ಪದೇ ಕಾಣಿಕೆಯನ್ನು ನೀಡುತ್ತಾರೆ. ರಾಜರು ಯುದ್ಧ ಮಾರ್ಗವನ್ನು ಬಿಟ್ಟು ಹೆದರಿ ಕಪ್ಪವನ್ನು ಕೊಡುವುದರಿಂದ ಜೀವಹನನವೂ ತಪ್ಪುತ್ತದೆ. ಆದ್ದರಿಂದ ಭೀಮನೇ ಹೋಗಲಿ ಎಂದು ಸಲಹೆಯನ್ನು ನೀಡಿದರು. ದೇವರ ಮಾತಿಗೆ ಅರ್ಜುನಾದಿ ಸಕಲರೂ ಒಪ್ಪಿದರು. ಇವರು ಬೇರೆ ಬೇರೆ ದಿಕ್ಕುಗಳಲ್ಲಿ ದಿಗ್ವಿಜಯ ಮಾಡಿದರು.

ಭೀಮಸೇನನು ಸಕಲ ರಾಜಾಧಿರಾಜರನ್ನು ಸಂಧಿ, ಸಂಧಾನ ಸಮರಗಳಿಂದ ಜೈಸಿ ಅನುಪಮ ಐಶ್ವರ್ಯವನ್ನು ತಂದೊಡ್ಡಿದನು. ರಾಜಸೂಯ ಯಾಗವನ್ನ ಮಾಡಲಿಕ್ಕೆ ಋಜುಗಳೇ ಮುಖ್ಯ ಅಧಿಕಾರಿಗಳು ಮತ್ತು ಫಲಭಾಗಿಗಳು.

ಶ್ರೀವೇದವ್ಯಾಸರ ಆಜ್ಞೆಯಂತೆ ಯುಧಿಷ್ಠಿರನು ದೀಕ್ಷಾಬದ್ಧನಾಗಿ ಯಜ್ಞ ಕಾರ್ಯಕ್ಕೆ ನೀಯೋಜಿಸಲ್ಪಟ್ಟನು. ಆ ಯಜ್ಞ ಶಾಲೆಯೋ ರತ್ನ, ವಜ್ರ, ವೈಢೂರ್ಯ, ಹೇಮ, ಚೀರ್ಣಾಂಬರ, ಮುತ್ತು ರತ್ನಗಳಿಂದ ಅಲಂಕೃತವಾಗಿತ್ತು. ಶ್ರೀ ಕೃಷ್ಣನ ಷಣ್ಮಹಿಷಿಯರೂ, ಹದಿನಾರು ಸಾವಿರ ಗೋಪಿಕಾಸ್ತ್ರೀಯರೂ, ಸಪ್ತೋತ್ತರ ಅನೇಕ ಋಷಿಗಳೂ, ಋಷಿ ಪತ್ನಿಯರೂ, ಅಷ್ಟದಿಕ್ಪಾಲಕರೂ, ಅಸಂಖ್ಯಾತ ರಾಜ, ರಾಜಪರಿವಾರದವರೂ ಭಾಗವಹಿಸಿದ್ದರು. ಕೌರವರು ತಮ್ಮ ಪರಿವಾರದೊಂದಿಗೆ ಎಡಭಾಗದಲ್ಲೂ, ಪಾಂಡವರ ಪರರಾದವರು ಬಲಭಾಗದಲ್ಲೂ ರೀವಿಯಿಂದ ಆಸನಾ ರೂಢರಾಗಿ ಕುಳಿತಿದ್ದರು. ಪರಮಾತ್ಮನು ಶ್ರೀವ್ಯಾಸ, ಕೃಷ್ಣ, ಪರಶುರಾಮನೆಂಬ ಮೂರು ರೂಪಗಳಿಂದ ಆ ಸಭಾಮಂಟಪದಲ್ಲಿ ವಿರಾಜಮಾನನಾಗಿದ್ದನು. ಸಭೆಯಲ್ಲಿ ನಾನಾ ವಿಧವಾದ ಚರ್ಚೆಗಳು, ಧಾರ್ಮಿಕ ಪ್ರಶ್ನೋತ್ತರಗಳು ವಿಪುಲವಾಗಿ ನಡೆದುವು. ಧರ್ಮರಾಜನು ಸಮಸ್ತ ಜನಗಳಿಗೆ ಅವರವರ ಮರ್ಯಾದೆಗೆ ತಕ್ಕಂತೆ ಆಸನ ಭೋಜನ ಮೊದಲಾದವುಗಳನ್ನು ಸುವ್ಯವಸ್ಥಿತವನ್ನಾಗಿ ಮಾಡಿಸಿದ್ದನು.

ರಾಜಸೂಯ ಯಾಗದಲ್ಲಿ, ಯಾರಿಗೆ ಅಗ್ರಪೂಜೆಯು ಸಲ್ಲಬೇಕು? ಎಂದು ಧರ್ಮರಾಯನು ಜೇಷ್ಠತ್ವ ಗೌರವದಿಂದ ಭೀಷ್ಮಾಚಾರ್ಯರನ್ನು ಪ್ರಶ್ನಿಸಿದನು. ಆಗ ಆನಂದಪುಳಕಿತರಾದ ಭೀಷ್ಮರು ಎದ್ದು ನಿಂತು ವೇದ, ಉಪನಿಷತ್ತು, ಪಂಚರಾತ್ರಾಗಮಾದಿಗಳಿಂದಲೂ, ಪುರಾಣಗಳಿಂದಲೂ ಶ್ರೀಕೃಷ್ಣನನ್ನು ಪರಮಾತ್ಮನಿಗೆ ಅಭೇದವನ್ನೂ, ಸರ್ವೋತ್ತಮತ್ವವನ್ನೂ ಪ್ರತಿಪಾದಿಸಿ, ಶ್ರೀಕೃಷ್ಣನೇ ಅಗ್ರಪೂಜಾರ್ಹನೆಂದು ತೀರ್ಮಾನವನ್ನಿತ್ತರು. ಭೀಷ್ಮಾಚಾರ್ಯರ ಉಪನ್ಯಾಸವನ್ನು ಕೇಳಿದ ಕೌರವ ಪಾಂಡವರ ಕಣ್ಣುಗಳು ಬಾಷ್ಪಗಳನ್ನು ಉದುರಿಸಿದುವು. ಭೀಷ್ಮಾಚಾರ್ಯರ ಉಪನ್ಯಾಸವು ಮುಗಿಯುತ್ತಿದ್ದಂತೆ ಚೈದ್ಯನೆಂಬ ಬಿರುದಾಂಕಿತನಾದ ಶಿಶುಪಾಲನು ಭೀಷ್ಮರನ್ನೂ ಮೀರಿಸುವಷ್ಟು

ಉದ್ವೇಗದಿಂದ ಶ್ರೀಕೃಷ್ಣನನ್ನು ದೂಷಿಸುತ್ತಾ ಬಹುಪರಿಯಾಗಿ ನಿಂದಾಮಯವಾದ ನುಡಿಗಳನ್ನು ಆಡಿದನು. ಆಗಲೂ ಪಾಂಡವ–ಕೌರವರ ಕಣ್ಣುಗಳು ಭಾಷ್ಪಪೂರಿತಗಳಾದುವು. ಇಲ್ಲಿ ತಿಳಿಯಬೇಕಾಗಿರುವ ಅಂಶವೇನೆಂದರೆ ದೇವ ದಾನವರೂ ಧರ್ಮ ಕರ್ಮಗಳನ್ನು ಒಂದೇ ತೆರನಾಗಿ ಮಾಡುತ್ತಾರೆ. ಆದರೆ ಉದ್ದೇಶಗಳು ಮಾತ್ರ ವಿರುದ್ಧ ದಿಕ್ಕಿನಲ್ಲಿ ಸಾಗಿರುತ್ತದೆ. ಭಾಷ್ಪಗಳಲ್ಲಿ ಎರಡು ಬಗೆ. ಒಂದು ಆನಂದ ಭಾಷ್ಪ. ಇನ್ನೊಂದು ದುಃಖಾಶ್ರು. ಮನುಷ್ಯನಿಗೆ ಸಂತೋಷವಾದಾಗ ಅಶ್ರುಗಳು ಕಣ್ಣಿನ ಕೊನೆಯ ಭಾಗ (ಕಿವಿಕಡೆ)ದಲ್ಲಿ ಹರಿಯುತ್ತವೆ. ದುಃಖವಾದಾಗ ಕಣ್ಣಿನ ಕೊನೆಯಭಾಗ (ಮೂಗಿನ ಕಡೆ)ಯಲ್ಲಿ ಹರಿಯುತ್ತವೆ. ರಾಜಸೂಯ ಯಾಗದಲ್ಲಿ ಉದುರಿದ ಉಭಯರ ಕಣ್ಣೀರಿನ ಪರಿಯು ಹೇಗಿತ್ತೆಂದರೆ ಭೀಷ್ಮರು, ಶ್ರೀಹರಿಯನ್ನು ಹೊಗಳಿದಾಗ ಪಾಂಡವರಿಗೆ ಹರ್ಷಾಶ್ರುಗಳು ಉದುರಿದುವು. ದುರ್ಯೋಧನಾದಿಗಳಿಗೆ ದುಃಖಾಶ್ರುಗಳು ಸುರಿದುವು. ಅದೇ ಶಿಶುಪಾಲನು ಶ್ರೀಕೃಷ್ಣನನ್ನು ನಿಂದಿಸಿದಾಗ ದುರ್ಯೋಧನಾದಿಗಳ ಕಣ್ಣಲ್ಲಿ ಆನಂದಭಾಷ್ಪಗಳೂ ಪಾಂಡವೇಯರ ಕಣ್ಣಲ್ಲಿ ದುಃಖಾಶ್ರಗಳೂ ಉದುರಿದುವು. ಎಲ್ಲಾ ಜನರ ಕಣ್ಣುಗಳ ಇಕ್ಕೆಲಗಳಲ್ಲಿ ಅಶ್ರುಧಾರೆಯು ಹರಿದರೂ ವ್ಯತ್ಯಾಸವು ಹೇಗಿದೆ ಎಂಬುದನ್ನು ಕಂಡುಕೊಳ್ಳಬೇಕು. ಎಲ್ಲಾ ಒಂದೇ ಎಂಬುದು ಎಂದಿಗೂ ಇಲ್ಲ. ನಿಂದೆಯನ್ನಾಲಿಸಿದ ಕೃಷ್ಣನು ತನ್ನ ಚಕ್ರದಿಂದ ಶಿಶುಪಾಲನ ಶಿರಚ್ಛೇದನವನ್ನು ಮಾಡಿದನು. ಆಗ ಅವನಲ್ಲಿ ಆ ವಿಷ್ಣನಾಗಿದ್ದ ಜಯನು ಮೂರನೇ ಬಾರಿಗೆ ಹಿರಣ್ಯಕಶಿಪುವಿನಿಂದ ಬಿಡುಗಡೆಯಾಗಿ ಶ್ರೀಕೃಷ್ಣನ ಹೃದಯವನ್ನು ಸೇರಿದನು. ಹಿರಣ್ಯಕಶಿಪುವು ತಮೋ ದ್ವಾರವನ್ನು ಹೊಂದಿದನು. ಜಯನು ತನ್ನ ಮೂಲ ರೂಪವನ್ನು ಸೇರಿ ದ್ವಾರಪಾಲಕನಾದನು. ದೈತ್ಯರು ನಿಧನರಾದ ಮೇಲೆ ಅವರ ಅಂಶಗಳು ತಮೋ ದ್ವಾರದಲ್ಲಿ ಪ್ರಪ್ರತ್ಯೇಕವಾಗಿ ರಾಶಿ ರಾಶಿಯಾಗಿ ಬೀಳುತ್ತಾರೆ. ಅವರ ಸಾಧನ ಕಲ್ಪವು ಮುಗಿದ ಮೇಲೆ ಮೂಲರೂಪೀ ದೈತ್ಯನು ಬಂದಾಗ ಎಲ್ಲವೂ ಅವನಲ್ಲಿ ಐಕ್ಯವಾಗಿ ಮುಂದೆ ವಾಯು ಗದಾ ಪ್ರಹಾರದಿಂದ ಲಿಂಗ ಭಂಗವಾಗಿ ತಮಸ್ಸನ್ನು ಸೇರುತ್ತಾರೆ. ಆದರೆ ದೇವತೆಗಳ ಅಂಶಗಳು ಅವತಾರ ಮುಗಿದ ಮೇಲೆ ಇಲ್ಲೇ ಮೂಲ ರೂಪದಲ್ಲಿ ಐಕ್ಯವನ್ನು ಹೊಂದಿ ಅವರ ಕಲ್ಪವು ಮುಗಿದ ಮೇಲೆ ವಿರಜಾನದಿಯಲ್ಲಿ ಸ್ನಾನವನ್ನು ಮಾಡಿ ಲಿಂಗಭಂಗವನ್ನು ಮಾಡಿಕೊಂಡು ಮೋಕ್ಷಕ್ಕೆ ಹೋಗುತ್ತಾರೆ.

ರಾಜಸೂಯ ಯಾಗವು ಸಾಂಗವಾಗಿ ನೆರವೇರುವುದಕ್ಕೆ ಮತ್ತೊಂದರ ಅಪೇಕ್ಷೆಯು ಇತ್ತು. ಅದೇನೆಂದರೆ ಯಾಗ ನಿರ್ವಹಣೆಗೆ ಪುರುಷಾಮೃಗವೆಂಬ ಶಿವಭಕ್ತ ದೇವತೆಯ ಸಹಕಾರವು ಬೇಕಾಗಿತ್ತು. ಅದನ್ನು ಕರೆತರ ಬೇಕಾದರೆ ಅದು ಸಾಮಾನ್ಯವಾದ ಕೆಲಸವಲ್ಲ. ಅದರ ಕೈಗೆ ಸಿಕ್ಕರೆ ಅದು ಯಾರನ್ನೂ ಬಿಡುವುದಿಲ್ಲ. ಅದರ ಕಣ್ಣಿಗೆ ಬಿದ್ದಕೂಡಲೇ ಅದರ ಕೈಗೆ ಸಿಕ್ಕದಂತೆ ಓಡಿ ಮನೆಯನ್ನು ಸೇರಿದರೆ, ಓಟದಲ್ಲಿ ಅದನ್ನು ಸೋಲಿಸಿದರೆ ಮಾತ್ರ ಅದು ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳಂತೆ ಬೇಡಿದದನ್ನು ನೀಡಿ ಯಶಸ್ಸನ್ನು ನೀಡುತ್ತದೆ. ಇಲ್ಲವಾದರೆ ಸಂಹರಿಸಿಬಿಡುತ್ತದೆ. ಅಂಥಾ ಪುರುಷಾಮೃಗವನ್ನು ಯಾಗಕ್ಕೆ ತರುವ ಬಗೆ ಹೇಗೆ? ಎಂಬ ಸಮಸ್ಯೆಯು ಎದುರಾಯಿತು. ಆಗ ಶ್ರೀಕೃಷ್ಣನ ಆಜ್ಞೆಯಂತೆ ಭೀಮನೇ ಹೋಗಿ ಆ ಪುರುಷಾಮೃಗವನ್ನು ಕರೆತರಬೇಕೆಂದು ಸಿದ್ಧವಾಯಿತು. ಅಂತೂ ಭೀಮನು ಪುರುಷಾಮೃಗವನ್ನು ತರಲು ಹೊರಟನು. ಗದಾಧಾರಿಯಾದ ಭೀಮನು ಪುರುಷಾಮೃಗವನ್ನು ಕರೆತರುವುದಕ್ಕೆ ಹೊರಟಾಗ ಹನುಮಂತನು ದಾರಿಯಲ್ಲಿ ತನ್ನ ಬಾಲವನ್ನು ಅಡ್ಡವಾಗಿ ಹರಹಿ ಕಣ್ಣು ಮುಚ್ಚಿಕೊಂಡು ಶ್ರೀರಾಮಧ್ಯಾನಾಸಕ್ತನಾಗಿ ಕುಳಿತು ಬಿಟ್ಟಿದ್ದನು. ಆಗ ಭೀಮನು ಹನುಮಂತನಿಗೆ "ಹೇ ವಾನರಾ, ನೀನು ಬಾಲವನ್ನು ಮುದುಡಿಕೋ. ನಾನು ಮುಂದಕ್ಕೆ ಹೋಗಬೇಕಾಗಿದೆ" ಎಂದು ಹೇಳಿದನು. ಆಗ ಆ ಹನುಮಂತು ಹೇಳುತ್ತಾನೆ. "ತಮ್ಮಾ, ನಾನು ವೃದ್ಧನು. ನೀನು ಯುವಕ, ಬಲಶಾಲಿ. ನೀನೇ ನನ್ನ ಬಾಲವನನು ಎತ್ತಿ ಸರಿಸಿ ಮುಂದಕ್ಕೆ

ಹೋಗು" ಎಂದನು. ಆಗ ಭೀಮನು ತನ್ನ ಗದೆಯಿಂದ ಬಾಲವನ್ನು ಸರಿಸಲು ಯತ್ನಿಸಿದನು. ಆದರೆ ಆ ಬಾಲವು ಕದಲಲಿಲ್ಲ. ಆಶ್ಚರ್ಯಭರಿತನಾದ ಭೀಮನು ತನ್ನೆಲ್ಲಾ ಬಲವನ್ನು ಪ್ರಯೋಗಿಸಿದರೂ ಆ ಬಾಲವು ಕದಲದಿದ್ದಾಗ ಬೆವೆತು ನೀರಾಗಿ ಹೋದನು. ಆಗ ಭೀಮನನ್ನು ಕುರಿತು ಹನುಮಂತನು ಹೇಳುತ್ತಾನೆ. "ನೀನು ಯಾರು? ಎಲ್ಲಿಗೆ ಹೋಗುತ್ತಿರುವೆ? ಏನು ನಿನ್ನ ಪಯಣದ ಉದ್ದೇಶ" ಎಂದು ಕೇಳಿದನು. ಆಗ ಭೀಮನು ತಾನು ರಾಜಸೂಯ ಯಾಗಕ್ಕಾಗಿ ಪುರುಷಾಮೃಗನನ್ನು ಕರೆತರಲು ಹೊರಟಿರುವುದಾಗಿ ತಿಳಿಸಿದನು. ಇದನ್ನು ಕೇಳಿದ ಕೂಡಲೇ ಹನುಮಂತನೂ ಗಾಬರಿಯಾಗಿ ಹೌಹಾರಿದನು. ಮತ್ತು ಭೀಮನಿಗೆ ಹೇಳಿದನು "ಎಲಾ ಭೀಮಾ, ಪುರುಷಾಮೃಗವನ್ನು ತರಲು ಹೊರಟಿರುವೆಯಾ? ಭಲೇ ಭಲೇ ನೀನು ಆ ಪುರುಷಾಮೃಗವೆಂದರೆ ಏನೆಂದು ತಿಳಿದಿರುವೆ. ಅದರ ಕೈಗೆ ಸಿಕ್ಕರೆ ನೀನು ಉಳಿಯುತ್ತೀಯಾ? ಮಹಾಶಿವ ಭಕ್ತ ಅದು. ಅದರ ಗೊಡವೆಯನ್ನು ಬಿಡು. ನೀನು ನನ್ನ ಬಾಲವನ್ನು ಅಲ್ಲಾಡಿಸಲೂ ಶಕ್ತನಲ್ಲವೆಂದ ಮೇಲೆ ಇನ್ನು ಆ ಪುರಷಾಮೃಗವನ್ನು ಹೇಗೆ ನಿಯಂತ್ರಿಸಬಲ್ಲೆ? ಎಂದು ಕೇಳಿದನು. ಈ ವಾಕ್ಯಗಳಿಗೆ ಭೀತನಾದ ಭೀಮನು "ಹೌದೇ, ಹನುಮಣ್ಣಾ, ಹಾಗಾದರೆ ನಮ್ಮಣ್ಣನು ಈಗ ಹೊಂಚಿಕೊಂಡಿರುವ ಮಹಾಯಜ್ಞದ ಗತಿ ಏನು? ನೀನೇ ದಾರಿಯನ್ನು ತೋರಿಸಣ್ಣೋ" ಎಂದು ಬೇಡಿಕೊಂಡನು. ಆಗ ಹನುಮಂತನು ಭೀಮನಿಗೆ ಹೀಗೆ ಹೇಳಿದನು. "ನೋಡು ತಮ್ಮಾ, ಆ ಪುರುಷಾಮೃಗವು ಮಹಾ ಶಿವಭಕ್ತ. ಶಿವಲಿಂಗವನ್ನು ಕಂಡರೆ ಪೂಜಿಸದೇ ಮುಂದೆ ಹೋಗುವುದಿಲ್ಲ. ನಾನು ಈಗ ನಿನಗೆ ನನ್ನ ಮೈ ಮೇಲಿನ ಮೂರು ರೋಮಗಳನ್ನು ಕಿತ್ತಿ ಕೊಡುತ್ತೇನೆ. ಅವನ್ನು ತೆಗೆದುಕೊಂಡು ಪುರುಷಾಮೃಗದ ಕಡೆಗೆ ಹೋಗು. ಅದು ನಿನ್ನನ್ನು ಕಂಡ ಕೂಡಲೇ ಬೇಟೆಯು ಸಿಕ್ಕಿತೆಂದು ರಭಸವಾಗಿ ನಿನ್ನತ್ತ ಧಾವಿಸುತ್ತದೆ. ಅದರ ವೇಗಕ್ಕೆ ನೀನು ಸಾಟಿಯಲ್ಲ. ಆದ್ದರಿಂದ ಅದು ನಿನ್ನ ಹತ್ತಿರ ಬಂದ ಕೂಡಲೇ ನೀನು ನನ್ನ ರೋಮಗಳಲ್ಲಿ ಒಂದನ್ನು ಭೂಮಿಗೆ ಎಸೆದು ಬಿಡು. ಆಗ ಆ ನನ್ನ ರೋಮದಿಂದ ಒಂದು ಕೋಟಿ ಲಿಂಗಗಳು ಉದುರುತ್ತವೆ. ಆಗ ಆ ಮೃಗವು ಆ ಕೋಟಿ ಲಿಂಗಗಳಿಗೆ ಸಾಂಗವಾಗಿ ಪೂಜೆಯನ್ನು ಮಾಡಿ ಪುನಃ ನಿನ್ನತ್ತ ಧಾವಿಸುತ್ತದೆ. ಆಗ ನೀನು ಮತ್ತೊಂದು ರೋಮವನ್ನು ಎಸೆ. ತರುವಾಯ ಮತ್ತೂ ಒಂದು ರೋಮವನ್ನು ಎಸೆ. ಆಗಲೂ ಕೋಟಿ ಕೋಟಿ ಲಿಂಗಗಳು ಉದ್ಭವಿಸುತ್ತವೆ. ಅದು ಅಷ್ಟನ್ನೂ ಪೂಜಿಸಲು ತೊಡಗುತ್ತದೆ.

ಹೀಗೆ ಆ ಪುರಾಷಮೃಗವು ಮೂರು ಕೋಟಿ ಲಿಂಗಗಳನ್ನು ಪೂಜಿಸಿ ನಿನ್ನ ಹತ್ತಿರ ಬರುವಾಗ ನೀನು ಮನೆಯನ್ನು ಸೇರಿ ಕೊಳ್ಳುತ್ತೀ. ಹೀಗೆ ಉಪಾಯದಿಂದ ನೀನು ಅದನ್ನು ಓಟದಲ್ಲಿ ಸೋಲಿಸಿದರೆ ಮಾತ್ರ ಅದು ನಿಮ್ಮ ಅಭಿಲಾಷೆಯನ್ನು ಪೂರೈಸುತ್ತದೆ". ಎಂದು ಹೇಳಿ ಹನುಮಂತನು ತನ್ನ ಮೂರು ರೋಮಗಳನ್ನು ಭೀಮನಿಗೆ ಇತ್ತು ಧ್ಯಾನಾಸಕ್ತನಾದನು. ಆಗ ಭೀಮನು ಬಹಳ ಸಂತೋಷದಿಂದ ಹನುಮಂತನಿಗೆ ನಮಸ್ಕಾರವನ್ನು ಮಾಡಿ ರೋಮಗಳನ್ನು ಪಡೆದುಕೊಂಡು ಪುರುಷಾಮೃಗದ ಕಡೆಗೆ ಹೊರಟನು. ಯಥಾಪ್ರಕಾರವಾಗಿ ಭೀಮನನ್ನು ಕಂಡ ಕೂಡಲೇ ಆ ಪುರುಷಾಮೃಗವು ರೋಷದಿಂದ ಭೀಮನ ಕಡೆಗೆ ಹೋ ಎಂದು ನುಗ್ಗಿತು. ಆಗ ಭೀಮನು ಓಡುತ್ತೋಡುತ್ತಾ ಹನುಮಂತನು ಹೇಳಿದಂತೆ ಮೂರು ರೋಮಗಳನ್ನು ಮೂರು ಸಲ ಎಸೆಯಲಾಗಿ ಮೂರು ಕೋಟಿ ಲಿಂಗಗಳು ಉತ್ಪನ್ನವಾದುವು. ಆಗ ಆ ಪುರುಷಾಮೃಗವು ಆ ಲಿಂಗಗಳನ್ನು ಪೂಜಿಸಿ ಭೀಮನನ್ನು ಹಿಡಿಯಲು ಹತ್ತಿರ ಬಂದಿತು. ಅಷ್ಟರೊಳಗೆ ಭೀಮನು ಮನೆಯನ್ನು ಸೇರಿ ಬಲಕಾಲನ್ನು ಮನೆಯೊಳಗೆ ಇಟ್ಟನು. ಅಷ್ಟೇ. ಆದರೆ ವೇಗಶಾಲಿಯಾದ ಆ ಪುರುಷಾಮೃಗವು ಭೀಮನ ಎಡಗಾಲನ್ನು ಹಿಡಿದೇ ಬಿಟ್ಟಿತು. ಇನ್ನೇನು ಭೀಮನನ್ನು ಅದು ನುಂಗಬೇಕು. ಅಷ್ಟರೊಳಗೆ ಧರ್ಮರಾಯನು ಬಂದು "ಪುರುಷರಿಗೆ ಬಲಗಾಲು ಶ್ರೇಷ್ಠ. ಭೀಮನು

ಬಲಗಾಲನ್ನು ಹೊಸ್ತಿಲೊಳಗೆ ಇಟ್ಟು ಬಿಟ್ಟಿದ್ದನಾದ ಕಾರಣ ನೀನು ಭೀಮನನ್ನು ನುಂಗಬಾರದು. ಬದಲಿಗೆ ನಮ್ಮ ಯಜ್ಞಕ್ಕೆ ಬೇಕಾದ ಸಾಮಾಗ್ರಿಗಳನ್ನು ಕೊರತೆ ಇಲ್ಲದೆ ನೀಡಬೇಕೆಂದು ಕೇಳಿದನು. ಆಗ ಧರ್ಮರಾಯನ ನೀತಿಗೆ ತಲೆದೂಗಿದ ಆ ಪುರುಷಾಮೃಗವು ಯಜ್ಞಕ್ಕೆ ಯಾವುದೂ ಕೊರತೆಯಾಗದಂತೆ ಸಮಸ್ತ ಸಾಮಾಗ್ರಿಗಳನ್ನು ಒದಗಿಸಿಕೊಟ್ಟಿತು.

ಮೇಲಿನ ಕಥೆಯನ್ನು ಇಷ್ಟಕ್ಕೆ ಹೇಳಿ ಕೈಬಿಟ್ಟರೆ ದೇವತೆಗಳು ಏನೆಂದಾರು? ಮೇಲಾಗಿ ಕೆಲವು ಮಾಧ್ವ ಪಂಡಿತರು ಈ ಕಥೆಯನ್ನೇ ಒಪ್ಪುವುದಿಲ್ಲ. ಆದರೆ ಶ್ರೀವಿಜಯದಾಸರು ಈ ಅಂಶವನ್ನು ಎತ್ತಿ ಹಿಡಿದಿರುತ್ತಾರೆ. ಅವರು ಶ್ರೀಪ್ರಾಣದೇವರ ಚರಣ ಸುಳಾದಿಯಲ್ಲಿ

**"ಗಿರಿಯ ಮಧ್ಯದಿ ಜಿಗುಳಿ ವದ್ದಾಡಿದ ಚರಣ ।**
**ಮರದ ಮೇಲೆ ಇದ್ದವರ ಒದ್ದು ಕೆಡಹಿದ ಚರಣಾ ।**
**ನರನಾಥ ರಾಜಸು ಯಾಗವ ಮಾಡಲು ।**
**ಧರೆಯಲ್ಲಿ ತಿರುಗಿ ವಂದಿಸಿಕೊಂಡಾ ಚರಣ ।**
**ಪುರುಷಾಮೃಗನಾ ಕೈಲಿ ಹಿಡಿಸಿಕೊಂಡಾ ಚರಣ ॥**
**ಪರಮ ಪುರುಷ ಕೃಷ್ಣ ವಿಜಯವಿಠಲರೇಯನ ।**
**ಶರಣರೊಳಧಿಕನಾದ ಭೀಮಸೇನನ ಅಪ್ರತಿಮ ಚರಣ ॥ ೩ ॥**

ಹೀಗೆ ಹೇಳಿರುವುದರಿಂದ ಇಲ್ಲಿ ಸಂಶಯ ಚರ್ಚೆಗಳು ಅನವಶ್ಯಕ. ಇಲ್ಲಿ ಗಮನಿಸಬೇಕಾದ ಅಂಶಗಳು ಇರುವುದು ನಾಲ್ಕು. ಭೀಮನು ಮಹಾ ಪರಾಕ್ರಮಿಯಾದ ಜರಾಸಂಧನನ್ನು ಸೀಳಿದ್ದು. ರಾಜಾಧಿರಾಜರಿಂದ ಕಪ್ಪಗಳನ್ನು ಸುಲಿಗೆ ಮಾಡಿದುದು. ಭೀಮನು ಬಾಲವನ್ನು ಎತ್ತಲಾರದೆ ರೋಮ ಸಹಾಯವನ್ನು ಬೇಡಿದುದು. ಮತ್ತು ಪುರುಷಾಮೃಗದಿಂದ ಸಹಾಯವನ್ನು ಪಡೆದು ಯಜ್ಞವನ್ನು ಪೂರ್ತಿ ಮಾಡಿದುದು.

ಬಲಾಢ್ಯನಾದ ಜರಾಸಂಧನನ್ನು ಸಂಹರಿಸಲು ಬಲವೇ ಮೂರ್ತಿಯಾಗಿರುವ ಭೀಮಸೇನನು ಅವನೊಡನೆ ಹದಿನಾರು ದಿನಗಳವರೆಗೆ ಸೆಣೆಸಬೇಕಾಗಿತ್ತೇ? 'ಅನಿಶ' ಎಂಬ ಹೆಸರಿನಿಂದ ಜಗತ್ಪ್ರಸಿದ್ಧನಾದ ಭೀಮನು ಯಾವ ಅವತಾರದಲ್ಲಿಯೇ ಇರಲಿ ಆತನಿಗೆ ಜ್ಞಾನ, ಬಲ, ಕಾರ್ಯಗಳಲ್ಲಿ ನ್ಯೂನತೆಯು ಇರುವುದಿಲ್ಲ. ಈತನು ಅಮೃತ ಸ್ವರೂಪಿಯಾಗಿ ಶ್ರೀವಾಸುದೇವನನ್ನು ಸದಾ ಪೂಜಿಸುತ್ತ ಸಕಲ ದೇವ ದಾನವರಲ್ಲಿ ಅಂತರ್ಯಾಮಿಯಾಗಿ ಇರುವುದರಿಂದಲೇ ಸರ್ವರೂ ಚೇಷ್ಟಾಯುತರಾಗಿದ್ದಾರೆ. ಇವರ ಅಂತರ್ಯಾಮಿತ್ವವು ಇಲ್ಲದೇ ಹೋದರೆ ಜರಾಸಂಧನು ಹುಟ್ಟುತ್ತಲೇ ಇರಲಿಲ್ಲ. ಬೆಳೆಯುತ್ತಲೂ ಇರಲಿಲ್ಲ. ಇವನ ಸ್ವರೂಪ ಗುಣಗಳ ವಿಕಾಸಕ್ಕಾಗಿ ಭೀಮನು ಇವನಲ್ಲಿ ಇದ್ದು ತಾಮಸ ಗುಣ ಪ್ರೇರಕನಾಗಿ ಅವನಿಂದ ಸಾಧನವನ್ನು ಮಾಡಿಸಿದನು. ತಾನು ಘೋರವಾದ ಯುದ್ಧವನ್ನು ಮಾಡುವುದರ ಮೂಲಕ ಅವನ ಸಾಮರ್ಥ್ಯವು ಎಂತಹುದು ಎಂಬುದನ್ನು ದೇವತೆಗಳಿಗೆ ಪ್ರಕಟಿಸಿ, ದೇವತೆಗಳಿಗೆ ತನ್ನಲ್ಲಿ ಭಕ್ತಿಯನ್ನುಂಟುಮಾಡಿ ಉದ್ಧರಿಸಿದನು. ದೈತ್ಯರಿಗೆ ಭೀಮನೊಬ್ಬ ಸಾಮಾನ್ಯನಲ್ಲ. ಏನೋ ಹದಿನಾರು ದಿನ ಹೋರಾಡಿ, ಹೇಗೋ ಜರಾಸಂಧನನ್ನು ಗೆದ್ದನು. "ನಮ್ಮ ಜರಾಸಂಧನೇನು ಕಡಿಮೆಯೇ?

ಭೀಮನಿಗೆ ಸಮ ಬಲನು ಎಂತು ಹೋರಾಡಿದನು ನೋಡಿ. ಸೈ.ಸೈ" ಎಂಬ ದುರಭಿಮಾನವನ್ನೂ ತಮೋಗುಣವನ್ನೂ ಅಭಿವೃದ್ಧಿ ಪಡಿಸಿದನು. ಜರಾಸಂಧನನ್ನು ಕೊಲ್ಲುವುದಕ್ಕೆ ಭೀಮನು ಮಗಧ ದೇಶಕ್ಕೆ ಹೋಗಬೇಕಾಗಿತ್ತೇ? ಗದಾಯುದ್ಧವು ಬೇಕಾಗಿತ್ತೇ? ಹದಿನಾರು ದಿನಗಳು ಬೇಕಾಗಿತ್ತೇ? ವಾಯು ಮೂಲ ಭೇದ ವಿವರ್ಜಿತನಾದ ಭೀಮನು ತಾನು ಕುಳಿತಲ್ಲಿಂದಲೇ ಕಣ್ಣು ರೆಪ್ಪೆಗಳನ್ನು ಮುಚ್ಚಿದರೆ ಮುನಃ ತೆರೆಯುಷ್ಟರೊಳಗೆ ಇಡೀ ಬ್ರಹ್ಮಾಂಡವೇಲಯವನ್ನು ಹೊಂದುತ್ತಿರುವಾಗ ಈ ಜರಾಸಂಧ ಮಶಕನು ಯಾವ ಲೆಕ್ಕ? ದುರ್ಬಲರಾದ ದೈತ್ಯರು ತಾವು ಬಲವಂತರೆಂದು ತೋರಿಸಿಕೊಂಡರೆ ಬಲವಂತನಾದ ಭೀಮನು ತಾನು ದುರ್ಬಲನೆಂಬ ಅಯಥಾರ್ಥವಾದ ಜ್ಞಾನವನ್ನು ದೈತ್ಯರಿಗೆ ಹುಟ್ಟಿಸಿದನು. ಅಪ್ರಾಕೃತ ಕಾಯನಾದ ಶ್ರೀಕೃಷ್ಣನು ಪ್ರಾಕೃತ ಪುರುಷನಂತೆ ಅವತರಿಸಿ ದೈತ್ಯರನ್ನು ಮೋಹಿಸಿದಂತೆ ಆತನ ದೂತನಾದ ಭೀಮನೂ ಆತನ ಪ್ರೀತ್ಯರ್ಥವಾಗಿ ಕೇವಲ ಮಲ್ಲನಾದನು, ಈ ಮಲ್ಲೇಶ್ವರನು. ಜಗಜ್ಜೀವರ ದೇಹಗಳಲ್ಲಿ ತತ್ವಾಭಿಮಾನಿ ದೇವ-ದೈತ್ಯರು ಜಾಗ್ರತ್ - ಸ್ವಪ್ನ ಕಾಲಗಳಲ್ಲಿ ಮಾತ್ರ ಎಚ್ಚೆತ್ತು ಕಾರ್ಯಗಳನ್ನು ನಿರ್ವಹಿಸಬಲ್ಲರು. ಸುಷುಪ್ತಿಯಲ್ಲಿ ಇವರೂ ಮೂರ್ಛಾವಸ್ಥೆಯನ್ನು ಹೊಂದುತ್ತಾರೆ. ಆದರೆ ಮುಖ್ಯ ಪ್ರಾಣಸ್ವರೂಪಿಯಾದ ಭೀಮಸೇನನು ಅವಸ್ಥಾತ್ರಯಗಳಲ್ಲಿಯೂ ಎಚ್ಚೆತ್ತು ಜೀವರನ್ನು ರಕ್ಷಿಸುತ್ತಲೇ ಇರುವನು. ಜರಾಸಂಧನ ಮಥೆಯು ಭೀಮನಿಗೆ ಖಟ್ಮಲ್ ಕುಟ್ಟಣ ಮಾತ್ರ.

ಇನ್ನು ಎರಡನೆಯದಾಗಿ ಪಾಂಡವರು ರಾಜಸೂಯ ಯಾಗವನ್ನು ಮಾಡಿದ್ದು ಅವರ ತಂದೆಗೆ ಇಂದ್ರಲೋಕದಲ್ಲಿ ಸ್ಥಾನವನ್ನು ಕೊಡಿಸಲಿಕ್ಕಾಗಿ ಇರಬಹುದು. ಆದರೆ ತಮ್ಮ ತಂದೆಗೆ ಸ್ಥಾನವನ್ನು ಕೊಡಿಸಲು ಪರ ರಾಜರ ಮೇಲೆ ದಾಳಿ ಮಾಡಿ ಅವರನ್ನು ಸಂಹರಿಸಿ ಹೆದರಿಸಿ ಅವರ ಧನವನ್ನು ಸೋರೆಗೊಂಡು ಬಂದುದು ತಪ್ಪಲ್ಲವೇ? ರಾಜಸೂಯ ಯಾಗವನ್ನು ಮಾಡಿದರೆ ಮಾತ್ರ ಜರಾಸಂಧನ ಪ್ರತಿಭಟನೆ ಇತ್ತು. ಇಲ್ಲವಾದರೆ ಅವನು ಸುಮ್ಮನೇ ಇದ್ದನಲ್ಲ? ಮಂದಿ ಮನೆ ಮುರಿದು ಸತ್ಯನಾರಾಯಣ ಪೂಜೆಯೇ? ಎಂದರೆ ಪಾಂಡವರು ಕ್ಷಾತ್ರ ಧರ್ಮಾನುಸಾರವಾಗಿ ಯುದ್ಧವನ್ನು ಮಾಡಿದುದು ಧರ್ಮವೇ ಎಂದು ಪಂಡಿತರು ಹೇಳುತ್ತಾರೆ. ಹಾಗಾದರೆ ಜರಾಸಂಧನೂ ಸಹ ಯುದ್ಧ ಮಾಡಿಯೇ ಎಲ್ಲರನ್ನೂ ಗೆದ್ದು ಐಶ್ವರ್ಯವನ್ನು ಸಂಗ್ರಹಿಸಿ ಕ್ಷಾತ್ರ ಧರ್ಮವನ್ನು ಮೆರೆದಿದ್ದನು ಎಂದರೆ ಉತ್ತರವೇನು? ಎಂದರೆ ಧರ್ಮರಾಯನ ಯಜ್ಞವು ಕೇವಲ ಪಾಂಡುರಾಜನ ಅಭ್ಯುದಯಕ್ಕೆ ಮಾತ್ರ ನಿಶ್ಚಿತವಾಗಿರಲಿಲ್ಲ. ನಿರಪರಾಧಿಗಳಾದ ಹದಿನಾರು ಸಾವಿರ ಕ್ಷಾತ್ರ ಸಂಜಾತರನ್ನು ಬಲಿ ಮುಖದಿಂದ ರಕ್ಷಿಸಬೇಕಾಗಿತ್ತು. ಜರಾಸಂಧನು ಸುಮ್ಮನೇ ಕುಳಿತಿರಲಿಲ್ಲ. ಕೃಷ್ಣನ ಸಂಹಾರಾರ್ಥವಾಗಿ ಮಹಾ ರುದ್ರಯಾಗವನ್ನೂ ಕೈಕೊಂಡಿದ್ದನು. ಇವನಿಂದ ಪಾಂಡವರಿಗೂ ವಿಪತ್ತು ಕಾದಿತ್ತು. ಹರಿ ದ್ವೇಷದಲ್ಲಿ ಇವನಿಗೆ ಹಿರಣ್ಯ ಕಶಿಪು(ಶಿಶುಪಾಲ)ವಿನ ಕುಮ್ಮಕ್ಕು ಸಿಕ್ಕಿತ್ತು. ಮುಮುಕ್ಷುಗಳಿಗೆ ಹರಿ ಆರಾಧನೆ, ನಾಮೋಚ್ಚಾರಣೆಗಳು ನೈವೇದ್ಯಗಳನ್ನು ಶಿಲಾಶಾಸನಗಳಿಂದ ನಿಷೇಧಿಸಲಾಗಿತ್ತು. ಜರಾಸಂಧನ ಯಜ್ಞದಿಂದ ಕೃಷ್ಣನಿಗೆ ಯಾವ ವಿಧದಲ್ಲಿಯೂ ಹಾನಿ ಇರಲಿಲ್ಲವಾದರೂ ಮುಮುಕ್ಷುಗಳಿಗೆ ಗಂಡಾಂತರವು ಒದಗಿತ್ತು. ಜರಾಸಂಧನ ಸಂಹಾರಕ್ಕೆ ಮುಖ್ಯವಾದ ಕಾರಣವೆಂದರೆ ಬ್ರಾಹ್ಮಣರನ್ನು ದುರ್ದಾನ (ಕೃಷ್ಣಾರ್ಪಣವೆನ್ನದ) ದೂರಾನ್ನ (ಹರಗರ್ಪಿತ), ಶ್ರೀಹರಿನಾಮ ದಿಗ್ಬಂಧನಗಳಿಂದ ರಕ್ಷಿಸಬೇಕಾಗಿತ್ತು. ಎರಡನೆಯೇ ಕಾರಣವು ರಾಜಕುಮಾರರ ರಕ್ಷಣೆಗಾಗಿ ಮತ್ತು ಮೂರನೆ ಕಾರಣವೇ ರಾಜಸೂಯ ಯಜ್ಞದ ನಿಮಿತ್ತವಾಗಿತ್ತು. ಅದಕ್ಕಾಗಿಯೇ ಅವನ ಸಂಹಾರವು ಅನಿವಾರ್ಯವಾಗಿತ್ತು. ಇನ್ನು ಪರ ದ್ರವ್ಯಾಪಹಾರ ವಿಚಾರದಲ್ಲಿ ಹರಿ, ವಾಯು (ಭೀಮ)ಗಳು ಜರಾಸಂಧನಿಗೆ ಅಥವಾ ಇನ್ಯಾವ ದುಷ್ಟರಾಜರಿಗೂ ಅನ್ಯಾಯವನ್ನು ಮಾಡಿಲ್ಲ ನಿಜವಾಗಿ ಹೇಳಬೇಕಾದರೆ ಅಪೌರುಷೇಯವಾದ ವೇದಗಳು ಇಡೀ ವಿಶ್ವವೇ

(ಅವ್ಯಾಕೃತಾಕಾಶಾಭಿಮಾನಿ ಲಕ್ಷ್ಮೀ ದೇವಿಯನ್ನೊಳಗೊಂಡು) ಸಮಸ್ತವೂ ಪರಮಾತ್ಮನದೇ. **"ಈಶಾವಾಶ್ಯಮಿದಂ ಸರ್ವಂ। ಯತ್ಕಿಂಚಜ್ಜಗತಾಂ ಜಗತ್॥ ತೇನ ತ್ಯಕ್ತೇನ ಭುಂಜೀಥಾ ಮಾಗೃಧಹ ಕಶ್ಯಸ್ವಿದ್ಧನಂ ॥"** ಎಂದು ಹೇಳುತ್ತದೆ. **"ತದೀಯಂ ಸರ್ವಮೇವತು"** ಎಂದರೆ ಎಲ್ಲವೂ ಅವನದೇ ಅವನಿಲ್ಲದೆ ನೀರಿಲ್ಲ. ಅನ್ನವಿಲ್ಲ. ಗಾಳಿ, ಬೆಳಕು, ದೇಹವೂ ಇಲ್ಲ. ಹೀಗಿರುವಾಗ ಸಮಸ್ತನಾದ ಭೋಗ, ಭೋಗೋಪಯೋಗೀ ವಸ್ತುಗಳನ್ನು ಅವನಿಂದ ಪಡೆದ ನಾವು ಭಗವದರ್ಪಿತವಾದ ಮನೋಭಾವದಿಂದ ಭೋಗಿಸಿದರೆ, ನೀಡಿ ಪಡೆದರೆ ಶ್ರೀಹರಿಯು ಪ್ರೀತನಾಗುವನು. ಅದನ್ನು ಬಿಟ್ಟು ಭಗವದ್ವಿಸ್ಮೃತಿಯಿಂದ, ದ್ವೇಷದಿಂದ ಸಮಸ್ತವೂ ನನ್ನದೇ. ನಾನೇ ಸರ್ವೇಶಾ ಎಂದು ದುರ್ಮದಜ್ಞಾದಿಂದ ಬೀಗಿದರೆ ಅದೇ ಭಗವಂತನ ಐಶ್ವರ್ಯವನ್ನು ಅಪಹಾರ ಮಾಡಿದಂತೆ. ಈ ದುಷ್ಟ ಉಪಾಸನಾ ನಿಮಿತ್ತ ಭಗವದೈಶ್ವರ್ಯವನ್ನು ಬಲಾತ್ಕಾರವಾಗಿ ಅಪಹರಿಸಿದ್ದವನು ಜರಾಸಂಧನೇ. **"ತದೀಯಂ ಸರ್ವಮೇವತು"** ಎನ್ನುವುದರ ಬದಲು ಅವನು **"ಮದೀಯಂ ಸರ್ವಮೇತು"** ಎಂದನು. ಹಲವು ಅಸುರ ಸ್ವರೂಪರು ಅವನ ಹಾದಿಯನ್ನೇ ಹಿಡಿದಿದ್ದರು. ಪರ (ಪರಮಾತ್ಮನ) ದ್ರವ್ಯವನ್ನು ಅಪಹರಿಸಿ ಬೋಗಲಾಲಸೆಯಲ್ಲಿ ಇದ್ದವರು ಇವರೇ ಹೊರತಾಗಿ ಭೀಮ ಪಾಂಡವರಲ್ಲ. ದೇವ ದ್ರವ್ಯವನ್ನು ದೌರ್ಜನ್ಯದಿಂದ ಅಪಹರಿಸಿದುದನ್ನು ಪರಮಾತ್ಮನ ಮಂತ್ರಿಯೇ ಆದ ಭೀಮಸೇನನು ದಂಡೋಪಾಯದಿಂದಲೇ ಪುನಃ ಸೆಳೆದು ರಾಜಸೂಯ ನೆಪದಲ್ಲಿ ಯಜ್ಞವನ್ನೊಳಗೊಂಡು ಸಮಸ್ತವನ್ನೂ ಶ್ರೀಕೃಷ್ಣನಿಗೆ ಅರ್ಪಿಸಿದನು. ಸ್ವಾಮಿ, ಎಲ್ಲವೂ ನಿನ್ನದಪ್ಪ. ನಮ್ಮದೇನೂ ಇಲ್ಲ. ನಿನ್ನ ಐಶ್ವರ್ಯವನ್ನು ಬಿಟ್ಟರೆ ನಾವು ಬದುಕುವಂತಿಲ್ಲ. ನಿನ್ನ ಸ್ಮರಣೆಪೂರ್ವಕವಾಗಿಯೇ ನಿನ್ನ ಪ್ರೀತ್ಯರ್ಥವಾಗಿಯೇ, ನಮ್ಮ ತೃಪ್ತಿಗಾಗಿ ನಿನ್ನ ಐಶ್ವರ್ಯವನ್ನು ಬಿಟ್ಟರೆ ನಾವು ಬದುಕುವಂತಿಲ್ಲ. ನಿನ್ನ ಸ್ಮರಣೆ ಪೂರ್ವಕವಾಗಿಯೇ, ನಿನ್ನ ಪ್ರೀತ್ಯರ್ಥವಾಗಿಯೇ, ನಮ್ಮ ತೃಪ್ತಿಗಾಗಿ ನಿನ್ನ ಐಶ್ವರ್ಯವನ್ನು ನಾವು ಭೋಗಿಸುತ್ತಿದ್ದೇವೆ. "ಪ್ರಭೋ" ಎಂದಿದ್ದರೆ ಜರಾಸಂಧಾದಿಗಳಿಗೆ ಇಹಪರಗಳಲ್ಲಿಯೂ ಸೌಖ್ಯವಾಗುತ್ತಿತ್ತು. ಈಗ ಅವರಿಗೆ ಇಹವೂ ಇಲ್ಲ. ಪರವೂ ಇಲ್ಲ. **"ನೈಹಿಕಂ ನಪರಾಂಗತಿಂ"** ಶ್ರೀಹರಿಯ ವಿಸ್ಮೃತಿಗೆ ಫಲವೇ ಗದಾ ಪ್ರಹಾರ. ಭಗವಂತನ ಐಶ್ವರ್ಯವು ಭಗವಂತನಿಗೇ ಅರ್ಪಿಸಿರುವುದರಿಂದ ಪಾಂಡವರಿಗೆ ಪರದ್ರವ್ಯಾಪಹಾರ ದೋಷವು ಬರುವುದಿಲ್ಲ. **'ತ' ಎಂದರೆ ತಾರಕ. 'ಮ' ಎಂದರೆ ಮಾರಕ 'ಸೋಹಂ' ಎಂದರೆ ಮಾರಕ 'ದಾಸೋಹಂ' ಎಂದರೆ ತಾರಕ**. ಒಂದಕ್ಷರದಲ್ಲಿಯೇ ಶ್ರೀಹರಿಯನ್ನು ಕೊಳ್ಳಬಹುದು ನನ್ನದೆನ್ನದೆ ನಿನ್ನದೆಂದರೆ ಸಾಕು. "ಸುಲಭನೋ ಹರಿ ತನ್ನವರನರ ಘಳಿಗೆ ಬಿಟ್ಟಗಲನು".

> **"ಹಗಲು ನಂದಾದೀಪದಿಂದದಿ। ನಿಗಮ ವೇದ್ಯನ ಪೂಜಿಸು ಕೈ ।**
> **ಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೆ॥**
> **ಜಗದುದರ ಕೊಟ್ಟುದನು ಭುಂಜಿಸಿ । ಮಗ ಮಡದಿ ಪ್ರಾಣೇಂದ್ರಿಯಾತ್ಮಾದಿಗಳು**
> **ಭಗವದಧೀನವೆಂದಡಿಗಡಿಗೆ ನೆನೆವುತಿರು ॥" ಹ.ಕ.ಸಾ"**

ಮುಂದೆ ಭೀಮನು ಪುರುಷಾಮೃಗವನ್ನು ತರಲು ಹೊರಟಾಗ ದಾರಿಯಲ್ಲಿ ಹನುಮಂತನನ್ನು ಭೆಟ್ಟಿಯಾಗಿ ಪರಸ್ಪರರು 'ಹೇ ತಮ್ಮಾ' 'ಹೇ ಅಣ್ಣಾ' ಎಂದು ಸಂಭಾಷಣೆಯನ್ನು ಮಾಡಿಕೊಂಡರು. ಹನುಮಂತನು ಭೀಮನಿಗೆ ಮೂರು ರೋಮಗಳನ್ನು ಕೊಟ್ಟು ಶಿವಭಕ್ತನಾದ ಪುರುಷಾಮೃಗನನ್ನು ಕರೆತರುವ ಉಪಾಯವನ್ನು ತಿಳಿಸಿದನು. ಶ್ರೀಹರಿಯ ಭಕ್ತಾಗ್ರ ಗಣ್ಯನೆನ್ನಬೇಕು. ಈ ಭೀಮನನ್ನು. ಹಿಂದೆ ತ್ರೇತಾಯುಗದಲ್ಲಿ ಶ್ರೀಹರಿಯು ರಾಮ ಹಾಗೂ ಪರಶುರಾಮನೆಂಬ ಎರಡು ರೂಪಗಳನ್ನು ತಾಳಿ ಶ್ರೀರಾಮನು ಕ್ಷತ್ರಿಯ, ಪರಶುರಾಮನು ಬ್ರಾಹ್ಮಣ. ರಾಮನು

ಪರಶುರಾಮನ ಗರ್ವ ಭಂಗವನ್ನು ಮಾಡಿದನು. ಪರಶುರಾಮನು ತಪಸ್ಸಿಗೆ ಹೋದನು. ಶ್ರೀರಾಮನು ರಾಜ್ಯವನ್ನಾಳಿದನು. ಇತ್ಯಾದಿಯಾಗಿ ತಾನು ಸ್ವಗತ ಭೇದ ವರ್ಜಿತನಾದಾಗ್ಯೂ ಭೇದರೂಪಗಳನ್ನು ತಾಳಿ ಅಸುರರಿಗೆ ಅಸದುಪಾಸನೆಯನ್ನು ಕಲ್ಪಿಸಿದನು. ಯದ್ಯಪಿ ಅತುಲನೆಂಬ ದೈತ್ಯನು ತಾನು ಹರಿಯಲ್ಲಿ ನೆಲೆಸಿದರೆ ತನ್ನನ್ನು ಯಾರೂ ಕೊಲ್ಲಲಾರರೆಂಬ ವರದಿಂದ ಪರಶುರಾಮನಲ್ಲಿ ಸೇರಿಕೊಂಡಿದ್ದನು. ಆಗ ಪರಮಾತ್ಮನೇ ರಾಮ ರೂಪದಿಂದ ವಿಷ್ಣು ಧನಸ್ಸನ್ನು ಪ್ರಯೋಗಿಸಿ ಆ ಅತುಲವನ್ನು ಸಂಹರಿಸಿದನು. ಇದಕ್ಕಾಗಿಯೇ ಪರಮಾತ್ಮನು ಎರಡು ರೂಪಗಳನ್ನು ತಾಳಿದನು. ಆದರೆ ಇಲ್ಲಿ ತಿಳಿಯಬೇಕಾದ ಹೆಚ್ಚಿನ ಅಂಶವೇನೆಂದರೆ ಶ್ರೀರಾಮನು ತನ್ನ ಬಾಣದಿಂದ ಅತುಲನನ್ನು ಮಾತ್ರ ಸಂಹರಿಸಿದನು. ಆದರೇನು? ಜೀವಕ್ಕೆ ನಾಶವಿಲ್ಲವೆಂದ ಮೇಲೆ ಅತುಲನು ಇನ್ನೊಂದು ಜನ್ಮವನ್ನು ಹೊಂದುವನು. ಹಿರಣ್ಯಕಶಪುವನ್ನು ಸಂಹರಿಸಿದರೆ ಅವನೇ ಪುನಃ ರಾವಣನಾಗಿ ಬಂದನು. ಆದ್ದರಿಂದ ಈ ರಾಮಬಾಣದ ಪರಿಣಾಮವೇನೂ ಅಷ್ಟೊಂದು ಮಹತ್ವವಾದುದಲ್ಲ. ಆದರೆ ಇಲ್ಲಿ ತಿಳಿಯ ಬೇಕಾದ ಪ್ರಬಲವಾದ ಪ್ರಮೇಯವೇನೆಂದರೆ ರಾಮ – ಪರಶುರಾಮರೆಂಬ ಎರಡು ರೂಪಗಳನ್ನು ಪ್ರಕಟಿಸಿ ರೂಪಭೇದ ಚಿಂತನೆಯನ್ನು ದೈತ್ಯರಿಗೆ ಹುಟ್ಟಿಸಿ ಕೇವಲ ಅತುಲನನ್ನು ಮಾತ್ರವಲ್ಲ. ಇಡೀ ದೈತ್ಯ ಸಮುದಾಯವನ್ನು ಅಸದುಪಾಸನೆಗೆ ತಳ್ಳಿ ಅಪುನರಾವರ್ತನೆಯ ಲೋಕವಾದ ಅಂಧಂತಮಸ್ಸಿಗೆ ಕಳುಹಿಸಿದನು. ತಿರುಗಿ ಈ ದೈತ್ಯರು ಮೇಲೇಳುವಂತಿಲ್ಲ. ಶ್ರೀರಾಮನು ಬಾಣವನ್ನು ಹೊಡೆದನು ಎಂಬುದರಿಂದ ಕೇವಲ ಅತುಲನು ಮಾತ್ರ ದಹಿಸಿದನು ಎಂಬ ಅಭಿಪ್ರಾಯವು ಬರುತ್ತದೆ. ಆದ್ದರಿಂದ ಹಾಗೆ ತಿಳಿಯಬಾರದು. ದೈತ್ಯರು ಹಾಗೆ ತಿಳಿಯಲೆಂದೇ ಶ್ರೀರಾಮನು ಬಾಣ, ಧನಸ್ಸುಗಳನ್ನು ಪ್ರಯೋಗಿಸಿದನು. ಅತುಲನನ್ನು ಸಂಹರಿಸಲು ಶ್ರೀರಾಮನಿಗೆ ಧನುರ್ಬಾಣಗಳ ಅವಶ್ಯಕತೆಯು ಇದೆಯೇ? ಇಲ್ಲವಾದರೂ ದೈತ್ಯರು ಹಾಗೆ ತಿಳಿಯಲೆಂದು ಬಾಣ ಪ್ರಯೋಗವನ್ನು ಮಾಡಿ ಅಚಿಂತನೆಯಿಂದ ಇಡೀ ದೈತ್ಯ ಸಮುದಾಯವು ಅಂಧಂತಮಸ್ಸಿಗೆ ಹೋಗುವಂತೆ ಮಾಡಿದನು. ರೂಪಗಳಲ್ಲಿ ಭೇದ ಚಿಂತನೆ ಮತ್ತು ಆಯುಧ, ಕಪಿ, ಕರಡಿಗಳ ಸಹಾಯದಿಂದ ರಾಮನು ಗೆಲಿದನು ಎಂಬುವವು ಅಸದುಪಾಸನೆಗಳು. ತಮೋದ್ವಾರಗಳು.

ಇದೇ ರೀತಿಯಾಗಿ ದೈತ್ಯರು ಹನುಮ, ಭೀಮ, ಮಧ್ವರ ಅವತಾರಗಳಿಗೆ ಭೇದ ಚಿಂತನೆಯನ್ನು ಮಾಡಿ ತಮಸ್ಸಿಗೆ ಹೋಗಲೆಂದೇ ಇಲ್ಲಿ ಹನುಮ–ಭೀಮರ ರೂಪವನ್ನು ತಾಳಿ ಪರಸ್ಪರ ಸಂಭಾಷಣೆಯ ಲೀಲೆಯನ್ನು ಸೃಷ್ಟಿಸಿದನು. ಈ ಭೀಮ, ವಾಯುವಿನ ಮೂಲಾವತಾರಗಳಿಗೆ ಪರಸ್ಪರ ಭೇದವಿಲ್ಲ. ಕರುಣಾಶಾಲಿಗಳಾದ ಹರಿ–ವಾಯುಗಳಿಗೆ ದೈತ್ಯರಲ್ಲಿ ದ್ವೇಷವಿಲ್ಲ. ಅವರನ್ನು ವಂಚಿಸಿ ಮೋದ ಪಡುವುದರಲ್ಲೇ ಅವರಿಗೇನೂ ಅಭಿರುಚಿ ಇಲ್ಲ. ಅವರು ದೈತ್ಯರ ಅಭಿರುಚಿಗೆ (ಸ್ವರೂಪಕ್ಕೆ) ತಕ್ಕಂತೆ ವರ್ತಿಸುತ್ತಾರೆ. ಯಥಾರ್ಥವನ್ನು ದೈತ್ಯರೂ ಬಯಸುವುದಿಲ್ಲ.

"ದೇವಮಾನವ ದಾನವರು ಎಂದೀ ವಿಧದಲಾವಾಲಿಪ್ಪರು।
ಮೂವರೊಳಗಿವಗಿಲ್ಲ ಸ್ನೇಹೋದಾಶೀನ ದ್ವೇಷ ॥
ಜೀವರಧಿಕಾರಾನುಸಾರದ । ಲೀವ ಸುಖ ಸಂಸಾರ ದುಃಖವ ।
ತಾ ಉಣದಲವರಿಗುಣಿಸುವ ನಿರ್ಗತಾಶನನು ॥ ಹ.ಕ.ಸಾ ॥"
"ಮನದ ವೃತ್ತಿಗಳನ್ನುಸರಿಸಿ ಭೋಗಗಳೀವನು ತ್ರಿವಿಧ ಚೇತನಕೆ"

ಭಗವಂತನ ಈ ಲೀಲೆಯನ್ನನುಸರಿಸಿ ವಾಯುವೂ ಬ್ರಹ್ಮಾಂಡಲ್ಲಿ ಲೀಲಾತತ್ಪರನಾಗುತ್ತಾನೆ. ಅದಕ್ಕಾಗಿಯೇ ಇಲ್ಲಿ ಹನುಮ-ಭೀಮ ಎಂಬ ಎರಡು ರೂಪಗಳನ್ನು ತಾಳಿ ಪರಸ್ಪರ ಸಂಭಾಷಣೆ, ಹನುಮಂತನಿಗಿಂತ ಬುದ್ಧಿ ಬಲದಲ್ಲಿ ಭೀಮನು ಕಡಿಮೆ. ಹನುಮಂತನಿಗೆ ಭೀಮನು ನಮಸ್ಕರಿಸಿ ಆಶೀರ್ವಾದವನ್ನು ಪಡೆದನು. ಹನುಮಂತನ ರೋಮಗಳನ್ನು ರಕ್ಷಣಾರ್ಥವಾಗಿ ಭೀಮನು ಹೊಂದಿದನು ಎಂಬಿತ್ಯಾದಿಯಾದ ನಟನೆಗಳನ್ನು ತೋರಿದುದು ದೈತ್ಯರಿಗೆ ಮೋಹಕಲ್ಪಸುವುದಕ್ಕೆ. ಹನುಮಂತನೇ ರುದ್ರನು. ಆತನು ತನ್ನ ರೋಮ ರೋಮಗಳಲ್ಲಿ ಲಿಂಗಗಳನ್ನು ಧರಿಸಿದ್ದಾನೆ ಎನ್ನುವವರೂ ಇದ್ದಾರೆ. ಹಾಗೆ ತಿಳಿಯುವುದೇ ದೈತ್ಯರಿಗೆ ಆಪ್ಯಾಯಮಾನವು. ಅದಕ್ಕಾಗಿಯೇ ವಾಯುದೇವರು ಹಾಗೆ ಮೇಲೆ ತೋರಿದನು. ಯಾವ ವಾಯುದೇವರ ಒಂದು ರೋಮಕ್ಕೆ ಕೋಟಿ ರುದ್ರ ಬಲವು ಸಾಟಿಯಾಗಲಾರದೋ ಆ ಸಾಮರ್ಥ್ಯವನ್ನು ಹನುಮಂತನಾಗಿ ದೇವತೆಗಳಿಗೆ ಅಭಿವ್ಯಕ್ತ ಮಾಡಿ ಅಂಥಾ ತನ್ನನ್ನು ಮುಮುಕ್ಷುಗಳು ಆಶ್ರೈಸಬೇಕೆಂಬುದನ್ನು ಭೀಮನಾಗಿ ತೋರಿದನು. ಇದು ದೇವತೆಗಳ ಉಪಾಸನೆ. ವಾಯುದೇವರ ಮೂಲಕ್ಕೂ ಅವತಾರಗಳಿಗೂ ಭೇದವನ್ನಾಗಲೀ ಜ್ಞಾನ, ಬಲ, ಐಶ್ವರ್ಯಾದಿಗಳಲ್ಲಿ ನ್ಯುನಾಧಿಕ್ಯಾದಿಗಳನ್ನಾಗಲೀ ಚಿಂತಿಸಬಾರದು. ಇತರ ದೇವತೆಗಳಿಗೆ ಮೂಲರೂಪಕ್ಕೂ ಅವತಾರಗಳಿಗೂ ನ್ಯೂನಾಧಿಕ್ಯಗಳು ಉಂಟು. ದೂರ್ವಾಸ, ಅಶ್ವತ್ಥಾಮ, ಶುಕ ಈ ರೂಪಗಳು ರುದ್ರನ ಮೂಲಭೂತವಾದ ಜ್ಞಾನ ಬಲಗಳಿಂದ ವಿಭಿನ್ನವಾಗಿಯೇ ಇವೆ. ಆದರೆ ವಾಯುದೇವರಿಗೆ ಹೀಗೆ ಇಲ್ಲ.

ಕೆಲವರು ಹೇಳುತ್ತಾರೆ, ವಾಯುದೇವರು ಋಜುಗಣಸ್ಥರು. ಎಲ್ಲಾ ಋಜುಗಣಸ್ಥರೂ ಸಮಾನರು. ಅವರಲ್ಲಿ ವ್ಯತ್ಯಾಸವಿಲ್ಲ ಎಂದು. ಇಲ್ಲಿಯೂ ಸ್ಪಷ್ಟವಾಗಿ ತಿಳಿಯುವ ಅಂಶವಿದೆ. ಒಬ್ಬ ಋಜುಗಣಸ್ಥನು ಅವತಾರಗಳನ್ನು ಮಾಡಿದರೆ ಆತನಿಗೂ ಆತನ ಅವತಾರಗಳಿಗೂ ಸುತರಾಂ ಭೇದವಿರುವುದಿಲ್ಲ. ಸ್ವರೂಪದಿಂದ ಎಲ್ಲಾ ಋಜುಗಣಸ್ಥರೂ ಸಮಾನರೇ. ಆದರೆ ಸಾಧನ ಕಾಲದಲ್ಲಿ ಒಬ್ಬ ಋಜುಗಣಸ್ಥನು ಮತ್ತೊಬ್ಬ ಋಜುಗಣಸ್ಥನಿಗಿಂತ ನ್ಯೂನಾಧಿಕ್ಯನಾಗಿರುತ್ತಾನೆ. ಬ್ರಹ್ಮಾಂಡದಲ್ಲಿ ಸದಾಕಾಲವೂ ಇನ್ನೂರು ಜನ ಋಜುಗಣಸ್ಥರಿರುತ್ತಾರೆ. ಮೊದಲ ನೂರು ಜನಕ್ಕೆ ಹೆಸರುಗಳಿಲ್ಲ. ನೂರಾ ಒಂದನೇಯ ಋಜುವಿಗೆ 'ಕಲ್ಕಿ' ಎಂದು ಹೆಸರು. ಇನ್ನೂರನೇ ಯಾತನೇ ಬ್ರಹ್ಮನು. ಇನ್ನೂ ನೂರಾತ್ತೊಂಭತ್ತೊಂಭತ್ತನೇ ಯಾತನೇ ವಾಯುವು. ಈ ವಾಯುವೇ ಹನುಮ, ಭೀಮ, ಮಧ್ವರೆಂದು ಅವತಾರ ಮಾಡುತ್ತಾರೆಂದು ಬಳಿತ್ಥಾ ಸೂಕ್ತವು ಸಾರುತ್ತಿದೆ. ನೂರಾತೊಂಭತ್ತೆಂಟನೆಯವರೇ ಲಾತವ್ಯರು. ಹೀಗೆ ಈ ಗಣಸ್ಥರಿಗೆ ಅವ್ಯಜ್ಞಾವಸ್ಥೆಯಿಂದ ಸೃಷ್ಟಿಗೆ ಬಂದು ಮೋಕ್ಷಕ್ಕೆ ಹೋಗುವ ಪರಿಯಂತವಾಗಿ ಜ್ಞಾನವು ವೃದ್ಧಿಯಾಗುತ್ತಲೇ ಹೋಗುತ್ತದೆ. "ಆಮುಕ್ತಿ ಕ್ರಮೇಣ ವರ್ಧಮಾನೇನಾ" ಎಂದರು ಚಂದ್ರಿಕಾಚಾರ್ಯರು. ವಾಯು ಗದ್ಯದಲ್ಲಿ ಅಂದಮೇಲೆ ಸೃಷ್ಟಿಗೆ ಬಂದ ಒಂದನೇ ಕಲ್ಪದಲ್ಲಿರುವವರಿಗಿಂತ ಎರಡನೇ ಕಲ್ಪಕ್ಕೆ ಕಾಲಿಟ್ಟಿರುವವರಿಗೆ ಒಂದು ಕಲ್ಪದ ಸಾಧನವು ಅಧಿಕವಾಗಿರುವುದರಿಂದ ಒಂದನೇಯವರಿಗಿಂತ ಎರಡನೇಯವರು ಜ್ಞಾನಾಧಿಕ್ಯರು. ಈ ತತ್ವದ ಪ್ರಕಾರವಾಗಿ ವಾಯುದೇವರಿಗಿಂತ ಬ್ರಹ್ಮದೇವರು ನಾಲ್ಕು ಗುಣೋಪಾಸನೆಯನ್ನು ಅಧಿಕವಾಗಿ ಮಾಡುತ್ತಾರೆ. ವಾಯುದೇವರು ನಲವತ್ತೆಂಟು ಗುಣೋಪಾಸನೆಯನ್ನು ಮಾಡುತ್ತಾರೆ. ಬ್ರಹ್ಮನು ಐವತ್ತೆರಡು ಗುಣೋಪಾಸನೆಯನ್ನು ಮಾಡುತ್ತಾನೆ. ವಾಯುದೇವನು ಸ್ತ್ರೀಯರಲ್ಲಿ ಅವತರಿಸುತ್ತಾರೆ. ಬ್ರಹ್ಮನು ಲಿಂಗ ವರ್ಜಿತನಾದ ಶ್ರೀಹರಿಯ ನಾಭೀ ಕಮಲದಲ್ಲಿ ಹುಟ್ಟುತ್ತಾನೆ. ಈತನಿಗೆ ಅವತಾರವಿಲ್ಲ. ಋಜುಗಣದರಸನು. ಭಾರತೀದೇವಿಯು ಇಪ್ಪತ್ನಾಲ್ಕು ಗುಣೋಪಾಸನೆಯನ್ನು ಮಾಡಿದರೆ ಸರಸ್ವತೀ ದೇವಿಯು ಇಪ್ಪತ್ತಾರು ಗುಣೋಪಾಸನೆಯನ್ನು ಮಾಡುತ್ತಾಳೆ. ಹೀಗೆ ಸಾಧನ ಕಾಲದಲ್ಲಿ ಮಾತ್ರ ಈ ವ್ಯತ್ಯಾಸಗಳುಂಟು ಸ್ವರೂಪದಿಂದ ವ್ಯತ್ಯಾಸವಿಲ್ಲ.

"ದೃಹಿಣ ಪದ ಪರಿಯಂತ ವೃದ್ಧಿಯು॥ಹ.ಕ.ಸಾ॥ ಕ.ಸಾಸಂ ೩೪॥"
"ಋಜುಗಣಕೆ ಭಕ್ತ್ಯಾದಿ ಗುಣಸಾ। ಹಜವೆನಿಸುವುವು ಕ್ರಮದಿ ವೃದ್ಧ್ಯಾ ।
ಬಜ್ಜ ಪದದ ಪರ್ಯಂತ ಬಿಂಬೋಪಾಸನವು ಅಧಿಕ ॥ಬೃ.ತಾ.ಸಂ ॥"
"ಜ್ಞಾನ ಭಕ್ತ್ಯಾದ್ಯಖಿಳ ಗುಣ ಚತು । ರಾನನನೊಳಗಿಪ್ಪಂತೆ ಮುಖ್ಯ ।
ಪ್ರಾಣನಲಿ ಚಿಂತಿಪುದು ಯತ್ಕಿಂತ್ಕೊರತೆಯಾಗಿ ॥ ಕ.ಸಾ.ಸಂ ॥"
ಸತ್ಯಲೋಕಾಧಿಪನೊಳಗೆ ಐವತ್ತೆರಡು ಪವಮಾನನೊಳು ನಾ।"
ಲ್ವತ್ತು ಮೇಲೆಂಟಧಿಕ ಶಿವನೊಳಗಿಟ್ಟನಿಪ್ಪತ್ತು ॥ ಹ.ಕ.ಸಾ.ದ.ಸಾ.ಸಂ ।
ಸಧ್ಯಕ್ಕೆ ಹನುಮ-ಭೀಮರಲ್ಲಿ ಭೇದ ಚಿಂತಿಸಬಾರದೆಂಬುದಕ್ಕೆ ಈ ಪ್ರಮಾಣಗಳನ್ನು ನೋಡಿರಿ.
ಬ್ರಹ್ಮ ಉವಾಚ – ವಾಯೋರ್ಮಮಾಂತರಂ ನಾಸ್ತಿ । ಹರಿ ತತ್ವಶ್ಯನಿರ್ಣಯೇ ॥
ಅವತಾರೇಷುವಾಯೋಸ್ತು । ಯೋಂತರಂವಿಃಪ್ರಭೊ ॥ ತೇಂಥಂ
ತಂ ಪ್ರವಿಶ್ಯಂತಿ । ದೈತ್ಯಾಸ್ತು ನಚತೇಸುರಾಃ ॥ ಗ.ಪು. ಬ್ರಕಾಂ॥"
ಎನಗೆ ನಿನ್ನಲಿ ಭಕ್ತಿ ಜ್ಞಾನಗಳೆನಿತಿಹವೂ ಪ್ರಾಣನಲಿ ತಿಳಿಯದೆ ।
ಹನುಮದಾದ್ಯವತಾರಗಳ ಭೇದಗಳ ಪೇಳುವವ ॥
ದನುಜ ಘೋರಾಂಧ ತಮಸಿಗ್ಯೋಗ್ಯನು ನಸಂಶಯ ನಿನ್ನ ಬೈವರ ।
ಕೊನೆಯ ನಾಲಿಗೆ ಪಿಡಿದು ಛೇದಿಪೆನೆಂದನಬ್ಜಭವ ॥ ದೈ.ತಾ.ಸಂ ೧॥"

ಪರಮಾತ್ಮನಲ್ಲಿ ದ್ವೇಷ ಮಾಡಿದರೆ ವೈಭಕ್ತಿ. ನಿಂದಿಸಿದರೆ ನಿಂದಾಸ್ತುತಿ ಎಂದು ಕೆಲವು ಅವಿವೇಕಿಗಳು ಹೇಳುತ್ತಿರುವುದು ಉಂಟು. ಇದು ತಪ್ಪು ಗ್ರಹಿಕೆ. ವೈರಭಕ್ತಿ ಎಂದರೆ ಶ್ರೀಹರಿ, ಹರಿಭಕ್ತರನ್ನು ದ್ವೇಷಿಸುವವರನ್ನು ದ್ವೇಷಿಸುವುದೇ ವೈರಭಕ್ತಿ. ಶ್ರೀಹರಿ, ಹರಿದಾಸರನ್ನು ನಿಂದಿಸುವ ಅಧಮರನ್ನು ನಿಂದಿಸುವುದೇ ನಿಂದಾಸ್ತುತಿ ಎಂದು ಶ್ರೀವಿಜಯರಾಯ ತಿಳಿಸಿರುತ್ತಾರೆ. ಇದನ್ನೇ ಸಮ ವಿಷಮ ಪೂಜೆ ಎನ್ನುತ್ತಾರೆ.

ಕೆಲವರು ಹನುಮ-ಭೀಮ ಅಣ್ಣ ತಮ್ಮ ಇದ್ದಾಗೆ ಎನ್ನುತ್ತಾರೆ. ಇಲ್ಲಿ ಪ್ರಮಾಣಾನುಸಾರವಾಗಿ ಅಣ್ಣನೂ ಇಲ್ಲ ತಮ್ಮನೂ ಇಲ್ಲ. ಇರುವುದು ಆತನೇ.

ಇನ್ನು ರಾಜಸೂಯಕ್ಕೆ ಪುರುಷಾಮೃಗದ ಸಹಾಯವು ಯಾಕೆ ಬೇಕಾಗಿತ್ತು? ಮುಕ್ತಾಮುಕ್ತ ಜೀವರಾಶಿಗಳನ್ನೊಳಗೊಂಡು ವಿಶ್ವಕ್ಕೆ ಇಚ್ಛಾ ಮಾತ್ರದಿಂದ ಸಕಲಬೇಕುಗಳನ್ನು ನೀಡುವ ಸಮರ್ಥನಾದ ಸರ್ವೋತ್ತಮನಾದ ಶ್ರೀಮನ್ನಾರಾಯಣನು ಮೂರು ರೂಪಗಳಿಂದ ಸನ್ನಿಹಿತನಾಗಿರುವಾಗ ಈ ಪುರುಷಾಮೃಗದ ಅನುಗ್ರಹವೇ? ಒಂದು ಬ್ರಹ್ಮಾಂಡಕ್ಕೆ ಪರಮಾತ್ಮನಿಗೆ ಆದಿಷ್ಠಾನ ಭೂತನಾಗಿ ಈ ಬ್ರಹ್ಮಾಂಡದ ಸಕಲ ಜೀವರಾಶಿಗಳಿಗೆ ಬೇಕಾದುವುಗಳನ್ನೆಲ್ಲಾ ಅನಾಯಾಸವಾಗಿ ಭಗವದನುಗ್ರಹದಿಂದ ನೀಡುತ್ತಲೇ ಇರುವ ಈ ಭೀಮಾವತಾರಿಯಾದ ವಾಯುದೇವನಿಗೆ ಈ ಪುರಷಾಮೃಗದ ಕೊಡುಗೆಯು ಬೇಕೇ?

"ಮುಖ್ಯ ಪ್ರಾಣವಶೇಸರ್ವಂ" ಎಂದಂತೆ ಈ ಪುರುಷಾಮೃಗವನ್ನೊಳಗೊಂಡು ಸಕಲ ಜೀವ ಜಡಾತ್ಮಕವಾದ ಈ ಬ್ರಹ್ಮಾಂಡವೇ ಭೀಮನ ವಶವರ್ತಿಯಾಗಿರುವಾಗ ಭೀಮನು ಇದಕ್ಕೆ ಅಂಗಲಾಚಿದನಂತೆ!

> "ಸರ್ವೇಷಾಂ ಜೀವಾನಾಂ ಜ್ಞಾನ ಭಕ್ತಿ ವೈರಾಗ್ಯಾದಿಕಂ ದತ್ವಾ
> ಸ್ವಾಂತ ಭಗವನ್ಮೂರ್ತಿಂ ದರ್ಶಯಿತ್ವಾ । ಇಹಭಗವತ್ ಸೇವಾ ಸಾಧನ
> ಸಾಮಗ್ರ್ಯಾದಿಕಂ । ಸ್ವಾನುಷ್ಠಿತ ಕರ್ಮ ಶೇಷಾದಿಕಂ ದತ್ವಾ । ಸ್ರಕ್ಚಂದನ ವನಿತಾದಿ
> ಭೋಗಂ ದತ್ವಾ, ಸ್ವಯಂಜೀವಾಂತರ್ಯಾಮಿತಯಾಸ್ಥಿತ್ವಾ – ಸರ್ವ ಕರ್ಮ ಕೃತ್ವಾ ।
> ಕಾರಯಿತ್ವಾ ಪಾಲಯತಿ ॥ ಯತೋತೋ ವಾಯೋಃಸ್ಥಿತಿ ಕತೃತ್ವಂ ಉಕ್ತಮೇವ ॥
> ಇತಿ ಪ್ರಕಾಶ ಸಂಹಿತಾಯಾಭಿಪ್ರಾಯಃ ॥"

ಹಾಗಾದರೆ ಈ ಪ್ರಸಂಗಾನುಸಂಧಾನವೇನೆಂದರೆ ಕರ್ಮಜ ದೇವತೆಯಾದ ಪುರುಷಾಮೃಗಕ್ಕೆ ಕೀರ್ತಿಯನ್ನು ಕೊಡಬೇಕಾಗಿತ್ತು. ಪುರುಷಾಮೃಗದಿಂದಲೇ ಧರ್ಮಜನ ಯಜ್ಞವು ನೆರವೇರಿತೆಂಬ ಅಜ್ಞಾನವು ದುರ್ಯೋಧನಾದಿ ದೈತ್ಯರಿಗೆ ಉಂಟಾಗಬೇಕಾಗಿತ್ತು. ಅಸುರರ ದೃಷ್ಟಿಯಲ್ಲಿ ಹರಿ, ವಾಯುಗಳಿಗಿಂತ ಈ ಪುರುಷಾಮೃಗವೇ ಶ್ರೇಷ್ಠವಾಗ ಬೇಕಾಗಿತ್ತು. ರಾಜ ಸೂಯ ಯಾಗದಂಥಾ ಬೃಹತ್ ಕಾರ್ಯಕ್ರಮಕ್ಕೆ ಬೇಕಾದುದನ್ನು ನೀಡುವ ಸಾಮರ್ಥ್ಯವು ಆ ಪುರುಷಾಮೃಗಕ್ಕೆ ಬಂದುದಾದರೂ ಎಲ್ಲಿಂದ? ಎಂದರೆ ಕೇವಲ ಭೀಮಸೇನನ ಎಡಗಾಲಿನ ಸ್ಪರ್ಶ ಮಾತ್ರದಿಂದ. ಮೂರು ಕೋಟಿ ವಾಯು ಮುಕ್ತ ಲಿಂಗಗಳನ್ನು ಭಕ್ತಿಯಿಂದ ಅರ್ಚಿಸಿದುದಕ್ಕೆ ಆ ಪುರುಷಾಮೃಗಕ್ಕೆ ಭೀಮನ ಎಡಗಾಲನ್ನು ಸ್ಪರ್ಶಮಾಡುವ ಭಾಗ್ಯವು ದೊರಕಿತು. ಭೀಮನು ಪುರುಷಾಮೃಗವನ್ನು ಭೂಲೋಕಕ್ಕೆ ಎಳೆತಂದನು. ಅದ್ನು ಎಳೆಗಳನ್ನು ತರುವುದಕ್ಕೆ ಹನುಮಂತನ ರೋಮಗಳ ಎಳೆತಂದನು. ಅಸುರ ಮೋಹಕಕ್ಕೆ.

॥ ಪದ ॥ ಲಕ್ಷ ಮಂತ್ರಾದಿಂದ । ತ್ರ್ಯಕ್ಷ ಪೂಜಿತನಾಗಿ ।
ಅಕ್ಷ ಹೃದಯ ಉುಪೇಕ್ಷಿಸಿದ್ದೇಕೋ ॥
ಶಿಕ್ಷಿಸುವನು ದೂತಾ। ಪೇಕ್ಷೆಯುಳ್ಳವರನು ।
ಲಕ್ಷ್ಮೀಪತಿದಾಸನ । ರಕ್ಷಿಸಿ ಸುಜನರ ॥ ೨೨ ॥

**ಶಬ್ದಾರ್ಥ:** ಲಕ್ಷ ಮಂತ್ರ = ಸಮಸ್ತ ವೇದಗಳಿಂದ; ತ್ರ್ಯಕ್ಷಪೂಜಿತ = ತ್ರಿನೇತ್ರಧಾರಿಯಾದ ಶಂಕರನಿಂದ ಸ್ತುತ್ಯಮಾನನಾಗಿ; ಅಕ್ಷಹೃದಯ = ಜೂಜಿನಲ್ಲಿ ಜಯಗಳಿಸುವ ವೇದಮಂತ್ರ; ಉಪೇಕ್ಷಿಸಿದ್ದು ಏಕೆ = ಏತಕಾಗಿ ಗೆಲ್ಲಲು ಯತ್ನಿಸಲಿಲ್ಲ?; ದ್ಯೂತಾಪೇಕ್ಷೆಯುಳ್ಳವರು = ಜೂಜುಕೋರರು; ಲಕ್ಷ್ಮೀ ಪತಿದಾಸ = ಭೀಮಸೇನನು; ಸಜ್ಜನರನ್ನು ರಕ್ಷಿಸುವನು.

**ಭಾವಾರ್ಥ:** ಶ್ರೀಕೃಷ್ಣ ಪರಮಾತ್ಮನ ಅನುಗ್ರಹದಿಂದ ಪಾಂಡು ಸುತರು ರಾಜ ಸೂಯ ಯಾಗವನ್ನು ಸಾಂಗವಾಗಿ ನೆರವೇರಿಸಿದರು. ದಾನಕೊಡುವ ಕಾರ್ಯವನ್ನು ದುರ್ಯೋಧನನಿಗೆ ವಹಿಸಿಕೊಡಲಾಗಿತ್ತು. ಅವನು ಸಾಲದೆನ್ನುವಷ್ಟು ಒಬ್ಬೊಬ್ಬರಿಗೆ ದಾನವನ್ನು ಕೊಟ್ಟು ಬಿಟ್ಟನು. ಅವನಾದರೂ ಅಧಿಕ ಕೊಟ್ಟರೆ ಅವನಿಗೂ ತೃಪ್ತಿ, ಪಾಂಡವರಿಗೂ ತೃಪ್ತಿ, ಬ್ರಾಹ್ಮಣರಿಗೂ ತೃಪ್ತಿ. ಭಂಡಾರ ಬರಿದಾಗಲಿ ಪಾಂಡವರು ಶಪಿಸಲ್ಪಡಲಿ ಎಂದೇ ದ್ವಿಗುಣಿತವಾಗಿ ಕೊಟ್ಟನು. ಅದು ಪಾಂಡವರಿಗೆ ಚತುರ್ಕ್ಷಣಿಯಾಗಿ ಅಕ್ಷಯವಾಯಿತು. ದೇವದುಂದುಭಿಗಳು ಮೊಳಗಿದವು. ಗಂಧರ್ವರು ಹಾಡಿದರು. ನಾಕಿಗಳು ನರ್ತಿಸಿದರು. ಅವಭೃತದಲ್ಲಿ ಪಾಂಡವರು ರಾಜಾಧಿರಾಜರುಗಳಿಂದ ಕೂಡಿಕೊಂಡು ಗಂಗಾನದಿಯಲ್ಲಿ ಸ್ನಾನ ಮಾಡಿದರು. ತರುವಾಯ ಎಲ್ಲರೂ ತಮ್ಮ ತಮ್ಮ ನಗರಗಳಿಗೆ ಹೊರಟು ಹೋದರು.

ತರುವಾಯ ಧರ್ಮರಾಯನು ರತ್ನಖಚಿತ ಸಿಂಹಾಸನದ ಮೇಲೆ ದ್ರೌಪದಿಯ ಸಹಿತವಾಗಿ ಕುಳಿತಿರುವಾಗ ಶ್ರೀಕೃಷ್ಣನೂ ರುಕ್ಮಣೀ ಸತ್ಯಭಾಮಾ ಸಮೇತವಾಗಿಯೂ, ಪಾಂಡು ಸೋದರರು ತಮ್ಮ ತಮ್ಮ ಪತ್ನೀ ಬಂಧುಗಳಿಂದ ಸಭಾಮಧ್ಯದಲ್ಲಿ ವಿಜೃಂಭಿಸಿದರು. ಅದೇ ಸಮಯದಲ್ಲಿ ದುರ್ಯೋಧನನು ತಮ್ಮ ತಮ್ಮೊಂದಿರೊಡನೆ ಖಡ್ಗಧಾರಿಯಾಗಿ ಸಭಾ ಪ್ರವೇಶವನ್ನು ಮಾಡಿದನು. ವಿಶ್ವಕರ್ಮನು ಆ ಅರಮನೆಯನ್ನು ಬಹು ಚಿತ್ರ ವಿಚಿತ್ರವಾಗಿ ನಿರ್ಮಿಸಿದ್ದನು. ಕನ್ನಡಿಗಳ ವಿನ್ಯಾಸದಿಂದ ಗೋಡೆ ಯಾವುದೋ ಬಾಗಿಲು ಯಾವುದೋ ಎಂದೇ ತಿಳಿಯುತ್ತಿರಲಿಲ್ಲ. ನೆಲದಲ್ಲಿ ಕೊಳ ಯಾವುದೋ ನೆಲ ಯಾವುದೋ ತಿಳಿಯುತ್ತಿರಲಿಲ್ಲ. ಎಲ್ಲವೂ ಮಿಂಚು, ಶುಭ್ರ ಮತ್ತು ರಂಜನೀಯ. ಈ ಅರಮನೆಯನ್ನು ಪ್ರವೇಶ ಮಾಡಿದ ದುರ್ಯೋಧನನು ದಿಗ್ಭ್ರಾಂತನಾಗಿ ಗೋಡೆಗೆ ಹಾಯ್ದನು. ಕೊಳಕ್ಕೆ ಬಿದ್ದನು ಅದೇ ಕ್ಷಣದಲ್ಲಿ ಭೀಮನು ದ್ರೌಪದಿ, ಸಾತ್ಯಕಿ, ದುಷ್ಟದ್ಯುಮ್ನಾದಿಗಳು ಜೋರಾಗಿ ನಕ್ಕು ಪರಿಹಾಸ್ಯವನ್ನು ಮಾಡಿದರು. ಧರ್ಮರಾಯನು ದುರ್ಯೋಧನನಿಗೆ ಉಪಚಾರವನ್ನು ಮಾಡಿಸಿದನು. ಆದರೆ ದುರ್ಯೋಧನನು ಪಾಂಡವರ ಐಶ್ವರ್ಯವನ್ನು ಕಂಡು ಒಳಗೊಳಗೇ ಮರುಗಿದನು. ಅಸೂಯೆಯ ಕೆರೆ ತುಂಬಿ ಕೋಡಿ ಹರಿಯಿತು. ಋಜುಪುಂಗವರಾದ್ದರಿಂದಲೇ ದ್ರೌಪದೀ ಭೀಮರ ಮೇಲೆ ಬಹಳವಾದ ದ್ವೇಷವನ್ನು ತಾಳಿ ಧರ್ಮರಾಯನಿಂದ ಕೊಡಲ್ಪಟ್ಟ ಬಳುವಳಿ ಉಡುಗೊರೆಗಳನ್ನು ತಿರಸ್ಕರಿಸಿ ತನ್ನ ಪಟ್ಟಣದ ಕಡೆಗೆ ನಡೆದೇ ಬಿಟ್ಟನು. ತನ್ನ ಸೋದರಮಾವನಾದ ಶಕುನಿಯನ್ನು ಬರಮಾಡಿಕೊಂಡು ತನ್ನ ದುಃಖವನ್ನು ತೋಡಿಕೊಂಡನು. ಭೀಮ

ದ್ರೌಪದಿಯರ ಮೇಲೆ ಸೇಡನ್ನು ತೀರಿಸಿಕೊಳ್ಳದೆ ಬದುಕಲಾರೆನೆಂದು ಹೇಳಿದನು. ನನಗೆ ಶಕ್ತಿ ಇದ್ದಿದ್ದರೆ ಭೀಮ, ಕೃಷ್ಣರನ್ನು ಈಗಲೇ ಸಂಹರಿಸಿಬಿಡುತ್ತಿದ್ದೆ. ಎಲ್ಲಾ ರಾಜರೂ ಪಾಂಡವರಿಗೆ ಕಪ್ಪವನ್ನು ನೀಡುತ್ತಿದ್ದಾರೆ. ಇದನ್ನು ಕಂಡು ನಾನು ಹೇಗೆ ಸಹಿಸಲಿ? ಎಂದರೆ ದುರ್ಯೋಧನನನ್ನು ಕೆರಳಿಸಲಿಕ್ಕಾಗಿ ಶಕುನಿಯು ದುರ್ಯೋಧನನಿಗೆ "ನೀನೂ ಕಪ್ಪವನ್ನು ಕೊಟ್ಟು ಅವರನ್ನು ಆಶ್ರೈಸು" ಎಂದನು. ಇದನ್ನು ಕೇಳಿದ ದುರ್ಯೋಧನನಿಗೆ ಹೇಗಾಗಿರಬೇಕು? "ದ್ವಾಪರಾಂಶೋsತಿ ಪಾಪ ಕೃತ್ । ನಾಸ್ತಿಕ್ಯರೂಪಃ ಶಕುನಿರ್ವಿವರ್ಣಂ " ಈ ಪಾಪಿ ಶಕುನಿಯು ದುರ್ಯೋಧನನ ನಿರ್ಧಾರವನ್ನು ದಾರ್ಢ್ಯಗೊಳಿಸಿ ಜೂಜಿನ ಸಂಚನ್ನು ಮುಂದಿರಿಸಿದನು. ಈ ಗಾಂಧಾರನು ಹೇಳುತ್ತಾನೆ. "ಅಯ್ಯೋ" ನನ್ನ ವತ್ಸಾ, ಬಲ ಪ್ರಯೋಗದಿಂದ ಪಾಂಡವರನ್ನು ಗೆಲ್ಲಲಾಗುವುದಿಲ್ಲ. ಅಹಿಂಸಾ ಎಂಬ ಕಪಟೋಪಾಯವನ್ನು ಅನುಸರಿಸಿ, ರಕ್ತಪಾತದಿಂದ ಕುಟುಂಬಗಳು ಹಾಳಾಗುತ್ತವೆ. ನಮಗೆ ಪಾಪ ಬರುತ್ತದೆ. ಅದಕ್ಕಾಗಿ ಜೂಜಾಡಿದರೆ ಯಾರ ಪ್ರಾಣ ಹಾನಿಯೂ ಇಲ್ಲ ನೋಡು. ಹಾಗೆ ಜೂಜಾಟಕ್ಕೆ ಪಾಂಡವರನ್ನು ಕರೆ. ಕ್ಷತ್ರಿಯರೆಂದ ಮೇಲೆ ಯಾವ ಸ್ಪರ್ಧೆಗೂ ಹಿಂಜರಿಯಬಾರದಷ್ಟೇ. ನಾವು ಒಳ್ಳೇ ಮಾತುಗಳನ್ನು ಆಡಿ ಮೊದಲು ವಿನೋದಕ್ಕಾಗಿ ಪಗಡೆಯನ್ನು ಪ್ರಾರಂಭಿಸೋಣ. ತರುವಾಯ ಹಣ, ರಜ್ಯಕ್ಕೆ ಸೆಳೆದು ಪಾಂಡವರ ಕೈಗೆ ಭಿಕ್ಷಾ ಪಾತ್ರೆಯೂ ಸಿಗದಂತೆ ಕಾಡಿಗಟ್ಟೋಣ" ಎಂದು ಹೇಳಿದನು. ಅದಕ್ಕೆ ದುರ್ಯೋಧನನು "ಮಾವಾ ಜೂಜಾಟದಲ್ಲಿ ನಮಗೇ ಜಯವು ಲಭಿಸುತ್ತದೆಂಬಲ್ಲಿ ಭರವಸೆ ಏನು?" ಎಂದು ಕೇಳಿದನು. ಅದಕ್ಕೆ ಶಕುನಿಯು ತನ್ನ ಸೊಂಟದಲ್ಲಿದ್ದ ದಾಳಗಳನ್ನು ತೆಗೆದು ತೋರಿಸಿ ಇವು ನಾನು ಹೇಳಿದಂತೆ ಕೇಳುತ್ತವೆ. ಇಕೋ ನೋಡು, ಮೂರು ಅಹ್ಹಾ, ನಾಲ್ಕು ಅಹ್ಹಾ, ಐದು ಅಹ್ಹಾ! ಇನ್ನೇನು ಬೇಕು" ಎಂದು ನಕ್ಕನು. ದುರ್ಯೋಧನನು ಹಿಗ್ಗಿ ಹೋದನು. ಕುಟಿಲೋಪಾಯವು ಕಾರ್ಯರೂಪಕ್ಕೆ ಸಿದ್ಧವಾಯಿತು.

"ಯಾಂ ಯಾಂ ಶ್ರಿಯಂ ಪ್ರದೀಪ್ತಾಂ ತ್ವಂಪಾಂಡವೇಷು ಪ್ರಪಶ್ಯತಿ ॥
ತಾಮ ಕ್ಲೇಶತ ಆದಾತ್ಯೇ। ಕ್ರೀಡನ್ನ ಕ್ಷೈಸ್ತ್ವದಂತಿಕೇ ॥ ೨೧ -೨೯೪ ॥"

ಪಾಂಡವರಲ್ಲಿ ನೀನು ಕಂಡ ಸಕಲೈಶ್ವರ್ಯವು ನಿನ್ನ ಪಾಲಾಗುವಂತೆ ಮಾಡುತ್ತೇನೆ. ಎಂದು ಆಶ್ವಾಸನೆಯನ್ನು ನೀಡಿದನು.

ಶಕುನಿಯ ದಾಳಗಳು ಯಾವುವು ಎಂಬುದನ್ನು ತಿಳಿಯಬೇಕು. ಶಕುನಿಯ ಸಹೋದರರು ನೂರು ಮಂದಿ ಇದ್ದರು. ಇವನ ತಂದೆಯೂ ಸೇರಿ ನೂರಾ ಒಂದು ಮಂದಿ. ಒಂದು ದಿನ ದುರ್ಯೋಧನನು ಮಾತುಲ ವರ್ಗವೆನ್ನದೆ ಈ ನೂರಾ ಒಂದು ಜನರನ್ನು ಉಪಾಯಾಂತರದಿಂದ ಭೋಜನ ಕೂಟಕ್ಕೆ ಆಹ್ವಾನಿಸಿದನು. ಭಾರೀ ಕಟ್ಟಡದ ಗೃಹ ಪ್ರವೇಶ ಸಮಾರಂಭವು ಅದಾಗಿತ್ತು. ಭವ್ಯ ಕಟ್ಟಡವು ಅದೆಂದು ವರ್ಣಿಸಿ ಅದನ್ನು ಅವರು ನೋಡಲೇಬೇಕೆಂಬ ಕುತೂಹಲವನ್ನು ಕೆರಳಿಸಿದನು. ಸರಿ ಎಲ್ಲರೂ ಆ ಕಟ್ಟಡದೊಳಗೆ ನುಗ್ಗಿದರು.

ಆ ಮನೆಗೆ ಕಿರಿದಾದ ಒಂದು ಮಹಾದ್ವಾರವನ್ನು ಬಿಟ್ಟರೆ ಮತ್ತೆಲ್ಲೂ ಕಿಟಕಿ ಬಾಗಿಲುಗಳಿರಲಿಲ್ಲ. ಮೇಲೆ ಒಂದು ಚಿಕ್ಕ ಗವಾಕ್ಷಿಯು ಮಾತ್ರ ಇತ್ತು. ಯಾರೂ ಆ ಕಟ್ಟಡದ ಬಗ್ಗೆ ಹೆಚ್ಚಿಗೆ ಯೋಚಿಸದೆ ಭೋಜನಕ್ಕೆ ಕುಳಿತಾಗ ದುರ್ಯೋಧನನು ಅವರನ್ನೆಲ್ಲಾ ಒಳಗೇ ಕೂಡಿಹಾಕಿ ಹೊರಗೆ ಬೀಗಮುದ್ರೆಯನ್ನು ಜಡಿದನು. ಯಾರ ಮೊರೆಯನ್ನೂ ಕಿವಿಗೆ ಹಾಕಿ ಕೊಳ್ಳಲಿಲ್ಲ. ಪ್ರತಿ ನಿತ್ಯವೂ ನೂರಾ ಒಂದು ಜನಕ್ಕೆ ನೂರಾ ಒಂದು ತುತ್ತನ್ನು ಮೇಲಿನ ಗವಾಕ್ಷಿಯ ಮುಖಾಂತರವಾಗಿ ಕೊಡುತ್ತಾ ಬಂದನು. ಈ ಅಲ್ಪೋದನದಿಂದ ಎಲ್ಲರೂ ಸಾಯುವುದು ನಿಶ್ಚಯವೆಂಬುದು

ಗೊತ್ತಾಯಿತು. ಆದರೆ ಈ ನೂರಾ ಒಂದು ಮುಷ್ಟಿ ಕವಳವನ್ನು ಒಬ್ಬನೇ ಭುಂಜಿಸಿ ಅವನೊಬ್ಬನು ಮಾತ್ರ ಬದುಕುಳಿದು ಆ ಕೌರವನನ್ನು ನಾಶ ಪಡಿಸಬೇಕೆಂದು ಎಲ್ಲರೂ ತೀರ್ಮಾನಿಸಿದರು. ಆದರೆ ಈ ಕೆಲಸವು ಯಾರಿಂದ ಸಾಧ್ಯ? ಎಂಬ ಪ್ರಶ್ನೆಯು ಬಂದಾಗ ಇದಕ್ಕೆ ಶಕುನಿಯೇ ಸರಿ ಎಂದು ಎಲ್ಲರೂ ತೀರ್ಮಾನಿಸಿದರು. ತರುವಾಯ ಘೋರೋಪವಾಸದಿಂದ ಎಲ್ಲರೂ ಮೃತಿ ಹೊಂದಿದರು. ಕೌರವನಿಗೆ ತಿಳಿಯದಂತೆ ನೂರಾ ಒಂದು ತುತ್ತನ್ನು ತಿಂದು ಬದುಕಿದ ಶಕುನಿಯು ಅವನ ತಂದೆಯ ಆಸ್ತಿಗಳನ್ನು (ಸಂಸ್ಕಾರ ಶೂನ್ಯವಾದ) ಪಡೆದು ವಾಮಾಚಾರ ಮಾರ್ಗದಿಂದ ತನ್ನ ತಂದೆಯನ್ನು ಆವಾಹಿಸಿ ಆ ಆಸ್ತಿಗಳಿಂದ ಎರಡು ದಾಳಗಳನ್ನು ಸಿದ್ಧ ಮಾಡಿಸಿಕೊಂಡು ತನ್ನ ಸೊಂಟದಲ್ಲಿ ಇಟ್ಟು ಕೊಂಡಿದ್ದನು. ನೂರಾ ಒಂದನೇ ದಿನದಲ್ಲಿ ಕಟ್ಟಡದ ಬಾಗಿಲನ್ನು ತೆಗೆದಾಗ ಈ ಶಕುನಿಯೊಬ್ಬನೇ ಬದುಕಿದ್ದನು. ದುರ್ಯೋಧನನನ್ನು ಕಂಡ ಕೂಡಲೇ "ವತ್ಸಾ, ನಾನೇ ಇವರನ್ನು ಕೊಲ್ಲಬೇಕೆಂದಿದ್ದೆ. ನೀನೆ ಒಳ್ಳೇ ಉಪಾಯವನ್ನು ಮಾಡಿದಿ. ಇವರನ್ನೆಲ್ಲಾ ನಾನೇ ಕೊಂದು ಅವರ ಅನ್ನವನ್ನು ಉಂಡು ನಿನಗಾಗಿ ಬದುಕಿದ್ದೇನೆ" ಎಂದು ದ್ವಂದ್ವಾರ್ಥದಿಂದ ಹೇಳಿ ಅವನ ವಿಶ್ವಾಸವನ್ನು ಗಳಿಸಿಕೊಂಡಿದ್ದನು. ಸದಾ ಕಾಲವೂ ಮೈಲಿಗೆಯಲ್ಲೇ ಇರುತ್ತಿದ್ದನು. ಈ ಖಳನು, ಅಸ್ತಿದಾಳಗಳ ಸಂಪರ್ಕದಿಂದ.

ಇನ್ನು ಈ ಜೂಜಿನ ಯೋಜನೆಯನ್ನು ದುಷ್ಟರು ಧೃತರಾಷ್ಟನ ಮುಂದಿಟ್ಟರು. ಆದರೆ ಧೃತರಾಷ್ಟನು ಇದನ್ನು ಕೇಳಿ ಕೃದ್ಧನಾಗಿ ಆ ಪಾಪದ ಕೆಲಸವು ಬೇಡ. ಕ್ಷತ್ರಿಯರು, ಯುದ್ಧಮುಖದಿಂದ ರಾಜ್ಯವನ್ನು ಪಡೆಯಬೇಕೇ ವಿನಃ ಈ ದುರ್ಮಾರ್ಗದಿಂದ ಅಲ್ಲವೆಂದು ಹೇಳಿದನು. ಅದಕ್ಕೆ ದುರ್ಯೋಧನನು "ಅಪ್ಪಾ ನೀನು ನನ್ನ ಮರಣವನ್ನು ಕಾಣಲಿಚ್ಛಿಸುವುದಾದರೆ ನನ್ನ ಮಾತಿಗೆ ಅಡ್ಡ ಪಡಿಸು. ಪಾಂಡವರ ಕೈಯಿಂದ ನನ್ನನ್ನು ಕೊಲ್ಲಿಸಬೇಡ. ನೀನೇ ಕೊಂದು ಹಾಕು" ಎಂದು ಹೇಳಿ ಒಂದಂಶದಿಂದ ಧೃತರಾಷ್ಟನ ಮನಸ್ಸಿನಲ್ಲಿ ಪ್ರವೇಶಿಸಿದನು. ಆಗ ಧೃತರಾಷ್ಟನು ಪುತ್ರವ್ಯಾಮೋಹದಿಂದ ಜೂಜಿಗೆ ಒಪ್ಪಿ ವಿದುರನ ಸಲಹೆಯನ್ನು ಕೇಳಿದನು. ಅದಕ್ಕೆ ವಿದುರನು ಒಪ್ಪುತ್ತಾನೆಯೇ? ಬೇಡ ಬೇಡವೆಂದು ತಡೆದನು. ಆದರೆ ಧೃತರಾಷ್ಟನು ನನಗೆ ಪಾಂಡವರನ್ನೂ ಮತ್ತು ನನ್ನ ಮಕ್ಕಳನ್ನೂ ಏಕಕಾಲದಲ್ಲಿ ನೋಡಿ ಸಂತೋಷ ಪಡಬೇಕೆಂಬ ಆಸೆಯಾಗಿದೆ. ಅದಕ್ಕೇನೇ ಈ ಪಗಡೇ ಜೂಜಿನ ನೆಪ ಅಷ್ಟೇ. ಅದಕ್ಕಾಗಿಯೇ ಪಾಂಡವರನ್ನು ಇಲ್ಲಿಗೆ ಕರೆಸುವ ವ್ಯವಸ್ಥೆಯನ್ನು ಮಾಡು ಎಂದು ಧೃಢವಾಗಿಯೇ ಹೇಳಿಬಿಟ್ಟನು.

ರಾಜಾಜ್ಞೆಗೆ ತಲೆಬಾಗಿದ ವಿದುರನು ಶ್ರೀಹರಿ ಚಿತ್ತವೆಂದು ಇಂದ್ರಪ್ರಸ್ಥಕ್ಕೆ ಪ್ರಯಾಣವನ್ನು ಬೆಳೆಸಿದನು. ಇದೇ ಸಂದರ್ಭದಲ್ಲಿ ಸಾಲ್ವನೆಂಬ ದೈತ್ಯನು ಶಿಶುಪಾಲನ ವಧ, ಜರಾಸಂಧರ ವಧೆಯ ವಾರ್ತೆಯನ್ನು ಕೇಳಿ ಅನೇಕ ವರ್ಷಗಳವರೆಗೆ ಮಣ್ಣನ್ನು ತಿಂದು ತಪಸ್ಸನ್ನು ಮಾಡಿ ರುದ್ರದೇವರ ವರವನ್ನು ಪಡೆದು ಕೃಷ್ಣನನ್ನು ಮೊದಲ್ಗೊಂಡು ಯಾದವರನ್ನೆಲ್ಲಾ ಸಂಹಾರಮಾಡಲು ದ್ವಾರಕೆಗೆ ದಾಳಿಯಿಟ್ಟಿದ್ದನು. ಈ ವಾರ್ತೆಯನ್ನು ನಾರದರ ಮುಖಾಂತರವಾಗಿ ಕೇಳಿದ ಶ್ರೀ ಕೃಷ್ಣನು ಸಾಲ್ವನನ್ನು ನಿಗ್ರಹಿಸುವುದಕ್ಕಾಗಿ ಧರ್ಮರಾಜನಿಂದ ಬೀಳ್ಕೊಂಡು ಇಂದ್ರಪ್ರಸ್ಥದಿಂದ ಹೊರಟನು.

ಇತ್ತ ವಿದುರನು ಧರ್ಮರಾಯನಲ್ಲಿಗೆ ಬಂದು ದೊಡ್ಡಪ್ಪನ ಸಂದೇಶವನ್ನು ತಿಳಿಸಿ ಹಸ್ತಿನಾವತಿಗೆ ಬರಬೇಕೆಂದು ಆಮಂತ್ರಣವನ್ನಿತ್ತನು. ಸರಿ. ಹಿರಿಯಪ್ಪನ ಆಸ ತೀರಿಸಬೇಕೆಂದು ಧರ್ಮರಾಯನು ಹಸ್ತಿನಾಪುರಕ್ಕೆ ಹೊರಡಲು ಸಿದ್ಧನಾಗಿ ತನ್ನ ತಮ್ಮಂದಿರಿಗೆ ತಾಯಿ, ದ್ರೌಪದಿ ಮತ್ತು ನಾದಿನಿಯರಿಗೆಲ್ಲಾ ತಿಳಿಸಿದನು. ಆದರೆ ಎಲ್ಲರೂ ಇದಕ್ಕೆ ಒಪ್ಪಲಿಲ್ಲ. ಆದರೇನು? ಹಿರಿಯಣ್ಣನ ಆಜ್ಞೆ. ಒಲ್ಲದ ಮನಸ್ಸಿನಿಂದ ಎಲ್ಲರೂ ಹಸ್ತಿನಾಪುರಕ್ಕೆ ಪ್ರಯಾಣವನ್ನು ಬೆಳೆಸಿದರು. ವಿದುರನಾದರೂ ಧರ್ಮರಾಯನಿಗೆ ದ್ಯೂತದ ಪಾಪದ ಫಲವನ್ನೂ ದೊಡ್ಡಪ್ಪನ ಅಭಿಲಾಷೆಯನ್ನೂ

ತಿಳಿಸಿ ನಿನಗೆ ಸರಿ ಬಂದಂತೆ ಮಾಡು ಎಂದು ಹೇಳಿದ್ದನು. ಆದರೆ ಅದೇ ಸಮಯದಲ್ಲಿ ಧರ್ಮಜನಿಗೂ ಕಲಿಯ ಆವೇಶವಿದ್ದ ಪ್ರಯುಕ್ತ ಆಮಂತ್ರಣಕ್ಕೇ ಮನ್ನಣೆಯನ್ನಿತ್ತು ಹೊರಟನು. (ವಿದುರ-ಧರ್ಮರಾಯ ಇವು ಯಮಮಧರ್ಮನ ಏಕಕಾಲದ ಎರಡು ಅವತಾರಗಳು)

ಧರ್ಮರಾಜನು ಹಸ್ತಿನಾಪುರಕ್ಕೆ ಬಂದುದೇ ತಡ. ಆತನಿಗೆ ಎಲ್ಲಿಲ್ಲದ ರಾಜ ಮರ್ಯಾದೆಯು ಸಲ್ಲಿತು. ಬಂದ ಧರ್ಮಜನು ಧೃತರಾಷ್ಟ್ರ ಗಾಂಧಾರಿಗೆ ನಮಸ್ಕರಿಸಿದನು. ಅದ್ದೂರಿಯಾದ ಸಮಾಗಮ. ಭೋಜನ ಕೂಟದಲ್ಲಿ ಭಕ್ಷ್ಯಗಳ ಸುರಿಮಳೆಯಾಯಿತು. ಎರಡು ದಿನಗಳು ಕಳೆಯಲು ಹೊಸ ಹವ್ಯಾಸದ ಚಿಂತನೆಯು ಶುರುವಾಯಿತು. ಅದಕ್ಕಾಗಿಯೇ ಹೊಂಚು ಹಾಕಿದ್ದ ಶಕುನಿಯು "ಜೂಜಾಟಕ್ಕೆ ಕುಳಿತರೆ ಕಾಲವು ಎಷ್ಟಾಯಿತು ಎಂಬುದು ತಿಳಿಯುವುದೇ ಇಲ್ಲ. ಹೇಗೋ ನಾವೆಲ್ಲಾ ಒಟ್ಟಿಗೇ ಸೇರಿದ್ದೇವೆ. ಈಗ ಪಗಡೆಯಾಡಬಹುದಲ್ಲಾ. ಧರ್ಮರಾಯನಂತೂ ಪಗಡೆ ಆಟದಲ್ಲಿ ಬಹು ನಿಪುಣನು. ಆತನ ಕೈಚಳಕವನ್ನು ನಾವೆಲ್ಲಾ ನೋಡಿ ಆನಂದಿಸಲು ಇಚ್ಛಿಸಿದ್ದೇವೆ. ಏಕಾಗಬಾರದು?" ಎಂದು ಕೇಳಿದನು. ಅಷ್ಟರೊಳಗೇ ಆಟದ ವೇದಿಕೆಯು ಸಿದ್ಧವಾಗಿತ್ತು. ಕೆಲವು ವೇಳೆ ಬೇಡವಾದುವುಗಳನ್ನು ಬೇಕೆನ್ನಿಸುವಂತೆ ಸಿದ್ಧ ಮಾಡಿ ಮುಂದಿರಿಸಿದರೆ ಯಾರೂ, ಯಾವುದನ್ನೂ ಯಾವಾಗಲೂ ಬೇಡವೆನ್ನಲಾರರು. ಅದೇ ರೀತಿಯಾಗಿ ದುರ್ಯೋಧನನು ಸಿದ್ಧ ಮಾಡಿಟ್ಟಿದ್ದ ಪಗಡೆಯ ವೇದಿಕೆಯನ್ನು ನೋಡಿದರೆ ಅದೇನು ಬೆನ್ನುಮಣೇ! ಅದೇನು ರತ್ನ ಕಂಬಳೀ; ಅದೆಂತಹ ರತ್ನ ಖಚಿತವಾದ ದಂತದ ಹಲಗೆ! ಬಣ್ಣ ಬಣ್ಣದ ತೂಗುದೀಪಗಳು, ಮುತ್ತಿನ ಗೊಂಚಲುಗಳು, ಚಾಮರಧಾರಿಗಳಾದ ಸುಂದರ ವಾರಾಂಗನೆಯರು! ಅಷ್ಟೇ ಅಲ್ಲ, ಶಕುನಿಯು ತನ್ನ ಸರ್ವಸ್ವವಾಗಿದ್ದ, ಜಗತ್ತಿನಲ್ಲೇ ಅಂದರೆ ಇಂದಿನವರೆಗೂ ಕೀರ್ತಿ?) ಸಾಲಿನಲ್ಲಿರುವ ತನ್ನ ದಾಳ (ಮೈಲಿಗೆ)ಗಳನ್ನು ಧರ್ಮರಾಯನ ಕೈಗೆ ಇತ್ತು ಬೆನ್ನನ್ನು ಸವರಿಸುತ್ತಾ ತನ್ನ ಮೀಸೆಗೆ ಕೈ ಹಾಕಿದನು. ಧರ್ಮರಾಯನು ಆ ದಾಳಗಳಿಗೆ ಕೈಯ್ಯೋಡ್ಡಿದ್ದೇ ತಡ. ಪಗಡೆಯನ್ನಾಡಲು ಒಪ್ಪಿಯೇ ಬಿಟ್ಟನು. ಆಗ ಪ್ರಭಂಜನನಾದ ಭೀಮನು 'ಅಣ್ಣಾ' ಎಂದನು. ಆ ಮಾತು ಅಣ್ಣನಿಗೆ ಕೇಳಿಸಲೇ ಇಲ್ಲ. ಪಗಡೆ ಆಟವು ಪ್ರಾರಂಭವಾಯಿತು. ಧರ್ಮರಾಜನು ಎರಡು ದಿನಗಳಲ್ಲಿ ಗೆದ್ದನು, ಸೋತನು, ಸೋತು ಗೆದ್ದನು. ಆಗ ಧರ್ಮರಾಯನನ್ನು ಹೊಗಳಿದ ಶಕುನಿಯು ಇದೇನು ಬರಡು ಆಟವಪ್ಪಾ, ಸಾಕಾಗಿ ಹೋಯಿತು. ಏನಾದರೂ ಸ್ವಲ್ಪ ಪಣಕ್ಕಿಟ್ಟು ಆಟವಾಡಿದರೆ ಈ ಆಟದಲ್ಲಿ ಇನ್ನೂ ಅಭಿರುಚಿಯು ಹೆಚ್ಚಬಹುದು. ಹಾಗೆ ಏಕೆ ಮಾಡಬಾರದು? ಎಂದು ಕೇಳಿದನು. ಅದಕ್ಕೆ ದುರ್ಯೋಧನ, ಕರ್ಣ ದುಶ್ಯಾಸನ, ಸೈಂಧವ ಮೊದಲಾದವರು ಈ ಸಲಹೆಗೆ "ಶಹಬಾಸ್, ಶಹಬಾಸ್" ಎಂದರು. ಸರಿ, ಧರ್ಮರಾಯನು ಸಪಣಪೂರ್ವಕವಾಗಿ ಜೂಜನ್ನು ಪ್ರಾರಂಭಿಸಿದನು. ಸಭೆಯಲ್ಲಿ ಧೃತರಾಷ್ಟ್ರ ಗಾಂಧಾರಿ, ವಿದುರ, ಭೀಷ್ಮ, ಸೈಂಧವ, ಕರ್ಣ, ಕೌರವರೆಲ್ಲಾ ಸೇರಿದ್ದರು. ಭೀಮ, ಅರ್ಜುನ, ನಕುಲ, ಸಹದೇವ, ವಿದುರ, ಕುಂತಿ ದ್ರೌಪದಿಯರನ್ನು ಮಾತ್ರ ಬಿಟ್ಟು ಕಲಿಯು ತಾನೇ ಎಲ್ಲರಲ್ಲಿಯೂ ಪ್ರವೇಶ ಮಾಡಿದನು. ಯಾರೂ ಕೂಡಾ ಪಣಪೂರ್ವಕವಾದ ಈ ಜೂಜನ್ನು ತಡೆಯಲಿಲ್ಲ. ಭೀಮ, ವಿದುರರ ಮಾತನ್ನು ಧರ್ಮರಾಯನು ಕೇಳಲಿಲ್ಲ.

ಪಣವನ್ನು ಕಟ್ಟಿದ ಕೂಡಲೇ ದಾಳಗಳು ಜಾಗೃತವಾದುವು. ಅಹ್ಹಾ, ವಜ್ರದುಂಗುರ, ವಹ್ವಾ ಬಂಗಾರದ ಕಡಗ, ಅಹ್ಹಹ್ಹಾ! ತೋಳುಬಂದೀ ಕಂಠೀಹಾರಗಳು, ಕೋಶ, ರಾಜ್ಯ ಸೈನ್ಯ ಇವುಗಳ ಮೇಲೆ ಉರುಳಿದುವು, ಆ ದಾಳಗಳು. ಕೊನೆಗೆ ಉಳಿದದ್ದು ನಕುಲ, ಸಹದೇವ, ಅರ್ಜುನ, ಭೀಮ, ದ್ರೌಪದಿ ಮಾತ್ರ. ಆ ದಾಳಗಳಿಗೆ ಬಲಿಯಾದನು ಈ ಧರ್ಮನಂದನನು. ಎಲ್ಲವೂ ದುರ್ಯೋಧನನ ವಶವರ್ತಿಯಾಗಲು ದುರ್ಯೋಧನನು ದ್ರೌಪದಿಯನ್ನು ಸಭೆಗೆ

ಎಳೆತರಲು ದೂತನನ್ನು ಅಟ್ಟಿದನು. ಆದರೆ ಆ ಕೆಲಸವು ದೂತನಿಂದ ಆಗಲಿಲ್ಲ. ಆಗ ಶಕುನಿಯು ತಾನು ಹೊರಡುವೆನೆಂದನು. ಆಗ ಎಲ್ಲರೂ ಏ ಮುದಿಯಾ, ಆ ದ್ರೌಪದಿಯನ್ನು ಎಳೆತರಲು ನಿನ್ನಿಂದ ಸಾಧ್ಯವೇನೋ? ಸುಮ್ಮನೇ ಕುಕ್ಕರಬಡಿ ಎಂದು ಬೈದರು. ಆಗ ದುರ್ಯೋಧನನೇ ಹೊರಡಲು ಸಿದ್ಧನಾದನು. ಆಗ ಎಲ್ಲರೂ ಛೇ,ಛೇ,ಛೇ ರಾಜನಾಗಿ ತಾನು ಆ ಕೆಲಸವನ್ನು ಮಾಡಬಾರದು. ಬೇರೆಯವರಿಂದ ಮಾಡಿಸಬೇಕು ಎಂದು ತತ್ವ (?) ವನ್ನು ಹೇಳಿದರು. ದುರ್ಯೋಧನನು ಸುಮ್ಮನೆ ಕುಳಿತನು. ಆಗ ದುಶ್ಶಾಸನನು ಹೊರಡಲು ಸಿದ್ಧನಾದಾಗ ವಿಕರ್ಣನು ತಾನು ಆ ಕೆಲಸವನ್ನು ಮಾಡುವೆನೆಂದನು. ಅವನನ್ನು ತಳ್ಳಿಹಾಕಿದ ದುಶ್ಶಾಸನನು ತಾನೇ ದ್ರೌಪದಿಯು ಇರುವ ಸ್ಥಳಕ್ಕೆ ಧಾವಿಸಿ ದ್ರೌಪದಿಗೆ ಧರ್ಮಜನು ಸರ್ವಸ್ವವನ್ನೂ ಸೋತ ವಿಷಯವನ್ನು ತಿಳಿಸಿ ಬಲಾತ್ಕಾರವಾಗಿ ದ್ರೌಪದಿಯ ಮುಡಿಯನ್ನು ಹಿಡಿದೆಳೆದು ಸಭಾಮಧ್ಯದಲ್ಲಿ ತಂದು ನಿಲ್ಲಿಸಿದನು. ಆಗ ದ್ರೌಪದಿ ತನ್ನನ್ನು ಈಗ ಮುಟ್ಟಲು ಅನರ್ಹಳೆಂದು ಅಂಗಲಾಚಿದರೂ ಕೇಳದ ಆ ಪಾಪಿ ದುಶ್ಶಾಸನು ಬಹಿಷ್ಠೆಯಾಗಿದ್ದ ದ್ರೌಪದಿಯನ್ನು ಸಭೆಗೆ ತಂದು ನಿಲ್ಲಿಸಿ ಅಮಂಗಳಕ್ಕೆ ಅದ್ದೂರಿಯಾದ ಸ್ವಾಗತವನ್ನು ನೀಡಿದ್ದನು. ಋಜಗಣ ಸ್ತ್ರೀಯರಿಗೆ ಬಹಿಷ್ಠಾ ದೋಷವಿಲ್ಲ. ದುಷ್ಟರು ತಮ್ಮಂತೇ ದ್ರೌಪದಿಯೂ ಎಂಬ ಅಯಥಾರ್ಥ ಜ್ಞಾನವನ್ನು ಹೊಂದಲಿ ಎಂದೇ ದ್ರೌಪದಿಯು ಹಾಗೆ ಹೇಳಿದಳು. ಮಡಿ ಮೈಲಿಗೆಗಳ ಲೆಕ್ಕವು ದೈತ್ಯರಿಗೆ ಪಥ್ಯವಲ್ಲ ವೆಂಬುದನ್ನೂ ತೋರಿಸಿಕೊಟ್ಟಳು. ದುಃಖ ತಪ್ತಳಾದ ದ್ರೌಪದಿಯು ಅಧರ್ಮಮಾರ್ಗವಾದ ಜೂಜಿನಲ್ಲಿ ಗೆದ್ದರೆ ಅದು ಜಯವಲ್ಲ. ಸೋತರೆ ಅದು ಸೋಲಲ್ಲ ಎಂದು ವಾದಿಸಿದಳು. ದ್ರೌಪದಿಯ ಆರ್ತನಾದಕ್ಕೆ ಧರ್ಮಜ್ಞರಾದ ಭೀಷ್ಮ, ಧೃತರಾಷ್ಟ್ರ, ಗಾಂಧಾರಿ ಮೊದಲಾದವರು ಕಲಿಯ ಆವೇಶ ನಿಮಿತ್ತವಾಗಿ ಯಾರೂ ಸಮಾಧಾನವನ್ನು ಹೇಳಲಿಲ್ಲ. ವಿದುರನು ಮಾತ್ರ ಈ ದುಷ್ಕರ್ಮವು ಅಧರ್ಮವೆಂದು ಸಾರಿದನು. ವಿಕರ್ಣನೂ ಅಧರ್ಮವೆಂದು ಸಾರಿದನು, ಧರ್ಮಕ್ಕಾಗಿ ಅಲ್ಲ. ಅವರು ತನಗೆ ಅವಕಾಶವನ್ನು ಕೊಡದಿದ್ದುದಕ್ಕಾಗಿ ! ಕೊನೆಗೆ ದುರ್ಯೋಧನನು ಪಾಂಡವರ ವಸ್ತ್ರಗಳನ್ನು ಸೆಳೆಯಲು ಆಜ್ಞೆ ಮಾಡಿದನು. ಆಗ ಪಾಂಡವರೆಲ್ಲರೂ ತಮ್ಮ ತಮ್ಮ ವಸ್ತ್ರಗಳನ್ನು ಕಳಚಿ ನಗ್ನರಾಗಿ ನಿಂತುಬಿಟ್ಟರು. ಇದೂ ಒಂದು ಸಭೆಗೆ ಅಪಶಕುನವಾಗಿ ಪರಿಣಮಿಸಿತು. ತರುವಾಯ ತೃಣ ದರ್ಭಾ ವಿಶೇಷಗಳಿಂದ ಮಾನವನ್ನು ಮುಚ್ಚಿಕೊಂಡು ನೆಲದಲ್ಲಿ ಪಾಂಡವರು ಕುಳಿತಿರಲು ದುರ್ಯೋಧನನು ದ್ರೌಪದಿಯ ವಸ್ತ್ರವನ್ನೂ ಸೆಳೆಯಲು ಆಜ್ಞಾಪಿಸಿದನು. ಯಾರಿಂದಲೂ ತಡೆಯಲಾಗಲಿಲ್ಲ. ಆಗ ದುಶ್ಶಾಸನನು ದ್ರೌಪದಿಯ ವಸ್ತ್ರವನ್ನು ಸೆಳೆಯಲಾರಂಭಿಸಿದನು. ಅದೇನಾಶ್ಚರ್ಯ? ಸೆಳೆಯುತ್ತಿದ್ದಂತೆ ಬೆಳೆಯುತ್ತಿದ್ದವು ಸೀರೆಗಳು. ದುಷ್ಟನ ಶಕ್ತಿಯು ಉಡುಗಿ ಹೋಯಿತು. ಅವನು ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದನು. ವರ್ಣರಂಜಿತವಾದ ನೂತನ ವಸ್ತ್ರಾಚಲವನ್ನು ನೋಡಿ ದ್ರೌಪದಿಯು ಕಣ್ಣು ಬಿಟ್ಟ ಕೂಡಲೇ ಆ ವಸ್ತ್ರರಾಶಿಯು ದಗ್ಗನೆ ಉರಿದು ಬೂದಿಯಾಗಿ ಹೋಯಿತು. (ಪರಮಾತ್ಮನು ದ್ರೌಪದಾದೇವಿಗೆ ಅಕ್ಷಯಾಂಬರವನ್ನೂ ಪಾಂಡವರಿಗೆ ಅಕ್ಷಯ ಪಾತ್ರೆಯನ್ನು ಕೊಟ್ಟಂತೆ ನಮಗೂ ಏಕೆ ಕೊಡಬಾರದು? ಎಂದರೆ ಇದುವರೆಗೆ ಹಿಂದಿನವರು, ಇಂದಿನವರು, ಮುಂದಿನವರು ಸಹ ಯಾರಾದರೂ ಬತ್ತಲೆ ತಿರುಗಿದ್ದಾರೆಯೇ? ಉಪವಾಸ ಬಿದ್ದದ್ದಾರೆಯೇ? ಈ ವಸ್ತ್ರಾsಹಾರಗಳು ಅವ್ಯಾಹತವಾಗಿ ಎಲ್ಲಿಂದ ಬರುತ್ತಿವೆ. ಯಾರಿಂದ ಬರುತ್ತಿವೆ? ದೇವರು ನಮ್ಮನ್ನು ಕೈಬಿಟ್ಟಿದ್ದಾನೆಯೇ? ಇಲ್ಲ. ಪಾಂಡವರಿಗಿಂತಲೂ ಮಿಗಿಲಾದ ವಸ್ತ್ರಾsಹಾರಗಳನ್ನು ನಾವು ನಿತ್ಯವೂ ಭೋಗಿಸುತ್ತವೇ ಇದ್ದೇವೆ. ತಿಳಿದುಕೊಳ್ಳುವ ಜ್ಞಾನ ಬೇಕು ಅಷ್ಟೇ. (ಪ್ರಮೇಯ ಕುಸುಮಾಕರದಿಂದ) ಅಪಶಕುನವೇ ಹೊಗೆಯ ರೂಪದಿಂದ ಕೇವಲ ಸಭೆಯನ್ನು ಮಾತ್ರವಲ್ಲದೆ ಇಡೀ ಹಸ್ತಿನಾಪುರಿಯನ್ನು ಆವರಿಸಿಕೊಂಡು ಬಿಟ್ಟಿತು. ಸಭಾ ಗೋಪುರಗಳ ಮೇಲೆ ಕಾಗೆಗಳು ಕುಳಿತವು. ಹಗಲೇ ಊರಲ್ಲಿ ನರಿಗಳು ತೂರಿ ಕೂಗಿಟ್ಟುವು. ದ್ರೌಪದಿಯು ಆ

ಸಭೆಯಲ್ಲಿ ಪ್ರತಿಜ್ಞೆಯನ್ನು ಮಾಡಿದಳು. ದುರ್ಯೋಧನ, ದುಶ್ಶಾಸ್ಸನರನ್ನು ಭೀಮನೂ, ಕರ್ಣನನ್ನು ಅರ್ಜುನನೂ, ಸಹದೇವನು ಶಕುನಿಯನ್ನು ನಕುಲನು, ಶಕುನಿಯ ಮಗನನ್ನೂ ಸಂಹಾರ ಮಾಡುವನೆಂದಳು. ಆಗ ದುರ್ಯೋಧನನು ದ್ರೌಪದಿಯನ್ನು ಕರೆದು ತನ್ನ ತೊಡೆಯ ಮೇಲೆ ಕುಳಿತುಕೋ ಎಂದನು. ಆಗ ದ್ರೌಪದಿಯು ನಿನ್ನ ತೊಡೆಯ ಮೇಲೆ ಕೂಡಲು ಭೀಮನ ಗದೆಯು ಕಾದಿದೆ ಎನ್ನಲು ದ್ರೌಪದಿಯನ್ನು ಬಲಾತ್ಕಾರವಾಗಿ ಅರಮನೆಯೊಳಗೆ ಸೆಳೆಯಬೇಕೆಂದು ಆಜ್ಞೆ ಮಾಡಿದ್ದೇ ತಡ, ಭೀಮನು ಈಗಲೇ ಸರ್ವರನ್ನು ಸಂಹರಿಸುವೆನೆಂದು ಎದ್ದನು. ಆಗ ಧರ್ಮರಾಯನು ತಡೆಯಲು ಸುಮ್ಮನಾದನು. ಭೀಮನು ಸುಮ್ಮನಾದುದು ಧರ್ಮರಾಯನ ನಿರ್ಬಂಧಕ್ಕಲ್ಲ. ಪಾಪಿಗಳ ಪಾಪದ ಕೊಡವು ಇನ್ನೂ ತುಂಬಿಲ್ಲ, ತುಂಬಲಿ ಎಂದು. ಇಷ್ಟೆಲ್ಲಾ ಕೋಲಾಹಲವನ್ನು ಕೇಳಿಸಿಕೊಂಡ ಧೃತರಾಷ್ಟ್ರನು ಅಲ್ಲಿ ಉಂಟಾಗಿರುವ ಅಪಶಕುನಗಳ ಬಗ್ಗೆ ಫಲಶ್ರುತಿಯನ್ನು ಕೇಳಿದನು. ಅದಕ್ಕೆ ವಿದುರನು ಈಗ ದ್ರೌಪದಿಯನ್ನು ಸಮಾಧಾನ ಪಡಿಸದಿದ್ದರೆ ನಿನ್ನ ಕುಲವು ಈ ಕ್ಷಣದಲ್ಲಿ ಹೇಳ ಹೆಸರಿಲ್ಲದಂತಾಗುವುದು. ಶ್ರೀಘ್ರವೇ ದ್ರೌಪದಾದೇವಿಯನ್ನು ಸಮಾಧಾನಪಡಿಸು ಎಂದು ಹೇಳಿದನು. ಆಗ ಧೃತರಾಷ್ಟ್ರನು ಭಯಗ್ರಸ್ಥನಾಗಿ ತನ್ನ ಮಕ್ಕಳು ಉಳಿಯಬೇಕೆಂದು ದ್ರೌಪದಿಯಲ್ಲಿ ಸವಿಮಾತಿನಿಂದಲೂ, ದುರ್ಯೋಧನ, ದುಶ್ಶಾಸನರನ್ನು ಬೈದು ದ್ರೌಪದಿಗೆ ವರಗಳನ್ನಿತ್ತು ಆಕೆಯನ್ನು ಬಿಡಿಸಿದನು ಮತ್ತು ಪಾಂಡವರನ್ನು ಬಂಧಮುಕ್ತರನ್ನಾಗಿ ತಾನೇ ಮಾಡಿದನು. ದ್ರೌಪದಿಯು ಯಾವ ವರವನ್ನೂ ಬೇಡಲಿಲ್ಲ. ಅಧರ್ಮದಿಂದ ಸೋತವರು ಸೋತವರೇ ಅಲ್ಲ. ಇನ್ನು ವರವನ್ನು ಕೇಳುವುದೇನು ಬಂತು? ಆದರೂ ಧೃತರಾಷ್ಟ್ರನ ವರದ ದೆಸೆಯಿಂದ ಬಿಡಲ್ಪಟ್ಟ ಪಾಂಡವರು ಇಂದ್ರಪ್ರಸ್ಥವನ್ನು ಸೇರಿಕೊಂಡರು.

ಇಷ್ಟಾದ ಮೇಲೆ ದುಶ್ಶಾಸನನು ತನ್ನ ತಂದೆಯನ್ನು ಹೆಚ್ಚಾಗಿ ಮೂದಲಿಸಿ "ನೀನು ಪಾಂಡವರನ್ನು ಬಿಡಿಸಿ ನಮ್ಮ ನಾಶಕ್ಕೆ ಕಾರಣನಾಗಿದ್ದೀ. ಅದೆಲ್ಲಾ ನಮಗೆ ಬೇಕಿಲ್ಲ. ಈಗ ಪುನಃ ಪಾಂಡವರನ್ನು ಕರೆಸು. ಪುನಃ ಅವರೊಡನೆ ನಾವು ದ್ಯೂತವನ್ನಾಡುವೆವು. ಈ ದ್ಯೂತದಲ್ಲಿ ಸೋತವರು ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸವನ್ನು ಮಾಡಬೇಕು. ಅಜ್ಞಾತವಾಸದಲ್ಲಿ ಯಾರೊಬ್ಬರು ಗುರುತಿಸಲ್ಪಟ್ಟರೂ ಅವರು ಪುನಃ ಹನ್ನೆರೆಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸವನ್ನು ಮಾಡಬೇಕು. ಅದಕ್ಕಾಗಿ ಮತ್ತೆ ಪಾಂಡವರನ್ನು ಕರೆಸು ಎಂದು ಗರ್ಜಿಸಿದನು. ಆಗ ತನ್ನ ಮಕ್ಕಳನ್ನು ಸಂತೋಷಗೊಳಿಸಲಿಕ್ಕಾಗಿ ಧೃತರಾಷ್ಟ್ರನು ಪುನಃ ಧರ್ಮರಾಜನನ್ನು ದ್ಯೂತ ಕ್ರೀಡೆಗಾಗಿಯೇ ಕರೆಸಿದನು.

ಧರ್ಮರಾಜನು ಧೃತರಾಷ್ಟ್ರನ ಆಮಂತ್ರಣವನ್ನು ಮನ್ನಿಸಿ ಪುನಃ ದ್ಯೂತ ಪ್ರಸಂಗಕ್ಕೆ ತೊಡಗಿದನು. ಈಗಲೂ ಅದೇ ಸಭೆ, ಅವೇ ದಾಳಗಳು. ಆಡಿದವರೂ ಅವರೇ. ಹೀಗಿರುವಾಗ ಇನ್ನು ಫಲಿತಾಂಶವು ಮಾತ್ರ ಭಿನ್ನವಾಗಿರಲಿಕ್ಕೆ ಹೇಗೆ ಸಾಧ್ಯ? ಅದೇ ಫಲಿತಾಂಶ ಧರ್ಮರಾಯನು ಸೋತನು. ರಾಜ್ಯವನ್ನು ಕಳಕೊಂಡನು. ಪಣದಂತೆ ವನವಾಸಕ್ಕೆ ಹೊರಡಲು ಸಿದ್ಧನಾದನು. ಆಗ ದುಶ್ಶಾಸನನು ಅಟ್ಟಹಾಸದಿಂದ

"ತದಾ ನನರ್ತ ಪಾಪಕೃತ್ಸುಯೋಧನಾಽನುಜೋ ಹಸನ್ ॥
ವದಂಶ್ಚ ಮಾರುತಾತ್ಮಜಂ । ಪುನಃ ಪುನಶ್ಚ ಗೌರಿತಿ ॥ ೨೧-೪೦೦ ॥"

ನರ್ತನ ಮಾಡಿ ಭೀಮನ ಕಡೆಗೆ ವಿಶೇಷವಾಗಿ ಬೆಟ್ಟು ತೋರುತ್ತ "ಗೌ ಗೌ" ಎಂದು ಮೂದಲಿಸಿದನು. ಅಷ್ಟೇ ಅಲ್ಲ. ದ್ರೌಪದಿಯ ಕಡೆಗೆ ತಿರುಗಿ "ಅಪತಿರ್ಹ್ಯಸಿ ಕಲ್ಯಾಣಿ! ಗಚ್ಛ ದುರ್ಯೋಧನಾಲಯಂ" ನಿನ್ನ ಪತಿಗಳು ಇನ್ನು ನಿನಗಿಲ್ಲ. ವ್ಯರ್ಥವಾದ ಚಿಂತೆ ಏಕೆ? ದುರ್ಯೋಧನನ ಮನೆಗೆ ಸಾಗು ಎಂದನು. ಅವನ ಮಾತನ್ನು ಕೇಳಿ ಕೌರವ ಬಣದವರು ನಕ್ಕು ನಕ್ಕು ನಲಿದಾಡಿದರು. ಆಗ ಭೀಮನು ಸಿಟ್ಟಿನಿಂದ ನಿಮ್ಮೆಲ್ಲರನ್ನೂ ಯುದ್ಧದಲ್ಲಿ ಕೊಲ್ಲುವೆನೆಂದು ಪ್ರತಿಜ್ಞೆಯನ್ನು ಮಾಡಿದನು. ಆಗ ದುರಾತ್ಮನಾದ ದುರ್ಯೋಧನನು ಉಪಾಯದಿಂದ ದ್ರೋಣಾಚಾರ್ಯರನ್ನು ರಕ್ಷಕರನ್ನಾಗಿ ನೇಮಿಸಿದನು. ದ್ರೋಣನಿದ್ದಲ್ಲಿ ಅಶ್ವತ್ಥಾಮ, ಕೃಪ, ಭೀಷ್ಮ ಮತ್ತು ಗುರುಗಳಾದ ಇವರನ್ನು ಭೀಮನು ಕೊಲ್ಲುವುದಿಲ್ಲ ಎಂದೇ ಈ ಉಪಾಯವನ್ನು ಹೂಡಿದರು. ದ್ರೋಣಾಚಾರ್ಯರಾದರೂ ದುರ್ಯೋಧನನ ದಾಕ್ಷಿಣ್ಯಕ್ಕೆ ಒಳಗಾಗಿ ದುರ್ಯೋಧನರ ರಕ್ಷಕರಾಗಿ ನಿಂತರು ಮತ್ತು ಹೇಳಿದರು ನಾನು ಭೀಮನ ಹೊರತಾಗಿ ಮತ್ತಾರಿಂದ ಬೇಕಾದರೂ ದುರ್ಯೋಧನನನ್ನು ರಕ್ಷಿಸಬಲ್ಲೆನೆಂದು.

ಧರ್ಮರಾಯನು ತಲೆಯನ್ನು ತಗ್ಗಿಸಿಕೊಂಡು ಹೊರನಡೆಯುತ್ತಿರಲು ದ್ರೌಪದಿಯ ಸಹಿತವಾಗಿ ಪಾಂಡವರು ಹೊರಟರು. ಕುಂತೀದೇವಿಯನ್ನು ವಿದುರನು ತನ್ನ ಮನೆಯಲ್ಲಿ ಇರಿಸಿಕೊಂಡನು. ಕುಂತಿದೇವಿಗೆ ಎರಗಿದ ಪಾಂಡವರು ನಿರ್ಗಮಿಸುತ್ತಿರಲು ದ್ರೌಪದಿಯು ದುಶ್ಶಾಸನನಿಂದ ಬಿಚ್ಚಲ್ಪಟ್ಟ ಜಡೆಯನ್ನು ಅವನ ರಕ್ತದಲ್ಲಿ ತೋಯಿಸಿಯೇ ಕಟ್ಟುವೆನೆಂಬ ಶಪಥವನ್ನು ಮಾಡಿ ಮುಕ್ತ ಕೇಶಗಳಾಗಿಯೇ ಹೊರಹೊರಟಳು. ಆಗ ಧೌಮ್ಯಾಚಾರ್ಯರು ದುರ್ಯೋಧನಾದಿಗಳ ಶ್ರಾದ್ಧವು ನನ್ನ ಪೌರೋಹಿತ್ಯದಲ್ಲಿ ನಡೆಯಬೇಕೆಂದು, ಆಗಲೇ ಆ ಮಂತ್ರಗಳನ್ನು ಅಲ್ಲಿ ಉಚ್ಚರಿಸಿಸುತ್ತಾ ಪಾಂಡವರನ್ನು ಅನುಸರಿಸಿ ನಡೆದೇ ಬಿಟ್ಟರು. ಎಷ್ಟೋ ಜನರು ಪಾಂಡವರನ್ನು ಅನುಸರಿಸಿ ಹೊರಟರು. ಆದರೆ ಅವರನ್ನೆಲ್ಲಾ ತಡೆಯುವುದಕ್ಕಾಗಿ ಪಾಂಡವರು ಗಂಗಾತೀರದಲ್ಲಿನ ಅರಣ್ಯದಲ್ಲಿ ಒಂದು ವಟವೃಕ್ಷದ ಕೆಳಗೆ ಕುಳಿತು ಕೊಂಡರು.

ಜೂಜಾಟವೆಂಬುದು ಚತುಷಷ್ಟಿ ಕಲಾವಿದ್ಯೆಯಲ್ಲಿ ಇದೂ ಒಂದು. ಈ ಚತುಷಷ್ಟಿ ಕಲಾವಿದ್ಯೆಯಿಂದ ಪಾರಮಾರ್ಥಿಕವಾಗಿ ಏನೂ ಪ್ರಯೋಜನವಿಲ್ಲ. ಲೌಕಿಕವಾಗಿ ಪ್ರಯೋಜನ ಉಂಟು. ಐಹಿಕ ಸುಖಕ್ಕಾಗಿ ಈ ವಿದ್ಯೆಯನ್ನು ಕೆಲವರು ಆಶ್ರೈಸುತ್ತಾರೆ. ಇಂಥಾ ಸಂದರ್ಭಗಳಲ್ಲಿ ಕೆಲವರು ತಮ್ಮ ಸ್ವಾಥಕ್ಕಾಗಿ ವಾಮಾಚಾರಕ್ಕೂ ಇಳಿಯುವ ಸಂದರ್ಭಗಳುಂಟು. ಈ ಚತುಷಷ್ಟಿ ಕಲಾವಿದ್ಯೆಯನ್ನು ಬಳಸಿ ಪರಪೀಡನೆಗೆ ತೊಡಗುವ ನೀಚರೂ ಇದ್ದಾರೆ. ಇಂಥಾ ನೀಚರು ಪ್ರಯೋಗಗಳನ್ನು ಮಾಡಿದರೆ ಆ ಪ್ರಯೋಗಗಳನ್ನು ಧ್ವಂಸ ಮಾಡಲಿಕ್ಕಾಗಿಯೂ ಈ ವಿದ್ಯೆಗಳನ್ನು ಅಭ್ಯಾಸಿಸುವವರೂ ಇದ್ದಾರೆ. ದುಷ್ಟನಿಗ್ರಹಕ್ಕಾಗಿ ಈ ಚತುಷಷ್ಟಿ ಕಲಾ ವಿದ್ಯೆಗಳನ್ನು ಕಲಿಯಬೇಕೇ ವಿನಃ ಸ್ವಾರ್ಥ – ಪರಪೀಡನೆಗಾಗಿ ಬಳಸಿದರೆ ಇವು ನಿಷಿದ್ಧ ವಿದ್ಯೆಗಳು. ಇವುಗಳನ್ನು ಕಲಿತಿರಬೇಕು. ಪ್ರಯೋಗ ಮಾಡಬಾರದು. ಪ್ರಯೋಗವು ಪರಪೀಡನಾರ್ಥವಾಗಿ ನಡೆದಿದ್ದರೆ ಆ ಪೀಡಾ ಪರಿಹಾರಾರ್ಥವಾಗಿ ಮಾತ್ರ ಪ್ರಯೋಗಿಸಲೂಬಹುದು. ಆ ಚತುಷಷ್ಟಿ ಕಲಾವಿದ್ಯೆಗಳು ಯಾವುವೆಂದರೆ –

೧. ಅಣಿಮಾ
೨. ಗರಿಮಾ
೩. ಲಘಿಮಾ
೪. ಮಹಿಮಾ
೫. ಅಕ್ಷರಲಕ್ಷಣ
೬. ಲಿಖಿತಲಕ್ಷಣ
೭ ಗಣಿತ
೮. ಗಾಂಧರ್ವ
೯. ನಿರುಕ್ತಿ
೧೦. ವೈಷಿಕ
೧೧. ಭಟ್ಟ
೧೨. ಪ್ರಭಾಕರ
೧೩. ನ್ಯಾಯ ಶಾಸ್ತ್ರ
೧೪. ವ್ಯಾಕರಣ
೧೫. ಮಿಮಾಂಸ
೧೬. ಛಂದಸ್ಸು
೧೭. ಅಲಂಕಾರ
೧೮. ಇತಿಹಾಸ
೧೯. ಪುರಾಣ
೨೦. ಸ್ತ್ರೀ ಲಕ್ಷಣ
೨೧. ಪುರುಷಲಕ್ಷಣ
೨೨. ಕನ್ಯಾಲಕ್ಷಣ
೨೩. ಕಾವ್ಯಲಕ್ಷಣ
೨೪. ಸಾಮುದ್ರಿಕ
೨೫. ಶಕುನ
೨೬. ಶಿಲ್ಪಿಶಾಸ್ತ್ರ
೨೭. ತಾಳಶಾಸ್ತ್ರ
೨೮. ಮಾಯಾವಾದ
೨೯. ಧಾತುವಾದ
೩೦. ವಿಷವಾದ
೩೧. ಗಾರುಡ
೩೨. ಮಲ್ಲಶಾಸ್ತ್ರ
೩೩. ವೈದ್ಯ
೩೪. ಪರಕಾಯ ಪ್ರವೇಶ
೩೫. ಅಶ್ವಾರೋಹಣ
೩೬. ಗಜಾರೋಹಣ
೩೭. ರಥಾರೋಹಣ
೩೮. ಚರ್ಮಶಾಸ್ತ್ರ
೩೯. ರತ್ನಪರೀಕ್ಷೆ
೪೦. ಜ್ಯೋತಿಷ್ಯ
೪೧. ಕವಿತ್ವ
೪೨. ಮಹೇಂದ್ರಜಾಲ
೪೩. ಇಂದ್ರಜಾಲ
೪೪. ಅಗ್ನಿಸಂಭನ
೪೫. ಜಲಸ್ಥಂಭನ
೪೬. ಅರ್ಕಸ್ಥಂಭನ
೪೭. ವಿಷಸ್ಥಂಭನ
೪೮. ವಾಯುಸ್ಥಂಭನ
೪೯. ಕಾಲಜ್ಞಾನ
೫೦. ದೂರದೃಷ್ಟಿ
೫೧. ದೂರಶ್ರವಣ
೫೨. ಇಂಗಿತಭಾವ
೫೩. ಪರಿಹಾಸ
೫೪. ಸಂಕಲ್ಪಸಿದ್ಧಿ
೫೫. ಕಾಮರೂಪ
೫೬. ಮನೋಜವ
೫೭. ಪಕ್ಷಿಶಾಸ್ತ್ರ
೫೮. ಆಕರ್ಷಣ
೫೯. ಉಚ್ಚಾಟನೆ
೬೦. ಸ್ಥಂಭನ
೬೧. ದ್ಯೂತ
೬೨. ವಶೀಕರಣ
೬೩. ಜಾರತ್ವ
೬೪. ಚೋರತ್ವ

ದ್ರವ್ಯಾರ್ಜನೆಯು ಎರಡು ವಿಧವಾಗಿ ಇರುವುದು. ಒಂದು ಸ್ವವಿಹಿತ ವೃತ್ತಿ ಧರ್ಮಗಳನ್ನು ಅನುಸರಿಸಿ ಅರ್ಜಿಸುವುದು ಇನ್ನೊಂದು ಚೌರ್ಯ, ದ್ಯೂತಾದಿಗಳಿಂದ ಅರ್ಜಿಸುವುದು. ಅದಕ್ಕೆ ಸುಭಾಷಿತದಲ್ಲಿ ""**ಉತ್ತಮಂ ಕುಲ ವಿದ್ಯಾಯ। ಮಧ್ಯಮಂ ಕೃಷಿವಾಣಿಜ್ಯವತ್॥ ಅಧಮೇ ಸೇವಕಾ ವೃತ್ತಿಃ । ಮೃತ್ಯುಃಶ್ಚೌರ್ಯೋಪ ಜೀವನಾತ್**" ಎಂದಂತೆ ಚೌರ್ಯ, ದ್ಯೂತಾದಿ ಹೀನಮಾರ್ಗ ಸಂಪಾದನೆಯು ಹಿತಕರವಾದುದಲ್ಲವೇ ಅಲ್ಲ.

ಇಲ್ಲಿ, ದುರ್ಯೋಧನನು ರಾಜ್ಯ ಸಂಪಾದನೆಗೆ ಕಪಟ ಜೂಜಿನ ಮಾರ್ಗವನ್ನು ಅನುಸರಿಸಿದನು. ಇದನ್ನು ಧರ್ಮರಾಜನು ಒಪ್ಪಬಾರದಿತ್ತು. ಕಲ್ಯಾವೇಶದಿಂದ ಒಪ್ಪಿದನು. ಮೇಲೆ ಹೇಳಿದಂತೆ ೬೧ನೇ ವಿದ್ಯೆಯಾದ ದ್ಯೂತ ವಾಮಾಚಾರಕ್ಕೆ ಪ್ರತಿಯಾಗಿ ವೇದದಲ್ಲಿ 'ಅಕ್ಷಹೃದಯ' ಎಂಬ ಮಂತ್ರವು ಉಂಟು. ಈ ಮಂತ್ರಸಿದ್ಧಿಯಿಂದ ಕಪಟ ಜೂಜುಗಾರರನ್ನು ಸೋಲಿಸಬಹುದಿತ್ತು. (ಕ್ಷುದ್ರಮಂತ್ರ ಪ್ರಯೋಗಗಳನ್ನು ವೇದ ಸನ್ಮಂತ್ರಗಳಿಂದ ನಿವಾರಿಸಬಹುದು) ಈ ಸಂದರ್ಭದಲ್ಲಿ ಅಕ್ಷಹೃದಯವೆಂಬ ಮಂತ್ರದ ಸಿದ್ಧಿಯನ್ನು ಪಡೆಯಬೇಕೆಂಬ ಮಾತಿರಲಿ. ಯಾವ ವೇದಗಳು ಪರಮ ಮುಖ್ಯವಾಗಿ ಯಾವ ಶ್ರೀಹರಿಯನ್ನೇ ಕೊಂಡಾಡುತ್ತವೋ ("ಮುಖ್ಯತಃಸರ್ವಶಬ್ದೈಶ್ಚ ವಾಚ್ಯ ಏಕೋಜನಾರ್ದನಃ") ಅಂಥಾ ವೇದರಾಶಿಯು ದ್ವಿತೀಯಾರ್ಥದಿಂದ ಶ್ರೀಲಕ್ಷ್ಮೀದೇವಿಯನ್ನು ಕೊಂಡಾಡುತ್ತವೆ. ಮೂರನೇ ಸ್ಥಾನದಿಂದ ಸಕಲ ವೇದಗಳೂ ವಾಯು ಪರವಾಗಿ ಅರ್ಥೈಸಲ್ಪಡುತ್ತವೆ. ಈ ಗುಣ ಶಕ್ತಿಗಳು ಇತರ ದೇವತೆಗಳಿಗೆ ಇಲ್ಲ "ತಾಂ ಮಂತ್ರವರ್ಣೈರನು ವರ್ಣನೀಯಾಂ ।ಶರ್ವೇಂದ್ರ ಪೂರ್ವೈರಪಿ ವಕ್ತುಕಾಮೇ" ಎಂದಂತೆ ಸಕಲ ಮಂತ್ರ ಪ್ರತಿಪಾದ್ಯನೇ ಆದ ವಾಯುವಿನ ಮಹಿಮೆಯನ್ನು ಪೂರ್ಣವಾಗಿ ಗರುಡ, ಶೇಷ ರುದ್ರಾದಿಗಳೂ ಹೊಗಳಲಾರರು ಎಂದ ಮೇಲೆ ಇನ್ನು ಸಾಮಾನ್ಯರ ಪಾಡೇನು?. "ಲಕ್ಷ್ಮೀನಾರಾಯಣಾನಾಂ ತರಂ।ಸಕಲ ವೇದ ಪ್ರದಿಪಾದಕಾದ್ಯಾಂಯ ನಮಃ" ಎಂದರು ಬಿದರಹಳ್ಳಿ ಶ್ರೀನಿವಾಸಾಚಾರ್ಯರು. ವಾಯು ಗದ್ಯದಲ್ಲಿ, ಶ್ರೀಚಂದ್ರಿಕಾಚಾರ್ಯರೂ ಸಹ **"ಹರಿ ರಮಾಪ್ರಸಿದ್ಧಾ ಶಬ್ದಾ ತಿರಿಕ್ತಾsನಂತ ವೇದ ವೇದ್ಯಾಯ ನಮಃ"** ಎಂದು ಸ್ತೋತ್ರ ಮಾಡಿದ್ದಾರೆ. ಎಂದ ಮೇಲೆ, ಮಂತ್ರಗಳನ್ನು ಅರಿತಿರುವುದು ಇರಲಿ. ಈ ಮಂತ್ರಗಳೇ ಮರುತಪರಾವತಾರನಾದ ಈ ಭೀಮನನ್ನು ಕೊಂಡಾಡುತ್ತಿರುವುವು. ಹೀಗಿರುವಾಗ ಇನ್ಯಾವ ದ್ಯೂತವು ತಾನೇ ಈ ಭೀಮನನ್ನು ಬಾಧಿಸೀತು? ಅಥವಾ ಇನ್ಯಾವ 'ಅಕ್ಷಹೃದಯ' ಮಂತ್ರದ ಸಿದ್ಧಿಯು ತಾನೇ ಇವರಿಗೆ ಬೇಕಾಗಿತ್ತು? ತಾನೊಬ್ಬ ಏನೂ ಅರಿಯದ ಅಗ್ರಜಾನುವರ್ತಿ ಮಾತ್ರ ಎಂಬ ಅಯಥಾರ್ಥವನ್ನು ದೈತ್ಯರಿಗೆ (ದುರ್ಯೋಧನಾದಿಗಳಿಗೆ) ಉಂಟು ಮಾಡಲು ಭೀಮನು ಸುಮ್ಮನಿದ್ದನು. ಕೌರವರ ಪಾಪದ ಕೊಡವೂ ತುಂಬ ಬೇಕೆಂದು ಸುಮ್ಮನಿದ್ದನು. ದ್ಯೂತಕ್ಕೆ ಫಲವೇನೆಂಬುದನ್ನು ಜಗತ್ತಿಗೆ ತೋರಿಸಲು ತಾನು ಸುಮ್ಮನಿದ್ದನು. ಅರಣ್ಯದಲ್ಲಿದ್ದು ಕಂಟಕರಾಗಿದ್ದ ಕಿಮ್ಮಿರಾದಿಕೀಚಕರನ್ನು ಸಂಹರಿಸಬೇಕೆಂದು ಸುಮ್ಮನಿದ್ದನು. ದ್ಯೂತಾದಿ ದುರ್ಮಾಗಾಸಕ್ತರನ್ನು ತಾನು ತನ್ನ ಒಡ ಹುಟ್ಟಿದವರಾದರೂ ಅವರನ್ನು ತಾನು ಬಲ್ಲನೆಂಬುದನ್ನು ತೋರಿಸಲೂ ಸುಮ್ಮನಿದ್ದನು. ಬಳಿತ್ಥಾ, ಮನ್ಯು ಸೂಕ್ತಾದಿಗಳಿಂದ (ಭಾರತಿ – ಸರಸ್ವತಿಯರ ರಸಭಾಗದಿಂದ, ಅಂದರೆ ವೇದಗಳಿಗೆ ವಾಣಿ, ಭಾರತೀಯರು ಅಮುಖ್ಯಾಭಿಮಾನಿಗಳು. ಮುಖ್ಯಾಭಿಮಾನಿ ಲಕ್ಷ್ಮೀದೇವಿಯು ಲಕ್ಷ್ಮ್ಯಾತ್ಮಕವಾದ ಅರ್ಥಾಂಶಗಳನ್ನು ಮಾತ್ರ ಬಿಟ್ಟು) ಸ್ತುತ್ಯನಾದ ಈ ಭೀಮನಿಗೆ ಅಕ್ಷಹೃದಯ ಮಂತ್ರವು ಏಕೆ ಬೇಕು? ಇಚ್ಛಾ ಮಾತ್ರದಲ್ಲಿ ಆ ದಾಳಗಳನ್ನು ಸುಟ್ಟು ಬೂದಿ ಮಾಡಬಹುದಿತ್ತು. ಆದರೆ ಹಾಗೆ ಮಾಡಿದ್ದರೆ ಕೌರವರ ಯೋಗ್ಯತೆಯು ಹೊರಬರುತ್ತಿರಲಿಲ್ಲ ಲಕ್ಷ ಲಕ್ಷಗಟ್ಟಲೆ ವೇದಮಂತ್ರಗಳನ್ನು ಉಚ್ಚರಿಸಿ ಉದ್ಧಾರವಾಗುತ್ತಿರುವ ಋಷಿಕುಲಕ್ಕೆ ಅನುಗ್ರಹ ಮಾಡುವ ಶಂಕರನೂ ಪ್ರತಿ ನಿತ್ಯವೂ ವಾಯುದೇವರನ್ನು ಲಕ್ಷಗಟ್ಟಲೆ ಮಂತ್ರಗಳಿಂದ ವೇದ ವಾಕ್ಯಗಳಿಂದ ಕೊಂಡಾಡುತ್ತಿರುವಾಗ ಅಕ್ಷ ಹೃದಯವೆಂಬ ಒಂದು ಮಂತ್ರವೂ ತನಗೆ ಸಿದ್ಧಿಸಿ ಇಲ್ಲವೆಂಬಂತೆ ನಟಿಸಿದನು. ಈ ಭೀಮ ಪರಾಕ್ರಮಿಯು, ಸೋಲೆಂಬ ಕತ್ತಲೆಯು ಭೀಮನೆಂಬ ಸೂರ್ಯನನ್ನು ಎಂದೂ ಮುಸುಕಲಾರದು. ಆದರೆ ಈಗ ಮಾತ್ರ ಮೋಡ ಮುಸುಕಿದಂತೆ ಲೋಕವಿಡಂಬನೆಗಾಗಿ ಸಹಿಸಿದನು.

ಧರ್ಮರಾಜನು ನನ್ನ ಕಷ್ಟವು ನಿಮಗೆ ಬೇಡ. ನೀವು ಸತ್ಪ್ರಜೆಗಳಾಗಿ ಪುನಃ ಪುರವನ್ನು ಸೇರಿ ನೆಮ್ಮದಿಯಾಗಿ ಬಾಳಿರೆಂದು ತನ್ನನ್ನು ಅನುಸರಿಸಿ ಬಂದಿದ್ದ ಜನ ಜಂಗುಳಿಗೆ ಹಿತೋಪದೇಶವನ್ನು ನೀಡಿ ಹಿಂದಕ್ಕೆ ಕಳುಹಿಸಿದನು. ತರುವಾಯ ಪಶ್ಚಾದ್ವಿವೇಕತನದಿಂದ ಪರಿತಪಿಸುತ್ತ ಧರ್ಮರಾಯನು ಕುಳಿತಿರುವಾಗ ಒಮ್ಮೆ ರೋಮ ಶಮಹಾಮುನಿಗಳು ಪಾಂಡವರ ಸಂಕಷ್ಟ ವಾರ್ತೆಯನ್ನು ಕೇಳಿ ಶೀಘ್ರವಾಗಿ ಧರ್ಮರಾಯನು ನೆಲೆಸಿದ್ದ ಅರಣ್ಯ ಕುಟೀರಕ್ಕೆ ಆಗಮಿಸಿದರು. ಬಂದ ಋಷಿವರರಿಗೆ ಪಲಾಶಪತ್ರ ದ್ರೋಣ ಸಂಗ್ರಹೀತ ಜಲದಿಂದ ಪಾದಪ್ರಕ್ಷಾಲನೆಯನ್ನು ಮಾಡಿ ಕಂದಮೂಲ ಫಲಗಳನ್ನು ಮುಂದಿಟ್ಟು ಆಶೀರ್ವದಿಸಬೇಕೆಂದು ಧರ್ಮಜನು ಬೇಡಿದನು. ಆಗ ಸಂತುಷ್ಟಾಂತಃಕರಣ ಭೂಷಿತರಾದ ರೋಮಶ ಮಹಾಮುನಿಗಳು ಧರ್ಮರಾಯನನ್ನು ಸಂತೈಸಿ ನಳ ದಮಯಂತಿಯರ ಚರಿತ್ರೆಯನ್ನು ಹೇಳಿದರು. "ಧರ್ಮರಾಜಾ ಕೇಳು. ದ್ಯೂತ್ಯಾನಿಷ್ಟವನ್ನು ಅನುಭವಿಸಿ ಪರಿತಪಿಸುತ್ತಿರುವವನು ನೀನು ಮಾತ್ರವಲ್ಲ. ಯಾರೇ ದ್ಯೂತವ್ಯಸನಕ್ಕೆ ಇಳಿದರೂ ಅವರ ಪಾಡು ಇದೇ ಅಲ್ಲದೆ ಬೇರೆ ಎಂದಿಗೂ ಆಗಲಾರದು. ನಿಷಧ ಸಾಮ್ರಾಜ್ಯಕ್ಕೆ ಚಕ್ರವರ್ತಿಯೇ ಆಗಿದ್ದ ನಳನು ತನ್ನ ತಮ್ಮನೇ ಆದ ಪುಷ್ಕರನ ಕೂಡ ಜೂಜಾಟವನ್ನಾಡಿ ಸೋತು ಅಡವಿ ಪಾಲಾದನು. ಈತನು ನಳ, ಭರತ, ಮಾಂಧಾತ, ಸಗರ, ಬಲಿಚಕ್ರವರ್ತಿ ಮತ್ತು ಕಾರ್ತವೀರ್ಯರೆಂಬ ಆರು ಚಕ್ರವರ್ತಿಗಳಲ್ಲಿ ಮೊದಲಿಗನಾಗಿದ್ದನು. ಜಗದೊಡೆಯನಾದ ಶ್ರೀರಾಮ ಚಂದ್ರನೂ, ಹರಿಶ್ಚಂದ್ರನೂ ಚಕ್ರವರ್ತಿಗಳಾಗಿದ್ದರೂ ಶಾಸ್ತ್ರಕಾರರು ಇವರನ್ನು ಷೋಡಶ **ಮಹಾರಾಜರ** ಸಾಲಿಗೇ ಸೇರಿಸಿರುತ್ತಾರೆ. ಆದರೆ ನಳನು ಮಾತ್ರ **ಚಕ್ರವರ್ತಿಯರಲ್ಲಿ** ಅಗ್ರಗಣ್ಯನಾಗಿದ್ದಾನೆ. ಇಂಥಾ ಸತ್ಪುರುಷನೂ ಕಲಿಯ ಆವೇಶಕ್ಕೆ ಬಲಿಯಾಗಿ ಬಿಟ್ಟನು. ಈತನ ಚರಿತ್ರೆಯನ್ನು ಹೇಳುವೆನು ಕೇಳು" ಎಂದು ನಳ ಚರಿತ್ರೆಯನ್ನು ಹೇಳಲಾರಂಭಿಸಿದರು.

ವಿದರ್ಭ ದೇಶದ ರಾಜನಾಗಿದ್ದ ಭೀಮಭೂಪಾಲನ ಪುತ್ರಿಯಾದ। ದಮಯಂತಿ ಎಂಬ ಸ್ಫುರದ್ರೂಪಿ ಕನ್ಯಾಮಣಿಯು ವನ ವಿಹಾರದಲ್ಲಿ ರಾಜಹಂಸನಿಂದ ನಳನ ಗುಣಾತಿಶಯಗಳನ್ನು ಕೇಳಿ ಆತನನ್ನೇ ವರಿಸುವೆನೆಂದು ಸಂಕಲ್ಪವನ್ನು ಮಾಡಿದಳು. ಮೊದಲು ನಳನ ಕೈಗೆ ಬೇಟೆಯಲ್ಲಿ ಸಿಕ್ಕಿದ್ದ ಆ ಹಂಸವು ತನಗೆ ಪ್ರಾಣಭಿಕ್ಷೆಯನ್ನು ನೀಡಬೇಕೆಂದು ಬೇಡಿಕೊಂಡಿತು. ಕರುಣಾಶಾಲಿಯಾದ ನಳನು ಆ ಪಕ್ಷಿಯನ್ನು ರಕ್ಷಿಸಿ ಬಿಟ್ಟನು. ಆ ಉಪಕಾರಕ್ಕೆ ಪ್ರತಿಯಾಗಿ ಆ ಹಂಸವು ದಮಯಂತಿಯಂತಹ ಮಹಾ ಪತಿವ್ರತೆ ರೂಪಗುಣ ಸಂಪನ್ನೆಯಾದ ರಾಜಕನ್ನಿಕೆಯನ್ನು ಪತ್ನಿಯನ್ನಾಗಿ ಪಡೆವ ವಿಷಯದಲ್ಲಿ ನಳನ ರಾಯಭಾರವನ್ನು ವಹಿಸಿ ಯಶಸ್ವಿಯಾಯಿತು. ಸ್ವಯಂವರದಲ್ಲಿ ಅಗ್ನಿ, ವಾಯು, ವರುಣ ಮತ್ತು ಇಂದ್ರರು ಭಾಗವಹಿಸಿದ್ದರು. ಮೇಲ್ನೋಟಕ್ಕೆ ಇವರು ಕನ್ಯಾರ್ಥಿಯಾಗಿ ಬಂದಿದ್ದರೂ ಅಂತರಂಗದಲ್ಲಿ ಧರ್ಮಾತ್ಮನಾದ ಈ ನಳನಿಗೆ ಮುಂದೆ ಬರಲಿದ್ದ ಕಲಿ ಸಂಕಟದಿಂದ ಪಾರಾಗಲು ವರವನ್ನು ನೀಡಲೆಂದೇ ಬಂದಿದ್ದರು. ತಾವು ನಳನಲ್ಲಿಗೆ ಹೋಗಿ ತಮ್ಮಲ್ಲಿ ಯಾರನ್ನಾದರೂ ಮದುವೆಯಾಗಬೇಕೆಂದು ದಮಯಂತಿಗೆ ಹೇಳಿ ಆಕೆಯು ನಮ್ಮವರಲ್ಲಿ ಒಬ್ಬನನ್ನು ಮದುವೆಯಾಗಲು ಒಪ್ಪಿಸಬೇಕೆಂದು ನಳನಿಗೆ ಆಜ್ಞೆಯನ್ನು ಇತ್ತರು. ಇಂದ್ರನ ಆಜ್ಞೆಗೆ ಪ್ರತಿಯಿಲ್ಲ. ಅಂತಃಪುರವನ್ನು ಸೇರುವ ಸಮಸ್ಯೆಯು ಎದುರಾಗಲು ದೇವತೆಗಳು ಕ್ಷಣಾರ್ಧದಲ್ಲಿ ಆ ನಳನನ್ನು ದಮಯಂತಿಯ ಅಂತಃಪುರದಲ್ಲಿ ನಿಲ್ಲಿಸಿದರು. ನಳನು ಆ ದಮಯಂತಿಯ ರೂಪ, ಲಾವಣ್ಯ, ಗಾಂಭೀರ್ಯ, ಸೌಜನ್ಯ, ಸೌಶೀಲತೆಗಳಿಗೆ ಮಾರು ಹೋದನಾದರೂ ಅಮರಸಂದೇಶಕ್ಕೆ ಚ್ಯುತಿ ಬಾರದಂತೆ ತಾನೂ ವರ್ತಿಸಿ ಆ ದೇವಗಣದವರಲ್ಲೊಬ್ಬರನ್ನು ವರಿಸಬೇಕೆಂದು ದಮಯಂತಿಗೆ ವಿನಂತಿಸಿದನು. ಅದಕ್ಕೆ ಆ ದಮಯಂತಿಯು ತಾನಾಗಲೇ ನಳಚಕ್ರವರ್ತಿಯಲ್ಲಿ ಮನಸ್ಸು ಮಾಡಿರುವುದರಿಂದ ಅನ್ಯ ಪುರುಷರ ಪ್ರಸಕ್ತಿಯು ಇಲ್ಲವೇ ಇಲ್ಲವೆಂದು ಹೇಳಿದಳು ಮತ್ತು ನೀವ್ಯಾರು? ಎಂದು ಕೇಳಿದ ದಮಯ ಪ್ರಶ್ನೆಗೆ ತಾನೇ ನಳನೆಂಬ ಉತ್ತರವು

ಸಿಕ್ಕಿತು. ತಕ್ಷಣವೇ ಆ ಬಾಲೆಯು ನಳನ ಕಾಲಿಗೆ ಎರಗಿ ನಾಚಿಕೆಯಿಂದ ಬೀಳ್ಕೊಟ್ಟು ಒಳನಡೆದಳು. ದೇವತೆಗಳು ನಳನ ಗುಣವನ್ನು ದಮಯಂತಿಯೂ, ದಮಯಂತಿಯ ಗುಣವನ್ನು ನಳನಿಗೂ ಹೀಗೆ ಧೃಢ ಪಡಿಸಿದರು. ಅವರು ಕನ್ಯಾರ್ಥಿಯಾಗಿ ಬಂದಿದ್ದರೆ ಅವರೇ ಅಂತಃಪುರವನ್ನು ಪ್ರವೇಶಿಸಬಹುದಾಗಿತ್ತು. ನಳನನ್ನು ಕಳುಹಿಸುವ ಅವಶ್ಯತೆ ಇರಲಿಲ್ಲ.

ಸ್ವಯಂವರದಲ್ಲಿ ನಳನಂತೆ ಕಾಣಿಸಿಕೊಂಡ ದೇವತೆಗಳಿಗೆ ದಮಯಂತಿಯು ಚ್ಯವನ ಋಷಿ ಮತ್ತು ಸುಕನ್ಯೆಯರ ಮಂಗಳ ವಿವಾಹದ ಕಥೆಯನ್ನು ಹೇಳಿ ಅಶ್ವಿನೀ ದೇವತೆಗಳಂತೆ ತನಗೆ ನಳನ್ನು ತೋರಿಸಿಕೊಡಬೇಕೆಂದು ಬೇಡಿಕೊಂಡಳು. ತಪ್ಪಿದರೆ, ಅನಿಮಿಷತ್ವ, ಭೂಸ್ಪರ್ಶ ರಹಿತತ್ವ, ಛಾಯಾ ಶೂನ್ಯತ್ವ ಹಾಗೂ ಅಕುಂಠಿತ ಪುಷ್ಪಮಾಲಾದಿ ಲಕ್ಷಣಗಳಿಂದ ನಳನಿಂದ ಭಿನ್ನರಾದ ದೇವತೆಗಳನ್ನು ಗುರುತಿಸಬಲ್ಲೆ. ಆದರೆ ಹಿರಿಯರಿಗೆ ಭಕ್ತಳಾದ ತನ್ನಿಂದ ಅಪಚಾರ ಮಾಡಿಸದೆ ಅನುಗ್ರಹಿಸಬೇಕೆಂದು ದೇವರನ್ನು ಬೇಡಿ ಕೊಂಡಳು. ಆಕೆಯ ಭಕ್ತಿಗೆ ಒಲಿದು ದೇವತೆಗಳು ನಳನನ್ನು ತೋರಿಸಿದರು. ಆಗ ದಮಯಂತಿಯು ನಳನ ಕೊರಳಿಗೇ ಹೂಮಾಲೆಯನ್ನು ಹಾಕಿದಳು. ಬಹಳ ವಿಜೃಂಭಣೆಯಿಂದ ನಳ-ದಮಯಂತಿಯರ ವಿವಾಹವು ನೆರವೇರಿತು. ದೇವತೆಗಳು ಆಶೀರ್ವದಿಸಿ ವರಗಳನ್ನಿತ್ತು ಕಷ್ಟ ಬಂದಾಗ ತಮ್ಮನ್ನು ಸ್ಮರಿಸಬೇಕೆಂದು ಹೇಳಿ ನಿರ್ಗಮಿಸಿದರು.

ನಳ-ದಮಯಂತಿಯರ ವೈವಾಹಾನಂತರದಲ್ಲಿ ಈ ವಾರ್ತೆಯನ್ನು ಕೇಳಿದ ಕಲಿಯು ನಳನಿಂದ ದಮಯಂತಿಯನ್ನು ಅಗಲಿಸಿ ಆಕೆಯನ್ನು ತಾನು ವಿವಾಹ ಮಾಡಿ ಕೊಳ್ಳುವುದಾಗಿ ಘೋಷಿಸಿದನು. ಇದು ಕಲಿಯ ಸ್ವರೂಪಕ್ಕೆ ಅನುಗುಣವಾದುದೇ ಸರಿ. ಇವನು ನಳ ಚಕ್ರವರ್ತಿಯ ತಮ್ಮನಾದ ಪುಷ್ಕರನಲ್ಲಿಗೆ ಬಂದು ಜೂಜಿನ ಪ್ರಸಂಗವನ್ನು ತಿಳಿಸಿ ರಾಜ್ಯವು ನಿನಗೆ-ದಮಯಂತಿಯು ನನಗೆ ಎಂದು ಹೇಳಿದನು. ಆಗ ಈ ಮಾತನ್ನು ಕೇಳಿದ ಪುಷ್ಕರನು ತನ್ನ ಪಾದರಕ್ಷೆಯಿಂದ ಆ ಕಲಿಯನ್ನು ಘಾತಿಸಿದನು. ಆದರೆ ಲಜ್ಜಾಹೀನನಾದ ಆ ಕಲಿಯು ಒಂದಂಶದಿಂದ ಪುಷ್ಕರನನ್ನು ಪ್ರವೇಶಿಸಿ ಪದೇಪದೇ ಆಮಿಷಗಳನ್ನು ಒಡ್ಡಲಾಗಿ ಪ್ರಚೋದಿತನಾದ ಪುಷ್ಕರನು ತನ್ನ ಅಣ್ಣ ನಳನನ್ನು ಜೂಜಿಗಾಗಿ ರಾಜ್ಯ ಪಣವನ್ನಿಟ್ಟು ಸ್ಪರ್ಧೆಗೆ ಕರೆದನು. ಧರ್ಮ ಮೂರ್ತಿಯಾದ ನಳ ಚಕ್ರವರ್ತಿಯು ತನ್ನ ತಮ್ಮನಿಗೆ ಜೂಜಾಟವು ಬೇಡ. ನಾನು ನಿನಗೆ ಹಾಗೆಯೇ ನನ್ನ ರಾಜ್ಯವನ್ನೊಪ್ಪಿಸುವೆನೆಂದನು. ಇದಕ್ಕೆ ಪುಷ್ಕರನು ಒಪ್ಪಲಿಲ್ಲ. ಜೂಜಾಡಲೇಬೇಕೆಂದು ಹಟ ಹಿಡಿದನು. ಒಮ್ಮೆ ನಳ ಚಕ್ರವರ್ತಿಯು ಪಾದ ಪ್ರಕ್ಷಾಲನೆಯನ್ನು ಮಾಡುವಾಗ ಕಾಲಿನ ಹಿಮ್ಮಡಿಯು ತೋಯದಿರಲು ಅಲ್ಲಿಂದ ಕಲಿಯು ನಳನನ್ನು ಪ್ರವೇಶಿಸಿದನು. ಇದರ ಪರಿಣಾಮವಾಗಿ ನಳನೂ ಸ್ಪರ್ಧಾಬುದ್ಧಿಯಿಂದ ಜೂಜಾಡಿ ಸಮಸ್ತವನ್ನೂ ಕಳೆದುಕೊಂಡು ಕಾಡು ಪಾಲಾದನು. ಕಾಡಿನಲ್ಲಿ ಆಹಾರಕ್ಕಾಗಿ ಪಕ್ಷಿಯನ್ನು ಹಿಡಿಯಲು ಉಟ್ಟ ಬಟ್ಟೆಯನ್ನು ಬೀಸಿದರೆ ಹಕ್ಕಿ ರೂಪದ ಆ ಕಲಿಯು ಅದನ್ನು ಅಪಹರಿಸಿ ಬಿಟ್ಟನು. ನಳನು ಮಲಗಿದ್ದ ಹೆಂಡತಿಯ ಸೀರೆಯಲ್ಲಿ ಅರ್ಧವನ್ನು ಕತ್ತರಿಸಿ ತುಂಡುಬಟ್ಟೆಯನ್ನು ಉಟ್ಟುಕೊಂಡು ಕಾಡಿನಲ್ಲಿ ಒಬ್ಬಳೇ ಪತ್ನಿಯನ್ನು ಬಿಟ್ಟು ಹೊರಟು ಹೋದನು. ದಾರಿಯಲ್ಲಿ ಕಾರ್ಕೋಟಕನಿಂದ ಕಚ್ಚಲ್ಪಟ್ಟು ಕುರೂಪಿಯಾದನು. ಕಾಡಿನಲ್ಲಿ ಕಾಡುಕಿಚ್ಚಿನಲ್ಲಿ ಸಿಕ್ಕಿಬಿದ್ದಿದ್ದ ಕಾರ್ಕೋಟಕನೆಂಬ ಸರ್ಪವನ್ನು ನಳನು ರಕ್ಷಿಸಿದನು. ಆದರೆ ಆಕಾರ್ಕೋಟಕನು ತಕ್ಷಣವೇ ನಳನನ್ನು ಕಚ್ಚಿಬಿಟ್ಟನು. ಆಗ ಅಡ್ಡಾದಿಡ್ಡಿ ಕುರೂಪವನ್ನು ತಾಳಿದ ನಳನು ಕೋಪದಿಂದ ನಾಮಾಡಿದುಪಕಾರಕ್ಕೆ ನೀನು ಅಪಕಾರವನ್ನು ಎಸಗಿದೆ. ನಾನು ನಿನಗೆ ಈಗಲೇ ಶಾಪವನ್ನು ಕೊಡುವೆನೆನಲು ಆಕಾರ್ಕೋಟಕನು "ರಾಜಾ, ನಾನು ನಿನಗೆ ದ್ರೋಹ ಬಗೆದಿಲ್ಲ, ನಿನ್ನಲ್ಲಿ ಆವಿಷ್ಟನಾಗಿದ್ದ ಕಲಿಯನ್ನು ನನ್ನ ವಿಷದಿಂದ ಅರ್ಧಸುಟ್ಟು ಬಿಟ್ಟಿದ್ದೇನೆ. ನಿನ್ನ ಈ ಕುರೂಪವು ನಿನ್ನ ತತ್ಕಾಲಿಕ ಉಪಜೀವನಕ್ಕೆ ಸಹಕಾರಿಯಾಗುವುದು. ನಿನಗೆ ಎರಡು

ವಸ್ತ್ರಗಳನ್ನು ನೀಡುತ್ತಿದ್ದೇನೆ. ಒಂದು ನಿನ್ನ ರೂಪವನ್ನು ಮರೆಮಾಚುವುದಕ್ಕೆ, ಮತ್ತೊಂದು ನೈಜರೂಪವನ್ನು ನೀಡುತ್ತದೆ ಎಂದು ಹೇಳಿ ನಿರ್ಗಮಿಸಿದನು. ತರುವಾಯ ನಳನು ಕುರೂಪದಿಂದಲೇ ಸಾಮಂತ ರಾಜನಾಗಿದ್ದ ಋತುಪರ್ಣ ರಾಜನಲ್ಲಿಗೆ ಬಾಹುಕ ಎಂಬ ಹೆಸರಿನಿಂದ ಅಲ್ಲಿ ಬಂದು ರಥದ ಬೋವಿಯಾಗಿ ಸಂಬಳಕ್ಕೆ ನಿಂತನು. ಇತ್ತ ದಮಯಂತಿಯೂ ಸರ್ಪದಿಂದ ಕಚ್ಚಲ್ಪಟ್ಟು ಕಿರಾತನೋರ್ವನಿಂದ ಬದುಕುಳಿದರೂ ಆನೀಚನ ದುರ್ವರ್ತನೆಗೆ ಅವನನ್ನು ದೃಷ್ಟಿ ಮಾತ್ರದಿಂದಲೇ ಸುಟ್ಟು ಬೂದಿ ಮಾಡಿ ಮುನ್ನಡೆದಳು. ಅನಾಥೋದ್ಧೈವರಕ್ಷಕ. ಪತಿಯನ್ನು ಹುಡುಕುತ್ತಾ ಕಾಡುಮೇಡು, ಕಲ್ಲು ಮುಳ್ಳು, ಹಸಿವೆ, ನಿದ್ರೆ, ಆಯಾಸ, ಕ್ರೂರಮೃಗ, ಖಗ, ಹಗಲು, ರಾತ್ರಿ ಸಂಕಟಗಳನ್ನು ಅನುಭವಿಸುತ್ತಾ ನಡೆದಳು. ಪತಿಯ ಯೋಗಕ್ಷೇಮವನ್ನು ಕಾಣಬೇಕೆಂಬ ಏಕೈಕ ಧ್ಯೇಯಕ್ಕಾಗಿ ಮಾತ್ರ ಆಕೆಯು ಜೀವಿಸಿದ್ದಳು. ಶ್ರೀಹರಿಯ ಸ್ಮರಣೆ ಪೂರ್ವಕವಾದ ಆಕೆಯ ಪಾತಿವ್ರತ್ಯ ಧರ್ಮವು ಒಂದು ಮಾತ್ರ ಆಕೆಗೆ ರಕ್ಷೆಯಾಗಿದ್ದಿತು. ಅರಬತ್ತಲೆಯಾಗಿ ಕಾಡಿನಲ್ಲಿ ಹೊರಟದ್ದ ರಾಜ ಕುಮಾರಿ! ರಾಜಾ ಧರ್ಮಜಾ, ಕೇಳು, ಎನ್ನುತ್ತಿದ್ದಂತೆ ಧರ್ಮರಾಜನು ಗಳಗಳನೆ ಅತ್ತುಬಿಟ್ಟನು. ಭೀಮನು "ಎಲ್ಲಿ ಸ್ವಾಮಿ, ಆಕಲಿ" ಎಂದು ಗರ್ಜಿಸಿದನು. ಇಷ್ಟನ್ನು ಕೇಳಿದ ಧರ್ಮರಾಜನು ಹೇಳಿದನು "ಸ್ವಾಮಿ, ರೋಮಶ ಮಹಾಮುನಿಗಳೇ, ಆ ತಾಯಿ ದಮಯಂತಿಯ ಕಷ್ಟವನ್ನು ಕೇಳಿದರೆ ನಮ್ಮದೇನೂ ಅಲ್ಲ ಬಿಡಿ, ನಮ್ಮ ಜೊತೆಗೆ ಬಲಾಢ್ಯರಾದ ಭೀಮಾದಿ ನಾಲ್ವರಿದ್ದಾರೆ. ಸತಿಯೂ ಜೊತೆಗಿದ್ದಾಳೆ. ಆ ದಮಯಂತಿಯ ಸ್ಮರಣೆಯಿಂದ ನಮ್ಮ ದುಃಖವೂ ಪರಿಹಾರವಾದೀತು. ಮುಂದೆ ಹೇಳಿರಿ ಸ್ವಾಮಿ' ಎಂದನು.

ಮುಂದೆ ಸಾಗುತ್ತಿದ್ದ ದಮಯಂತಿಯನ್ನು ಕಂಡ ಹಲವರು ಹಲವು ಬಗೆಯಿಂದ ಆಕೆಯನ್ನು ಮಾತನಾಡಿಸದೇ ಇರುತ್ತಿರಲು ಆಕೆಯು ಒಂದು ರಾಜಧಾನಿಗೆ ಬಂದಳು. ಅಲ್ಲಿ ರಾಜಬೀದಿಯಲ್ಲಿ ಮೋಡ ಮುಸುಕಿದ ಚಂದ್ರನಂತೆ ಸರ್ವಲಕ್ಷಣ ಸಂಪನ್ನಳಾಗಿ ಏಕಾಂಗಿಯಾಗಿ ತಲೆ ತಗ್ಗಿಸಿಕೊಂಡು ಹೊರಟಿದ್ದಳು ಆ ದಮಯಂತಿ. ಹೀಗೆ ಅರೆಬತ್ತಲೆಯಾಗಿ ತಿರುಗುತ್ತಿದ್ದ ಸ್ತ್ರೀಯ ಲಕ್ಷಣವು ಅಂತಃಪುರದಿಂದ ನೋಡಿದ ರಾಜ ಪತ್ನಿಯ ಗಮನವನ್ನು ಸೆಳೆಯಿತು. ಅರೆಬಟ್ಟೆ, ಅರಹೊಟ್ಟೆಯಿಂದ ತನ್ನ ದೇಶದ ಪ್ರಜೆ, ಪಶು, ಪಕ್ಷಿ, ಕ್ರಿಮಿ, ಕೀಟಗಳೂ ಸಹ ನೋಯುವುದನ್ನು ಕಂಡು ಎಂದಿಗೂ ಸಹಿಸದ ಪ್ರಜಾಮಾತೃ ಸದೃಶಳಾದ ಆ ಮಹಾರಾಣಿಯು ಸರ್ವಲಕ್ಷಣ ಸಂಪನ್ನಳಾದ ದಮಯಂತಿಯನ್ನು ಕಂಡು ಕೈಬಿಡುವಳೇ? ತಕ್ಷಣವೇ ಆಕೆಯು ತನ್ನ ಸಖಿಯರನ್ನು ದಮಯಂತಿಯ ಬಳಿಗೆ ಕಳುಹಿಸಿ ಆಕೆಯನ್ನು ತನ್ನರಮನೆಗೆ ಕರತರಲು ಹೇಳಿದಳು. ಸಾಧ್ವಿಯರ ಮನಸ್ಸು ಸಾಧ್ವಿಯರನ್ನು ಗುರುತಿಸದೇ ಬಿಟ್ಟೀತೇ? ಸದಾಕಾಲವೂ ಧರ್ಮ ಸ್ವರೂಪಿಯಾದ ಪರಮಾತ್ಮನಲ್ಲಿ ನಂಬಿಕೆಯನ್ನು ಇಟ್ಟಿದ್ದಂಥಾ ದಮಯಂತಿಯು ತಾತ್ಕಾಲಿಕವಾಗಿ ಭಯರಹಿತಳಾಗಿ ಅಂತಃಪುರದ ಸ್ತ್ರೀಯರೊಡನೆ ಅಂತಃಪುರವನ್ನು ಸೇರಿದಳು. ಅಲ್ಲಿ ಮಹಾರಾಣಿಗೆ ಈ ದಮಯಂತಿಯ ಮೇಲೆ ಅದೇಕೋ ಅಂತಃಕರಣವು ಉಕ್ಕಿ ಬಂದು ತನ್ನ ಮಗಳ ವಸ್ತ್ರಗಳನ್ನೇ ಆಕೆಗೆ ಬಲವಂತವಾಗಿ ಉಡಿಸಿ ಉಣಿಸಿದಳು. ನಿನ್ನ ಜೊತೆಗೆ ನನ್ನ ಮಗಳು ಇರಲಿ. ನಿನ್ನ ಗುಣವು ಆಕೆಗೆ ಬರಲಿ. ಆಕೆಗೆ ನೀನೇ ಗುರುವಾಗು. ನಮ್ಮೊಡನೆ ಉಂಡು ನೀನು ನಿಸ್ಸಂಕೋಚವಾಗಿ ಇರು ಎಂದು ಮಹಾರಾಣಿಯು ಅಭಯ ಆಶ್ರಯಗಳನ್ನು ಇತ್ತಳು. ಮಹಾರಾಣಿಯು ಕೆಲವು ದಿನಗಳು ಕಳೆದ ತರುವಾಯ ಒಂದು ದಿನ ದಮಯಂತಿಯ ದೇವತಾ ಲಕ್ಷಣಗಳನ್ನು ಕಂಡು "ದೇವೀ ನೀರಾಮ್ಮಾ ಮಾಜದೇ ಹೇಳು" ಎಂದಾಗ ದಮಯಂತಿಯು "ನಾನೊಬ್ಬ ನಿಮ್ಮ ಸೇವಕಿ" ಎಂದಳು ಈ ಮಾತನ್ನು ನಂಬದ ಮಹಾರಾಣಿಯು ಒಂದು ವಿಧದಲ್ಲಿ ತನ್ನ ಸೇವಕಿಯನ್ನು ಪರೀಕ್ಷಿಸಿದಳು. ಆಗ ಆ ದಮಯಂತಿಯ ಮುಖದಲ್ಲಿ ತೇಜಃಪುಂಜವಾದ ಚಂದ್ರಬಿಂಬವನ್ನು ಕಂಡು ಆಕೆಯನ್ನು ಅಪ್ಪಿಕೊಂಡು ಆನಂದಾಪ್ರುಗಳನ್ನು ಸುರಿಸಿದಳು. ತರುವಾಯ ಆ ರಾಣಿಯು ಈ ಸೇವಕಿಯು ತನ್ನ ಅಕ್ಕನ ಮಗಳೇ

ಆದ ದಮಯಂತಿ ಎಂದೂ ತಿಳಿದು ಉಮ್ಮಳಿಸಿ ಕಣ್ಣೀರಿನ ಕೋಡಿಯನ್ನು ಸುರಿಸಿದಳು. ತಕ್ಷಣವೇ ಆಕೆಯು ಹೇಳಿದಳು "ಅಮ್ಮಾ ದಮಯಂತೀ, ಈ ಮನೆಯು ನಿನ್ನ ಚಿಕ್ಕಪ್ಪನೇ ಆದ ಸುಬಾಹು ದೊರೆಯದೇ ಆಗಿದೆಯಮ್ಮಾ. ನಾನು ನಿನ್ನ ಚಿಕ್ಕಮ್ಮ. ನಿನ್ನ ಪತಿ ಎಲ್ಲಿ? ಮಗಳು, ಮಗನು ಎಲ್ಲಿದ್ದಾರೆ? ಚಕ್ರವರ್ತಿಯು ಜೂಜಿನಲ್ಲಿ ಸೋತು ನಿನ್ನೊಡನೆ ಕಾಡಿಗೆ ಹೋದುದು ಮಾತ್ರ ನಮಗೆ ಗೊತ್ತು. ಮುಂದೇನಾಯಿತೋ ತಿಳಿಯಲಿಲ್ಲ. ಎಲ್ಲಾ ತಿಳಿಸಮ್ಮಾ" ಎಂದಾಗ ಎಲ್ಲವನ್ನೂ ಹೇಳಿದಳು ಆ ದಮಯಂತಿ. ಯಜಮಾನರು ಎಲ್ಲಿದ್ದಾರೋ ತಿಳಿಯದು. ಮಕ್ಕಳು ಅಪ್ಪನ ಮನೆಯಲ್ಲಿದ್ದಾರೆ" ಎಂದು ಹೇಳಿ ಅತ್ತಳು. ಈ ವಾರ್ತೆಯನ್ನು ಕೇಳಿದ ಸುಬಾಹು ಮಹಾರಾಜನಿಗೆ ದುಃಖಾ ಆನಂದಾಶ್ರುಗಳ ಕಟ್ಟೆಯು ಒಡೆಯಿತು. ಗಳಗಳನೆ ಅತ್ತುಬಿಟ್ಟನು. ಆ ಮಹಾರಾಜನು ಮಗಳು ಮನೆಗೆ ಬಂದುದಕ್ಕೆ ಹಿಗ್ಗಿದನು. ಷಡ್ಡ ಭೀಮರಾಯನಿಗೆ ಈ ವಾರ್ತೆತನ್ನು ಮುಟ್ಟಿಸಿ ಎಲ್ಲಿದ್ದರೂ ನಳಚಕ್ರವರ್ತಿಯನ್ನು ಹುಡುಕಿಸಿ ತರುತ್ತೇನೆಂದು ಪಣತೊಟ್ಟನು. ಕಾರ್ಕೋಟಕನ ಕಡಿತದಿಂದ ಅಷ್ಟವಕ್ರ ಕುರೂಪಿಯಾಗಿದ್ದ ಬಾಹುಕ ನಾಮಕನಾಗಿದ್ದ ನಳ ಚಕ್ರವರ್ತಿಯನ್ನು ನಾಮಾಂತರ ರೂಪಾಂತರಗಳ ದೆಸೆಯಿಂದ ಸ್ವಯಂ ಸಾಮಂತ ರಾಜನಾಗಿದ್ದು ಈಗ ಧಣಿಯೇ ಆಗಿದ್ದ ಋತುಪರ್ಣನೂ ಸಹ ಈತನನ್ನು ಗುರುತಿಸಲಿಲ್ಲವೆಂದ ಮೇಲೆ ಇನ್ನು ಉಳಿದವರ ಪಾಡೇನು? ಈ ರೂಪಾಂತರವು ಕಾರ್ಕೋಟಕನಿಂದ ದತ್ತವಾದ ವರವಾಗಿದ್ದಿತು.

ನಳಚಕ್ರವರ್ತಿಯನ್ನು ಹುಡುಕಲು ಸುಬಾಹು, ಭೀಮರಾಜರೀರ್ವರೂ ಒಂದು ಉಪಾಯವನ್ನು ಹೂಡಿದರು. ಈ ಉಪಾಯದಿಂದ ಖಂಡಿತವಾಗಿಯೂ ನಳನು ಸಿಕ್ಕುವನೆಂದು ಬಗೆದು "ಹೆಂಡತಿ ಮಕ್ಕಳನ್ನು ಸಾಕಲಾರದ ನಳಚಕ್ರವರ್ತಿಯ ಪತ್ನಿ ದಮಯಂತಿಗೆ ಎರಡನೇ ಬಾರಿ ಸ್ವಯಂವರವನ್ನು ಮಾಡುತ್ತಿರುವೆಂದು ಡಂಗೂರವನ್ನು ಸಾರಿಸಿದರು. ಸರಿ, ಸ್ವಯಂವರವೆಂದ ಮೇಲೆ ಎಲ್ಲರಂತೆ ತಾನೂ ಎಂದು ಋತುಪರ್ಣನೂ ಹೊರಟನು. ಅಶ್ವಚಾಲಕನಾಗಿದ್ದ ಬಾಹುಕನನ್ನು ಕರೆದು ರಥ ಸಿದ್ಧ ಮಾಡೆಂದರೆ ಎರಡು ಸೊಣಕಲು ಕುದುರೆಗಳನ್ನು ರಥಕ್ಕೆ ಒಡ್ಡಿದ್ದನು ಈ ಬಾಹುಕ. ಆಗ ಋತುಪರ್ಣನು ರೇಗಿ ಈ ಕುದುರೆಗಳನ್ನು ಯಾಕೆ ಕಟ್ಟಿದಿ? ನನ್ನ ಕಾರ್ಯ ವಿಳಂಬಕ್ಕಾಗಿಯೇ" ಎಂದು ಕುಪಿತನಾಗಿ ನುಡಿಯಲು ಆ ಬಾಹುಕನು 'ಅಶ್ವ' ಹೃದಯಬಲ್ಲವನಾದುದರಿಂದ ಶೀಘ್ರ ಗಮನಕ್ಕಾಗಿಯೇ ಈ ಕುದುರೆಗಳನ್ನು ಹೂಡಿರುವುದಾಗಿ ಹೇಳಿದನು. ಆಗ ಪರೀಕ್ಷೆಯಾಗಲೆಂದು ಋತುಪರ್ಣನು ರಥವನ್ನು ಹತ್ತಿದ್ದೇ ತಡ. ಅಶ್ವಗಳ ಬೆನ್ನುಗಳನ್ನು ಚಪ್ಪರಿಸಿದನು ಈ ಬಾಹುಕನು. ಆಶ್ಚರ್ಯ! ಅದೇನು ವೇಗ? ಎಷ್ಟು ಶಕ್ತಿ ಆ ಕುದುರೆಗಳಿಗೆ. ಬಾಣ ಸದೃಶವಾಗಿ ಹೊರಟ ಆ ಅಶ್ವಗಳು ಋತುಪರ್ಣನು ಹೊದ್ದಿದ್ದ ವಸ್ತ್ರವು ಕೆಳಗೆ ಬಿದ್ದಿತು ಸ್ವಲ್ಪ ನಿಲ್ಲಿಸು ಎಂದು ಹೇಳುವಷ್ಟರಲ್ಲಿಯೇ ಹನ್ನೆರಡು ಮೈಲಿ ಹಿಂದಾಯಿತು ಎಂದನು ಆ ಬಾಹುಕನು. ತಲೆ ತೂಗಿದನು ಋತುಪರ್ಣನು. ಸಕಾಲಕ್ಕೆ ಭೀಮರಾಯನ ಪಟ್ಟಣದಲ್ಲಿ ಹಲವಾರು ಸಿಬಿರಗಳಿದ್ದುವು. ಅಲ್ಲಿ ಋತುಪರ್ಣನ ಸಿಬಿರದ ಮುಂದೆ ಒಂದು ದೊಡ್ಡದಾದ ಉರುಗಾಲದ (ತಾರೆ) ಮರವಿದ್ದಿತು. ಅದನ್ನು ಕಂಡಕೂಡಲೇ ಅಕ್ಷಹೃದಯ ವಿದ್ಯೆಯನ್ನು ಬಲ್ಲವನಾಗಿದ್ದ ಋತುಪರ್ಣನು ತನ್ನ ಸಾರಥಿ ಬಾಹುಕನನ್ನು ಕುರಿತು ಕುತೂಹಲಕ್ಕಾಗಿ "ಈ ಮರದಲ್ಲಿ ಎಷ್ಟು ಎಲೆ, ರೆಂಬೆ, ಕೊಂಬೆಗಳಿವೆ ತಕ್ಷಣವೇ ಹೇಳು" ಎಂದನು. ಅದಕ್ಕೆ ಬಾಹುಕನು ತಿಳಿಯದು ಸ್ವಾಮಿ ಎಂದನು. ತಕ್ಷಣವೇ ಋತುಪರ್ಣ ಸರಿಯಾಗಿ ಹೇಳಿದನು. ಆಗ ಬಾಹುಕನು ಆಶ್ಚರ್ಯಚಕಿತನಾಗಿ "ಅದನ್ನು ನಾನು ಪರೀಕ್ಷಿಸಲೇ" ಎಂದು ಕೇಳಿದನು ಅದಕ್ಕೆ ಋತುಪರ್ಣನು "ಹೋ, ಅದಕ್ಕೇನು ಪರೀಕ್ಷಿಸು" ಎಂದು ಹೇಳಿದಾಗ ಬಾಹುಕನು ಎಡೆಬಿಡದೆ ಎಣಿಸಿದನು. ಎಣಿಕೆಯು ಅಕ್ಷರಶಃ ಸತ್ಯವಾಗಿ ಕಂಡು ಬಂತು. ಅದಕ್ಕೆ ಬಾಹುಕನು ಆಶ್ಚರ್ಯಭರಿತನಾಗಿ "ಅದು ಯಾವ ವಿದ್ಯೆ? ಅದನ್ನು ನನಗೂ ಉಪದೇಶಿಸುವಿರಾ"? ಎಂದು ಕೇಳಿದನು. ಅದಕ್ಕೆ

ಋತುಪರ್ಣನು "ಇದನ್ನು 'ಅಕ್ಷಹೃದಯ ಮಂತ್ರ' ಎನ್ನುತ್ತಾರೆ. ಅದನ್ನು ನಿನಗೆ ಉಪದೇಶಿಸಿದರೆ ನೀನೇನು ಗುರುದಕ್ಷಿಣೆಯನ್ನು ನನಗೆ ನೀಡುವೇ? ಎಂದಾಗ ಬಾಹುಕನು ನನ್ನಲ್ಲಿ ಈಗ ಯಾವ ದ್ರವ್ಯವೂ ಇಲ್ಲ. ಗುರುದಕ್ಷಿಣೆಗಳಲ್ಲಿ ಮೂರು ವಿಧ ಇವೆ. ದ್ರವ್ಯ ದಾನ, ಸೇವೆ ಮತ್ತು ವಿದ್ಯೆಗೆ ಪ್ರತಿ ವಿದ್ಯಾದಾನ. ಈಗ ನನ್ನಲ್ಲಿ ಹಣವೇ ಇಲ್ಲ. ಸೇವೆಗೆ ಸಲ್ಲುತ್ತಿರುವ ವೇತನವನ್ನು ಬಿಟ್ಟರೆ ಜೀವನ ಸಾಗದು. ಈಗ ಉಳಿದಿರುವುದು ವಿದ್ಯೆಗೆ ಪ್ರತಿ ವಿದ್ಯೆ. ನಿಮ್ಮಲ್ಲಿ ಅಕ್ಷಹೃದಯ ವಿದ್ಯೆಯು ಇರುವಂತೆ ನನ್ನಲ್ಲಿ "ಅಶ್ವ ಹೃದಯ" ವಿದ್ಯೆಯು ಇದೆ. ನೀವು ರಥಾರೂಢ ಕುದುರೆಗಳ ಲಕ್ಷಣವನ್ನು ಅರಿಯದೆ ಆಕ್ಷೇಪಿಸಿದಿರಿ. ಆದರೆ ಅವುಗಳ ಸಾಮರ್ಥ್ಯವು ಈಗ ತಿಳಿಯಿತಲ್ಲವೇ? ನಾನು ನನ್ನಲ್ಲಿರುವ ಅಶ್ವಹೃದಯ ವಿದ್ಯೆಯನ್ನು ನಿಮಗೆ ನೀಡುತ್ತೇನೆ. ನೀವು ನಿಮ್ಮ ಅಕ್ಷಹೃದಯವನ್ನು ನನಗೆ ನೀಡಿರಿ"ಎಂದು ಕೇಳಿದನು. ಅದಕ್ಕೆ ಋತುಪರ್ಣನು "ಎಲಾ ಬಾಹುಕ, ನೀನು ಸೇವಕ, ನಾನು ರಾಜನು. ನಿನ್ನ ಮೇಲಿನ ದಯೆಯಿಂದ ನಾನೇ ನಿನಗೆ ಮೊದಲು ಅಶ್ವಹೃದಯವನ್ನು ಬೋಧಿಸುತ್ತೇನೆ. ತರುವಾಯ ನಿನ್ನ ವಿದ್ಯೆಯನ್ನು ನನಗೆ ಬೋಧಿಸು" ಎಂದು ಹೇಳುತ್ತ ಆಚಮ್ಯಾಸನಾರೂಢರಾಗಿ ಇಬ್ಬರು ಕುಳಿತರು. ಋತುಪರ್ಣ ಮಹಾರಾಜನು ಅಕ್ಷಹೃದಯವನ್ನು ಬೋಧಿಸಿದ್ದೇ ತಡ. ನಳನಲ್ಲಿ ಆವಿಷ್ಟನಾಗಿದ್ದ ಕಲಿಯು ಕುದಿಯವ ಎಣ್ಣೆಯಲ್ಲಿ ಬಿದ್ದವನಂತೆ ವಿಲವಿಲನೆ ಒದ್ದಾಡುತ್ತಾ ಸಂಕಟ ಪಡುತ್ತ ವಮನಮಾರ್ಗದಿಂದ ಹೊರ ಬಿದ್ದನು. ಅದನ್ನು ನೋಡಿದ ಕೂಡಲೇ ಕೆಂಡಮಂಡಲದಂತಾದ ನಳ ಚಕ್ರವರ್ತಿಯು ಅವನಿಗೆ ಶಾಪವನ್ನು ಕೊಡಲು ಮುಂದಾದನು. ಆಗ ಕಲಿ ಎಂಬ ಆ ಪರಮ ಪಾಪಿಯು ನಳ ಚಕ್ರವರ್ತಿಗೆ ಶರಣಾಗತನಾಗಿ ಸದ್ಯಕ್ಕೆ ತನ್ನನ್ನು ಕ್ಷಮಿಸಬೇಕೆಂದು ಅಂಗಲಾಚಿದನು ಮತ್ತೂ ಹೇಳಿದನು "ನಾನು ಈ ಮೊದಲೇ ಕಾರ್ಕೋಟನು ಕಚ್ಚಿದಾಗ ಅವನ ವಿಷಜ್ವಾಲೆಯಲ್ಲಿ ಅರೆಬೆಂದು ಕೊರ ಜೀವನಾಗಿರುವೆನು. ನನ್ನ ಶಕ್ತಿಯ ಮೂರು ಭಾಗಗಳು ಈಗಾಗಲೇ ನಷ್ಟವಾಗಿ ಹೋಗಿದೆ ಇನ್ನು ಮುಂದೆ ನಾನು ನಿನ್ನ ಹಾಗೂ ಸಾಧ್ವೀಮಣಿಯಾದ ದಮಯಂತಿಯ, ಈ ಮಹಾರಾಜ ಋತುಪರ್ಣನ ಮತ್ತು ಯಾರ ಹೆಸರನ್ನು ಎತ್ತಲು ನನ್ನ ಮೈಕಂಪಿಸುತ್ತದೆಯೋ ಆ ಕಾರ್ಕೋಟನ ಹೆಸರನ್ನು ಹೇಳಿದರೆ, ಕೇಳಿದರೆ ಅಲ್ಲಿ ನಾನಿರುವುದಿಲ್ಲ. ರಕ್ಷಿಸು" ಎಂದು ಬೇಡುತ್ತಿರಲು ನಳ ಚಕ್ರವರ್ತಿಯು ಒಂದು ಕ್ಷಣವೂ ಅವನು ಅಲ್ಲಿರಲು ಅವಕಾಶವನ್ನು ನೀಡದೆ ಅಲ್ಲಿಂದ ಪಲಾಯನಗೈಸಿದನು. ಈಗ ಆ ಕಲಿಯು ವರ್ತಿಸುತ್ತಿರುವುದು ಅವನಲ್ಲಿ ಉಳಿದಿರುವ ಕಾಲು ಅಂಶ ಶಕ್ತಿಯಿಂದ ಮಾತ್ರ. ಇಲ್ಲವಾಗಿದ್ದರೆ ಮುಮುಕ್ಷುಗಳ ಗತಿ ಏನಾಗುತ್ತಿತ್ತೋ! ಏನೋ? ತರುವಾಯ ಋತುಪರ್ಣನು ನಳ ಚಕ್ರವರ್ತಿಯಿಂದ ಅಶ್ವಹೃದಯ ಮಂತ್ರೋಪದೇಶವನ್ನು ಪಡೆದುಕೊಂಡನು. ಇಷ್ಟಾದರೂ ನಳನು ತನ್ನ ನಿಜ ಸ್ವರೂಪವನ್ನು ಮಾತ್ರ ಬಹಿರಂಗಪಡಿಸಿರಲಿಲ್ಲ.

ಇತ್ತ ಭೀಮರಾಯನ ಬಣದಲ್ಲಿ ಶಿಬಿರಾರ್ಥಿಗಳ ಪರೀಕ್ಷೆಗೆ ಪ್ರಾರಂಭವಾಯಿತು. ನಳಚಕ್ರವರ್ತಿಯ ಮಕ್ಕಳನ್ನು ರಾಜರುಗಳ ಮುಂದೆ ಸಖಿಯರು ಸುಳಿದಾಡಿಸಿದರು. ಅಷ್ಟು ಜನರಲ್ಲಿ ಬಾಹುಕನು ಮಾತ್ರ ಮಕ್ಕಳನ್ನು ನೋಡಿ ಕಣ್ಣೀರಿಟ್ಟನು. ಇದನ್ನು ಸಖಿಯರು ಗಮನಿಸಿ ದಮಯಂತಿಗೆ ತಿಳಿಸಿದರು. ತರುವಾಯ ದಮಯಂತಿಯು ಆ ಬಾಹುಕನು ಅಡಿಗೆ, ಊಟ ಹೇಗೆ ಮಾಡುತ್ತಾನೆ ತಿಳಿದುಕೊಂಡು ಬನ್ನಿರಿ ಎಂದು ಸಖಿಯರನ್ನು ಕಳುಹಿಸಿದಳು. ಕದ್ದು ಕಂಡದ್ದನ್ನು ಆ ಸಖಿಯರು "ಅಮ್ಮಾ, ಆ ಬಾಹುಕನು ಸೌದೆ ಇಲ್ಲದೆ ಉಫ್ ಎಂದರೆ ಒಲೆ ಹೊತ್ತಿತು. ನೆಲವನ್ನು ಉಗುರಿನಿಂದ ಕೆರೆದರೆ ನೀರು ಬಂದಿತು. ಖಾಲೀ ಪಾತ್ರೆಗಳೆಲ್ಲಾ ಇದ್ದಕ್ಕಿದಂತೆ ತುಂಬಿ ಬಿಟ್ಟವು. ಒಂದು ಕ್ಷಣದಲ್ಲಿ ಅಡಿಗೆಯನ್ನು ಮುಗಿಸಿ ರಾಜಾ ಋತುಪರ್ಣನಿಗೆ ಉಣಿಸಿ ತಾನೂ ಉಂಡನು. ಎಂದು ಹೇಳಿದರು. ಮರು ದಿನ ಸಖಿಯರು ಬಂದು ನಳಪಾಕಕ್ಕೆ ಕೈಯೊಡ್ಡಿದರು. ಆ ರಾಣಿ ಸಖಿಯರು ನೀಡಿದುದನ್ನು ಸವಿದಳು ದಮಯಂತಿ.

ಮರು ಮಾತಾಡದೇ ಪರಿವಾರದೊಡನೆ ಬಂದು ದಮಯಂತಿಯು ಆ ಬಾಹುಕನಿಗೆ ಎರಗಿದಳು. ಮುಚ್ಚುಮರೆ ಇಲ್ಲದೆ ತನ್ನ ಮಕ್ಕಳನ್ನು ಆತನ ತೊಡೆಯ ಮೇಲೆ ಕುಳ್ಳಿರಿಸಿಯೇ ಬಿಟ್ಟಳು. ಆಗ ಆ ಬಾಹುಕನು "ರಾಜ ಕುಮಾರೀ, ಏನಿದು ನಿನ್ನ ಗಂಡನು ಸಿಕ್ಕಲಿಲ್ಲವೆಂದು ಕೊನೆಗೆ ಈ ಕುರೂಪಿಯಾದ ಸೂತನ ತುತ್ತಿಗೆ ಕೈಯ್ಯೊಡ್ಡಲು ಇಲ್ಲಿಗೆ ಬಂದೆಯಾ" ಎಂದ ತಕ್ಷಣವೇ ದಮಯಂತಿಯು ಆತನ ಕಾಲಿಗೆರಗಿ "ಸ್ವಾಮಿ ಇನ್ನೊಮ್ಮೆ ನಿಮ್ಮ ಬಾಯಿಂದ ಈ ಮಾತುಗಳು ಹೊರಟರೆ ಯೋಗಾಗ್ನಿಯಲ್ಲಿ ನನ್ನ ಈ ದೇಹವು ಈಗಲೇ ಮರೆಯಾಗುವುದು ಖಂಡಿತಾ" ಎಂದು ಹೇಳಿ ಕಣ್ಣುಗಳನ್ನು ಮುಚ್ಚಿದ್ದೇ ತಡ "ಬಾಹುಕನು ಓಡಿ ಬಂದು ದಮಯಂತಿಯನ್ನು ಬಿಗಿಯಾಗಿ ಅಪ್ಪಿಕೊಂಡು ಬಿಟ್ಟನು. ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು. ಬಾನಂಗಳದಲ್ಲಿ ದೇವದುಂದುಭಿಗಳು ಮೊಳಗಿದುವು. ಭೀಮರಾಯ, ಸುಬಾಹು ಮೊದಲುಗೊಂಡು ಸಮಸ್ತ ಬಂಧುಬಾಂಧವರು ಅಲ್ಲಿ ನೆರೆದಿದ್ದರು. ವಿಸ್ಮಯವಾಗಿ ನೋಡುತ್ತಿದ್ದ ಸಮಸ್ತರ ಎದುರಿನಲ್ಲೇ ಬಾಹುಕನು ತನ್ನ ಹತ್ತಿಲಿದ್ದ ಶುಭ್ರ ವಸ್ತ್ರದಿಂದ ಮುಖವನ್ನು ಒರೆಸಿಕೊಳ್ಳಲಾಗಿ ಮೊದಲಿದ್ದ ನಳ ಚಕ್ರವರ್ತಿಯಂತೆ ದ್ವಿಗುಣಿತವಾದ ತೇಜಸ್ಸಿನಿಂದ ಯುಕ್ತನಾಗಿ ಸರ್ವರ ಸಮ್ಮುಖದಲ್ಲಿ ನಿಂತನು. ಆಗ ಎಲ್ಲರೂ ಜಯ, ಜಯಾಕಾರವನ್ನು ಮಾಡಿದರು. ಚಕ್ರವರ್ತಿಗನುಗುಣವಾಗಿ ಅರಮನೆಯಲ್ಲಿ ಸನ್ಮಾನವನ್ನು ಮಾಡಿದರು. ಆಗ ಋತುಪರ್ಣನು ಸ್ವಯಂವರಾಕಾಂಕ್ಷಿಯಾಗಿ ಬಂದುದಕ್ಕೆ ಮುಮ್ಮಲ ಮರುಗಿದನು. ತಂದೆ ತಾಯಿಯಂತೆ ತನ್ನನ್ನು ರಕ್ಷಿಸಬೇಕು, ಕ್ಷಮಿಸಬೇಕೆಂದು ಬೇಡಿಕೊಂಡನು. ಆಗ ಅ ನಳ ದಮಯಂತಿಯರು ಋತುಪರ್ಣನ ಉಪಕಾರವನ್ನು ಎರಡು ವಿಧವಾಗಿ ಸ್ಮರಿಸಿದರು. ಒಂದು ನಳನಿಗೆ ಆಶ್ರಯವನ್ನು ಕೊಟ್ಟುದು ಇನ್ನೊಂದು ಕಲಿಯಭಂಜಕವಾದ ಅಕ್ಷಹೃದಯ ಮಂತ್ರವನ್ನು ಉಪದೇಶಿಸಿದುದು.

ತರುವಾಯ ಕಲಿಯ ಆವೇಶದಿಂದ ದುರ್ಮದಾಂಧನಾಗಿ ರಾಜ್ಯಭಾರವನ್ನು ಮಾಡುತ್ತಲಿದ್ದ ಪುಷ್ಕರನಿಗೆ ನಳಚಕ್ರವರ್ತಿಯು ಜೂಜಾಗಲೀ ಯುದ್ಧವೇ ಆಗಲಿ ಕಣಕ್ಕಿಳಿಯ ಬೇಕೆಂದು ಹೇಳಿ ಕಳುಹಿಸಿದನು. ಇದರಿಂದ ಕ್ರೋಧವಶನಾದ ಪುಷ್ಕರನು "ಈಗ ಜೂಜಾಡಲು ಪಣಕ್ಕೆ ಒಡ್ಡಲು ನಿನ್ನಲ್ಲಿ ಏನಿದೇ? ಎಂದು ಕೇಳಿದನು. ಅದಕ್ಕೆ "ನಾನೂ ಎಲ್ಲವನ್ನೂ ಸೋತಾಗ ದಮಯಂತಿಯನ್ನ ಪಣಕ್ಕಿಡು ಎಂದಿದ್ದೆ. ಈಗ ನನ್ನ ಬಳಿ ಉಳಿದಿರುವ ಸ್ತ್ರೀ ರತ್ನವನ್ನು ಪಣಕ್ಕಿಡುತ್ತೇನೆ" ಎಂದು ಹೇಳಿ ಕಳುಹಿಸಿದನು. ಇದಕ್ಕೆ ತಪ್ಪಿದರೆ ಸೈನ್ಯವು ಸಿದ್ಧವಾಗಿದೆ" ಎಂದು ಹೇಳಿ ಕಳುಹಿಸಿದನು. ಕೊನೆಗೆ ಪುಷ್ಕರನು ಜೂಜಿನ ಬಾಜಿಗೆ ಒಪ್ಪಿದನು.

ಧರ್ಮನಂದನಾ, ಇತ್ತ ಕೇಳು. ಆ ನಳ ಚಕ್ರವರ್ತಿಯು ತನ್ನ ಸತಿ ದಮಯಂತಿಯನ್ನೇ ಪಣಕ್ಕಿಟ್ಟನು. ಧರ್ಮದ ಮುಂದೆ ಅಧರ್ಮಕ್ಕೆಲ್ಲಿದೆ ಸ್ಥಾನ? ನಳನು ದಾಳಗಳನ್ನು ಉರುಳಿಸಿದಂತೆ ಪುಷ್ಕರನ ರಾಜ್ಯ ಸಂಪತ್ತುಗಳು ನಳ ಚಕ್ರವರ್ತಿಯ ಕಡೆಗೆ ಹೊಳೆಯಾಗಿ ಹರಿದು ಬಂದಿತು. ಸೋತ ಪುಷ್ಕರನು ಅಣ್ಣನ ಪಾದಕ್ಕೆರಗಿ ಕೃಪಾ ಭಿಕ್ಷೆಯನ್ನು ಬೇಡಿದನು. ಆಗ ಆ ನಳ ಚಕ್ರವರ್ತಿಯು ಅವನನ್ನೂ ಮನ್ನಿಸಿ ಕಲಿಯಿಂದ ಪೀಡಿತನಾದ ಅವನನ್ನು ಉದ್ಧರಿಸಿದನು. ನಳನ ಆಶ್ರಯದಲ್ಲಿ ಪುಷ್ಕರನು ಉದ್ಧೃತನಾದನು. ಹೇ ಧರ್ಮರಾಜಾ, ಆ ನಳ ಚಕ್ರವರ್ತಿ ದಮಯಂತಿಯ ಮಗಳು ಯಾರು? ಈಗ ಎಲ್ಲಿದ್ದಾಳೆ ಗೊತ್ತೇ? ಆಕೆಯೇ ಇಂದ್ರಸೇನೆಯು. ಈಗ ನಿಮ್ಮ ಬಳಿಯಲ್ಲೇ ದ್ರೌಪದಾದೇವಿಯಾಗಿ ದೇವಕನ್ನಿಕೆಯರನ್ನು ಉಧೃತಿಸುತ್ತಿದ್ದಾಳೆ. ಅತಿರೋಹಿತ ವಿಜ್ಞಾನಿಗಳೂ ಋಜುಗಣಸ್ಥರೂ ಆದ ಆ ಭೀಮ-ದ್ರೌಪದಿಯರು ನಿನ್ನ ಜೊತೆಯಲ್ಲೇ ಇರುವಾಗ ಅದಾವ ಕಲಿ ಸ್ವರೂಪನಾದ ಆ ದುರ್ಯೋಧನನ ಬಾಧೆಯು ತಾನೇ ನಿಮಗುಂಟಾದೀತು? ಕೇವಲ ಲೋಕವಿಡಂಬನಾರ್ಥವಾಗಿ ಅವರು ಅಸಹಾಯಕರೆಂಬಂತೆ ನಟಿಸುತ್ತಿದ್ದಾರೆ.

ಪರಮಾತ್ಮನನ್ನು ನಂಬಿದ ನೀವು ಈ ನಳ ಚರಿತ್ರೆಯನ್ನು ಕೇಳಿದುದರಿಂದ ಸುಖವಾಗಿ ವನವಾಸವನ್ನೂ ಮತ್ತು ಅಜ್ಞಾತವಾಸವನ್ನೂ ನಿರಾತಂಕವಾಗಿ ಕಳೆಯುವಿರಿ ಮತ್ತು ನಳ ಚಕ್ರವರ್ತಿಯಂತೆ ಕಲಿ ಬಾಧೆಯಿಂದ ಮುಕ್ತರಾಗಿ ರಾಜ್ಯವನ್ನಾಳುವಿರಿ. ನಾನು ಈಗ ಇಲ್ಲಿಗೆ ಬಂದ ಮುಖ್ಯ ಉದ್ದೇಶವೇನೆಂದರೆ ಈಗ ನಾನು ನಿಮಗೆ ನನಗೆ ಉಪದೇಶ ರೂಪವಾಗಿ ಪ್ರಾಪ್ತವಾಗಿರುವ ಅಕ್ಷಹೃದಯ ಮಂತ್ರವನ್ನು ಉಪದೇಶಿಸಲು. ಈ ಮಂತ್ರದಿಂದ ನೀವು ವಿಜಯಶಾಲಿಗಳಾಗುವಿರಿ. ಈ ಮಂತ್ರವು ನೆಪ ಮಾತ್ರ. ಭೀಮನಿಂದಲೇ ನಿನಗೆ ಸಕಲ ಸೌಭಾಗ್ಯವು ಪ್ರಾಪ್ತವಾಗುವುದು ಎಂದು ಹೇಳುತ್ತಾ ಆ ರೋಮಶ ಮಹಾಮುನಿಗಳು ಧರ್ಮರಾಯನಿಗೆ ಅಕ್ಷಹೃದಯಮಂತ್ರವನ್ನು ಉಪದೇಶಿಸಿ ಮತ್ತೂ ಹೇಳಿದರು "ನೀವು ನಿಮ್ಮ ಪಣದ ಅವಧಿಯು ಮುಗಿದ ಮೇಲೆ ಆ ದುರ್ಯೋಧನನು ನಿಮ್ಮೊಡನೆ ಯುದ್ಧಕ್ಕಾಗಿಯಾದರೂ ಬರಲಿ. ಅಥವಾ ದ್ಯೂತಕ್ಕಾಗಿಯಾದರೂ ಬರಲಿ. ನೀವು ಅವನನ್ನು ನಿಗ್ರಹಿಸಿ ನಿಮ್ಮ ರಾಜ್ಯವನ್ನು ನೀವು ಪಡೆದು ಭಗವದನುಗ್ರಹಕ್ಕೆ ಪಾತ್ರರಾಗಿ ಇಹಪರ ಸೌಭಾಗ್ಯವನ್ನು ಹೊಂದುವಿರಿ. ಇಕೋ ಆ ಕಲಿ ನಾಶನಕ್ಕೆ ಈ ಪುಣ್ಯಾತ್ಮರ ಸ್ಮರಣೆಯು ಅವಶ್ಯಕವಲ್ಲವೇ? **"ಕಾರ್ಕೋಟಕಸ್ಯ ನಾಗಶ್ಯ । ದಮಯಂತ್ಯಾ ನಳಶ್ಯಚ॥ ಋತುಪರ್ಣಶ್ಯ ರಾಜರ್ಷೇಃ। ಕೀರ್ತನಂ ಕಲಿ ನಾಶನಂ। ಕೀರ್ತನಂ ಪಾಪ ನಾಶನಂ ಕೀರ್ತನಂ । ಪುಣ್ಯ ವರ್ಧನಂ ॥"** ಎಂದು ಹೇಳುತ್ತಾ ಆ ರೋಮಶ ಮಹಾಮುನಿಗಳು ಪಾಂಡವರನ್ನು ಹರಸುತ್ತ ಹರಿನಾಮ ಸ್ಮರಣಪೂರ್ವಕವಾಗಿ ಅಲ್ಲಿಂದ ನಿರ್ಗಮಿಸಿದರು.

ಅನಭಿಮಾನದ ಶರೀರ ಯುಕ್ತಳಾದ ದ್ರೌಪದಾದೇವಿಗೆ ಅಪಮಾನವೇ ಇಲ್ಲ! ಕಲಿ ಭಂಜಕನಾದ ಭೀಮನಿಗೆ ದ್ಯೂತಾತ್ ಪರಾಜಯ ಸಂಕಟವೇ? ಇಲ್ಲಿ ತೋರಿದ ಲೀಲಾ ಭಾರತಿ ಲೋಲ" ಇದು ಕೇವಲ ಭಾರತೀಶ ವಿಲಾಸವೇ ಹೊರತಾಗಿ ಬೇರೆಯಲ್ಲ. ದ್ಯೂತವೆಂಬುದು ಕಲಿಯ ಹಂಸತೂಲಿಕಾತಲ್ಪ. ಇದರ ಮೇಲೆ ಮಲಗಿದವನಿಗೆ ಅಪಾಯದ ಎಚ್ಚರಿಕೆಯ ಗಂಟೆಯನ್ನು ಎಷ್ಟು ಗಟ್ಟಿಯಾಗಿ ಹೊಡೆದರೂ ಕೇಳಿಸುವುದೇ ಇಲ್ಲ. ಈ ಸುಖಕ್ಕಾಗಿ ಮಲಗಿದವರು ಇದುವರೆಗೆ ಯಾರೂ ಎದ್ದಿಲ್ಲ. ಕಾರ್ಕೋಟಕನನ್ನು ಪರಮ ಋಷಿಗಳು ಸಂಚರಿಸದಂತೆ ಇರು ಎಂದು ಶಪಿಸಿದ್ದು ಅದು ಶಾಪವಲ್ಲ. ಪರಮ ಪಾಪಿಯಾದ ಕಲಿಯನ್ನು ನಿಗ್ರಹಿಸಲು ನೀನು ಆ ನಳ ಚಕ್ರವರ್ತಿಯು ಇಲ್ಲಿಗೆ ಬರುವತನಕ ನೀನು ಇಲ್ಲೇ ಇರು. ನನ್ನ ಪಾದ ಸ್ಪರ್ಶದಿಂದ ನಳನ ಹಸ್ತ ಸ್ಪರ್ಶದಿಂದ ನೀನು ಕಲಿ ನಿಗ್ರಹ ಸಾಮರ್ಥ್ಯವನ್ನು ಹೊಂದಿರುವೆ. ಇದರಿಂದ ನಿನ್ನ ಕೀರ್ತಿ ಪ್ರಾರಬ್ಧವು ಫಲಿಸುತ್ತದೆ ಎಂದು ವರವನ್ನಿತ್ತರು.

**॥ ಪದ ॥ ಈರನ ಕಂಡು ಕಿಂ ।ಮ್ಮಿರರೆಂಬುವರುಂಟೆ ।**
**ನಾರಿ ಬಂದು ಬಳಿ । ಸಾರೆ ನೀರಜ ತಂದ ॥**
**ಯಾರಿಗೂ ಸೋಲದ । ಧೀರನೆನಿಸಿದವ ।**
**ನಾರದನಿಗೆ ಸಿಕ್ಕು । ಚೀರಿದನೇಕೋ ॥ ೨೩ ॥**

**ಶಬ್ದಾರ್ಥ:** ಈರ = ವಾಯ್ವಂಶ ಸಂಭೂತನಾದ ಭೀಮ; ಕಂಡು = ನೋಡಿದ ಮೇಲೆ; ಕಿಂಮ್ಮಿರ? = ಬೇರೆಯವ ಅವನ್ಯಾವ ಮಹಾ ಶಕ್ತಿಶಾಲಿ (ಭೀಮ); ಕಿಮ್ಮಾರ = ಕಿಮ್ಮಾರನೆಂಬ ರಾಕ್ಷಸ; 'ಕಿಂ' ಎಂಬುವರುಂಟೆ = ಆಲಕ್ಷ ಮಾಡುವವರಿಲ್ಲ; ಕಿಮ್ಮಾರರೆಂಬುವರು = ಕಿಮ್ಮಾರನೇ ಮೊದಲಾದ ರಾಕ್ಷಸರು; ಉಂಟೇ = ಬದುಕುಳಿಯಬಲ್ಲರೆ (ನಾಶ ಹೊಂದಿರುವರೆಂದು ಅರ್ಥ); ನಾರಿ = ದ್ರೌಪದಾದೇವಿ; ಬಳಿಸಾರೆ = ಹತ್ತಿರ ಬಂದು ಸೌಗಂಧಿಕ ಪುಷ್ಪವನ್ನು ಅಪೇಕ್ಷಿಸಿದರೆ. ನೀರಜ ತಂದ = ಸೌಗಂಧಿಕಾ ಪುಷ್ಪಗಳನ್ನು ತಂದಿತ್ತನು. ಯಾರಿಗೂ ಸೋಲದ = ಲೋಕೈಕ ವೀರ; ಧೀರ = ಜ್ಞಾನಿ; ನಾ = ಇಲ್ಲದ; ರದನಿ = ಹಲ್ಲುಗಳಿದ್ದವನು; ನಾರದನಿ = ಹಲ್ಲುಗಳಿಲ್ಲದೆ ಬರಿದೆ ನುಂಗುವವನು = ಅಜಗರ = ಹೆಬ್ಬಾವು; ಸಿಕ್ಕು ಚೀರಿದನೇಕೋ = ಹಿಡಿಯಲ್ಪಟ್ಟು ಬಿಡಿಸಿಕೊಳ್ಳಲ್ಪಡಲು ಹೆಣಗಾಡಿದನು (ಹಾಗೆ ನಟಿಸಿದನು)

**ಭಾವಾರ್ಥ:** ಪಾಂಡವರು ವನಾಂತರವನ್ನು ಸೇರಿದ ಮೇಲೆ ಈತನನ್ನು ಅಂದರೆ ಧರ್ಮರಾಯನನ್ನು ಅನುಸರಿಸಿ ಕುಟುಂಬದವರೆಲ್ಲಾ ಆತನ ಜೊತೆಗೇ ಇದ್ದರು. ಸಾಲ್ವನನ್ನು ಸಂಹರಿಸಿದ ಮೇಲೆ ಶ್ರೀಕೃಷ್ಣನು ಪಾಂಡವರಲ್ಲಿಗೆ ಬಂದು ತಾನು ಜೂಜಿನ ಸಮಯದಲ್ಲಿ ಇರಲಿಲ್ಲವಾದುದರಿಂದ ನಿಮಗೆ ಕಷ್ಟವಾಯಿತೆಂದು ಸಮಾಧಾನವನ್ನು ಹೇಳಿದನು. ತರುವಾಯ ಹಲವು ಬಾಂಧವರು ಸಹ ಪಾಂಡವರಲ್ಲಿಗೆ ಬಂದು ಯೋಗಕ್ಷೇಮವನ್ನು ವಿಚಾರಿಸಿ ತಮ್ಮ ಸಹಾಯ ಹಸ್ತವನ್ನು ನೀಡಿದರು.

ದುಷ್ಟದ್ಯುಮ್ನನು ದ್ರೌಪದಿಯ ಮಕ್ಕಳನ್ನು ಕರೆದೊಯ್ದನು. ಧೃಷ್ಟಕೇತುವು ಧರ್ಮಜನ ಪತ್ನಿ ದೇವಕಿಯನ್ನು ಕರೆದೊಯ್ದನು. ಕಾಳಿಯನ್ನು ಕಾಶಿ ರಾಜನೂ ಉಳಿದವರನ್ನು ವಿದುರನೂ ತಮ್ಮ ಪುರಗಳಿಗೆ ಕರೆದೊಯ್ದರು. ಸುಭದ್ರೆಯನ್ನು ಕೃಷ್ಣನು ಅಭಿಮನ್ಯುವಿನ ಸಹಿತವಾಗಿ ದ್ವಾರಕೆಗೆ ಕರೆದೊಯ್ದನು ಮತ್ತು ದ್ರೌಪದಿಯ ಮಕ್ಕಳೂ ಪಾಂಚಾಲ ನಗರದಿಂದ ದ್ವಾರಕೆಗೆ ಕರೆದೊಯ್ಯಲ್ಪಟ್ಟರು ಹೀಗೆ ಎಲ್ಲಾ ಬಂಧುಗಳು ಒಬ್ಬೊಬ್ಬರು ಒಂದೊಂದು ವಿಧದಲ್ಲಿ ಒಂದೊಂದು ಆಶ್ರಯವನ್ನು ನೀಡಿ ಅರಣ್ಯದಿಂದ ಹೊರಟು ಹೋದ ಮೇಲೆ ಅಲ್ಲಿ ಉಳಿದವರು ಆರು ಜನ ಮಾತ್ರ. ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ ಮತ್ತು ದ್ರೌಪದಿ.

ಹೀಗೆ ಪಾಂಡವರು ಏಕಾಂಗಿಗಳಾಗಿ ವನವಾಸದಲ್ಲಿ ಇರುವಾಗ ಆ ವನಪ್ರದೇಶ ವ್ಯಾಪಕನಾದ ಬಕಾಸುರನ ತಮ್ಮನಾದ ಕಿಮ್ಮೀರನೆಂಬ ಮಹಾದೈತ್ಯನು ರುದ್ರವರ ಬಲದಿಂದ ದರ್ಪಿತನಾಗಿ ಪೂರ್ವಾಗ್ರಹ ಪೀಡಿತನಾಗಿಯೂ, ನರಬಲಿಯು ಸಿಕ್ಕಿತೆಂಬ ಹಿಗ್ಗಿನಿಂದಲೂ ಕೈಯಲ್ಲಿ ಪರ್ವತಗಳನ್ನೂ, ಮರಗಳನ್ನೂ ಕಿತ್ತಿತಂದು ಪಾಂಡವರ ಮೇಲೆ ಎಸೆದನು. ಆಗ ಭೀಮನು ಆ ಕಲ್ಲು, ಮರಗಳನ್ನು ಗೋಲಿ, ಕಡ್ಡಿಗಳಂತೆ ತಡೆದು ಆ ಕಿಮ್ಮಾರನೆಂಬ ದೈತ್ಯನನ್ನು ಮುಷ್ಟಿ ಯುದ್ಧದಿಂದ ಕುಟ್ಟಿ ಕೆಡಹಿ ತಮಸ್ಸಿನ ದ್ವಾರಕ್ಕೆ ಕಳುಹಿಸಿದನು. ಕಿಮ್ಮರನ ಹತ್ಯಾನಂತರದಲ್ಲಿ ವನಾಂತರಗಳಲ್ಲಿ ವಾಸಿಸುತ್ತಿದ್ದ ಅನೇಕ ಯತಿಗಳೂ, ಋಷಿಗಳೂ ಮತ್ತು ಗೃಹಸ್ಥರೂ ಸುಮಾರು ಎಂಭತ್ತು ಸಾವಿರ ಜನರು

ನೆಮ್ಮದಿಯಿಂದ ಪಾಂಡವರೊಡನೆ ವಾಸಿಸತೊಡಗಿದರು. ಪ್ರತಿ ನಿತ್ಯವೂ ಹರಿಕಥಾ, ಪುರಾಣ, ಶಾಸ್ತ್ರಗಳ ಪ್ರವಚನ ಶ್ರವಣಗಳಲ್ಲಿ ಆ ಜನರು ಸುಖಿಗಳೇ ಆಗಿದ್ದರು. ಹೇಗೆಂದರೆ ಅಷ್ಟು ಜನರ ಪೋಷಣೆಯ ಹೊರೆಯು ಪಾಂಡವರ ಮೇಲೆಯೇ ಬಿದ್ದಿದ್ದಿತು. ಈ ಸಮಸ್ಯೆಯ ಪರಿಹಾರಾರ್ಥವಾಗಿ ಧರ್ಮರಾಜನು ಸೂರ್ಯನನ್ನು ನಿಮಿತ್ತ ಮಾಡಿ ಶ್ರೀಮನ್ನಾರಾಯಣನನ್ನು ಪೂಜಿಸಿ ಮೃಷ್ಟಾನ್ನವನ್ನು ಯಥೇಚ್ಛವಾಗಿ ನೀಡುವ ಅಕ್ಷಯ ಪಾತ್ರೆಯನ್ನು ಪಡೆದಿದ್ದನು. ಅದರಿಂದ ಸಮಸ್ತ ಕುಟುಂಬಗಳು ಪೋಷಿತವಾಗಿದ್ದುವು. ಅವರ ಶಿಬಿರವು ಸುರಲೋಕ ಸದೃಶವಾಗಿತ್ತು.

ಇತ್ತ ಹಸ್ತಿನಾವತಿಯಲ್ಲಿ ಕುಹಕ ಕುತೂಹಲಿಯಾದ ಧೃತರಾಷ್ಟ್ರನು ಪಾಂಡವರ ಯೋಗಕ್ಷೇಮವನ್ನು ವಿದುರ ಮುಖಾಂತರವಾಗಿ ಕೇಳಿದನು. ಪಾಂಡವರನ್ನು ಪ್ರಶಂಸಿಸಿದ ವಿದುರನ ಮೇಲೆ ಹರಿಹಾಯ್ದು ಧೃತರಾಷ್ಟ್ರನು ವಿದುರನನ್ನು ಮನೆಯಿಂದ ಹೊರದೂಡಿದನು. ನಿರ್ವಾಹವಿಲ್ಲದೆ ಪುನಃ ಕರೆಸಿಕೊಂಡನು. ಪಾಂಡವರ ಪ್ರಶಂಸೆಯನ್ನು ಕೇಳಿ ಮತ್ಸರ ಬುದ್ಧಿಯಿಂದ ದುರ್ಯೋಧನನು ಪಾಂಡವರನ್ನು ಸಂಹರಿಸಲು ಯೋಚಿಸಿ ದುಶ್ಶಾಸನ, ಶಕುನಿ, ಕರ್ಣರೇ ಮೊದಲಾದವರಿಂದ ಕೂಡಿಕೊಂಡು ವನಕ್ಕೆ ಹೊರಡಲು ಸಿದ್ಧನಾದನು. ಆಗ ಧೃತರಾಷ್ಟ್ರನಿಗೆ ತನ್ನ ಮಕ್ಕಳ ಕೃತ್ಯವನ್ನು ತಿಳಿಸಿ ವೇದವ್ಯಾಸರು ಅವನಿಗೆ ಆ ಕೃತ್ಯನ್ನು ಮಾಡಬೇಡವೆಂದು ತಿಳಿಸಲು ಹೇಳಿದರು. ಅದಕ್ಕೆ ಧೃತರಾಷ್ಟ್ರನು ನೀವೇ ಆ ಕೆಲಸವನ್ನು ಮಾಡಿರೆಂದು ವೇದವ್ಯಾಸರಿಗೆ ಹೇಳಿದನು. ಇದಕ್ಕೆ ಒಪ್ಪದೆ ವ್ಯಾಸರು ಆ ಕೆಲಸವನ್ನು ಧೃತರಾಷ್ಟ್ರನ ಮೂಲಕವಾಗಿಯೇ ಮೈತ್ರೇಯರಿಗೆ ಒಪ್ಪಿಸಿದರು. ಆಗ ಮೈತ್ರೇಯರು ಭೀಮನ ಪರಾಕ್ರಮವನ್ನು ವರ್ಣಿಸುತ್ತ ವ್ಯರ್ಥವಾದ ವೈರವನ್ನು ಬಿಟ್ಟು ಬದುಕಿರೆಂದು ಉಪದೇಶಿಸಿದರು. ಆದರೆ ಮದೋನ್ಮತ್ತನಾದ ದುರ್ಯೋಧನನು ಕುಚೇಷ್ಟೆಯನ್ನು ಮಾಡುತ್ತ ತನ್ನ ತೊಡೆಗಳನ್ನು ತಟ್ಟಿಕೊಂಡನು. ಇದರಿಂದ ಕುಪಿತರಾದ ಮೈತ್ರೇಯರು ಭೀಮನು ಯುದ್ಧದಲ್ಲಿ ಗದೆಯಿಂದ ನಿನ್ನ ತೊಡೆಯನ್ನು ಕುಟ್ಟಿ ಸಂಹರಿಸಲಿ ಎಂದು ಶಾಪವನ್ನಿತ್ತು ನಡೆದೇ ಬಿಟ್ಟರು.

"ಸಶಾಪಚೈನಂ ಮುನಿರುಗ್ರ ತೇಜಾಃ । ತವೋರು ಭೇದಾಯ ಭವೇತ್ಸು ಯುದ್ಧಂ"
(೨೨-೨೨)

ತರುವಾಯ ಪಾಂಡವರು "ಪೃಥ್ವೀಂ ಪ್ರದಕ್ಷಿಣತ ಏತ್ಯ ಸಮಸ್ತು ತೀರ್ಥ" ಎಂದಂತೆ ಭೂ ಪ್ರದಕ್ಷಿಣೆ ಮಾಡುತ್ತ ಪ್ರಭಾಸಕ್ಷೇತ್ರಕ್ಕೆ ಬಂದು ಅಲ್ಲಿ ಶ್ರೀಕೃಷ್ಣನನ್ನು ಭಕ್ತಿಯಿಂದ ಪೂಜಿಸಿದರು. ಅಲ್ಲಿಂದ ಮುಂದೆ ಪಾಂಡವರು "ಪಾವುರ್ಬದರ್ಯಾಶ್ರಮ ಮುತ್ತಮಂ ಭುವಿ" (೨೨-೨೮೬) ಎಂಬಂತೆ ಶ್ರೇಷ್ಠವಾದ ಬದರಿಕಾಶ್ರಮವನ್ನು ಸೇರಿದರು. ಅಲ್ಲಿ ಸರೋವರ ಒಂದರಲ್ಲಿ ಸುಗಂಧಮಯವಾದ ಪುಷ್ಪಗಳು ವಿರಾಜಮಾನವಾಗಿದ್ದವು. ಆ ಪುಷ್ಪಗಳ ಸುಗಂಧವನ್ನು ಆಸ್ವಾದಿಸುತ್ತ ಅಲ್ಲಿ ನೆಲೆಸಿದ್ದ ಸರ್ಪಗಳನ್ನು ಅಪಹರಿಸಲು ಬಂದಿದ್ದ ಗರುಡನ ರೆಕ್ಕೆಗಳಿಂದ ಬೀಸಲ್ಪಟ್ಟ ಗಾಳಿಯು ಸುಗಂಧಯುಕ್ತವಾಗಿ ವ್ಯಾಪಿಸಿ ಅಲ್ಲೇ ವಿಹಾರಕ್ಕೆಂದು ಬಂದಿದ್ದ ಭೀಮ ದ್ರೌಪದಿಯರಿಗೆ ಸೋಂಕಲಾಗಿ ದ್ರೌಪದಾದೇವಿಯು ಆ ಪುಷ್ಪ ಪರಿಮಳಕ್ಕೆ ಮಾರು ಹೋದಂತೆ ನಟಿಸಿ ಅಲ್ಲಿ ನೆಲೆಸಿದ್ದ ಸರ್ಪ, ಸಿಂಹ ಶಾರ್ದೂಲ ರೂಪಗಳಿಂದ ಯುಕ್ತರಾಗಿದ್ದ ರಾಕ್ಷಸರನ್ನು ಸಂಸಾರ ಮಾಡಿಸಲಿಕ್ಕಾಗಿ ಆ ಪುಷ್ಪಗಳು ತನಗೆ ಬೇಕೆಂದು ಭೀಮಸೇನನನ್ನು ಪ್ರಾರ್ಥಿಸಿದಳು.

ದ್ರೌಪದಾದೇವಿಯಿಂದ ಪ್ರಾರ್ಥಿತನಾದ ಭೀಮಸೇನನು ಮಾರ್ಗದಲ್ಲಿ ಪುನಃ ಅಸುರ ಮೋಹನಾರ್ಥವಾಗಿ ಹನುಮಂತನಂತೆ ಮತ್ತೊಂದು ರೂಪವನ್ನು ತಾಳಿ ಭೀಮನಾಗಿ ಆತನೊಡನೆ ಸಂಭಾಷಿಸತೊಡಗಿದನು. ಅವತಾರ

ಭೇದ ವರ್ಜಿತನಾಗಿದ್ದರೂ ಹನುಮಂತ ರೂಪದ ಬಾಲವನ್ನು ಎತ್ತಲು ಅಸಮರ್ಥನಾದವನಂತೆ ನಟಿಸಿ ಅಸುರರಲ್ಲಿ ಹನುಮ – ಭೀಮ ರೂಪ ಭೇದ ಚಿಂತನೆಯನ್ನು ಕಲ್ಪಿಸಿದನು. ಭೀಮನಾಗಿ ಹನುಮಂತನಿಂದ ರಾಮಾಯಣವನ್ನು ಶ್ರವಣ ಮಾಡಿ ಆತನಿಗೆ ನಮಸ್ಕರಿಸಿ ಗದಾಪಾಣಿಯಾಗಿ ಸೌಗಂಧಿಕಾ ಪುಷ್ಪಗಳನ್ನು ತರಲು (ಮುಖ್ಯವಾಗಿ ಅಲ್ಲಿ ನೆಲೆಸಿದ್ದ ೧,೦೦,೦೦೦ ಕ್ರೋಧ ವಶರೆಂಬ ದೈತ್ಯರನ್ನು ಸಂಹರಿಸಲು) ಆ ಸರೋವರದ ಕಡೆಗೆ ಧಾವಿಸಿದನು. ಭೀಮಸೇನನು ಅತ್ತ ಸುಳಿದಿದ್ದೇ ತಡ. ಅಲ್ಲಿದ್ದ ಸಮಸ್ತ ದೈತ್ಯರು ಏಕಕಾಲದಲ್ಲಿ ಭೀಮನ ಮೇಲೆ, ಆತನು ಧರಿಸಿದ ವೈಷ್ಣವ ಚಿನ್ಹೆಗಳನ್ನು ಕಂಡು ಅತ್ಯಂತ ಕ್ರೋಧವಶರಾಗಿ, ಸಾರ್ಥಕ ನಾಮಧೇಯರಾಗಿ ದೂಷಣೆ ಮಾಡುತ್ತ ಮೊದಮೊದಲು ಶೈವಾಗಮಾದಿಗಳನ್ನು ಒರಲುತ್ತಾ ಶಿವ ಸರ್ವೋತ್ತುಮತ್ವವನ್ನು ಪ್ರತಿಪಾದಿಸುತ್ತಾ ವಾಕ್ಶರ ವೃಷ್ಟಿಯನ್ನು ಭೀಮನ ಮೇಲೆ ಕರೆದರು. ಈ ದೈತ್ಯರೆಲ್ಲರೂ "ವರಾಃ ಶಿವಕ್ಷೈವ ಪರೈರಜೇಯಾ (೨೨–೩೦೧)" ಎಂಬಂತೆ ರುದ್ರ ದೇವರ ವರಬಲದಿಂದ ಅಜೇಯರೂ ಅವಧ್ಯರು ಆಗಿದ್ದರು. ಶಿವಾಧಿಕ್ಯರ ವಿನಃ ಇನ್ನೊಬ್ಬರಿಂದ ಇವರಿಗೆ ಸೋಲಿರಲಿಲ್ಲ. ಭೀಮಸೇನನು ಇವರೆಲ್ಲರ ಪ್ರತಿರೋಧವನ್ನು ಪಂಚರಾತ್ರಾಗಮಾದಿ ಸಚ್ಛಾಸ್ತ್ರ ಪಂಕ್ತಿ ಬಾಣಗಳಿಂದ ನಿವಾರಿಸಿ ತರುವಾಯ ಗದಾಪಾಣಿಯಾಗಿ ಸಮಸ್ತ ದೈತ್ಯ ಸಮುದಾಯವನ್ನು ಸದೆಬಡಿದನು. ಇಷ್ಟು ಮಾತ್ರದಿಂದ ಭೀಮನ ಜೀವೋತ್ತುಮತ್ವವು ದೇವತೆಗಳಲ್ಲಿ ಸ್ಥಾಪಿತವಾಯಿತು. "ಬಲಮಿಂದ್ರಸ್ಯ ಗಿರಿಶಃ । ಗಿರಿಶಸ್ಯ ಮಾರುತಃ ॥"

ಎಂಬುದು ಸಿದ್ಧವಾಯಿತು. ಒಂದು ವೇಳೆ ಸೌಗಂಧಿಕಾ ಪುಷ್ಪಗಳ ನೆಪದಿಂದ ಈ ದೈತ್ಯರನ್ನು ನಾಶಗೊಳಿಸದಿದ್ದಲ್ಲಿ ಮುಮುಕ್ಷುಗಳು ದೈತ್ಯಾವವೇಶದಿಂದ ಅಸುರೋಪಾಸಕರಾಗಿ ಬಿಡುತ್ತಿದ್ದರು. ಸುಜನರ ಉದ್ಧಾರಾರ್ಥವಾಗಿಯೇ ಭೀಮನು ಅವರನ್ನು ನಾಶಪಡಿಸಿದನು. ಭಗವತ್ಕಾರ್ಯ ಸಾಧಕನೆನಿಸಿದನು.

ಕ್ರೋಧವಶನಾಮಕ ದೈತ್ಯರ ಸಂಹಾರಾನಂತರದಲ್ಲಿ ಕ್ರೋಧವಶನಾದ ಮಣಿಮಂತನೆಂಬ ದೈತ್ಯನು ಮೂವತ್ತು ಸಾವಿರ ಕೋಟಿ ಅಂದರೆ ಮೂರು ಪದ್ಮ, ಸಂಖ್ಯಾಕ (ಒಂದು ಪದ್ಮ ಎಂದರೆ ಹತ್ತು ಸಾವಿರ ಕೋಟಿ) ರುದ್ರವರ ಬಲಯುಕ್ತರಾದ ದೈತ್ಯರಿಂದ ಕೂಡಿಕೊಂಡು ಭೀಮನ ಮೇಲೆ ದಾಳಿ ಎಸಗಿದನು.

> ಪದ್ಮತ್ರಯಂ ನ್ಯರುಣದುದ್ಧತ ರಾಕ್ಷಸಾನಾಂ ॥
> ಅಗ್ರೇ ನಿಧಾಯ ಮಣಿಮಂತಮಜೇಯ ಮುಗ್ರಂ ॥
> ಶಂಭೋರ್ವರಾದ್ವಿವಿಧ ಶಸ್ತ್ರ ಮಹಾಸ್ತ್ರ ವೃಷ್ಟ್ಯಾ॥"

ಮಣಿಮಂತನಾದರೂ ಮಹಾಕ್ರೂರನೂ, ಅಜ್ಞಾನಿಯೂ, ಬಲಿಷ್ಠನೂ, ದುಷ್ಟ ಮಂತ್ರಸಿದ್ಧನೂ ಆಗಿದ್ದನು. ಇವನು. ಭೀಮಸೇನನ ಮೇಲೆ ದುಶ್ಶಾಸ್ತ್ರ – ಮಹಾಸ್ತ್ರಗಳ ಸುರಿಮಳೆಯನ್ನು ಕರೆದನು. ಆದರೆ ಭೀಮನು ಸಮಸ್ತ ದುರ್ವಾಕ್ಶರಳುಗಳನ್ನು ಸಚ್ಛಾಸ್ತ್ರ ವಾಗಾಗ್ನಿಯಿಂದ ಭಸ್ಮೀ ಭೂತವನ್ನಾಗಿ ಮಾಡಿ ಗದಾಪ್ರಹಾರದಿಂದ ಮಣಿಮಂತನಾದಿಯಾಗಿ ಸರ್ವದೈತ್ಯರನ್ನು ಸಂಹರಿಸಿಬಿಟ್ಟನು.

> "ತಾನ್ಸರ್ವ ರಾಕ್ಷಸ ಗಣಾನ್ ಮಣಿಮತ್ಸಮೇತಾನ್ ।
> ಭೀಮೋಜ ಷಾನ ಸಪದಿ ಪ್ರವರೈಃ ಶರೌಘೈಃ ॥ ೨೨–೩೧೫ ॥"

ಈ ದೈತ್ಯರ ಸಂಹಾರಾನಂತರದಲ್ಲಿ ಭೀಮನು ಸೌಗಂಧಿಕಾ ಪುಷ್ಪಗಳ ಸಹಿತವಾಗಿ ದ್ರೌಪದಿಯಲ್ಲಿಗೆ ಬಂದು ಆ ಪುಷ್ಪವನ್ನು ಇತ್ತನು. ಈ ಪುಷ್ಪ ವನವು ಕುಬೇರನಿಗೆ ಸೇರಿದ್ದಾಗಿತ್ತು. ಆತನು ಅಸುರಾವೇಶದಿಂದ ಭೀಮನ ಕೃತ್ಯವನ್ನು ಆಕ್ಷೇಪಿಸಿದನು. ಆವೇಶದ ಫಲವಾಗಿ ಮಣಿಮಂತನು ಭೀಮನ ಬಲದಿಂದ ಸಂಹರಿಸಲ್ಪಡುತ್ತಿರಲಿಲ್ಲ. ಭೀಮನು ಅವನನ್ನು ಜೈಸಲು ಅಗಸ್ತ್ಯರು ಮಣಿಮಂತನಿಗೆ ಕೊಟ್ಟ ಶಾಪವೇ ಕಾರಣವೆಂದು ವಾದಿಸಿದನು. ತರುವಾಯ ಭೀಮನ ಉಪದೇಶದಿಂದ ಶುದ್ಧಮಾನಸನಾಗಿ (ಅಸುರಾವೇಶ ವರ್ಜಿತನಾಗಿ) ಸಕಾಲಕ್ಕೆ ಅಲ್ಲಿಗೆ ಆಗಮಿಸಿದ ಧರ್ಮನಂದನ, ಅರ್ಜುನ, ಯಮಳರಿಗೂ ಮತ್ತು ಭೀಮ ದ್ರೌಪದಿಯರಿಗೂ ನಮಸ್ಕಾರಗಳನ್ನು ಮಾಡಿ, ಸತ್ಕಾರವನ್ನು ನೀಡಿ ತನ್ನ ಮಂದಿರದಲ್ಲಿ ಕೆಲಕಾಲ ವಾಸ್ತವ್ಯವನ್ನು ಮಾಡಲು ಅವಕಾಶವನ್ನು ಇತ್ತನು.

ಸ್ವಯಂ ಸುಗಂಧಿಯಾದ ದ್ರೌಪದಿಗೆ ಪುಷ್ಪ ಸುಗಂಧವು ಮೋಹಕವೇ! ಪುಷ್ಪಗಳಿಂದ ತನಗೆ ಸಂತೋಷವಾಗುತ್ತದೆಂಬ ಭ್ರಾಂತಿಯನ್ನು ಅಸುರರಲ್ಲಿ ಬಿತ್ತಿದಳು ಅಷ್ಟೆ. ಅಜ್ಞಾನ, ಅಸುರ ಸಂಹಾರಕ್ಕಾಗಿಯೇ ಅವರದು ಪ್ರತಿಜ್ಞೆ. ತಮೋಯೋಗ್ಯರಾದ ದೈತ್ಯರಲ್ಲಿ ನಿಂತು ಸ್ವಯಂ ಅಜ್ಞಾನ, ಭಗವದ್ವೇಷ ಇವುಗಳನ್ನು ಪ್ರೇರಿಸಿ ದುಷ್ಕರ್ಮ ತತ್ಪರರನ್ನಾಗಿ ಮಾಡಿಸುವಲ್ಲಿ ರುದ್ರದೇವನಿಗೂ ಪ್ರೇರಕರಾದ ಋಜುಪುಂಗವರಾದ ಭೀಮ ದ್ರೌಪದಿಯರಿಗೆ ಈ ಕ್ರೋಧ ವಶ-ಮಣಿಮಂತಾದಿ ದೈತ್ಯರೊಡನೆ ವಾದ – ಯುದ್ಧಗಳ ಅವಶ್ಯಕತೆ ಇದೆಯೇ? ರುದ್ರದೇವರು ದೈತ್ಯರಲ್ಲಿ ನಿಂತು ಅಸದುಪಾಸನೆಗೆ ಪ್ರೇರಕರಾಗುವರು. ರುದ್ರದೇವರಿಗ ಈ ಸಾಮರ್ಥ್ಯವು ಅವರಲ್ಲಿ ಅಂತರ್ಯಾಮಿಯಾದ ವಾಯುದೇವರಿಂದ ಪ್ರಾಪ್ತವಾಗಿದೆ. ರುದ್ರದೇವರು ಅಮುಖ್ಯ ಪ್ರೇರಕರು. ವಾಯುದೇವರು ಮುಖ್ಯ ಪ್ರೇರಕರು. ಇವರು ಇಚ್ಛಾ ಮಾತ್ರದಿಂದಲೇ ದೈತ್ಯರನ್ನು ಉಭಯ ಕ್ಷೇತ್ರ (ಜ್ಞಾನ-ಬಲ)ಗಳಲ್ಲಿ ಧ್ವಂಸ ಮಾಡಬಲ್ಲವರಾಗಿದ್ದರು. ಆದರೆ ಹಾಗೆ ಮಾಡಿದ್ದರೆ ದೈತ್ಯರ ಕುಟಿಲತನವು ಜಗತ್ತಿಗೆ ಪ್ರಕಟವಾಗುತ್ತಿರಲಿಲ್ಲ. ಅವರ ಯೋಗ್ಯತೆಯನ್ನು ಪ್ರಕಟಿಸಲಿಕ್ಕಾಗಿಯೇ ಇವರು ನರವತ್ಪ್ರವೃತ್ತಿಯನ್ನು ತೋರಿ ವಾದ-ಯುದ್ಧಗಳನ್ನು ಮಾಡಿದರು. "ಭೀಮಸೇನ ಸಮೋ ನಾಸ್ತಿ ಸೇನಯೋರುಭಯೋರಪಿ॥ ಪಾಂಡಿತ್ಯೇಚ ಪಟುತ್ವೇಚ । ಶೂರತ್ವೇಚ ಬಲೇಪಿಚ ॥"

ಪಾಂಡವರು ಕುಬೇರನ ಮನೆಯಲ್ಲಿ ಇರುವಾಗ್ಗೆ ನಾಲ್ಕು ಸಂವತ್ಸರಗಳು ಕಳೆದುವು. ಈ ವೇಳೆಯಲ್ಲಿ ಅರ್ಜುನನು ತನ್ನ ಮೂಲರೂಪದಿಂದ ಯುಕ್ತನಾದ ದೇವೇಂದ್ರನಿಂದ ಅನೇಕ ವಿಧವಾಗಿ ಶಸ್ತ್ರ ವಿದ್ಯೆಯನ್ನು ಕಲಿತನು. ಈ ವಿದ್ಯೆಯನ್ನು ಹೇಳಿ ಕೊಟ್ಟುದುದಕ್ಕಾಗಿ ಅರ್ಜುನನು ಇಂದ್ರನಿಗೆ ಗುರುದಕ್ಷಿಣೆಯನ್ನು ಕೊಡಬೇಕಾಗಿತ್ತು. ಇಲ್ಲಿ ಇಂದ್ರನಿಗೆ ಒಂದು ವಿಪತ್ತು ಕಾದಿತ್ತು. ನಿವಾತಕವಚರೆಂಬ ರಾಕ್ಷಸಗಣವು ಇಂದ್ರನಿಗೆ ಪೀಡಕರಾಗಿದ್ದರು. ಬ್ರಹ್ಮವರದಿಂದ ಯಕ್ಷ, ರಾಕ್ಷಸ, ದೇವತೆ, ಗಂಧರ್ವ ಇತ್ಯಾದಿಯಾಗಿ (ವಿನಾ ಮನುಷ್ಯ) ಯಾರಿಂದಲೂ ಇವರಿಗೆ ಅಪಜಯವು ಸಾಧ್ಯವಿರಲಿಲ್ಲ. ಅದಕ್ಕಾಗಿಯೇ ಮನುಷ್ಯ (ಕ್ಷತ್ರಿಯ)ನಾಗಿ ಅವತರಿಸಿದ ತಾನೇ ಅರ್ಜುನ ರೂಪದಿಂದ ಗುರುದಕ್ಷಿಣೆಯ ರೂಪವಾಗಿ ನಿವಾತಕವಚನಾಮಕರಾದ ದೈತ್ಯರ ಸಂಹಾರವನ್ನು ಅಪೇಕ್ಷಿಸಿದನು. ಅರ್ಜುನನು ಆ ದೈತ್ಯರ ವಿರುದ್ಧ ಸಮರವನ್ನು ಸಾರಿದನು. ದೇವತೆಗಳಿಂದ ಕೊಡಲ್ಪಟ್ಟುದರಿಂದ 'ದೇವದತ್ತ ಎಂದು ಕರೆಸಲ್ಪಟ್ಟ ಶಂಖವನ್ನು ಊದಿದ ಅರ್ಜುನನು ಇಂದ್ರನಿಂದ ಕೊಡಲ್ಪಟ್ಟ ಕರ್ಣಕುಂಡಲಗಳನ್ನು ಧರಿಸಿಕೊಂಡು ಯುದ್ಧಕ್ಕೆ ನಡೆದನು. ದೇವದತ್ತ ಶಂಖ ಧ್ವನಿಯನ್ನು ಕೇಳಿದ ತಕ್ಷಣವೇ ಕ್ರೂರಿಗಳಾದ ನಿವಾತಕವಚರು ಮಾರಕಾಯುಧಗಳಿಂದ ಅರ್ಜುನನ ಮೇಲೆ ಪ್ರತಿದಾಳಿಯನ್ನು ಮಾಡಿದರು. ಆದರೆ ಭಕ್ತ ಶ್ರೇಷ್ಠನಾದ ಅರ್ಜುನನು ಆ ದೈತ್ಯ ಸಮುದಾಯವನ್ನು ತನ್ನ ಗಾಂಡೀವ ಧನಸ್ಸಿನಿಂದ ಸಂಹಾರ ಮಾಡಿಬಿಟ್ಟನು. ಆದರೂ ಈ ದೈತ್ಯರ ಬೆಂಬಲಿಗರಾಗಿದ್ದ ಅರವತ್ತು, ಅರವತ್ತು ಸಾವಿರ

ಸಂಖ್ಯಾಕರಾದ ಪೌಲೋಮ ಗಣ ಮತ್ತು ಕಾಲೇಯ ಗಣರೆಂಬ ರಾಕ್ಷಸರು ಯುದ್ಧಕ್ಕೆ ಬಂದರು. ಆಗ ಅರ್ಜುನನು ಅವರನ್ನೆಲ್ಲ ಪಾಶುಪತಾಸ್ತ್ರದಿಂದ ಸಂಹರಿಸಿ ಗುರು ದಕ್ಷಿಣೆಯನ್ನು ಇತ್ತು ಇಂದ್ರನ ಪ್ರೀತಿಯನ್ನು ಹೊಂದಿದನು. ಭೀಮಾರ್ಜುನರಿಂದ ಸಂಹೃತರಾದ ಕ್ರೋಧವಶ ಮಣಿಮಂತ, ನಿವಾತಕವಚ, ಪೌಲೋಮ ಗಣ, ಕಾಲೇಯ ಗಣ ಮೊದಲಾದ ರಾಕ್ಷಸರು ಸಪರಿವಾರ ಸಹಿತವಾಗಿ ತಮೋಲೋಕದ ಮಾರ್ಗವನ್ನು ಸೇರಿದರು.

ಹಿಮವತ್ಪರ್ವತದಲ್ಲಿ ಅಡಗಿದ್ದ ಅಸುರರ ಸಂಹಾರಾನಂತರದಲ್ಲಿ ಪಾಂಡವರು ಆ ಪರ್ವದ ದಕ್ಷಿಣ ಪ್ರದೇಶಕ್ಕೆ ಪ್ರಯಾಣವನ್ನು ಬೆಳೆಸಿದರು. ಹೀಗೆ ಸಂಚರಿಸುತ್ತಿರುವಾಗ ಭೀಮನು ಬೇಟೆಯ ನೆಪದಿಂದ ತಾನೊಬ್ಬನೆ ಮುಂದೆ ಸಾಗುತ್ತಿದ್ದನು. ಆಗ ಅನತಿದೂರದಲ್ಲಿ ಇದ್ದ ಮಹಾ ಅಜಗರ (ಹೆಬ್ಬಾವು) ಒಂದನ್ನು ಸಂಧಿಸಿದನು. ಆ ನಾ ರದನಿ (ನಾ+ರದನಿ = ಹಲ್ಲಿಲ್ಲದವನು = ಕೇವಲ ನುಂಗುವವನು ಮಾತ್ರ)ಯು ಯಾರೆಂದರೆ ಆಯು ಎಂಬ ರಾಜನ ಪುತ್ರನಾದ ನಹುಷನು ಶಾಪಗ್ರಸ್ಥನಾಗಿ ಅಜಗರ ಜನ್ಮವನ್ನು ಹೊಂದಿ ಅಲ್ಲಿ ಬಿದ್ದಿದ್ದನು. ಅದರ ಹಿನ್ನೆಲೆಯು ಈ ರೀತಿಯಾಗಿದೆ.

ವೃತ್ರಾಸುರನ ಸಂಹಾರ ಮಾಡಿದ ಇಂದ್ರನನ್ನು ಬ್ರಹ್ಮ ಹತ್ಯಾದೋಷವು ಬೆನ್ನಹತ್ತಿ ಬಂದಿತು. ಇಂದ್ರನು ಭಯಗಸ್ಥನಾಗಿ ಸ್ವರ್ಗಲೋಕವನ್ನು ತ್ಯಜಿಸಿ ಕಮಲದ ದಂಟಿನಲ್ಲಿ ಸೇರಿಬಿಟ್ಟನು. ಆಗ ಸ್ವರ್ಗವನ್ನಾಳಲು ದೇವತೆಗಳು ನಹುಷನಿಗೆ ವರವನ್ನು ಇತ್ತು ಇಂದ್ರಪದವಿಯಲ್ಲಿ ಕೂಡಿಸಿದರು. ಇಷ್ಟು ಮಾತ್ರದಿಂದ ಉಬ್ಬಿ ಹೋದ ನಹುಷನು ತನ್ನ ಯೋಗ್ಯತೆಯನ್ನು ಮೀರಿ ತಾನು ಇಂದ್ರನೇ ಎಂದು ಭಾವಿಸಿ ಶಚಿದೇವಿಯ ಸಂಬಂಧವನ್ನು ಬಯಸಿದನು. ಈಗ ತಾನು ಇಂದ್ರನೇ. ಒಂದು ವೇಳೆ ಶಚಿಯು ನಿರಾಕರಿಸಿದರೆ ಬಲಾತ್ಕಾರವನ್ನೂ ಮಾಡಬೇಕಾಗುತ್ತದೆ ಎಂಬ ತನ್ನ ಅಭಿಲಾಷೆಯನ್ನು ಶಚಿದೇವಿಗೆ ಹೇಳಿ ಕಳಿಸಿದನು. ಆಗ ಆ ಶಚಿಯು (ಸ್ವಾವರರಿಗೆ ಮಾತ್ರ ಸ್ವರೂಪಳು) ಮದಭರಿತನಾದ ನಹುಷನು ತನ್ನ ಮನೆಗೆ ಬರಬೇಕಾದರೆ ಇಂದ್ರನಂತೆ ಅಗಸ್ತ್ಯರೇ ಮೊದಲಾದ ಋಷಿಗಳಿಂದ ಹೊರಲ್ಪಟ್ಟ ನರಯಾನ (ಪಲ್ಲಕ್ಕಿ) ಮುಖೇನವೇ ಬರಬೇಕೆಂದು ಹೇಳಿ ಕಳುಹಿಸಿದಳು. ಸರಿ, ಅದೇ ಪ್ರಕಾರವಾಗಿ ನಹುಷನು ಋಷಿಗಳಿಗೆ ಆಜ್ಞೆಯನ್ನು ಮಾಡಲಾಗಿ ಒಲ್ಲದ ಮನಸ್ಸಿನಿಂದ ಋಷಿಗಳು ಅವನ ಪಲ್ಲಕ್ಕಿಯನ್ನು ಹೊತ್ತರು. ಆದರೇನು? ನಹುಷನ ಇಚ್ಛೆಯನ್ನು ವಿಫಲಗೊಳಿಸಲು ಅಗಸ್ತ್ಯರು ಒಂದು ವಾದವನ್ನು ಮಂಡಿಸಿದರು. ವೇದ ಪ್ರಮಾಣವೆಂದು ಹೇಳುತ್ತ 'ನಪರಸ್ತ್ರೀಯಂ ಗಚ್ಛೇತ್' ಎಂದು ಹೇಳಿದರು. ಇಲ್ಲಿ ವೇದ ಪ್ರಮಾಣಗಳೆಂದು ಒಪ್ಪಿದರೆ ತನ್ನ ಇಚ್ಛೆಯು ನಡೆಯದೆಂದು ನಹುಷನು ಅಗಸ್ತ್ಯರ ವಾದವನ್ನು ನಿರಾಕರಿಸಿದನು. ಆದರೆ ಅಗಸ್ತ್ಯರು ಪದೇಪದೇ ವೇದ ಪ್ರಮಾಣವೆಂದು ಪ್ರತಿಪಾದಿಸುತ್ತಿರಲು ಕುಪಿತನಾದ ನಹುಷನು ಆ ಅಗಸ್ತ್ಯರ ಶಿರಸ್ಸಿಗೆ ಒದ್ದನು. ಆ ಸಂದರ್ಭದಲ್ಲಿ ಬ್ರಹ್ಮಾವಿಷ್ಟರಾಗಿದ್ದ ಭೃಗುಮುನಿಗಳು ಆ ಅಗಸ್ತ್ಯರ ಶಿರಸ್ಸಿನ ಶಿಖಾದಲ್ಲಿ ಅಡಗಿದ್ದರು. ನಹುಷನ ಈ ವರ್ತನೆಯು ಸೋತ್ತುಮಾಪರಾಧವಾಗಿ ಪರಿಣಮಿಸಿತು. ಮೂರು ಬಗೆಯಲ್ಲಿ ೧. ವೇದ ಪ್ರಮಾಣಗಳನ್ನು ನಿರಾಕರಿಸಿದ್ದು. ೨. ಶಚಿದೇವಿಯನ್ನು ಬಯಸಿದ್ದು. ೩. ಋಷಿಗಳ ಶಿರಸ್ಸಿಗೆ ಪಾದಾಘಾತವನ್ನು ಮಾಡಿದ್ದು. ಇಂದ್ರನು ಭಗವದ್ಭಕ್ತನು. ಆತನು ಋಷಿಗಳ ಪಲ್ಲಕ್ಕಿಯಲ್ಲಿ ಕುಳಿತಾಗ ಶ್ರೀಹರಿಯ ಸ್ಮೃತಿಯಲ್ಲಿ ಇರುತ್ತಿದ್ದನು. ಋಷಿಗಳಿಗೆ ಪಲ್ಲಕ್ಕಿಯನ್ನು ಹೊರಲು ಮಾತ್ರ ಸಮ್ಮತಿ ಇತ್ತೇವಿನಃ ಪಾದಾಘಾತವು ಉಚಿತವಾಗಿರಲಿಲ್ಲ. ನಹುಷನು ಅಪಕ್ವ ಬುದ್ಧಿಯವನಾದುದರಿಂದ ತಾಳ್ಮೆಗೆಟ್ಟು ಬ್ರಾಹ್ಮಣರಿಗೆ ಪಾದಾಘಾತವನ್ನೂ ಮಾಡಿದನು. ಆ ನಹುಷನ ಪಾದವು ಅಸ್ತ್ಯರ ಶಿರಸ್ಸಿಗೆ ತಾಕಿದ್ದೇ ತಡ, ತಕ್ಷಣ ಅಲ್ಲಿ ಅಡಗಿದ್ದ ಭೃಗುಮುನಿಗಳು ಆ ನಹುಷನಿಗೆ ಅಜಗರನಾಗಿ ಬೀಳೆಂದು

ಶಾಪವನ್ನಿತ್ತು ಬಂಗಾರದ ಪಲ್ಲಕ್ಕಿಯನ್ನು ಕುಕ್ಕಿ ಬಿಟ್ಟರು. ನಹುಷನ ಸೊಂಟ ಮುರಿಯಿತು. ದೇವ-ಋಷಿ, ಬ್ರಾಹ್ಮಣರ ವರ ಬಲದಿಂದ ಇಂದ್ರ ಪದವಿಯನ್ನು ಪಡೆದ ನಹುಷನಿಗೆ ಕೇವಲ ಭೃಗುಮುನಿಯ ಅಪಚಾರ ಮಾತ್ರದಿಂದ ನಿಗ್ರಹವಾಗಲಿಲ್ಲ. ಅಲ್ಲಿ ಆವಿಷ್ಕಾರಾಗಿದ್ದ ಬ್ರಹ್ಮದೇವರ ನಿಮಿತ್ತವಾಗಿ ಶಾಪವು ಆ ನಹುಷನನ್ನು ನಿಗ್ರಹಿಸಿತು. "ಆವಿಶ್ಯ ಕಂಜಪ್ರಭವಃ ಶಶಾಪ। ವ್ರಜಾಶು ಪಾಪಾಜಗರತ್ವ ಮೇವ ॥ ೨೨-೩೪೮)" ತಕ್ಷಣದಲ್ಲಿ ಪಶ್ಚಾತ್ತಾಪದಿಂದ ನಹುಷನು ಪರಿತಪಿಸಿ ತನಗೆ ಶಾಪವಿಮೋಚನೆಯ ಮಾರ್ಗವನ್ನು ತಿಳಿಸಬೇಕೆಂದು ಪ್ರಾರ್ಥಿಸಿದನು. ಆಗ ಆಗಸ್ತ್ಯಾಂತರ್ಯಾಮಿ ಭೃಗುವು ಬ್ರಹ್ಮಾವೇಶದಿಂದ ಈ ರೀತಿಯಾಗಿ ವಿಶಾಪವನ್ನು ನೀಡಿದರು. "ಮಹಾ ಬಲಶಾಲಿಯಾದ ನೀನು ಯಾರನ್ನೇ ಆಗಲಿ ಹಿಡಿದರೆ ನಿನ್ನಿಂದ ಬಿಡಿಸಿಕೊಳ್ಳಲಾಗುವುದಿಲ್ಲ. ಆದರೆ ಯಾರು ನಿನ್ನನ್ನು ತೃಣ ಸಮಾನವಾಗಿ ಕಾಣಲು ಸಮರ್ಥನಾಗಿದ್ದಾಗ್ಯೂ ನಿನಗೆ ಸಿಲುಕಿದವನಂತೆ ನಟಿಸುವನೋ, ಆಗ ಅವನನ್ನು ಬಿಡಿಸಲು ನೀನು ಕೇಳಿದ ಪ್ರಶ್ನೆಗಳಿಗೆ ಉತ್ತರಗಳು ಗೊತ್ತಿದ್ದರೂ ದಡ್ಡನಂತೆ ವರ್ತಿಸುತ್ತ ಚೀರುತ್ತಾ ಚಡಪಡಿಸುತ್ತಿರುವನೋ, ಆ ವೇಳೆಗೆ ಬೇರೊಬ್ಬ ವ್ಯಕ್ತಿಯು ಬಂದು ನಿನ್ನ ಪ್ರಶ್ನೆಗಳನ್ನು ಉತ್ತರಿಸಿ ನಿನ್ನಿಂದ ಗ್ರಸ್ಥನಾದ ವ್ಯಕ್ತಿಯನ್ನು ಬಿಡುವಂತೆ ಕೇಳಿಕೊಳ್ಳುವನೋ ಆಗ ನಿನ್ನ ಈ ಶಾಪವು ಮೋಚನೆಯಾಗಿ ಸ್ವದೇಹದಿಂದ ಸ್ವರ್ಗಕ್ಕೆ ಹೋಗುವಿ ಎಂದು ನಿರೂಪಣೆಯನ್ನು ಇತ್ತು ನಿರ್ಗಮಿಸಿದರು. ತರುವಾಯ ಭೃಗು ಶಾಪದಂತೆ ಆ ನಹುಷನು ಮಹಾಅಜಗರನಾಗಿ ಚಲನೆ ಇಲ್ಲದೆ ಒಂದೆಡೆ ಬಿದ್ದಿರುತ್ತಿದ್ದನು. ನಹುಷನುಕರ್ಮಜ ದೇವತೆಯು ಈತನು ಅಪರಾಧವನ್ನು ಮಾಡುವುದಿಲ್ಲ. ಇಲ್ಲಿ ಜರುಗಿದ ಪ್ರಸಂಗವು ಅಸುರ ಮೋಹನಾರ್ಥವಾಗಿಯೂ ಲೋಕ ಶಿಕ್ಷಣಾರ್ಥವಾಗಿಯೂ ಮತ್ತು ನಹುಷನು ಅಜಗರನಾಗಲೇ ಬೇಕಿದ್ದ ಪ್ರಾರಬ್ಧ ಬೋಗಾರ್ಥವಾಗಿಯೂ ಶ್ರೀಹರಿ-ವಾಯುಗಳ ಇಚ್ಛೆಯಂತೆಯೂ ನಡೆಯಿತು.

ಹೀಗೆ ಅಜಗರನಾಗಿ ಬಿದ್ದಿದ್ದ ನಹುಷನು ಭೀಮನನ್ನು ಕಂಡಕೂಡಲೇ ಉತ್ಸಾಹಭರಿನಾಗಿ ತಕ್ಷಣವೇ ಭೀಮನನ್ನು ಹಿಡಿದು ಬಲವಾಗಿ ಸುತ್ತಿಕೊಂಡು ಬಿಟ್ಟನು. ಬಲವಂತನಾದ ಭೀಮಸೇನನು ನಹುಷನಿಂದ ತನಗೆ ಯಾವರೀತಿಯಿಂದಲಾದರೂ ಅಪಾಯವಾಗಲಾರದೆಂದು ತಿಳಿದು ಅವನಿಂದ ಬಿಡಿಸಿಕೊಳ್ಳಲು ಯತ್ನಿಸಲಿಲ್ಲ. ನಹುಷನಲ್ಲಿ ಭೀಮನನ್ನು ಅಲುಗಾಡಿಸುವ ಸಾಮರ್ಥ್ಯವು ಇಲ್ಲದಿರುವಾಗ ಇನ್ನು ಅವನನ್ನು ನುಂಗುವುದೆಲ್ಲಿ ಬಂತು? ಭೀಮನು ದುರ್ಬಲನು, ಅಜಗರನಿಂದ ಬಿಡಿಸಿಕೊಳ್ಳಲಾಗದೆ ಪರಿತಪಿಸಿದನು. ಅವನು ಅಜ್ಞಾನಿಯು, ಅಜಗರನ ಪ್ರಶ್ನೆಗಳಿಗೆ ಉತ್ತರಗಳನ್ನು ಅರಿಯದೆ ವ್ಯಾಳಗ್ರಾಸನಾಗಿದ್ದನು. ಆದರೆ ಸಕಾಲಕ್ಕೆ ಧರ್ಮರಾಯನು ಅಲ್ಲಿಗೆ ಬಾರದಿದ್ದಲ್ಲಿ, ನಹುಷನ ಪ್ರಶ್ನೆಗಳಿಗೆ ಉತ್ತರವನ್ನು ನೀಡದಿದ್ದಲ್ಲಿ ಭೀಮನನ್ನು ಆ ಅಜಗರವು ನುಂಗಿಬಿಡುತ್ತಿತ್ತು ಎಂಬ ಅಯಥಾರ್ಥ ಜ್ಞಾನವನ್ನು ಅಸುರರಿಗೆ ಉಂಟು ಮಾಡಲಿಕ್ಕಾಗಿ ಭೀಮನು ಸುಮ್ಮನಿದ್ದನು. ಜ್ಞಾನ ಬಲಸಂಪನ್ನನಾದ ಭೀಮನಲ್ಲಿ ನಹುಷನ ಬಲ, ಪ್ರಶ್ನೆಗಳಿಗೆ ಉತ್ತರಗಳಿರಲಿಲ್ಲವೆ?

ಬಹಳ ಹೊತ್ತಾದರೂ ಭೀಮನು ಬಾರದುದನ್ನು ಗಮನಿಸಿ ಧರ್ಮರಾಯನು ಆತನನ್ನು ಹುಡುಕಿಕೊಂಡು ಹೋದನು. ಸ್ವಲ್ಪ ದೂರದಲ್ಲಿ ಅಜಗರನಿಂದ ಆವೃತನಾಗಿದ್ದ ಭೀಮನನ್ನು ನೋಡಿ ಬೆದರಿದನು. ಧರ್ಮರಾಜನು ನಹುಷನಲ್ಲಿಗೆ ಬಂದು ಭೀಮನನ್ನು ಬಿಟ್ಟು ಬಿಡಬೇಕೆಂದು ಕೇಳಿಕೊಂಡನು. ಆದರೆ ಆ ವ್ಯಾಳರೂಪೀ ನಹುಷನು ತಾನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನಿತ್ತರೆ ಮಾತ್ರ ಬಿಡುವೆನೆಂದು ಧರ್ಮಜನಿಗೆ ಹೇಳಿದನು. ಆಗ ಧರ್ಮರಾಯನು ಪ್ರಶ್ನೆಗಳಿಗೆ ಉತ್ತರಗಳನ್ನು ನೀಡಲು ಒಪ್ಪಿದನು. ತರುವಾಯ ನಹುಷನ ಎಲ್ಲಾ ಪ್ರಶ್ನೆಗಳಿಗೆ ಧರ್ಮಜನು ಸಮಂಜಸವಾದ ಉತ್ತರಗಳನ್ನು ನೀಡಿದನು. ತಕ್ಷಣವೇ ಅಜಗರವು ಭೀಮನನ್ನು ಬಿಟ್ಟು ತನ್ನ ನಿಜರೂಪದಿಂದ ಯುಕ್ತನಾಗಿ ಸ್ವರ್ಗಲೋಕವನ್ನು ಕುರಿತು ನಿರ್ಗಮಿಸಿದನು.

ದೇವೇಂದ್ರನಿಗೆ ವೃತ್ರನ ಹತ್ಯೆಯಿಂದ ಬ್ರಹ್ಮಹತ್ಯಾ ದೋಷವು ಬರಲಿಲ್ಲ ಇದು ಬ್ರಹ್ಮಹತ್ಯೆಗೆ ಸಂದ ಗೌರವವು ಮಾತ್ರ. ಇಂಥಾ ದೋಷಗಳು ದೇವತೆಗಳಿಗೆ ಲೇಪವಾಗುವುದಿಲ್ಲ. ಈ ನೆಪದಿಂದ ಇಂದ್ರನು ಸಾವಿರ ವರುಷ ಕಮಲನಾಳದಲ್ಲಿದ್ದು ನರಸಿಂಹದೇವರ ಜಪವನ್ನು ಮಾಡಿದನು ಮತ್ತು ಮಹಾವಿಷ್ಣುಯಾಗವನ್ನೂ ಮಾಡಿದನು. ಲೋಕಶಿಕ್ಷಣ ಕ್ರಮದಿಂದ ಬಂದಿದ್ದ ಬ್ರಹ್ಮಹತ್ಯಾ ದೋಷವನ್ನು ವಿಷ್ಣುವು ಯಜ್ಞದಿಂದ ತುಷ್ಟನಾಗಿ ಆ ದೋಷವನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿ ಭೂಮಿ, ವೃಕ್ಷ, ಸಮುದ್ರ ಮತ್ತು ಸ್ತ್ರೀಯರಿಗೆ ಹಂಚಿದನು. ಆ ದೋಷವು ಕ್ರಮವಾಗಿ ಭೂ, ಭೂಜ, ಭಂಗ, ಭಾಮಿನಿಯರಲ್ಲಿ ಕ್ರಮವಾಗಿ ಸೌಳು, ಅಂಟು, ನೊರೆ, ರಜಸ್ವಲಾರೂಪದಿಂದ ಜಗತ್ತಿನಲ್ಲಿ ಪ್ರಕಟವಾಯಿತು. ಇಂದ್ರನಿಗೆ ಪ್ರಾರಬ್ಧ ಮತ್ತು ಅಸುರರಿಗೆ ಮೋಹಕಾರ್ಥವಾಗಿ ಪರಿಣಮಿಸಿತು. ಇಂದ್ರನು ಪುನಃ ಸ್ವರ್ಗಾಧಿಪತಿಯಾದನು.

ನಹುಷನ ಪ್ರಾರಬ್ಧದಲ್ಲಿ ಅವನು ಅಜಗರನಾಗಬೇಕಾಗಿದ್ದಿತು. ಅದರ ನಿವೃತ್ತಿಗಾಗಿ ಭೀಮನನ್ನು ಸ್ಪರ್ಶಿಸಬೇಕಾಗಿತ್ತು. ಮಾತ್ರವಲ್ಲ. ಅಪಕ್ವಕಾಲದಲ್ಲಿ ಪದವಿಗೇರಿ ಅನುಚಿತವಾಗಿ ವರ್ತಿಸಿದರೆ ಯಾವ ಅನರ್ಥವಾಗುತ್ತದೆಂಬುದನ್ನು ಜಗತ್ತಿಗೆ ತೋರಬೇಕಾಗಿತ್ತು. ಶಚಿದೇವಿಯಲ್ಲಿ, ಆಸಕ್ತಿ, ಸೋತ್ತಮಾಪರಾಧಗಳು ಯಾವ ಪರಿಣಾಮವನ್ನು ಬೀರುತ್ತವೆಂಬುದಕ್ಕೆ ನಹುಷನು ಉದಾಹರಣೆಯಾಗಿ ನಿಂತನು. ಅವನ ಸ್ವರೂಪ ಸಾಧನೆಯಲ್ಲಿ ಈ ಘಟನೆಯು ಅನಿವಾರ್ಯವಾಗಿದ್ದುದರಿಂದಲೇ ಇಲ್ಲಿ ನಡೆದ ಘಟನೆಗಳು ನಹುಷನಿಗೆ ಅಂತಸ್ಥದಲ್ಲಿ ವಿರೋಧವಾಗಿರಲಿಲ್ಲ. ಜಗನ್ನಾಟಕದಲ್ಲಿ ಅವನ ಪಾತ್ರಾನುಸಾರಿಯಾಗಿ ಅವನು ವರ್ತಿಸಿರುವುದರಿಂದ ಅವನು ಭಗವತ್ಪ್ರಿಯನೇ ಸರಿ. ಕರ್ಮಜ ದೇವತೆಯಾದ ನಹುಷನೂ, ಹಾಗೂ ದೇವತೆಗಳೂ ಅಪರಾಧವೆಸಗಿದ ಮೇಲೆ ಅದರ ಭೋಗ ಮತ್ತು ಪರಿಹಾರೋಪಾಯಗಳು ಯಾವು ಎಂಬುದನ್ನು ತೋರಲಿಕ್ಕಾಗಿಯೇ ಭಗವದಾಜ್ಞೆಯನ್ನು ಶಿರಸಾವಹಿಸಿ ವರ್ತಿಸುವವರಾಗುತ್ತಾರೆ. ಅವರು ದ್ವಂದ್ವಾತೀತರು. ತ್ಯಾಗ, ಭೋಗ, ಸಮಾಯುಕ್ತರು, ಜ್ಞಾನಿಗಳು (ಮುಕ್ತಿ ಯೋಗ್ಯರು) ಅಸುರಾವೇಶ ಕಾಲದಲ್ಲಿ ಅಪರಾಧವನ್ನು ಎಸಗುವುದರಿಂದ ಆ ಪಾಪಗಳು ರಸ ವಿಭಾಗ ಕಾಲದಲ್ಲಿ ಅಸುರರಿಗೇ ಹೋಗುತ್ತದೆ. ಆ ಆವೇಶಕಾಲದಲ್ಲಿ ಮುಕ್ತಿಯೋಗ್ಯರು ಸುಪ್ತರಾಗಿರುತ್ತಾನೆ. ಅಂಥಾ ಸಂದರ್ಭಗಳಲ್ಲಿ ಸಾಕ್ಷಾತ್ ಹರಿ, ವಾಯುಗಳು ಅವರ ಯೋಗಕ್ಷೇಮವನ್ನು ನೋಡಿಕೊಂಡಿರುತ್ತಾರೆ. "ಪಾವನ ಜೀವಕೆ ತಮಸು ಎಂದಿಗೂ ಇಲ್ಲ" "ನದೇವಾನಾಂ ನರಕಧ್ರುವಂ" "ನಲಿಪ್ಯತೇ ಜ್ಞಾನವಾಂಷ್ಠ! ಸರ್ವದೋಷೈರಪಿಕ್ವಚಿತ್"

ಇಂದ್ರನು ವೃತ್ರಾಸುರನನ್ನು ಸಂಹಾರ ಮಾಡಿದನು. ಇದು ಚಿತ್ರಕೇತು ರಾಜನ ಶಾಪ ವಿಮೋಚನೆಯಲ್ಲಿ ಪರ್ಯವಸಾನವಾದುದರಿಂದ ಇಂದ್ರನಿಂದ ಹತನಾದುದು ವೃತ್ರ (ಚಿತ್ರಕೇತು)ನಿಗೆ ಪ್ರಾಪ್ತವಾದ ವರವೆಂದೇ ತಿಳಿಯಬೇಕು. ದೇವತೆಗಳಿಗೆ ಸಮಿಚೀನವಾಗಿ ಯಾವ ಕಾಲಕ್ಕೂ ಶಾಪಗಳು ಅಭಿಪ್ರೇತಗಳಾಗುವುದಿಲ್ಲ. ಅವು ಅಸುರರ ಮೋಹನಾರ್ಥವಾಗಿ 'ಶಾಪ' ಶಬ್ದದಿಂದ ವಾಚ್ಯವೇ ಹೊರತಾಗಿ ಶುಷ್ಕ ಪುರಾಣಗಳ ಪ್ರವಚನದಂತೆ ಶಾಪವಲ್ಲ. ವರಪ್ರಧಾನವೆಂದೇ ತಿಳಿಯಬೇಕು. ಚಿತ್ರಕೇತುವಿಗೆ ಗೌರಿಯಿಂದ ಪ್ರಾಪ್ತವಾದ ಶಾಪವೂ ಅವನ ಪ್ರಾರಬ್ಧ ಬೋಗಾರ್ಥವಾಗಿ ಇತ್ತ ವರವೆಂದೇ ತಿಳಿಯಬೇಕು. ಈ ಅನುಸಂಧಾನವಿಲ್ಲದೇ ಹೇಳುವ ಪುರಾಣಗಳು ಸೋತ್ತುಮಾಪರಾಧದಲ್ಲಿ ಪರಿಯವಸಾನವಾಗುತ್ತವೆ. ಯಾಕೆಂದರೆ ಅವರು ಅಪರಾಧಿಗಳೆಂದೇ ಸಾಧಿಸಿ ಶಾಪವನ್ನು ಸಮರ್ಥಿಸುತ್ತಿರುತ್ತಾರೆ. ಇದರಿಂದ ನಮಗೆ ಸೋತ್ತುಮರಲ್ಲಿ ಅವಜ್ಞತಾ ಬುದ್ಧಿಯು ಸುಳಿಯುತ್ತದೆ. ಇಲ್ಲಿ ಬಹಳ ಎಚ್ಚರಿಕೆಯಿಂದ ಪ್ರವಚನಗಳನ್ನು ನೀಡಿದರೆ ಮಾತ್ರ ಭಗವತ್ಪ್ರೀತಿಕರವಾಗುತ್ತದೆ. ಅನ್ಯಥಾ ನರಕದ ಬಾಗಿಲನ್ನು

ತಟ್ಟಿದಂತೆಯೇ ಸರಿ. ಪುರಾಣಿಕರಿಗೆ ಧನ, ಕೀರ್ತಿಗಳು ಮಾತ್ರ ಲಭಿಸಬಹುದು. ಜನರಿಗೆ ಮನರಂಜನೆ ಸಿಗಬಹುದು ಅಷ್ಟೇ. ತುಲಸಿ ಇಲ್ಲದ ಪೂಜೆ, ಅಭಿಗಾರವಿಲ್ಲದ ನೈವೇದ್ಯ, ಪ್ರಮೇಯವಿಲ್ಲದ ಪ್ರವಚನಗಳು ಆನೆ ನುಂಗಿ ವಿಸರ್ಜಿಸಿದ ಬೇಲದ ಹಣ್ಣಿನ ಬುರುಡೆಗಳು ಮಾತ್ರ. ಚಿತ್ರಕೇತು ಸೋತ್ತಮರ ನಡತೆಯನ್ನು ಕೀಳಾಗಿ ಕಂಡರೆ ಅಪರಾಧವಾಗುತ್ತದೆ ಎಂಬುದನ್ನು ತೋರಲು ಗೌರಿಶಂಕರನ್ನು ಸಭೆಯಲ್ಲಿ ಹೀಯಾಳಿಸಿದನು. ಆಗ ಗೌರಿಯು ಅಸುರನಾಗೆಂದು ಶಾಪವಿತ್ತಳು. ಚಿತ್ರಕೇತುವಿನದು ಹೀಯಾಳಿಕೆ ಅಲ್ಲ. ಗೌರಿಯದು ಶಾಪವಲ್ಲ. ಪ್ರಾರಬ್ಧದ ಉಪಮರ್ದಕ್ಕಾಗಿ ಗೌರಿಯು ನೀಡಿದ ವರವೇ ಅದು.

ಇಂದ್ರನು ಬ್ರಹ್ಮಹತ್ಯಾಮಾಡಿದ್ದು ನಿಮಿತ್ತ. ಮರ್ಯಾದೆಗಾಗಿ ಅವನು ವಿಷ್ಣುಯಾಗ, ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡನು. ಈ ಪಾಪ ವಿಶೇಷವನ್ನು ಪರಮಾತ್ಮನು ಭೂಮಿ, ಭಾಮಿನಿ, ಸಮುದ್ರ ಮತ್ತು ವೃಕ್ಷಗಳಿಗೆ ಹಾಕಿದನಲ್ಲವೇ? ಯಾವ ಪಾಪವನ್ನೂ ಮಾಡದ ಇವರಿಗೆ ಇಂದ್ರನಿಂದಾದ ಪಾಪವನ್ನು ಯಾಕೆ ಹಾಕಬೇಕಾಗಿತ್ತು? ಎಂದರೆ ಸ್ವರೂಪಭೂತವಾಗಿ ಈ ನಾಲ್ಕು ಸ್ಥಾನಗಳು ಬ್ರಹ್ಮಹತ್ಯಾದೋಷವನ್ನು ಭರಿಸಲು ಸಮರ್ಥಗಳಾಗಿವೆ. (ಪ್ರಾರಬ್ಧರೂಪವಾಗಿ) ಈ ದೋಷಗಳನ್ನು ಇವರಿಗೆ ವರ್ಗಾಯಿಸದಿದ್ದರೆ ಜಗದ್ವ್ಯಾಪಾರವೇ ಸಾಗುವಂತಿಲ್ಲ. ಈ ದೋಷದ ನಿಮಿತ್ತವಾಗಿಯೇ ಮೇಲೆ ಹೇಳಲ್ಪಟ್ಟ ದೋಷ ಚತುಷ್ಟಯರ ಸಾಧವಾಗುವುದರಿಂದ ಈ ದೋಷನಿಮಿತ್ತ ಘಟಿಸುವ ಆಗು–ಹೋಗುಗಳು ಅವರಿಗೆ ಅತೀ ಅಪೇಕ್ಷಣೀಯಗಳೇ ಆಗಿವೆ. ಅವರ ಅಪೇಕ್ಷೆಯನ್ನೇ ಭಗವಂತನು ಮಾರ್ಮಿಕವಾಗಿ ಹಂಚಿ ಸಂತೋಷಪಡಿಸುತ್ತಿದ್ದಾನೆ. ತಾನೂ ಸಂಪ್ರೀತನಾಗಿ ಈ ಬಗ್ಗೆ ಈ ಕೆಳಗೆ ಕೊಟ್ಟಿರುವ ಕೋಷ್ಟಕ ವಿಶೇಷದಿಂದ ತಿಳಿದುಕೊಳ್ಳಬೇಕು.

## "ವೃತ್ರನ ಘಾತಿಸಿದ ಪಾಪವನು ನಾಲ್ಕು ವಿಭಾಗ ಮಾಡಿದನು" (ಹ.ಕ.ಸಾ.೨೨)

| ಬ್ರಹ್ಮಹತ್ಯಾ ಪಾಪ ಭಾಗಿಗಳು | ಲಕ್ಷಣಗಳು | ಪಾಪನಿಮಿತ್ತ ಆಗುವ ಯಾತನೆಗಳು | ಪಾಪಭಾಗಿಗಳಿಗೆ ಪ್ರಾಪ್ತವಾದ ವರ ಪ್ರಧಾನಗಳು | ದೇವಮಾನ್ಯವಾದ ಪೂಜ್ಯಸ್ಥಾನ ಪ್ರಾಪ್ತಿ | ಅನ್ಯರಿಗೆ ಬ್ರಹ್ಮಹತ್ಯಾ ಪರಿಣಾಮ (ಆಸೆ ಬಿಡಬೇಕು) ಇಲ್ಲವಾದರೆ ಅನರ್ಥ |
|---|---|---|---|---|---|
| ಸ್ತ್ರೀಯರು | ರಜಸ್ವಲೆ | ತವರಿನಿಂದ ನಿರ್ಗಮನ ಪ್ರಸವ ವೇದನೆ, ತೀರ್ಥಯಾತ್ರೆ ಗುರುದೇವತಾ ದರ್ಶನ ಪ್ರತಿಬಂಧಕ, ಗೃಹಕರ್ಮ ಕಷ್ಟ ಕಾರ್ಪಣ | ಸ್ವಪತಿಗೆ ನಿತ್ಯ ನೂತನತ್ವ ಪ್ರೀತ್ಯಾಸ್ಪದ, ಸಂತಾನ ಅಭಿವೃದ್ಧಿ | ಮಾತೃದೇವೋಭವ (ಯತಿಯಾದರೂ ತಾಯಿಗೆ ನಮಸ್ಕರಿಸುವರು) | ಸ್ಫುರದ್ರೂಪದಿಂದ ಆಕರ್ಷಣೆ, ಸಾಧನ ಹ್ರಾಸ, ಪಾಪಘಟನೆ, ಮಾನ, ಧನ, ಪ್ರಾಣ ಹಾನಿ |
| ಭೂಮಿ | ಕ್ಷಾರ (ಸೌಳು ಮಣ್ಣು) | ಮಲ, ಮೂತ್ರ, ಭೂಭಾರ, ಹಲ, ಭೂಕಂಪ, ತಿಪ್ಪೆ, ಸ್ಮಶಾನ ಇತ್ಯಾದಿ | ಹಳ್ಳ ದಿಣ್ಣೆಗಳು ಸ್ಥಿರವಲ್ಲ, ಅಭಿವೃದ್ಧಿ, ಹ್ರಾಸ ನಿರಂತರ | ಪುಣ್ಯಕ್ಷೇತ್ರ, ಭೂಭಾಗದಲ್ಲೇ ಪ್ರತಿಷ್ಠೆ, ಯಜ್ಞ ಪೂಜೆ, ನೈವೇದ್ಯಗಳು ಆಗಬೇಕು ಪಿಂಡ ಪ್ರಧಾನ ಮಾಡಬೇಕು (ಮಾಳಿಗೆ ಮೇಲೆ ಅಲ್ಲ) | ಪ್ರಭುತ್ವದ ಆಸೆ, ಹತ್ಯಾಕಾಂಡ, ಯುದ್ಧ |
| ಸಮುದ್ರ | ನೊರೆ | ಜಲಾಪಹರಣ ಮೇಘರೂಪ | ನೊರೆಯು ಕೇವಲ ಖಂಡಾಂಶ ಮಾತ್ರ ಸಕಲ ನದಿಗಳೂ ಇಲ್ಲಿ ಸೇರುತ್ತವೆ. | ಸರ್ವತೀರ್ಥಾವ ಗಾಹನಫಲ | ಜಲಚರ ರತ್ನಾದಿಗಳಿಂದ ಆಕರ್ಷಣೆ ಪ್ರಾಣಾಪಾಯ |
| ವೃಕ್ಷಗಳು | ನಿರ್ಯಾಸ (ಅಂಟು) | ಸತತ ಕುಠಾರ ಪ್ರಯೋಗ | ಪುನರಂಕುರ ದಶ, ಶತಾಧಿಕ ಅಭಿವೃದ್ಧಿ | ಫಲ, ಧಾನ್ಯ ನೈವೇದ್ಯ, ದತ್ತ ಛಾಯಾ ನಿಮಿತ್ತ ಕೀರ್ತಿ ಘೋಷಿತ | ಫಲ, ದ್ರವ್ಯದಿಂದ ಆಕರ್ಷಣೆ ಚೌರ್ಯ ಪ್ರಚೋದಕ |

ಪುರಾಣಗಳ ಉದ್ದಕ್ಕೂ ಸರಂಪಾಳಿಯಾಗಿ ಹೇಳುವುದು ದೇವತೆಗಳಿಗೆಲ್ಲಾ ಬರೀಶಾಪಗಳೇ. ದೈತ್ಯರಿಗೆಲ್ಲಾ ಬರೀ ವರಗಳೇ. ಆದರೆ ಶಾಪಗ್ರಸ್ಥರಾದ ಯಾವ ದೇವತೆಯೂ ಕೆಟ್ಟಿಲ್ಲ. ವರ ಸಂಪದ್ಭರಿತರಾದ ಯಾವ ದೈತ್ಯನೂ ಉದ್ಧಾರವಾಗಿಲ್ಲ. ಸತ್ಕರ್ಮ-ದುಷ್ಕರ್ಮಗಳಿಗೆ ಫಲವು ಸಿಗುವುದು ಅವುಗಳ ಉದ್ದೇಶವನ್ನು ಅನುಸರಿಸಿಯೇ ಹೊರತಾಗಿ ಕರ್ಮಗಳಿಂದ ಅಲ್ಲ. ದೈತ್ಯರು ಏನೆಲ್ಲಾ ಮಾಡುವುದು ದುರುದ್ದೇಶದಿಂದ, ದೇವತೆಗಳದು ಸದುದ್ದೇಶದಿಂದ. ಅದಕ್ಕೇನೇ ಅವರಿಗೆ ತಕ್ಕ ಫಲವೇ ಸಿಕ್ಕುತ್ತದೆ.

॥ ಪದ ॥ ಮಕ್ಕಳಂದದಿ ಜಗ । ಕಿಕ್ಕಿ ಸಲಹುವವ ॥
ಹಕ್ಕಿಗೂಡಿಲಿ ಗುಟ । ಕಿಕ್ಕಿದನೇಕೋ ॥
ಉಕ್ಕಿನ ಕಾಯಕೆ । ದಕ್ಕದು ದಿತಿ ಕುಲ ।
ಹಿಕ್ಕಿಸಿ ಉಟ್ಟು ಬಳೆ । ಇಕ್ಕಿದನೇಕೋ ॥ ೨೪ ॥

**ಶಬ್ದಾರ್ಥ:** ಮಕ್ಕಳಂದದಿ = ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಅಕ್ಕರೆಯಿಂದ ಉಣಿಸಿ ಪೋಷಿಸುವಂತೆ; ಜಗಕಿಕ್ಕಿ ಸಲಹುವವ = ಜಗತ್ತಿಗೇ ಅನ್ನವನ್ನು ಮಾತ್ರವಲ್ಲದೆ ಏನೆಲ್ಲಾ ಜೀವರಾಶಿಗಳಿಗೆ ಬದುಕಲು ಸಾಧನ ಮಾಡಲು ಏನು ಬೇಕೋ ಅದನ್ನೆಲ್ಲವನ್ನೂ ಇತ್ತು ಕಾಪಾಡುತ್ತಿರುವವನು; ಹಕ್ಕಿಗೂಡಿಲಿ = ವಿರಾಟ ನಗರದಲ್ಲಿ (ವಿ = ಆಕಾಶ; ರಾಟ್ = ಸಂಚಾರಿ = ಹಕ್ಕಿಗಳು; ಗೂಡು = ನಗರ = ವಾಸಸ್ಥಳ; ಗುಟುಕಿಕ್ಕಿದನು = ಅಡಿಗೆ ಮಡಿ ಸಾವಿರಾರು ಜನರಿಗೆ ಉಣಬಡಿಸಿದನು; ಉಕ್ಕಿನ ಕಾಯಕೆ = ಜಗಜಟ್ಟಿಯ ಮುಂದೆ; ದಕ್ಕದು = ಯಾವ ಪ್ರತಿಮಲ್ಲನೂ ಮಾರಾಂತು ಜಯಿಸಲಾರನು; ದಿತಿಕುಲ = ದೈತ್ಯ ಸಮುದಾಯ; ಹಿಕ್ಕಿಸಿ = ತಲೆಯನ್ನು ಬಾಚಿಕೊಂಡು ಹೆರಳನ್ನು ಹಾಕಿಸಿಕೊಂಡು, ಹೂ ಮುಡಿದು, ತಿಲಕ, ಲೋಲಕ ಮೂಗುತಿಯನ್ನು ಧರಿಸಿಕೊಂಡು; ಉಟ್ಟು = ಸೀರೆಯನ್ನು ಉಟ್ಟುಕೊಂಡು, ಕುಪ್ಪಸವನ್ನು ಧರಿಸಿ; ಬಳೆಇಕ್ಕಿದನೇಕೋ = ಬಳೆ (ಕಾಲುಂಗುರ)ಗಳನ್ನು ಹಾಕಿಕೊಂಡು ಸ್ತ್ರೀ (ಮೋಹಿನೀ) ರೂಪವನ್ನು ಯಾತಕ್ಕಾಗಿಯಾದರೂ ಧರಿಸಿದನೋ ತಿಳಿಯದಲ್ಲವೇ?

**ಭಾವಾರ್ಥ:** ಭೀಮನು ನಹುಷನನ್ನು ಉದ್ಧರಿಸಿದ ಮೇಲೆ (ಧರ್ಮಜನು ಭೀಮನನ್ನು ನಹುಷನ ಬಾಧೆಯಿಂದ ಪಾರು ಮಾಡಿದ ಮೇಲೆ ಎನ್ನಬಾರದು) ತನ್ನ ಸಹೋದರ, ದ್ರೌಪದಿಯರೊಡನೆ ಸಂಚರಿಸುತ್ತ ದ್ವೈತ ವನವನ್ನು ಸೇರಿದರು. ಪ್ರತಿ ನಿತ್ಯದಲ್ಲೂ ಶ್ರೀಕೃಷ್ಣನ ಸ್ಮರಣೆಪೂರ್ವಕವಾಗಿಯೇ ಕಾಲವನ್ನು ಕಳೆಯುತ್ತಿರುವಾಗ ಒಮ್ಮೆ ಜಯದ್ರಥನು ಕಾಶಿರಾಜನಾಗಿದ್ದ ಕೋಟಿ ಕಾಶ್ಯನಿಂದ ಕೂಡಿಕೊಂಡು ಆಶ್ರಮದಲ್ಲಿ ದ್ರೌಪದಿಯು ಒಂಟಿಯಾಗಿದ್ದಾಗ ದ್ರೌಪದಿಯನ್ನು ಬಲಾತ್ಕಾರವಾಗಿ ರಥದಲ್ಲಿ ಅಪಹರಿಸಿಕೊಂಡು ಹೋದನು. ಇದನ್ನು ಶಕುನದಿಂದ ತಿಳಿದ ಭೀಮಾರ್ಜುನರು ಜಯದ್ರಥನ ಬೆಂಬತ್ತಿ ಅವನನ್ನು ಹಿಡಿದು ಚೆನ್ನಾಗಿ ಥಳಿಸಿದರು. ಆಗ ಜಯದ್ರಥನು ತಾನು ದ್ರೌಪದಿಯ ಚರಣ ಸೇವಕನೆಂದು ಲಜ್ಜೆಯಿಂದ ತಲೆಬಾಗಲಾಗಿ ಅವನನ್ನು ಅಲ್ಲಿಂದ ಓಡಿಸಿ ಕೋಟಿಕಾಶ್ಯನನ್ನು ಸಂಹರಿಸಿ ಅವನನ್ನು ತಪೋದ್ವಾರಕ್ಕೆ ನೂಕಿದರು. ತರುವಾಯ ಮಾರ್ಕಾಂಡೇಯ ಋಷಿಗಳಿಂದ ಭಾಷತ್ರಯ ವಿಚಾರವನ್ನು ಚೆನ್ನಾಗಿ ಅರಿತುಕೊಂಡರು.

ದುಷ್ಟನಾದ ಜಯದ್ರಥನು ರುದ್ರನನ್ನು ಕುರಿತು ತಪಸ್ಸನ್ನಾಚರಿಸಿ ತನಗೆ ಪಾಂಡವರಿಂದ ಮರಣವಿಲ್ಲೆಂಬ ವರವನ್ನು ಪಡೆದನು. ಆದರೆ ಶಂಕರನು ಅರ್ಜುನನ ವಿನಃ ಅವನು ಬೇಡಿದ ವರವನ್ನು ಇತ್ತನು. ದುರ್ಯೋಧನನು ತನ್ನ ಅಟ್ಟಹಾಸವನ್ನು ತೋರಿಸಿ ಪಾಂಡವರನ್ನು ಅವಮಾನಗೊಳಿಸಲಿಕ್ಕಾಗಿ ತನ್ನ ಬಹು ಸಂಖ್ಯಾ ಪರಿವಾರ ಸ್ತ್ರೀ, ವಾರಾಂಗನೆಯರ ಸಹಿತವಾಗಿ ದ್ವೈತ ವನಕ್ಕೆ ಧಾವಿಸಿದನು. ಏಕಾದಶಿಯ (ತಿಥಿತ್ರಯದ) ಹಂಗಿಲ್ಲದೆ, ಬಹಿಷ್ಠೆಯರೆಂಬ ಹೇಸಿಕಿಲ್ಲದೆ ಈ ಸಮೂಹವು ದ್ವೈತವನದ ಋಷ್ಯಾಶ್ರಮಗಳನ್ನು ಪ್ರವೇಶಿಸಿ ಹವಿಸ್ಸುಗಳನ್ನು ಮುಟ್ಟಿದರು. ಬ್ರಹ್ಮಚಾರಿಗಳ ಶಿಖಾ ಕೌಪೀನ, ಮೌಂಜಿಗಳನ್ನು ಕತ್ತರಿಸಿದರು. ಹಾಲು, ಮೊಸರು, ತುಪ್ಪ, ಸಕ್ಕರೆಗಳನ್ನು ಮುಕ್ಕಿದರು. ಕಂಡ ಕಂಡಲ್ಲಿ ಮಲ ಮೂತ್ರಗಳನ್ನು ವಿಸರ್ಜಿಸಿದರು. ಮಡಿವಸ್ತ್ರಗಳನ್ನು ಮುಟ್ಟಿದರು. ಕೇಕೆ, ಸೀಟಿಗಳನ್ನು ಹಾಕಿದರು. ಮಧುಪಾನ

ಮತ್ತು ಅರೆ ದಿಗಂಬರರಾಧಿರಾಗಿ ಕುಣಿದಾಡುತ್ತಾ ಗಹಗಹಿಸಿ ನಕ್ಕರು. ಇದನ್ನು ಕಂಡು ಸಹಿಸದೆ ಇಂದ್ರನು ಚಿತ್ರಸೇನ ಗಂಧರ್ವನಿಗೆ ವರವನ್ನಿತ್ತು ಅರವತ್ತು ಸಾವಿರ ಕೋಟಿ ಸೇನೆಯೊಂದಿಗೆ ದುರ್ಯೋಧನನನ್ನು ನಿಗ್ರಹಿಸಲು ಕಳುಹಿಸಿಕೊಟ್ಟನು. ಘೋರವಾದ ಯುದ್ಧವು ಜರುಗಿತು. ಕೊನೆಗೆ ಚಿತ್ರರಥನು ದುರ್ಯೋಧನ, ಶಕುನಿ, ಕರ್ಣ, ಜಯದ್ರಥ ಮೊದಲಾದವರನ್ನು ವಿದ್ಯುತ್ಪಾಶಗಳಿಂದ ಬಂಧಿಸಿ ಸೆಳೆದೊಯ್ದನು. ಈ ವಿಚಾರವನ್ನು ತಿಳಿದ ಭೀಮಾರ್ಜುನರು ಧರ್ಮರಾಯನ ಸಲಹೆಯಂತೆ ಕುರುಕುಲದ ಗೌರವ ರಕ್ಷಣಾರ್ಥವಾಗಿ (ಅಥವಾ ಈ ಪಾಪಿಗಳ ಪಾಪದ ಕೊಡವು ಇನ್ನೂ ತುಂಬಿಲ್ಲ. ಪೂರ್ತಿಯಾಗಿ ತುಂಬಲಿ ಎಂದು) ಚಿತ್ರರಥನ ಬೆಂಬತ್ತಿ ಆತನನ್ನು ಸೋಲಿಸಿ ಕೌರವಧೂರ್ತರನ್ನು ಬಿಡಿಸಿಕೊಂಡು ಬಂದರು. ಪಾಂಡವರಿಗೆ ಅಪಮಾನ ಮಾಡಬೇಕೆಂದು ಬಂದ ಕಲಿ ದುರ್ಯೋಧನನಿಗೆ ಗರ್ವ ಭಂಗವಾಯಿತು. ಆದರೂ, ಅವನ ಸ್ವರೂಪದಂತೆ ಪಾಂಡವರಲ್ಲಿ ಮತ್ಸರವು ಬೆಳೆಯಿತೇ ವಿನಃ ಅವನಲ್ಲಿ ಕೃತಜ್ಞತೆಯು ಮೂಡಲಿಲ್ಲ.

ದುರ್ಯೋಧನಾದಿಗಳನ್ನು ಬಿಡಿಸಿದ ಮೇಲೆ ಪಾಂಡವರು ಸುಖಮಾನಸರಾಗಿ ವಾಸಮಾಡುತ್ತಲಿರಲು ಒಂದು ದಿನ ಬ್ರಾಹ್ಮಣ ಸಮೂಹವು ಪಾಂಡವರಲ್ಲಿಗೆ ಬಂದು ತಾವು ಸಂಗ್ರಹಿಸಿದ್ದ ಅಗ್ನಿ ಮಥನ ಕಾಷ್ಠ ಮುಂತಾದ ಯಜ್ಞೋಪಯುಕ್ತವಾದ ದ್ರವ್ಯಗಳು ಯಾವುದೋ ಒಂದು ಮೃಗದಿಂದ ಅಪಹರಿಸಲ್ಪಟ್ಟಿವೆ. ಅವುಗಳನ್ನು ತಮಗೆ ಪುನಃ ದೊರಕಿಸಿ ಕೊಡಬೇಕೆಂದು ಬೇಡಿದರು. ಆ ತಕ್ಷಣವೇ ಪಾಂಡವರೆಲ್ಲರೂ ಧರ್ಮರಾಯನನ್ನು ಮಾತ್ರ ಬಿಟ್ಟು ಆ ಮೃಗದ ಬೇಟೆಗೆ ಹೊರಟರು. ಆದರೆ ಆ ಮೃಗವು ಅದೃಶ್ಯವಾಯಿತು. ಆಗ ಬಾಯಾರಿದ್ದ ಪಾಂಡವರು ಅಲ್ಲಿ ಕಂಡ ಸರೋವರದ ನೀರನ್ನು ಕುಡಿಯಲು ಅತ್ತ ಧಾವಿಸಿದರು. ಆದರೆ ಅಲ್ಲೇ ಬಕಪಕ್ಷಿರೂಪದಿಂದ ಕಾಣಿಸಿಕೊಂಡ ಯಮಧರ್ಮನು ತನ್ನ ಪ್ರಶ್ನೆಗಳಿಗೆ ಉತ್ತರವನ್ನೀಯದೇ ನೀರನ್ನು ಸೇವಿಸಬಾರದೆಂದು ಹೇಳಿದನು. ಆದರೆ ಸ್ವರೂಪದಿಂದಲೇ ಉತ್ತಮರಾದ ಭೀಮಾರ್ಜುನರು ಬಕನ ಮಾತನ್ನು ಮೀರಿ ಜಲಪಾನ ಮಾಡಿದರು. ಮರುಕ್ಷಣದಲ್ಲೇ ತಾವು ಅನಿಮಿಷರಾಗಿದ್ದು ಯಮ ಶಾಸನಾತೀತರಾಗಿದ್ದಾಗ್ಯೂ ಯಮನ ವಿಭೂತಿ ರೂಪಕ್ಕೆ ಮನ್ನಣೆಯನ್ನು ಕೊಟ್ಟು ಹಾಗೂ ಅಸುರ ಮೋಹನಾರ್ಥವಾಗಿಯೂ ತಾವು ಜ್ಞಾನಹೀನ, ದುರ್ಬಲರೆಂಬಂತೆ ನಟಿಸಿ ಮೂರ್ಛೆ ಹೋದರು. ಯಮನ ಪ್ರಶ್ನೆಗಳಿಗೆ ಉತ್ತರವನ್ನೀಯಲು ಅಸಮರ್ಥರೆಂಬಂತೆ ನಟಿಸಿದರು. ಪ್ರಳಯಾಂತ್ಯದಲ್ಲೂ ಮೂರ್ಛಾಪವಾದದ ಸೋಂಕಿಲ್ಲದೆ ಇರುವ ಭೀಮನು ಇಲ್ಲಿ ಮೂರ್ಛಾಕ್ರಾಂತನಾದಂತೆ ನಟಿಸಿದನು. ಆಗ ತಮ್ಮವರನ್ನು ಹುಡುಕಿಕೊಂಡು ಬಂದ ಧರ್ಮರಾಯನು ತನ್ನ ಮೂಲರೂಪವೇ ಆದ ಯಮಧರ್ಮನ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಟ್ಟನು. ಇದರಿಂದ ಧರ್ಮರಾಯನು ಭೀಮಾರ್ಜುನರಿಗಿಂತ ಬಲ, ಜ್ಞಾನ ಸಂಪನ್ನರೆಂದು ಅಸುರರು ತಿಳಿದರು. (**"ಯದ್ಯಪ್ಯೇತನ್ನಪಶ್ಯಂತಿ।ನಿಶಾಚರಗಣಾಸ್ತುತೇ ॥ ದ್ಯುಲೋಕ ಚಾರಿಣಃ ಸರ್ವೇ । ಪಶ್ಯಂತ್ಯೃಷಯ ಏವಚ॥ ತೇಷಾಂವಿಡಂಬನಾಯೈವ । ದೈತ್ಯಾನಾಂ । ವಂಚನಾಯಚ ॥ ಪಶ್ಯತಾಮ ಕಲಿ ಮುಖ್ಯಾನಾಂ । ವಿಡಂಬೋಯಂ ಕೃತೋಽಭವತು"** ಎಂಬ ನಿರ್ಣಯವನ್ನು ಇಲ್ಲಿಯೂ ಸ್ಮರಿಸಬೇಕು) ಯಮಧರ್ಮನು ಧರ್ಮರಾಜನ ಉತ್ತರದಿಂದ ತುಷ್ಟನಾಗಿ ವರಗಳನ್ನಿತ್ತು ಮೂರ್ಛಿತರಾಗಿದ್ದ ಪಾಂಡವರನ್ನು ಪುನಃ ಜಾಗೃತರನ್ನಾಗಿ ಮಾಡಿ ಭಗವತ್ಸೇವೆಯನ್ನು ಭಕ್ತಿಯಿಂದ ಮಾಡಿದನು. ಇಲ್ಲಿ ಧರ್ಮರಾಜನು ತೋರಿದ ದೊಡ್ಡ ಗುಣವೆಂದರೆ ಯಮಧರ್ಮನು ಪಾಂಡವರಲ್ಲಿ ಒಬ್ಬರನ್ನು ಮಾತ್ರ ಬದುಕಿಸಲು ಕೇಳಿಕೋ ಎಂದಾಗ ತನಗೆ ಅನುಕೂಲಕರನಾಗಿದ್ದ ಭೀಮನನ್ನು ಬದುಕಿಸು ಎನ್ನಬಹುದಿತ್ತು. ಅದನ್ನು ಬಿಟ್ಟು ತನ್ನ ಮೂಲ ತಮ್ಮನಾದ ನಕುಲನನ್ನು ಎಬ್ಬಿಸು ಎಂದು ಕೇಳಿದ್ದು ಅತಿಶಯವಾದ ಧರ್ಮವು. ಅದಕ್ಕೇನೇ ಯಮಧರ್ಮನು ಸಂತುಷ್ಟನಾಗಿ

ಎಲ್ಲರನ್ನೂ ಎಬ್ಬಿಸಿ ಮುಂದೆ ಪಾಂಡವರು ಸಾಧಿಸಬೇಕಾಗಿದ್ದ ಬಹು ಕಠಿಣವಾದ ಅಜ್ಞಾತವಾಸವು ನಿಮ್ಮಿಂದ ಯಶಸ್ವಿಯಾಗಿ ನೆರವೇರಲಿ. ಅಜ್ಞಾತವಾಸ ಕಾಲದಲ್ಲಿ ಪಾಂಡವರು ದುರ್ಯೋಧನನ ಗಮನಕ್ಕೆ ಬಾರದಂತೆ ಅದೃಶ್ಯರಾಗಿರಲಿ ಎಂದು ವರವನ್ನು ಕೊಟ್ಟು ಸಂತೋಷದಿಂದ ನಿರ್ಗಮಿಸಿದನು. ಯಜ್ಞ ಪದಾರ್ಥಗಳನ್ನು ತಾನೇ ಅಪಹರಿಸಿದ್ದರಿಂದ ಯಮನು ಅವುಗಳನ್ನು ಧರ್ಮರಾಜನ ಕೈಗೇ ಇತ್ತು ಅವುಗಳನ್ನು ಬ್ರಾಹ್ಮಣರಿಗೆ ತಲುಪಿಸಲು ಹೇಳಿದರು. ಧರ್ಮರಾಯನಿಗೇ ಕೀರ್ತಿ ಬರಲೆಂದು ಯಮಧರ್ಮನು ಹಾಗೆ ಮಾಡಿದನು. ತರುವಾಯ ಧರ್ಮರಾಯನು ಆ ಹವಿಸ್ಸುಗಳನ್ನು ತಮಗೆ ತಲುಪಿಸಿದ್ದರಿಂದ ಧರ್ಮರಾಜನಿಗೆ ಬ್ರಾಹ್ಮಣರು ಬಹು ಸಂತೋಷದಿಮದ ಅವರ ಅಜ್ಞಾತವಾಸವು ಯಶಸ್ವಿಯಾಗಿ ನೆರವೇರಲೆಂದು ಅವರೂ ಸಹ ವರವನ್ನಿತ್ತರು. "ವಿಪ್ರ ವಾಕ್ಯೋ ಜನಾರ್ದನಃ"

ಮೂಲಭೇದ ವಿವರ್ಜಿತನಾದ ಭೀಮಸೇನನು ತ್ರಿವಿಧ ಜೀವರ ಅಂತಃಪ್ರೇರಕನಾಗಿ ಜ್ಞಾನಾಽಜ್ಞಾನಾದಿಗಳನ್ನು ಇತ್ತು ಅವರವರ ಸ್ವರೂಪ ಸಾಧನೆಯನ್ನು ಮಾಡಿಸುತ್ತಲೇ ಇರುವಾಗ ಕೌರವರ ಶೋಧನೆಗೆ ಹೆದರಿ ಅಡಗಿ ಕುಳಿತು ಅಜ್ಞಾತವನ್ನು ಸಾಧಿಸಬೇಕಿತ್ತೇ? ಎದುರಿಗಿದ್ದರೂ ಇವರು ಪಾಂಡವರಲ್ಲವೆಂಬ ಅಜ್ಞಾನವನ್ನು ಕೌರವರಿಗೆ ಪ್ರೇರಿಸಬಲ್ಲವನಾಗಿದ್ದನು. ಅದರ ಬದಲಿಗೆ ಅಡಗಿ ಕೊಂಡರೆಂಬ ಹುಸಿ ಕೀಳರಿಮೆಯನ್ನು ಅವರಲ್ಲಿ ಹುಟ್ಟಿಸಿದನು. ತಮಗೆ ಹಿತವನ್ನು ಬಯಸಿದ ಯಮಧರ್ಮ-ವಿಪ್ರರಿಗೆ ಕೀರ್ತಿಯನ್ನು ದಯಪಾಲಿಸಿದನು.

ಭಗವಂತನ ದಯೆಯಿಂದ ಪಾಂಡವರು ಹನ್ನೆರಡು ವರುಷಗಳ ವನವಾಸವನ್ನು ಮಾಡಿದ ಮೇಲೆ ಅಜ್ಞಾತವಾಸ ಕಾಲವು ಪ್ರಾರಂಭವಾಯಿತು. ಸಕಾಲಕ್ಕೆ ಅವರು ಬಹು ಜಾಗರೂಕತೆಯಿಂದ ಬ್ರಾಹ್ಮಣರ ಸಮೂಹದಿಂದ ನಿರ್ಗಮಿಸಿ ವೇಷಾಂತರವನ್ನು ಹೊಂದಿ ವಿರಾಟನಗರ ಪ್ರವೇಶವನ್ನು ಮಾಡಿದರು.

**"ಗತ್ವಾ ವಿರಾಟಸ್ಯ ಪುರೀಂ ನಿಧಾಯ । ಹೇತೀಃ ಶಮ್ಯಾಂ ಛನ್ನ ರೂಪಾ ಬಭೂವುಃ ॥**
**ಯತಿಃ ಸೂದಃ ಷಂಢವೇಷೋಥ ಸೂತ । ವೇಸೋಗೋಪೋ ಗಂಧಕರ್ತ್ರೀಚಜಾತಾಃ । ೨೩-೨ ।**

ತಮ್ಮ ಆಯುಧಗಳನ್ನು ಶಮಿವೃಕ್ಷದ ಮೇಲೆ ಸ್ಥಾಪಿಸಿದರು. ಅಸ್ತ್ರ ಮಂತ್ರಗಳನ್ನು ಆ ವೃಕ್ಷದಲ್ಲಿ ಆವಾಹಿಸಿಟ್ಟರು. ತರುವಾಯ ಧರ್ಮರಾಯನು ಧರ್ಮ ಭೋಧಕನಾಗಿಯೂ, ಭೀಮನು ಪಾಕ ಕರ್ತೃವಾಗಿಯೂ, ಅರ್ಜುನನು ಷಂಢನಂತೆ ನಾಟ್ಯ ಭೋಧಕನಾಗಿಯೂ, ನಕುಲನು ರಥಸಾರಥಿ, ಅಶ್ವ ಪೋಷಕನಾಗಿಯೂ, ಸಹದೇವನು ಗೋಪಾಲಕನಾಗಿಯೂ ಮತ್ತು ದ್ರೌಪದಿಯು ಸ್ತ್ರೀ ಅಲಂಕಾರಿಣಿಯಾಗಿಯೂ ಮಾರುವೇಷವನ್ನು ಹೊಂದಿ ತಮ್ಮ ಕೌಶಲ್ಯತೆಯಿಂದ ರಾಜ ಪರಿವಾರದವರನ್ನು ಮೆಚ್ಚಿಸಿ ಅಲ್ಲಿ ಸೇವೆಗೆ ನಿಂತರು. ವಿರಾಟರಾಜನಾದರೋ ಧರ್ಮಾತ್ಮರಾದ ಪಾಂಡವರು ಅರಗಿನಮನೆಯಲ್ಲಿ ಬೆಂದು ಹೋದರೆಂದೇ ತಿಳಿದು ಮರುಗುತಿದ್ದನು. ಇವರನ್ನು ಗುರುತಿಸುವ ಪ್ರಸಕ್ತಿಯೇ ಆತನಿಗೆ ಹುಟ್ಟಲಿಲ್ಲ. ನಿಷ್ಠಾವಂತ ಸೇವಕರು ಸಿಕ್ಕಿದರೆಂದು ಹಿಗ್ಗಿ ಹೋಗಿದ್ದನು. ಮಹಾರಾಣಿ ಸುಧೇಷಾದೇವಿಯು ಸಹ ಉತ್ತಮ ಸೇವಕಿಯು ದೊರಕಿದಳೆಂದು ಸಂತೋಷ ಪಟ್ಟಳು.

ಬಾಣಾಸುರನಲ್ಲಿ ಆವಿಷ್ಟನಾಗಿದ್ದವನೇ ಈಗ ಕೀಚಕನೆಂಬ ಹೆಸರಿನಿಂದ ಮಹಾರಾಣಿಯ ತಮ್ಮನಾಗಿ ಹುಟ್ಟಿ ವಿರಾಟರಾಜನಿಗೆ ಸಹಾಯಕನಾಗಿದ್ದನು. " ಘರ್ಮೇಸಾಲಾ-ಖೇತ್‌ಮೇನಾಲಾ" ಎಂಬುದು ಉರ್ದುಗಾದೆ. ಇದರ

ಅರ್ಥವೇನೆಂದರೆ ಹೆಂಡತಿ ತಮ್ಮ ಮೈದುನನು ಮನೆಯನ್ನು ಹೊಕ್ಕು ಠಾಣಾ ಹೂಡಿದರೆ ಅದು ಹೊಲದಲ್ಲಿ ಒಂಪು-ಮಳೆ ಬಂದರೆ ಬೀಜ, ಗೊಬ್ಬರ ಎಲ್ಲವೂ ಕೊಚ್ಚಿ ಹೋಗುವ ಹರಿಹಳ್ಳವಿದ್ದಂತೆಯೇ ಸರಿ ಎಂದು. ಅಂಥವನು ಈ ಕೀಚಕನು, ಅತ್ಯಂತಕ್ರೂರಿಯೂ, ಮಹಾಬಲಾಢ್ಯನೂ ಧೂರ್ತನೂ, ರುದ್ರ ವರಬಲ ಗರ್ವಿತನೂ ಆದ ಕೀಚಕನನ್ನು ಕೆಣಕುವ ಧೈರ್ಯವು ದುರ್ಯೋಧನನಿಗೆ ಸಹ ಇರಲಿಲ್ಲ. "ಭೀಮಶ್ಚ ಬಲಭದ್ರಶ್ಚ । ಮಾದ್ರೇಶಶ್ಚ ವೀರ್ಯವಾನ್ ॥ ಕೀಚಕಃ ಚತುರ್ಥಃ ಪ್ರೋಕ್ತಃ । ನನುಶ್ರುತ ಪಂಚಮಂ ॥" ಎಂದರೆ ಮಹಾಭಾರತ ಕಾಲದಲ್ಲಿ ನಾಲ್ಕನೇ ಮಹಾ ಪರಾಕ್ರಮಶಾಲಿಯು ಈ ಕೀಚಕನು. ಇತ್ತ ಪಾಂಡವರ ಶೋಧಕ್ಕೆ ತೊಡಗಿದ ದುರ್ಯೋಧನನು ವಿರಾಟನಗರ ಒಂದನ್ನು ಬಿಟ್ಟು ಎಲ್ಲಾ ಕಡೆಗೂ ಗುಪ್ತಚಾರರನ್ನು ನೇಮಿಸಿ ಕಳುಹಿಸಿದನು. ಪಾಂಡವರು ವಿರಾಟನಗರದಲ್ಲಿ ರಕ್ಷಿತರಾಗಿದ್ದುದು ಕೀಚಕನ ದೆಶೆಯಿಂದಲೇ ಎಂಬ ಮೋಹಕವು ಅಸುರರಿಗೆ ಮೀಸಲಾಗಿತ್ತು. ಕೌರವನ ಯತ್ನವು ವಿಫಲವಾಗುತ್ತಲೇ ಸಾಗಿತ್ತು. ಪಾಂಡವರು ಅಜ್ಞಾತ ವಾಸಕ್ಕಾಗಿ ವಿರಾಟರಾಜನನ್ನು ಆಶ್ರೈಸಿದರೆಂಬುದು ಗೌಣವು. ಪರಮ ಭಕ್ತನಾದ ವಿರಾಟನು ಕೀಚಕನ ಕೈಗೊಂಬೆಯಾಗಿದ್ದು ಅವನ ಅಧರ್ಮ ಪ್ರವೃತ್ತಿಯನ್ನು ನಿಯಂತ್ರಿಸಲು ಅಸಮರ್ಥನಾಗಿದ್ದನು ಕೀಚಕನಿಂದ ಇವನಿಗೆ ಮುಕ್ತಿಯನ್ನು ಕರುಣಿಸಲೆಂದೇ ಅವರು ಇಲ್ಲಿಗೆ ಧಾವಿಸಿದರು. ಮುಕ್ತಿ ಯೋಗ್ಯರನ್ನು ರಕ್ಷಿಸುವುದು ಹಾಗೂ ತಮೋ ಯೋಗ್ಯರನ್ನು ನಿಗ್ರಹಿಸುವುದು, ಇದೇ ಭೀಮನ ಪ್ರತಿಜ್ಞೆ, ಅಂದಿನಿಂದ ಇಂದಿನವರೆಗೂ ಈತನದು ಇದೇ ಕೆಲಸ. ಇದಕ್ಕಾಗಿಯೇ ಇವರು ಕಾಡು ನಾಡುಗಳಲ್ಲಿ ಸಂಚರಿಸಿದರು. ಏಕಚಕ್ರನಗರದಲ್ಲಿ ಬಕಾಸುರನ ಕಥೆಯನ್ನು ಮುಗಿಸಿದ್ದ ಭೀಮನು ವಿರಾಟನಗರದಲ್ಲಿ ಕೀಚಕನ ಕಥೆಯನ್ನು ಬರೆಸಬೇಕಾಗಿತ್ತು. ಮುಕ್ತಿ ಯೋಗ್ಯನಾದ, ಶಿವಪಾರ್ಷದನಾದ, ಉಷಾ ತಂದೆಯಾದ ಬಾಣಾಸುರನಲ್ಲಿ ಈ ಕೀಚಕನ ಆವೇಶವಿತ್ತು.

ಪಾಂಡವರು ಮತ್ಸ್ಯದೇಶದ ರಾಜಧಾನಿಯಾದ ವಿರಾಟನಗರವನ್ನು ಸೇರಿದ ಮೇಲೆ ಅಲ್ಲಿನ ದೇಶವು ಬಹುಬಗೆಯಿಂದ ಅಭಿವೃದ್ಧಿ ಪಥದಲ್ಲಿ ಸಾಗಿತು. ಭೀಮಸೇನನು ದರ್ವೀಧರ (ಸೌಟನ್ನು ಹಿಡಿದು)ನಾಗಿ ಪ್ರತಿನಿತ್ಯವೂ ನೂರಾರು ಖಂಡುಗ ("ನೂರಾರು ಖಂಡುಗ ಪಾಕಗೈದ ಹಸ್ತ" – ವಿ.ದಾ) ಅಡುಗೆಯನ್ನು ಮಾಡಿ ಸಾವಿರಾರು ಜನ ರಾಜ ಪರಿವಾರದವರಿಗೆ ಬಹು ರುಚಿಯಾದ ಅಡುಗೆಯನ್ನು ಬಡಿಸುತ್ತಿದ್ದನು. ಈತನ ಈ ಶಕ್ತಿಯನ್ನು ನೋಡಿದ ಜನರು ಆಶ್ಚರ್ಯಭರಿತರಾಗಿ ಶ್ಲಾಘಿಸುತ್ತಿದ್ದರು.

ಒಂದೊಮ್ಮೆ ವಿರಾಟ ಪತ್ನಿ ಮಹಾರಾಣಿ ಸುಧೇಷ್ಣಾದೇವಿಯ ತಮ್ಮನಾದ ಕೀಚಕನು ಭಗಿನೀ ದರ್ಶನಾರ್ಥವಾಗಿ ಅಂತಃಪುರಕ್ಕೆ ಬಂದನು. ಅಲ್ಲಿ ಅವನು ಕಂಡ ಆಶ್ಚರ್ಯವೆಂದರೆ ತಾನದುವರೆಗೂ ಅಂಥಾ ಸ್ಫುರದ್ರೂಪಿಯಾದ ಸ್ತ್ರೀರತ್ನವನ್ನು ಕಂಡಿರಲಿಲ್ಲ. ನೋಡಿದನು. ಮತ್ತೂ ಮತ್ತೂ ನೋಡಿದನು. ಆಪಾದ ಮೌಳೀತನಕ ನೋಡಿದನು. ತನ್ನ ತುಟಿಗಳನ್ನು ನಾಲಗೆಯಿಂದ ಸವರಿ ಕೊಂಡನು. ಲಜ್ಜಾ, ಭಯಗಳು ಹಾರಿ ಹೋಗಿದ್ದವು. ಪ್ರಸಂಗಾಧಿಕ್ಯತೆಯನ್ನು ಹೊಂದಿ ತಾನು ಕಂಡ ಲಲನಾ ಮಣಿಯ ವೃತ್ತಾಂತವನ್ನು ಕುರಿತು ತನ್ನ ಭಗಿನಿಯನ್ನು ಕೇಳಿದನು. ಆಗ ಸುಧೇಷ್ಣೆಯು ಈಕೆಯು ರಾಣಿವಾಸದವರ ಸೇವಕಿಯು. ವಿಶೇಷತಃ ಅಲಂಕಾರ ಕರ್ತ್ಯ-ತನ್ನ ಮಗಳಾದ ಉತ್ತರಾದೇವಿಯ ಯೋಗಕ್ಷೇಮ ಧಾರಕಳು ಎಂದು ತಿಳಿಸಿದಳು. ಆಗ ಕೀಚಕನು ಆಹಾ, ಅಷ್ಟೇ ತಾನೇ! ಸೇವಕಿ ಎಂದ ಮೇಲೆ ಎಲ್ಲಾ ಸೇವೆಗೂ ಸಿದ್ಧಳಾಗಿರಬೇಕು. ಈ ಸ್ತ್ರೀ ರತ್ನವನ್ನು ನನ್ನ ಅಂತಃಪುರಕ್ಕೆ ಕಳುಹಿಸು. ಅಲ್ಲಿ ಈಕೆಯು ಇಲ್ಲಿಗಿಂತಲೂ ಅಧಿಕವಾದ ಸೌಖ್ಯವನ್ನು ಹೊಂದುವಳು. ಸ್ತ್ರೀಮುಕ್ತಾಮಾಲೆಯಲ್ಲಿ ಈಕೆಯು ಪದಕ

ಸ್ಥಾನವನ್ನು ಪಡೆಯುವಳು. ಹುಂ. ಶೀಘ್ರವೇ ಈಕೆಯನ್ನು ವಿಚಾರಿಸಿ ಆಕೆಯ ಅಭಿಮತವನ್ನು ನನಗೆ ತಿಳಿಸು ಎಂದು ಹೇಳಿದನು. ಆಗ ಸಹಜವಾಗಿಯೇ ಮುಕ್ತಿ ಯೋಗ್ಯಳಾದ ಸುಧೇಷ್ಣಾ ದೇವಿಯು ಕೀಚಕನ ಅಭಿಲಾಷೆಯನ್ನು ಜರಿದು ಬುದ್ಧಿವಾದವನ್ನು ಹೇಳಿದಳು. "ವಿನಾಶಕಾಲೇ ವಿಪರೀತ ಬುದ್ಧಿ" ಎನ್ನುವಂತೆ ದಿನದಿನಕ್ಕೆ ಕೀಚಕನ ಒತ್ತಡವು ಹೆಚ್ಚಾಯಿತು ಮತ್ತು ನಿಷ್ಟುರ ನುಡಿಗಳಿಂದ ತನ್ನಕ್ಕನಿಗೆ ಆಜ್ಞೆಯನ್ನೇ ಮಾಡಿದನು. ಆ ಸೈರಂಧ್ರಿಯನ್ನು ತನ್ನ ಮನೆಗೆ ಕಳುಹಿಸಲೇ ಬೇಕೆಂದು ನಿರ್ವಾಹವಿಲ್ಲದೇ ಸುಧೇಷ್ಣಾ ದೇವಿಯು ದ್ರೌಪದಾದೇವಿಯಲ್ಲಿಗೆ ಬಂದು ಸವಿನುಡಿಗಳಿಂದ (ಸವಿ ನುಡಿ ಎಂಬುದು ಎಲ್ಲಾ ಕಡೆಗೂ ಸವಿಯಾಗುವುದಿಲ್ಲ ಇದೇ ದ್ವೈತ ಸಿದ್ಧಾಂತ) ಕೀಚಕನ ಅಭಿಲಾಷೆಯನ್ನು ಆಕೆಗೆ ತಿಳಿಸಿದಳು. ಇದಕ್ಕೆ ಹೌಹಾರಿದ ದ್ರೌಪದಿಯು "ಅಮ್ಮಾ ತಾಯಿ, ನಾನು ನಿನ್ನ ಉಪ್ಪನ್ನು ಉಂಡು ಕೇಡನ್ನು ಬಗೆಯಲಾರೆ. ನೀನು ಹೇಳುತ್ತಿರುವುದು ಅಧರ್ಮವಾದುದು. ಇದನ್ನು ನಾನು ಸ್ವಧರ್ಮವಿರುದ್ಧವಾದುದನ್ನು ಬಿಟ್ಟು ನಿಮ್ಮ ಸೇವೆಯನ್ನು ನಾನು ಮಾಡುತ್ತೇನೆಂದು ಮೊದಲೇ ಪ್ರತಿಜ್ಞಾ ಪೂರ್ವಕವಾಗಿಯೇ ನಿಮಗೆ ತಿಳಿಸಿಯೇ ಇಲ್ಲಿ ನೆಲೆಸಿರುತ್ತೇನೆ. ಮೇಲಾಗಿ ನನ್ನ ಪತಿಗಳು ಗಂಧರ್ವರು. ಅವರು ಅದೃಶ್ಯರಾಗಿ ಸದಾ ನನ್ನ ಹಿಂದೆಯೇ ಇರುತ್ತಾರೆ. ನಿನ್ನ ತಮ್ಮನನ್ನು ಕ್ಷಣಾರ್ಧದಲ್ಲಿ ಅವರು ಸಂಹರಿಸಲು ಸಮರ್ಥರು. ನನ್ನ ಮಾತಿನಲ್ಲಿ ಸಂಶಯ ಬೇಡ. ತಾಯಿ, ಈ ಪ್ರಸ್ತಾಪವನ್ನು ಬಿಟ್ಟು ಕ್ಷೇಮದಿಂದಿರಲು ನಿನ್ನ ತಮ್ಮನಿಗೆ ಹೇಳಮ್ಮಾ" ಎಂದು ರಾಣಿಯ ಕಾಲಿಗೆರಗಿ ಆ ದ್ರೌಪದಿಯು ಬೇಡಿಕೊಂಡಳು. ಸುಧೇಷ್ಣಾದೇವಿಗೆ ಧರ್ಮ ಸಂಕಟ ಒದಗಿತು. ಆಕೆಯು ಮತ್ತೂ ತಮ್ಮನಿಗೆ ಬುದ್ಧಿಯನ್ನು ಹೇಳಿದಳು. "ತಮ್ಮಾ ಕೇಳು, "ದಾಸೀ ಮಾನ ಧನಂ ಹಂತಿ। ಹಂತಿ ವೇಶ್ಯಾ ಧನಾಧಿಕಂ ॥ ಆಯುಷೀಂ ವಿಧವಾ ಹಂತಿ। ಸರ್ವಂ ಹಂತಿ ಪರಾಂಗನಾ॥" ಆದ್ದರಿಂದ ನೀನು ಆಕೆಯ ಆಸೆಯನ್ನು ಬಿಟ್ಟು ಸುಖವಾಗಿರು" ಎಂದು ಹೇಳಿದಳು. ಆದರೆ ಕೀಚಕನು ಕೇಳಲಿಲ್ಲ. ಅಂತಿಮ ಗಡುವನ್ನು ವಿಧಿಸಿದನು. ಸುಧೇಷ್ಣಾದೇವಿಯು ದ್ರೌಪದಿಗೆ ಬೆದರಿಕೆಯನ್ನು ಹಾಕಿದಳು.

ಧರ್ಮಮೂರ್ತಿಯಾದ ದ್ರೌಪದಿದೇವಿಗೆ ಧರ್ಮಸಂಕಟವೇ ಇಲ್ಲ. ಯಾಕೆಂದರೆ ಧರ್ಮ ರಕ್ಷಣ ದಕ್ಷದೀಕ್ಷಾಮಣಿ ಆಕೆ. ಕೀಚಕನ ಒತ್ತಡಕ್ಕೆ, ರಾಣಿಯ ಆಗ್ರಹಕ್ಕೆ ಆಕೆಯು ಒಳಗೊಳಗೇ ಹಿಗ್ಗಿ ಹೋದಳು. ಯಾಕೆಂದರೆ ಅವರು ಹೀಗೆ ಒತ್ತಡವನ್ನು ಹೇರದೆ ಸುಮ್ಮನಾಗಿ ಬಿಟ್ಟಿದ್ದರೆ ಆ ಕೀಚಕ ಮತ್ತು ಉಪ ಕೀಚಕರೆಂಬ ಲೋಕ ಕಂಟಕರೂ, ಅವೈಷ್ಣವರೂ, ವೈಷ್ಣ ದ್ವೇಷಿಗಳೂ, ವೈಷ್ಣವ ಧರ್ಮ ಪ್ರತಿಬಂಧಕರೂ ಆಗಿದ್ದ ಅವರನ್ನು ಧ್ವಂಸಮಾಡಲು ಅವಕಾಶವೇ ಆಗುತ್ತಿರಲಿಲ್ಲ. ಅವರ ಬಲಾತ್ಕಾರವೇ ಭಗವತ್ಪ್ರೀತಿ ಕಾರ್ಯಕ್ಕೆ ಸಾಧನವಾಯಿತೆಂದು ಹಿಗ್ಗಿದಳು. ಇದೇ ದ್ವೈತ ಸಿದ್ಧಾಂತದ ರಹಸ್ಯ.

ದ್ರೌಪದಾದೇವಿಯು ಲೋಕವಂತೆ ನಟಿಸುತ್ತ ಕಣ್ಣೀರನ್ನು ಸುರಿಸುತ್ತ ಮಹಾರಾಣಿಗೆ ಎರಗಿ ಕೆಲವು ದಿನಗಳ ಅವಧಿಯನ್ನು ನೀಡಲು ಬೇಡಿಕೊಂಡಳು ಸುಧೇಷ್ಣಾದೇವಿಗೂ ಸ್ವಲ್ಪ ಸಮಾಧಾನವಾಯಿತು. ತರುವಾಯ ದ್ರೌಪದಿಯು ರಹಸ್ಯವಾಗಿ ಭೀಮನನ್ನು ಸಂಧಿಸಿ ಕೀಚಕನ ವೃತ್ತಾಂತವನ್ನು ವಿಶದವಾಗಿ ತಿಳಿಸಿದಳು. ಇದನ್ನು ತಿಳಿದ ಭೀಮನು ಒಮ್ಮೆ ಕೀಚಕನು ಅರಮನೆಗೆ ಬಂದಿದ್ದಾಗ ತಕ್ಷಣವೇ ಅವನನ್ನು ಸಂಹರಿಸಲು ಎದುರಿಗಿದ್ದ ಮರವನ್ನು ಕಿತ್ತಲು ಹವಣಿಸಿ ಆ ಮರವನ್ನು ಅಡಿಯಿಂದ ತುದಿಯವರೆಗೆ ನೋಡಿದನು. ಆಗ ಭೀಮನ ಇಂಗಿತವನ್ನರಿತ ಧರ್ಮರಾಯನು ಎಲಾ ಬಾಣಸಿಗನೇ, ನೀನು ಆ ಮರವನ್ನೇಕೆ ನೋಡುತ್ತಿರುವಿ? ಆ ಮರವು ಇನ್ನೂ ಹಸಿಯಾಗಿಯೇ ಇದೆ. ಅದು ಈಗ ನಿನ್ನ ಕೆಲಸಕ್ಕೆ ಬರುವುದಿಲ್ಲ. (ಸೌದೆ ಹಸಿಯಾಗಿದ್ದರೆ ಉರಿಸಿ ಅಡಿಗೆ

ಮಾಡುವುದು ಕಷ್ಟ). ಇನ್ನೂ ಸ್ವಲ್ಪ ದಿನ ಕಳೆ" ಎಂದು ಹೇಳಿದನು. ಇದರರ್ಥವೇನೆಂದರೆ ಈಗಲೇ ನೀನು ಕೀಚಕನನ್ನು ಸಂಹರಿಸಿದರೆ ಕೌರವನಿಗೆ ನಮ್ಮ ಸುಳಿವು ಗೊತ್ತಾಗಿ ಬಿಡುತ್ತದೆ. ಅಜ್ಞಾತವಾಸವು ಭಂಗವಾಗುತ್ತದೆ. ಇನ್ನೂ ಸ್ವಲ್ಪೇ ದಿನಗಳು ಮಾತ್ರ ಉಳಿದಿರುವುದರಿಂದ ಆ ದಿನಗಳು ಕಳೆದ ಮೇಲೆ ಸಂಹರಿಸು. ಅಲ್ಲಿಯವರ ದ್ರೌಪದಿಯು ನೆಪಗಳಿಂದ ಪಾರಾಗುತ್ತಲಿರಲಿ. ಕಾಮಾಂಧರು ಸ್ತ್ರೀಯರ ಮಾತಿಗೆ ಕೊಳಲ ಧ್ವನಿಗೆ ಸರ್ಪವು ತಲೆದೂಗುವಂತೆ ತಲೆದೂಗುತ್ತಾರೆ. ಕ್ಷಣವನ್ನು ಯುಗವಾಗಿಯೂ, ಯುಗವನ್ನು ಕ್ಷಣವನ್ನಾಗಿಯೂ ಕಳೆಯುತ್ತಾರೆ. ನಮ್ಮ ಅಜ್ಞಾತ ವಾಸಾವಧಿಯು ಕಳೆದ ಮರುದಿನವೇ ಅವನ ಸಂಹಾರ ಮಾಡುವುದು ಉಚಿತ ಎಂದು ಸಂಜ್ಞೆಯಿಂದ ಸೂಚಿಸಿದನು. (ಋಜುಪುಂಗವನಿಗೆ ಧರ್ಮರಾಯನು ಮಾಡಿದ ಸೇವೆ ಇದು.

ಕಾಲಪ್ರವಾಹವು ವೇಗಾತಿವೇಗಮಯವಾದುದು. ಚಾಂದ್ರಮಾನ, ಸೌರಮಾನಗಳೆರಡಕ್ಕೂ ಸಮ್ಮತವಾಗಿ ಪಾಂಡವರ ಹನ್ನೆರಡು ವರ್ಷ ವನವಾಸವೂ ಒಂದು ವರ್ಷ ಅಜ್ಞಾತ ವಾಸವೂ ಮುಗಿದು ಹೋಯಿತು. ವಿಷಯಾಭಿಲಾಷೆಯಲ್ಲಿ ಮುಳುಗಿ ಭಗವದ್ವಿಮುಖರಾದ ಖೂಳರಿಗೆ ದಿನಗಳುರುತ್ತಿರುವುದು ಗಮನಕ್ಕೆ ಬರುವುದೇ ಇಲ್ಲ. "ತಿಳಕೋ ನಿನ್ನೊಳಗೆ ನೀನು! ಅಳಕೋ ಪೋದಾಯುಷ್ಯ" ಎಂದು ಎಚ್ಚರಿಸಿದರು. ಶ್ರೀನರಹರಿ ತೀರ್ಥರು.

ಕಾಮಾಂಧನಾದ ಕೀಚಕನನ್ನು ಸಂಹರಿಸಲು ಕಾಲವು ಪಕ್ವವಾಗಿ ಒದಗಿತು. ಭೀಮಸೇನನು ಗೌಪ್ಯವಾಗಿ ದ್ರೌಪದಿಯನ್ನು ಸಂಧಿಸಿ ಕೀಚಕನಲ್ಲಿಗೆ ತಾನು ಹೋಗಲು ಸಮ್ಮತಿಸಿರುವವಳಾಗಿ ಸುಧೇಷ್ಣ ದೇವಿಗೆ ಹೇಳಿ ಆಕೆಯಿಂದ ಸ್ತ್ರೀ ಸಹಜವಾದ ಸಮಸ್ತ ಭೋಗವಸ್ತುಗಳನ್ನು ಸಂಗ್ರಹಿಸಿ ತನಗೆ ಕೊಡಬೇಕೆಂದು ಕೇಳಿಕೋ. ಆ ಮಹಾರಾಣಿಯು ತಪ್ಪದೆ (ಎಲ್ಲವನ್ನೂ ನೀಡುತ್ತಾಳೆ. ನೀನು ಅವುಗಳನ್ನು ಪಡೆದುಕೊಂಡು ಬಂದು ನನಗೆ ಒಪ್ಪಿಸು. ತರುವಾಯ ತಾನು ಕೀಚಕನನ್ನು ಏಕಾಂತವಾದ ಸ್ಥಳದಲ್ಲಿ ಮಾತ್ರ ಸಂಧಿಸುವೆನೆಂದೂ ಅದಕ್ಕೆ ಊರ ಹೊರಗಿನ ಗರಡಿ ಮನೆಯು ಪ್ರಶಸ್ತವಾದುದೆಂದೂ ತಿಳಿಸಲು ಹೇಳು. ಆಗ ಆ ಕೀಚಕನು ಪತಂಗದ ಹುಳು ಅಗ್ನಿಯನ್ನು ಹಾಯುವಂತೆ ವಿವೇಚನಾ ಶೂನ್ಯನಾಗಿ ಅಲ್ಲಿಗೆ ಧಾವಿಸುತ್ತಾನೆ. ಅಲ್ಲಿಗೆ ಅವನ ಕಥೆಯು ಪುರಾಣಗಳ ಪುಟವನ್ನು ಸೇರುತ್ತದೆ. ಎಂದು ಹೇಳಿದನು. ಆಗ ದ್ರೌಪದೀದೇವಿಯು ಪರಮಾನಂದ ಭರಿತಳಾದಳು.

ಸಕಾಲದಲ್ಲಿ ದ್ರೌಪದಿಯು ಸುಧೇಷ್ಣೆಯನ್ನು ಸಂಧಿಸಿ ಬಹು ಪರಿಯಾದ ಸ್ತ್ರೀ–ಪುರುಷ ಭೋಗವಸ್ತುಗಳನ್ನು ತನಗೆ ನೀಡಿದರೆ ತಾನು ಕೀಚಕನನ್ನು ಸಂಧಿಸುವೆನೆಂದು ಹೇಳಿದಳು. ತಕ್ಷಣವೇ ಸುಧೇಷ್ಣೆಗೆ ಪರಮಾನಂದವಾಯಿತು. (ಆಕೆಯ ಸ್ವರೂಪಕ್ಕೆ ಸಲ್ಲಬೇಕಾಗಿದ್ದ ಆನಂದವು ಮಾತ್ರ ಅನಭಿವ್ಯಕ್ತವಾಗಿ, ರಹಸ್ಯವಾಗಿಯೇ ಉಳಿದಿತ್ತು.) ಸಮಸ್ತವಾದ ಭೋಗವಸ್ತುಗಳನ್ನು ಆಕೆಯು ದ್ರೌಪದಿಗೆ ನೀಡಿ ಅಲ್ಲಿಂದ ಬೀಳ್ಕೊಟ್ಟಳು. ಮಹಾರಾಣಿಯು ನೀಡಿದ ವಸ್ತುಗಳು ಬಹಿರಂಗದಲ್ಲಿ ಬಳುವಳಿಗಳಾಗಿದ್ದರೂ ಅಂತರಂಗದಲ್ಲಿ ಮಾತ್ರ ಅವು ಕೀಚಕನ ವಧೆಗಾಗಿ ನೀಡಿದ ಗುಪ್ತ ಧನವೇ ಆಗಿತ್ತು. ಆಕೆಯು ಮುಕ್ತಿ ಯೋಗ್ಯಳಾದುದರಿಂದ.

ದ್ರೌಪದಾದೇವಿಯ ಮುಖಾಂತರವಾಗಿ ಪ್ರಾಪ್ತವಾಗಿದ್ದ ಮಹಾರಾಣಿ ದತ್ತ ದ್ರವ್ಯಗಳನ್ನು ನೋಡಿ ಭೀಮನು ಪರಮಾನಂದ ಭರಿತನಾದನು. ಬ್ರಹ್ಮಾಂಡದಲ್ಲಿ ಭಗವಂತನಂತೆ ಸರ್ವಸಾರ ಭೋಕ್ತನೂ, ಭೋಗ್ಯ, ಭೋಕ್ತೃ ರೂಪನೂ, ಮೂಲ ಭೇದ ವಿವರ್ಜಿತನೂ ಆದ ಭೀಮನಿಗೆ ನಿಷಿದ್ಧವಾದುದು ಯಾವುದಿದೆ? ವಿಸ್ಮೃತಿ ಎಂಬುದಂತೂ ಈತನ ಪಾಲಿಗೆ ರವಿಯನ್ನು ಕಂಡ ಕತ್ತಲೆಯೇ ಸರಿ.

ಪ್ರಥಮ ಶಯ್ಯಾಗೃಹ ಭೂಷಣವಾದ ಸುಪ್ಪತ್ತಿಗೆಯ ಮೇಲೆ ದ್ರೌಪದಿಯೊಡನೆ ಮಂಡಿಸಿದ ಭೀಮನು ಲಾಡು, ಜಿಲೇಬಿ, ಫೇಣಿ, ಚಕ್ಕುಲಿ, ದ್ರಾಕ್ಷಿ, ಗೋಡಂಬಿ ಮಿಶ್ರಿತವಾದ ಸಿಹಿ ತಿಂಡಿಗಳನ್ನು ಯಥೇಚ್ಛವಾಗಿ ಸವಿದನು. ಬುರುಬುದಿ, ಚಕ್ಕುಲಿ, ಬೂಂದಿಗಳನ್ನು ಮುಕ್ಕಿದನು. ಕಡುಬು, ಗಿಲಗಿಂಚಿ, ಚಿಟಗಾಳು, ಕೋಡುಬಳೆಗಳನ್ನು ಜಗಿದನು. ಕಡ್ಲೆಉಂಡೆ, ಕಡ್ಲೆಕಾಯಿ ಬೀಜದ ಉಂಡೆ, ಅರಳುಂಡೆ, ಬೇಸನ್ ಉಂಡೆ, ರವೆ ಉಂಡೆಗಳನ್ನು ನುಂಗಿದನು. ತರುವಾಯ ಒಡೆ, ಗಾರಿಗೆಗಳನ್ನು ಕೇಳಿದನು. ಅದಕ್ಕೆ ದ್ರೌಪದಿಯು ನಸು ನಕ್ಕು ಅವು ಈಗ ಬೇಡ ಕೀಚಕನ ವಧೆಯಾದ ಮೇಲೆ ಸಿಗುತ್ತವೆ ಎಂದಳು. ಅದಕ್ಕೆ ತಲೆತೂಗಿದ ಭೀಮನು ಬಾದಾಮಿ ರುಬ್ಬಿ ಸಕ್ಕರೆ ಕೇಸರಿ ಹಾಕಿ ಭಟ್ಟಿ ಇಳಿಸಿದ್ದ ಹಾಲನ್ನು ಗಟ, ಗಟನೆ ಕುಡಿದು ಪಾತ್ರೆಯನ್ನು ಬೋರಲಿಟ್ಟನು. ಅಡಿಕೆ, ಸುಣ್ಣ, ಯಾಲಕ್ಕಿ, ಲವಂಗ, ಜಾಕಾಯಿ, ಜಾಪತ್ರಿ, ಕೊಬ್ರಿ, ಸಕ್ಕರೆ, ಪಚ್ಚಕರ್ಪೂರ, ಗೇರು ಬೀಜ, ಮದಜನಕ ದ್ರವಲೇಪನದಿಂದ ಯುಕ್ತವಾದ ಚಿಗುರು ವೀಳೆದೆಲೆಯ ತಾಂಬೂಲವನ್ನು ಬಾಯಿ ತುಂಬಾ ತುರುಕಿ ಕೊಂಡನು. ಊರ್ಧ್ವಾಧರೋಷ್ಟಗಳು ತೊಂಡೇ ಹಣ್ಣಿನಂತೆ ಕೆಂಪಾದುವು. ಈ ಗಾಳಿ ದೇವನಿಂದ ಆ ಗರಡಿ ಮನೆಯು ಸುವಾಸನೆ ಭರಿತವಾಯಿತು.

ತರುವಾಯ ಭೀಮನು ಸೀರೆಯನ್ನುಟ್ಟನು. ಅಬ್ಬಬ್ಬಾ ಅದೆಂಥಾ ರೇಷ್ಮೆಯ ಚೀನಾಂಬರ ಅದು! ಬಂಗಾರದ ಜರಿಮಯ. ಅದಕ್ಕೊಪ್ಪುವ ಕುಪ್ಪುಸ. ಭೀಮನು ಉಟ್ಟನು, ತೊಟ್ಟನು, ಸೀರೆಯು ಸಡಲಿ, ನಾಭಿ, ಸೊಂಟಗಳು ಕಾಣುತ್ತಿದ್ದವು. ಕಾಲುಂಗುರಗಳು, ಅದರ ಮೇಲೆ ಝುಣ, ಝುಣ ಕಿರುಗೆಜ್ಜೆಗಳು, ಅದರ ಮೇಲೆ ಥೋರವಾದ ಕಡಗ, ಖುಳಿ, ಮೀನಖಂಡ ಕಾಣುವಷ್ಟು ಎತ್ತರವಾಗಿ ಉಟ್ಟಿದ್ದ ಸೀರೆ ಅಂಚು, ನಡುವಿಗೆ ರತ್ನ ಖಚಿತವಾದ ಒಡ್ಯಾಣ (ಡಾಬು). ಎರಡು ಕೈಗಳಿಗಂತೂ ತುಂಬಾ ಬಳೆಗಳು ಬಂಗಾರದ ಕಂಕಣಗಳು. ಮಣಿ ಖಚಿತಮಯವಾದವುಗಳಾಗಿದ್ದುವು. ಹತ್ತು ಬೆರಳುಗಳಿಗೆ ವಜ್ರವೇ ಮೊದಲಾದ ರತ್ನಗಳ ಕೆತ್ತನೆಯ ಉಂಗುರಗಳು, ಅಂಗೈ ಮುಂಗೈಗಳಿಗೆ ಮೇಂದಿ ಲಿಖಿತ ಚಿತ್ರಗಳು ಛಾಪಿಸಿದ್ದುವು. ಬಿಗಿ ತೋಳಿನ ಕುಪ್ಪುಸವು ಮೇಲಕ್ಕಿದ್ದ ರಟ್ಟೆಗಳೆರಡನ್ನು ತೋಳುಬಂದಿಗಳು ಅಲಂಕರಿಸಿದ್ದುವು. ಆ ಕುಪ್ಪುಸವು ಇಬ್ಬದಿಗಳಲ್ಲಿ ಬುಗುರಿಯಂತೆ ಉಬ್ಬಿದ ಕುಚದ್ವಯುಗಳನ್ನು ನಿಮಿತ್ತ ಮಾತ್ರ ಅಚ್ಛಾದಿಸಿದ್ದು ಎರಡು ಮೊನಚುಗಳಿಗೂ ಮುತ್ತಿನ ಗೊಂಚಲಗಳು ಉಯ್ಯಾಲೆಯಾಡುತ್ತಿದ್ದುವು. ಮಧ್ಯೆ ಹಾದು ಹೋದ ಮಡಚಿದ ಸೆರಗು ಉಪಯೋಗವಾಗಿರಲಿಲ್ಲ. ಕೊರಳಲ್ಲಿ ಹಾಕಿಕೊಂಡಿದ್ದ ಪರಿಪರಿ ವಿಧವಾದ ಬಂಗಾರದ ಒಡವೆಗಳು ಸರಗಳು 'ಶ್ರೀ' ಯಾಗಿ ಕಾಣುತ್ತಿದ್ದುವು ಮತ್ತೂಗೋ ಮುಖ ರೇಖೆಯಂತೆ ಕಾಣುತ್ತಿದ್ದುವು ಆ ಸರಗಳು.

ಥಳಥಳಿಸುವ ಭುಜಕೀರ್ತಿಗಳು, ವಂಕಿ, ನಾಗಮುರಿಗಿಗಳು, ಕಣ್ಣುಗಳನ್ನು ಕೋರೈಸುತ್ತಿದ್ದುವು ಮೂಗಿಗೆ ಇತ್ತು ವಜ್ರದ ಮೂಗುತಿ. ಚಳ್ಳೇ ಹಣ್ಣಿನ ಗಾತ್ರದ ಮುತ್ತಿನ ಬುಲಾಕು. ಕಿವಿಗಳೆರಡಕ್ಕೂ ವಜ್ರದ ಓಲೆಗಳು ಅವುಗಳನ್ನು ಸ್ವಲ್ಪ ಅಲ್ಲಾಡಿಸಿದರೂ ಸಾಕು. ಗಿರ್ರೆಂದು ತಿರುಗುತ್ತಿದ್ದ ಹರಳುಗಳಿಂದ ಅಲಂಕೃತವಾದ ಲೋಲಕಗಳು, ಬುಗುಡಿ ಕಡ್ಡಿಗಳು. ಇವುಗಳನ್ನು ಧರಿಸಿದ ಮೇಲೆ ಭೀಮನು ಜಡೆಯನ್ನು ಹಾಕಿಸಿಕೊಂಡನು. ಅಬ್ಬಾ! ಆ ಜಡೆಯ ವೈಖರಿಯೇ ಒಂದು ಬಗೆ. ಅದು ಮುಡಿಯಿಂದ ಅಡಿಯವರೆಗೇ ಕಾಳ ಸರ್ಪದಂತೆ ಇದ್ದು ತಲೆಯನ್ನು ಸ್ವಲ್ಪ ಮೇಲಕ್ಕೆತ್ತಿದರೆ ಸಾಕು. ಅದು ನೆಲಕ್ಕೆ ತಾಕುತ್ತಿತ್ತು. ಜಡೆಬಿಲ್ಲೆ, ನಾಗರ, ಮೊಗ್ಗುಗಳು ಮಾತ್ರವಲ್ಲದೆ ಇಡೀ ಜಡೆ ಉದ್ದದ ಹೆರಳು ಬಂಗಾರವು ಶೋಭಿಸುತ್ತಿತ್ತು. ಆ ಜಡೆ ಬಂಗಾರದ ಮಧ್ಯದಲ್ಲಿ ಅಲ್ಲಲ್ಲಿ ಕಾಳಿಮರ್ದನ ಕೃಷ್ಣ, ಪದ್ಮಾಲಯ ಲಕ್ಷ್ಮೀ, ಮೊದಲಾದ ಕೆತ್ತನೆಗಳು, ಕೊನೆಗೆ ಗೊಂಡೆ. ಹೆಜ್ಜೆ ಹಾಕಿದಂತೆಲ್ಲಾ ಆ ಜಡೆಯು ಆನೆಯ ಸೊಂಡಿಲಿನಂತೆ ನಿತಂಬದ್ವಯಗಳ ಮೇಲೆ

ಉಯ್ಯಾಲೆಯಾಡುತ್ತಿತ್ತು. ಮುಡಿದ ಹೂವು, ಅದರದೇ ಒಂದು ಬಗೆ. ನೆತ್ತಿಯ ಬೈತಲೆಯು ವರ್ಣಮಯ ಹರಳು ಖಚಿತವಾದ ಬಂಗಾರದ ಕಟ್ಟಿಯೊಂದಿಗೆ ಹಣೆಪದಕಯುಕ್ತವಾಗಿ ಶೋಭಿಸುತ್ತಿತ್ತು. ಇದೆಲ್ಲಕ್ಕೂ ಅಲಂಕೃತವಾಗಿ ಕಸ್ತೂರೀ ತಿಲಕವು 'ತಿಲಕ' ನಾಮ ಸಾರ್ಥಕವಾಗಿತ್ತು. ಭೀಮನು ತಾನು ಸರ್ವಸಾರಭೋಕ್ತನೆಂಬುದನ್ನು ಈ ರೀತಿಯಾಗಿ ಪುರ ಗಣಕ್ಕೆ ತೋರಿದನು.

ಚಂದ್ರಮನಂತೆ ಬೆಳ್ಳಗಿನ ವದನ, ಕಮಲನಯನ, ಸಂಪಿಗೆ ನಾಸ (ಮೂಗು) ದಾಳಿಂಬ ದಂತ, ಕೂರ್ಮೋರ್ಧ್ವ ಕಪೋಲದ್ವಯಗಳು, ದಾಸವಾಳ ದಳ ಸಮಕರ್ಣಗಳು, ಕಂಬುಕಂಠ, ವಿಶಾಲವಾದ ವಕ್ಷಸ್ಥಳ, ಮಧ್ಯ ಕಣಿವೆ, ಕರಿಕರಬಾಹು ಯುಗ್ಮಗಳು, ಸಿಂಹಕಟಿ, ಗಜ ಕುಂಭ ನಿತಂಬ, ರಂಭೋರುದ್ವಯಗಳು, ಅರುಣವರ್ಣ ಅಂಗ್ಘ್ರಿ ಚರಣಗಳು ಸ್ಮರಣೀಯವಾಗಿದ್ದುವು.

ಕೇಶವರ್ಣಕ್ಕೆ ದುಂಬಿಗಳು ಗುಣಗಾನ ಮಾಡಿದುವು. ನಯನ ಚಂಚಲಕ್ಕೆ ಚಿಗರೆಗಳು ಓಡಿದುವು. ಓಷ್ಠ ವರ್ಣವನ್ನು ನೋಡಲಿಕ್ಕೆ ಗಿಳಿ ಹಿಂಡುಕೂಡಿದವು. ಕಂಠಧ್ವನಿಗೆ ಕೋಗಿಲೆಗಳು ಹಾರಾಡಿದುವು. ನಡಿಗೆಯನ್ನು ಹಂಸ, ನವಿಲು, ಆನೆಗಳು ನಿಂತು ನೋಡಿ ನಾಚಿದವು. ಸೂರ್ಯನು ("ಆದಿತ್ಯೋವೈ ಪ್ರಾಣಃ" ಎಂದರೆ ಸೂರ್ಯನಲ್ಲಿ ಅಂತರ್ಯಾಮಿಯಾಗಿ ವಾಯು ದೇವ-ಭೀಮನು ಇರುವನು). ಈತನು ಈಗ ಚಂದ್ರಮನು ಆದನು. ಅಂದರೆ ದ್ರೌಪದೀದೇವಿಯಂತೆ ವೇಷವನ್ನು ಧರಿಸಿದನು. (ದ್ರೌಪದೀದೇವಿಯು ಭಾರತೀದೇವಿಯೇ ಆಗಿರುವಳು. ಈಕೆಯು ಚಂದ್ರನಲ್ಲಿ ಅಂತರ್ಯಾಮಿಯಾಗಿರುವಳು. "ರಯಿರೇವ ಚಂದ್ರಮಾ") ಆದ್ದರಿಂದ ಈಕೆಯೇ ಚಂದ್ರಮಳೆನಿಸುವಳು ಎಂದು ಷಟ್ಪ್ರಶೋಪನಿಷತ್ತು ಹೇಳುತ್ತದೆ. ಋಜುಗಣಸ್ಥಳೂ, ಮೂವತ್ತೆರಡು ಲಕ್ಷಣಗಳುಳ್ಳವಳೂ. ಆದ ಭಾರತೀದೇವಿಯ ಅವತಾರಳೂ ಆದ ದ್ರೌಪದಿಯಲ್ಲಿ ಪ್ರಸ್ತುತ ವರ್ಣಿತವಾದ ಸಕಲ ರೂಪಲಾವಣ್ಯಗಳು ಇದ್ದುದರಿಂದ ಭೀಮನು ದ್ರೌಪದಿಯೇ (ಚಂದ್ರನೇ) ಆದನೆಂಬುದು ಯುಕ್ತವೇ ಸರಿ. (ಕೀಚಕನು ಬಯಸಿದುದು ದ್ರೌಪದಿಯನ್ನು ತಾನೇ? ಅದಕ್ಕಾಗಿಯೇ ಭೀಮನು ಆಕೆಯಂತೆ ಆದನು. ಝುಂಝಾನಿಲ ಸುತನೇ ಮಂದಾನಿಲನಾದನು, ದುಷ್ಟ ಸಂಹಾರಕ್ಕಾಗಿ ಒದಗಿದ ಆ ಕಾಲವೇ (ವ)ಸಂತ (ಸ) ಕಾಲವಾಗಿತ್ತು. ಆತನು ಅನಂತ ರೂಪನೂ, ಭೂ, ಗಗನ, ಜಲಚರಾದಿ ವಿಶೇಷವಾಗಿ ಮೂರು ಕೋಟಿ ರೂಪಧರನೂ ಎಂಬುದನ್ನು ಸುರರಿಗೆ ತೋರಿದನು. ಒಟ್ಟಾರೆ ಹೇಳಬೇಕೆಂದರೆ ಭೀಮನ ಈ ಕಾಮಿನೀ ರೂಪವು ಹೇಗಿತ್ತೆಂದರೆ ಯಾವ ಶ್ರೀಹರಿಯು ಅಸುರ ಮೋಹನಾರ್ಥವಾಗಿ ಮೋಹಿನೀ ರೂಪವನ್ನು ಧರಿಸಿ ಸುರರಿಗೆ ಅಮೃತವನ್ನು ನೀಡಿದನೋ ಅದೇ ಮೋಹನೀ ರೂಪದಿಂದ ದೇವೋತ್ತುಮನಾದ ಮದನಾರಿ ಎನಿಸಿದ್ದರೂ ಆ ಮಹಾದೇವನನ್ನೇ ಮರುಳು ಮಾಡಿಬಿಟ್ಟನೋ ಮತ್ತು ಯಾವ ಇಂಥಾ ಮೋಹಿನೀ ರೂಪದಿಂದಲೇ ವೃಕಾಸುರನನ್ನು ಭಸ್ಮೀಭೂತನನ್ನಾಗಿ ಮಾಡಿಬಿಟ್ಟನೋ ಅಂಥಾ ಮೋಹಿನಿಯ ಪ್ರತಿಬಿಂಬನೆನಿಸಿಯೇ ಈ ಭೀಮನು ಆತನ ಪ್ರೀತ್ಯರ್ಥವಾಗಿ ಸ್ತ್ರೀರೂಪವನ್ನು ಧರಿಸಿದನು. "ಭಾರತೀ ದೇವಿಯು ಮನಸಿಗೊಪ್ಪಿದ ಚರಣ" ನಾದ ಈ ಭೀಮನ ಸ್ತ್ರೀ ರೂಪವನ್ನು ನೋಡಿದ ಸ್ತ್ರೀರೂಪಾಭಿಮಾನಿ ದೇವಿಯರಾದ ಶಚಿ, ರತಿಯರು ಸಹ ಆಶ್ಚರ್ಯಚಕಿತರಾಗಿ "ಅಮಲ ಮನದಿ ತಲೆಯ ದೂಗಿದರ"ಂತೆ

(ಸ್ತ್ರೀರೂಪಕ್ಕೆ ಮರುಳಾಗುವವರು ಅಸುರರು. ಅಸುರರ ಮೋಹನಾರ್ಥವಾಗಿಯೇ ಸ್ತ್ರೀವರ್ಣನೆಯು ಇರುತ್ತದೆ. ಸ್ತ್ರೀಯರಿಗಾಗಿ ದೈತ್ಯರು ಅಮೃತ (ಜ್ಞಾನ)ವನ್ನೂ ಪ್ರಾಣಗಳನ್ನು ಕಳೆದು ಕೊಂಡರು. ಜ್ಞಾನಿಗಳು ಸ್ತ್ರೀವರ್ಣನೆಯಲ್ಲಿ ಜಗನ್ಮಾತೆ ಲಕ್ಷ್ಮೀಯನ್ನು ಚಿಂತಿಸಿ ಪೂತಾತ್ಮರಾಗಿ ಉದ್ಧಾರವಾಗುತ್ತಾರೆ)

ಈ ರೀತಿಯಾಗಿ ವರ್ಣಿತನಾದ ಭೀಮನು ಸಂಜೆಯ ಸಮಯಕ್ಕೆ ಊರಿಂದಾಚೆಯ ಗರಡಿ ಮನೆಯನ್ನು ಪ್ರವೇಶಿಸಿದ್ದನು. ಅಲ್ಲಿ ನಿಶ್ಚಿತವಾದ ಸಮಯವು ಸಮೀಪಿಸುತ್ತಿದ್ದಂತೆಯೇ ಕೀಚಕನೂ ಅಲಂಕಾರ ಭೂಷಿತನಾಗಿ ದರ್ಪ, ಬಿಂಕ, ಬಿನ್ನಾಣಗಳಿಂದ ಆ ಗರಡಿ ಮನೆಯನ್ನು ಪ್ರವೇಶಿಸಿದನು. ಆಗ ಭೀಮನು ಕೀಚಕನು ಬಂದುದನ್ನು ನೋಡಿ ಸೋಗಲಾಡಿ ನಟನೆಯನ್ನು ತೋರುತ್ತ ತನ್ನ ಮುಖಕ್ಕೆ ಮುಸುಕನ್ನು ಎಳೆದುಕೊಂಡು ಮುಗುಳ್ನಗೆಯಿಂದ ಮುಖವನ್ನು ತಿರುಗಿಸಿಕೊಂಡನು. ಆಗ ಕೀಚಕನು ಉಬ್ಬಿ "ಸೊಗ್ಗಿಡೇ ನಿನ್ನ ಗುಣಕಾಮಿನೀ – ಗುಣಕಾಮಿನೀ – ಗುಣಕಾಮಿನೀ –ಹೀಗೆ ತಿರುಗೆ ಭಾಮಿನೀ" ಎಂದು ಹೇಳುತ್ತಾ ಮುಸುಕಿಗೆ ಕೈಹಾಕಿ ಮೇಲೆತ್ತಿದನು. ಆ ತಕ್ಷಣವೇ ಭೀಮನು ತನ್ನ ಎಡಗೈಯಿಂದ ಫಟೀರನೆ ಅವನ ಮುಖಕ್ಕೆ ಝಾಡಿಸಿದ್ದೇ ತಡ, ಕೀಚಕನ ಮೂಗಿನಿಂದ ರಕ್ತಧಾರೆಯು ಸುರಿಯಲಾರಂಭಿಸಿತು. ಕಣ್ಣುಗಳು ಮಿಂಚಿದುವು ಭೀಮನ ಗುಡುಗಿಗೆ ಕೀಚಕನ ಎದೆಯು ನಡುಗಿತು. ಭುಜ ತಟ್ಟಿದ ನಿನಾದವು ಸಿಡಿಲಿನಂತೆ ಕೀಚಕನ ಕರ್ಣಭೇರಿಗಳನ್ನು ಕತ್ತರಿಸಿದುವು. ಅನಿರೀಕ್ಷಿತವಾದ ಈ ಘಟನೆಯಿಂದ ಭಯವಿಹ್ವಲನಾದ ಕೀಚಕನ ಮೈಯಲ್ಲಿ ಸ್ವೇ (ಬೆವರು) ವೃಷ್ಟಿಧಾರೆಯು ಸುರಿಯಿತು. ಕೀಚಕನಿಗೆ ಪರಿಸ್ಥಿತಿಯು ಅರ್ಥವಾಯಿತು. ಶೀಘ್ರವಾಗಿಯೇ ಚೇತರಿಸಿಕೊಂಡನು ಮತ್ತು ಭೀಮನತ್ತ ನೋಡುತ್ತಾ "ಎಲೋ ನೀನಾರು? ಇಲ್ಲಿಗೆ ಏತಕ್ಕಾಗಿ ಬಂದೆ?" ಎಂದು ಗುಡುಗಿದನು. ತಕ್ಷಣವೇ ಭೀಮನು ತಾನುಟ್ಟು ತೊಟ್ಟಿದ್ದ ಬೆಡಗಿನ ವೇಷ ಭೂಷಣಗಳನ್ನು ಕಿತ್ತೆಸೆದು ತನ್ನ ಉಕ್ಕಿನ ಮುಷ್ಟಿಯನ್ನು ತೋರಿದನು. ಕೀಚಕನೇನು ಸಾಮಾನ್ಯನೇ? ಅವನೂ ತನ್ನ ಮುಷ್ಟಿಯನ್ನು ಮುಂದು ಮಾಡಿ ಮುನ್ನುಗ್ಗಿದನು. ಮುಷ್ಟಿ ಪರ್ವತಗಳೆರಡರ ಘರ್ಷಣೆಯಿಂದ ಕಿಡಿಗಳು ಹಾರಿದುವು. ಪರಸ್ಪರರ ಫಟಾ – ಫಟಿ, ಫಟಾ – ಫಟಿ, ಮಾರಾ – ಮಾರಿಗಳು ಭಯಾನಕವಾಗಿ ತೋರಿದುವು. ಮೂಲ ರೂಪದಿಂದ ವೀಕ್ಷಿಸುತ್ತಿದ್ದ ದೇವ ದಾನವರೂ ಉಸಿರುಗಟ್ಟಿ ನೋಡುತ್ತಿದ್ದರು. ಸ್ವಲ್ಪ ಕಾಲದ ಈ ಹೋರಾಟಕ್ಕೆ ಭೀಮನು ಕೀಚಕನಿಗೆ ಅವಕಾಶವನ್ನು ಮಾಡಿಕೊಟ್ಟುದು ಅವನ ಸ್ವರೂಪ, ಸಾಮರ್ಥ್ಯವನ್ನು ದೇವತೆಗಳಿಗೆ ಪ್ರಕಟಿಸಲಿಕ್ಕೆ ಮತ್ತು ರುದ್ರವರ ಬಲವನ್ನು ಅತಿಕ್ರಮಿಸಿ ತಾನು ರುದ್ರಾತ್‌ಪರನೆಂಬುವ ಯಥಾರ್ಥವಾದ ಜ್ಞಾನವನ್ನು ಅವರಿಗೆ ನೀಡಲಿಕ್ಕೆ. ಈ ಭೀಮ – ಕೀಚಕರ ಕಾದಾಟವು ಮಾರ್ಜಾಲ – ಮೂಷಕಗಳ ಕಾದದಾಟದಂತೆಯೇ ಇತ್ತು. ಬೆಕ್ಕು ಇಲಿಯನ್ನು ತಕ್ಷಣವೇ ನುಂಗುವುದಿಲ್ಲ. ಸ್ವಲ್ಪ ರಣ ಕ್ರೀಡೆಯನ್ನು ತೋರಿಸಿ ಆಮೇಲೆ ನುಂಗುತ್ತದೆ. ಹಾಗೆಯೇ ಉಭಯರು ಪಟ್ಟಾ – ಪಟ್ಟಿಗಳನ್ನು ವಿನಿಮಯ ಮಾಡಿಕೊಳ್ಳುತ್ತ ಊರ್ಧ್ವೋತ್ತರರಾಗಿ ಉರುಳುತ್ತಾ ಕಾದಾಡಿದರು. ತರುವಾಯ ಇನ್ನು ಸಾಕೆಂದು ಭೀಮನು ಕೀಚಕನ ತಲೆಯ ಮೇಲ್ ಪಿಷ್ಟಾಂತ ಮುಷ್ಟಿ ಪ್ರಹಾರವನ್ನು ಮಾಡಲಾಗಿ ಅವನ ಶಿರಸ್ಸು ಅವನ ಹೊಟ್ಟೆಯನ್ನು ಸೇರಿತು. ಹಾಗೆ ಭೀಮನು ಅವನ ಶಿರಸ್ಸಿನ ಮೇಲೆ ಗುದ್ದಿದನು ಮತ್ತು ಅವನ ದೇಹವನ್ನು ಮುದ್ದೆ ಮಾಡಿ ರಕ್ತದ ಮಡುವಿನಲ್ಲಿ ಅದ್ದಿದನು. ಪುನಃ ಅವನನ್ನು ಎಡಗಾಲಿನಿಂದ ಒದ್ದು ಸಿಂಹನಾದವನ್ನು ಮಾಡಿದನು. ಮದಗಜ ಕುಂಭ ಸ್ಥಳವನ್ನು ಭೇದಿಸಿ ರಕ್ತಸಿಕ್ತವಾದ ಮುಖದಿಂದ ಸಿಡಿದು ಬರುವ ಮರಿಸಿಂಗದಂತೆ ಭೀಮನು ಆ ಗರಡೀ ಮನೆಯಿಂದ ಹೊರಬಿದ್ದನು.

ಕೀಚಕನ ವಧಾವಾರ್ತೆಯು ಕಾಳ್ಗಿಚ್ಚಿನಂತೆ ವಿರಾಟನಗರದಲ್ಲಿ ಹಬ್ಬಿತು. ಜನರು ಹೌಹಾರಿದರು. ಕೀಚಕನೇ ತಮ್ಮ ರಕ್ಷಕನೆಂದು ಭ್ರಮಿಸಿಕೊಂಡಿದ್ದ ಜನರು ಕೆಲವು ಕಾಲ ಭೀತರಾಗಿದ್ದರು. ಈ ದಾರುಣವಾದ ವಾರ್ತೆಯು ಅರಮನೆಯನ್ನು ತಲುಪಿತ್ತಿದ್ದಂತೆಯೇ ರಾಜ, ರಾಣಿ, ಮಂತ್ರಿ ಪರಿವಾರದವರೆಲ್ಲರೂ ಕ್ರೋಧವಶರಾದರು. ಅಷ್ಟೇ ಅಲ್ಲ ರುದ್ರವರ ಬಲದಿಂದ ಪ್ರತಿಕೀಚಕರೇ ಎನಿಸಿದ್ದ ೧೦೫ ಮಂದಿ ಉಪಕೀಚಕರು ಭೀಮ, ದ್ರೌಪದಿಯರ ಮೇಲೆ ಪ್ರತೀಕಾರವನ್ನು ಮಾಡಲು ಬಲಾತ್ಕಾರವಾಗಿ ದ್ರೌಪದಿಯನ್ನು ಬಂಧಿಸಿದರು ಮತ್ತು ಆಕೆಯನ್ನು ಜೀವಂತವಾಗಿ

ದಹಿಸಬೇಕೆಂದು ಪಾಶಗಳಿಂದ ಕಟ್ಟಿ ಕೀಚಕನ ದೇಹ ಸಹಿತವಾಗಿ ಮೆರವಣಿಗೆಯಲ್ಲಿ ಸಾಗಿದರು. ವಾದ್ಯಗಳ ಅಬ್ಬರವೋ ಅಬ್ಬರ. ಇದನ್ನು ಭೀಮನು ನೋಡಿದನು. ಅಲ್ಲೇ ವೃಕ್ಷರೂಪದಿಂದ ತಪೋನಿರತನಾಗಿದ್ದ ಅಸುರನನ್ನು ಮೂಲ ಸಹಿತವಾಗಿ ಕಿತ್ತಿ ಅವನನ್ನು ಸಂಹರಿಸಿ ಆ ವೃಕ್ಷದ ಕೊಂಬೆ ರೆಂಬೆಗಳನ್ನು ಕಸಬರಿಗೆಯಂತೆ ಮಡಚಿ ಹಿಡಿದು ಬುಡದಿಂದ ಬಾರಿಸಿ ಆ ಉಪಕೀಚಕ ಸಂದೋಹವನ್ನು ಅಂಧಂತಮಸ್ಸಿನ ದ್ವಾರಕ್ಕೆ ದೂಡಿಬಿಟ್ಟನು. ಅಂದಿಗೆ ಆ ಊರಲ್ಲಿ ಒಬ್ಬ ದೈತ್ಯನೂ ಉಳಿಯಲಿಲ್ಲ.

ಮಹಾರಾಣಿ ಸುಧೇಷ್ಣಾ ದೇವಿಗೆ ತನ್ನ ತಮ್ಮನ ಅಗಲಿಕೆಯಿಂದ ಬಹು ದುಃಖವಾಯಿತು. ಸಾತ್ವಿಕ ಜೀವ. ತಮ್ಮನು ತನ್ನ ಮಾತನ್ನು ಕೇಳಲಿಲ್ಲವಲ್ಲಾ ಎಂದು ಮರುಗಿದಳು ಮತ್ತು ಈ ದಾಸಿ ಸೈರಂಧ್ರಿಯು ತಮ್ಮ ಮನೆಗೆ ಮೃತ್ಯುಪ್ರಾಯವಾಗಿ ಬಂದಳು. ಈಕೆಯಿಂದ ನಮಗೆ ಇನ್ನೇನು ವಿಪತ್ತು ಕಾದಿದೆಯೋ ಎಂದು ಚಿಂತಿಸಿ ದ್ರೌಪದಿಯನ್ನು ಕರೆದು "ಅಮ್ಮಾ ಮಹಾತಾಯಿ, ಇನ್ನು ನೀನು ನಮ್ಮ ಮನೆಯಲ್ಲಿ ಇರುವುದು ಬೇಡಾ. ನಿನ್ನಿಷ್ಟ ಬಂದ ಸ್ಥಳಕ್ಕೆ ಹೋಗು ಇಂದೇ ಆ ಕೆಲಸವನ್ನು ಮಾಡು" ಎಂದು ಖಚಿತವಾಗಿಯೂ, ನಿಷ್ಠುರವಾಗಿಯೂ ಹೇಳಿಬಿಟ್ಟಳು. ಈ ಮಾತಿಗೆ ಅಸಹಾಯಕಳಾದ ದ್ರೌಪದಿಯ ಕಣ್ಣಂಚಿನ್ನಲ್ಲಿ ಎರಡು ಹನಿ ಬಿಂದುಗಳು ಕಾಣಿಸಿಕೊಂಡುವು. ತಾನು ನಿರಪರಾಧಿಯಾಗಿದ್ದರೂ ಒಡೆತನವು ಕೇಳಬೇಕಲ್ಲ. ಆದರೂ ದ್ರೌಪದಿಯು ಹೇಳಿದಳು, "ಮಹಾತ್ಮಳೇ, ನೀನಿದುವರೆಗೆ ನನಗೆ ಮಾಡಿದ ಉಪಕಾರಕ್ಕೆ ಕೃತಘ್ನಳಾಗಿ ನಾನು ನಿನಗೆ ಎದುರು ಹೇಳಬಾರದು ನಿಜ. ಆದರೆ ನೀವಿದುವರೆಗೆ ನನ್ನನ್ನು ನಿಮ್ಮ ಹೊಟ್ಟೆಯಲ್ಲಿಟ್ಟು ಕೊಂಡಂತೆ ಇನ್ನೂ ಕೇವಲ ಹದಿಮೂರು ದಿನಗಳವರೆಗೆ ಮಾತ್ರ ಆಶ್ರಯವನ್ನು ನೀಡಮ್ಮಾ. ಅಲ್ಲಿಯವರೆಗೆ ನೀನು ಇಲ್ಲಿಂದ ಹೋಗು ಎಂದರೂ ನಾನು ಹೋಗಲಾಗುವುದಿಲ್ಲ. ಉಪವಾಸವಾದರೂ ಸರಿ, ನಾನು ಇಲ್ಲೇ ಇರುತ್ತೇನೆ. ಆ ಹದಿಮೂರು ದಿನಗಳು ಕಳೆದ ಮೇಲೆ ಮರುದಿನ ನೀನು ಇಲ್ಲೇ ಇರು ಎಂದು ಹೇಳಿದರೂ ಒಂದು ಕ್ಷಣವೂ ನಾನು ಇಲ್ಲಿ ಇರಲಾರೆ. ದಯ ಮಾಡಮ್ಮಾ" ಎಂದು ಹಿರಿಯ ಮುತ್ತೈದೆಗೆ ಎರಗಿದಳು. ಆಗ ಸುಧೇಷ್ಣಾ ದೇವಿಯು ಭಯದಿಂದಲೂ ಮತ್ತು ಮಾನವೀಯತೆ ತುಂಬಿದ ಅಂತಃಕರಣದಿಂದಲೂ ಇದಕ್ಕೆ ಒಪ್ಪಿಗೆಯನ್ನು ಸೂಚಿಸಿ ಹದಿನಾಲ್ಕನೇ ದಿನ ಅಲ್ಲಿಂದ ನಿರ್ಗಮಿಸಬೇಕೆಂದು ತಿಳಿಸಿದಳು.

ಹಸ್ತಿನಾವತಿಯಲ್ಲಿ ಗಲಿಬಿಲಿಯು ಪ್ರಾರಂಭವಾಗಿತ್ತು. ಗುಪ್ತಚಾರರ ಮೇಲೆ ಕೆಂಗಣ್ಣು ಹಾಯಿಸಿದ್ದನು ಆ ದುರ್ಯೋಧನನು. ಪಾಂಡವರನ್ನು ಪತ್ತೆ ಹಚ್ಚಲೇ ಬೇಕೆಂದು ಕಟ್ಟಾಜ್ಞೆಯನ್ನು ಮಾಡಿದ್ದನು. ಶೋಧನೆಯ ವೈಫಲ್ಯದಿಂದ ಕಂಗಾಲಾಗಿದ್ದ ಗೂಢಚಾರರು ಊರಿಗೆ ಬರಲು ಭೀತರಾಗಿದ್ದರು. ಈ ಗುಪ್ತಚಾರರನ್ನು ಹುಡುಕಿಸುವುದೇ ದುರ್ಯೋಧನನಿಗೆ ಕಷ್ಟವಾಗಿತ್ತು ಅವನು ಅವರ ಸಂಬಳವನ್ನು ನಿಲ್ಲಿಸಿ ಬಿಟ್ಟದ್ದನು. ಅವರು ಭಿಕ್ಷೆಬೇಡಿ ಬದುಕಿಕೊಂಡಿದ್ದರು. ಅಷ್ಟರಲ್ಲೇ ದುರ್ಯೋಧನನಿಗೆ ಕೀಚಕನ ವಧಾವಾರ್ತೆಯು ತಲುಪಿತ್ತು. (ಮರಣವಾರ್ತೆಯಲ್ಲ, ಮರಣ ವಾರ್ತೆಯಾಗಿದ್ದರೆ ಅದಕ್ಕೆ ರೋಗವೂ ಕಾರಣವಾಗಿದ್ದಿರಬಹುದಾಗಿತ್ತು. ಎನಿಸಿ ದುರ್ಯೋಧನನ ಕೌತುಕಕ್ಕೆ ಅದು ಕಾರಣವಾಗುತ್ತಿರಲಿಲ್ಲ) ಕೀಚಕನ ಮರಣಾನಂತರದಲ್ಲಿ ಮತ್ಸ್ಯದೇಶವನ್ನು ತನು ಕಬಳಿಸಬಹುದಲ್ಲಾ ಎಂಬ ಉತ್ಸಾಹಕ್ಕಿಂತಲೂ ಅವನಿಗೆ ಪಾಂಡವರನ್ನು ಈಗ ಪತ್ತೆ ಹಚ್ಚಬಹುದಲ್ಲಾ ಎಂಬ ಹಂಬಲವೇ ಅಧಿಕವಾಗಿದ್ದಿತ್ತು. ಕೀಚಕನು "ಸಂಹರಿಸಲ್ಪಟ್ಟನು" ಎಂಬ ವಾರ್ತೆಯು ದುರ್ಯೋಧನನಿಗೆ ಅತಿ ಅಪ್ಯಾಯಮಾನವಾಗಿ ತೋರಿತು. ಏಕೆಂದರೆ ಒಂದೇ ಏಟಿಗೆ ಎರಡು ಹಕ್ಕಿಗಳ ಬೇಟೆಯು ಸಿಕ್ಕಿತೆಂದು. ಹೇಗೆಂದರೆ ಈಗ ಪಾಂಡವರು ಸಿಕ್ಕಿದರು. ಇನ್ನೊಂದು ಮತ್ಸ್ಯದೇಶವೂ ನನ್ನ ವಶವಾದಂತೆ ವಾಹ್! ವಾ! ಎಂದು ಹಿಗ್ಗಿ

ಹೋದನು ಆ ದುರ್ಯೋಧನನು. ಇವನು ಕೀಚಕನ ಭಯಕ್ಕೇಷೇ ಮತ್ಸ್ಯ ದೇಶದ ಮೇಲೆ ದಾಳಿ ಮಾಡಿರಲಿಲ್ಲ. ವಿರಾಟನಾದರೂ ಕೀಚಕನಿಗೆ ಭಯಪಟ್ಟೇ ಅವನ ಅಧೀನತ್ವದಲ್ಲಿ ಸುಖವಾಗಿದ್ದೇನೆಂದು ಭ್ರಾಂತಿಗೊಳಗಾಗಿದ್ದನು.

ತಡ ಮಾಡದೆ ಕರ್ಣ, ಶಕುನಿ, ಜಯದ್ರಥ, ದುಶ್ಶಾಸನ, ದ್ರೋಣ, ಭೀಷ್ಮ, ಕೃಪಾಚಾರ್ಯ, ಅಶ್ವತ್ಥಾಮರೇ ಮೊದಲಾದವರನ್ನು ಸಭೆಗೆ ಕರೆಸಿದನು. ಪಾಂಡವರು ವಿರಾಟ ನಗರದಲ್ಲಿ ಇರುವರು. ತಕ್ಷಣವೇ ಸೈನ್ಯವು ವಿರಾಟನಗರಕ್ಕೆ ಹೊರಡಲಿ. ದಾಳಿ ಮಾಡಿ ವಿರಾಟನನ್ನು ಸೆರೆಹಿಡಿದು ರಾಜ್ಯವನ್ನು ವಶಪಡಿಸಿಕೊಂಡು ಪಾಂಡವರನ್ನು ಪುನಃ ಕಾಡಿಗಟ್ಟೋಣ" ಎಂದು ಸಭೆಯಲ್ಲಿ ಗುಡುಗಿದನು. "ಭೀಮ, ಬಲರಾಮ, ಶಲ್ಯ, ಕೀಚಕ ಈ ನಾಲ್ಕು ಜನರಲ್ಲಿ ಒಬ್ಬರನ್ನೊಬ್ಬರು ಮಾತ್ರ ಸಂಹರಿಸಬಲ್ಲರು. ಬೇರೆಯವರಿಂದ ಇದು ಸಾಧ್ಯವೇ ಇಲ್ಲ. ಬಲರಾಮ, ಶಲ್ಯರು ಇಲ್ಲೇ ಇದ್ದಾರೆ. ಕೀಚಕನನ್ನು ಕೊಲ್ಲಲಾಗಿದೆ. ಇದು ಭೀಮನಿಂದಾದ ಕಾರ್ಯವಲ್ಲದೇ ಸರ್ವಥಾ ಬೇರೆಯವರಿಂದ ಸಾಧ್ಯವಿಲ್ಲ. ಈಗ ಪಾಂಡವರು ಸಿಕ್ಕರೆಂದೇ ತಿಳಿಯಿರಿ. ಮೊದಲು ವಿರಾಟನಗರಕ್ಕೆ ಲಗ್ಗೆ ಹಾಕಿರಿ" ಎಂದು ಆಜ್ಞೆಮಾಡಿದನು ಮತ್ತೂ ಹೇಳಿದನು " ಈ ಯುದ್ಧದಲ್ಲಿ ವಿರಾಟನ ಪರಾಜಯವು ಖಂಡಿತಾ. ಪಾಂಡವರು ಅಲ್ಲಿದ್ದರೆ ಅವರು ವಿರಾಟನಿಗೆ ಸಹಾಯ ಮಾಡದೇ ಇರುವುದಿಲ್ಲ. ನಮಗೆ ಈ ಕಾಳಗದಲ್ಲಿ ಜಯಾಪಜಯಗಳು ಮುಖ್ಯವಲ್ಲ. ಪಾಂಡವರ ಅಜ್ಞಾತವನ್ನು ಭೇದಿಸಬೇಕು. ಇದಕ್ಕಿಂತಲೂ ಹೆಚ್ಚಿನ ವಿಜಯವು ಮತ್ತೊಂದಿಲ್ಲ. ಹುಂ, ದಾಳಿಯು ನಾಳೆಯಿಂದಲೇ ಸಾಗಲಿ" ಎಂದು ಅತಿರಥ, ಮಹಾರಥರಿಗೆ ರಣ ವೀಳ್ಯೆಯನ್ನು ಇತ್ತು ರಾಜಮನ್ನಣೆಯನ್ನು ಮಾಡಿ ಬೀಳ್ಕೊಟ್ಟನು.

ಮರುದಿನವೇ ಸುಶರ್ಮನೆಂಬ ಸೇನಾಧಿಪತಿಯ ನೇತೃತ್ವದಲ್ಲಿ ಕೌರವನ ಸೈನ್ಯವು ವಿರಾಟನಗರಕ್ಕೆ ಮುತ್ತಿಗೆ ಹಾಕಿ ವಿರಾಟರಾಜನನ್ನೂ ಮತ್ತು ಅವನ ಗೋವುಗಳನ್ನು ಸೆರೆಹಿಡಿದು ಕೊಂಡೊಯ್ದನು. ಆಗ ಭೀಮನು ಪ್ರತಿದಾಳಿಯನ್ನು ಮಾಡಿ ಸುಶರ್ಮನನ್ನು ಸೆರೆಹಿಡಿದು ವಿರಾಟರಾಜನನ್ನು ಮತ್ತು ಗೋವುಗಳನ್ನು ಬಿಡಿಸಿಕೊಂಡು ಬಂದನು. ಮಾರನೇ ದಿನ ದ್ರೋಣ, ಭೀಷ್ಮ ಮತ್ತು ಅಶ್ವತ್ಥಾಮಾದಿಗಳು ಪುನಃ ವಿರಾಟನ ಮೇಲೆ ದಾಳಿ ಮಾಡಿ ಮತ್ಸ್ಯಾಧಿಪತಿಯ ಗೋವುಗಳನ್ನು ಅಪಹರಿಸಿದರು. ಆಗ ವಿರಾಟನ ಮಗನಾದ ಉತ್ತರಕುಮಾರನು ಬೃಹನ್ನಳೆ (ಅರ್ಜುನ) ಸಾರಥ್ಯವನ್ನು ಹೊಂದಿ ಯುದ್ಧಕ್ಕೆ ಹೊರಟನು. ಈ ವೇಳೆಗಾಗಲೇ ವನವಾಸ – ಅಜ್ಞಾತವಾಸಗಳ ಅವಧಿಯು ಮುಗಿದು ಹೋಗಿತ್ತು. ದುರ್ಗಾಷ್ಟಮಿಯಂದು ಅರ್ಜುನನು ಶಮಿ ವೃಕ್ಷಕ್ಕೆ ಹೋಗಿ ಅಲ್ಲಿ ಸನ್ನಿಹಿತಳಾಗಿದ್ದ ನಂದಗೋಪಕುಮಾರಿ ದುರ್ಗಾದೇವಿಯನ್ನು ಪ್ರಾರ್ಥಿಸಿ, ಅರ್ಚಿಸಿ, ಸಂತೋಷಗೊಳಿಸಿ ತಾವು ಅಲ್ಲಿ (ಶಮಿ ವೃಕ್ಷದಲ್ಲಿ) ಸ್ಥಾಪಿಸಿದ್ದ ಗಾಂಡೀವವೇ ಮೊದಲಾದ ಶಸ್ತ್ರ – ಶಾಸ್ತ್ರಾದಿಗಳನ್ನು ಪುನಃ ಪಡೆದುಕೊಂಡು ಸಿದ್ಧರಾಗಿದ್ದರು. ಯುದ್ಧಕ್ಕೆ ತೆರಳಿದ್ದ ಉತ್ತರಕುಮಾರನು ಭೀಷ್ಮ, ದ್ರೋಣರ ಮುಖಂಡತ್ವದಲ್ಲಿ ಬಂದಿದ್ದ ಕೌರವ ಸೈನ್ಯ ಸಾಗರವನ್ನು ನೋಡಿ ಅತ್ಯಂತ ಭೀತನಾಗಿ ಯುದ್ಧರಂಗದಿಂದ ಓಮ್ಮುಖನಾದನು. ಆಗ ಅರ್ಜುನನು ಅವನ ಬೆನ್ನು ಚಪ್ಪರಿಸಿ ಅನುಗ್ರಹಿಸಿದನು. ಇಷ್ಟು ಮಾತ್ರದಿಂದಲೇ ಧೈರ್ಯವನ್ನು ಹೊಂದಿದ ಉತ್ತರ ಕುಮಾರನು ತಾನೇ ಸಾರಥಿಯಾಗಿ ಬೃಹನ್ನಳೆ ರೂಪದ ಅರ್ಜುನನಿಗೆ ಸೇವೆಯನ್ನು ಸಲ್ಲಿಸಲು ಮುಂದಾದನು. ಆಗ ಅರ್ಜುನನೇ ರಥಿಕ ಸ್ಥಾನವನ್ನಲಂಕರಿಸಿ ಕೌರವರ ಸೈನ್ಯವನ್ನು ಸದೆಬಡಿದು ಗೋವುಗಳನ್ನು ಹಿಂದಕ್ಕೆ ಪಡೆದುಕೊಂಡು ಬಂದನು. ಅರ್ಜುನನು ಆಗ್ಗೆ ಕೌರವರ ಸೈನ್ಯವನ್ನು ಸಂಹಾರ ಮಾಡದೆ ಸಮ್ಮೋಹನಾಸ್ತ್ರದಿಂದ ಎಲ್ಲರನ್ನೂ ಮೂರ್ಛೆಗೊಳಿಸಿದ್ದನು. ಆಗ ಉತ್ತರಕುಮಾರನು ಭೀಷ್ಮಾಚಾರ್ಯರನ್ನು ಮಾತ್ರಬಿಟ್ಟು ಉಳಿದ ಎಲ್ಲರ ಮೈಮೇಲೆ ಇದ್ದ ವಸ್ತ್ರಗಳನ್ನು ಅಪಹರಿಸಿಕೊಂಡು ರಥದಲ್ಲಿ ತುಂಬಿಕೊಂಡು ಅರ್ಜುನನೊಡನೆ ಸುರಕ್ಷಿತವಾಗಿ ನಗರವನ್ನು ಸೇರಿಕೊಂಡನು. ವಿಜಯೋತ್ಸಾಹದಿಂದ ರಾಜಧಾನಿಗೆ

ಬಂದ ಪುತ್ರ ಬೃಹನ್ನಳೆಯರನ್ನು ಕಂಡ ವಿರಾಟನು ತನ್ನ ಮಗನೇ ಜಯಶಾಲಿಯಾಗಿ ಬಂದನೆಂದು ಉತ್ತರನನ್ನು ಬಹು ಬಗೆಯಾಗಿ ಹೊಗಳಲಾರಂಭಿಸಿದನು. ಆಗ ಕಂಕಭಟ್ಟ (ಧರ್ಮರಾಯ)ನು ಆ ವಿಜಯವು ಬೃಹನ್ನಳೆಯಿಂದಾದುದೆಂದು ಹೇಳಲು ಕುಪಿತನಾದ ವಿರಾಟನು ತನ್ನ ಕೈಯಲ್ಲಿದ್ದ ದಾಳಗಳಿಂದ ಧರ್ಮರಾಜನಿಗೆ ಹೊಡೆಯಲು ನೆತ್ತರು ಬಂದಿತು. ತಕ್ಷಣವೇ ದ್ರೌಪದಿದೇವಿಯು ಬಂದು ನೆತ್ತರು ಹನಿಯು ಕೆಳಗೆ ಬೀಳದಂತೆ ಸೆರಗಿನಿಂದ ಒತ್ತಿ ನಿವಾರಿಸಿದಳು. ಧರ್ಮರಾಯನ ರಕ್ತವು ಭೂಮಿಗೆ ಬಿದ್ದರೆ ಅದಕ್ಕೆ ಕಾರಣರಾದವರ ಶಿರಚ್ಛೇದನ ಮಾಡುವುದಾಗಿ ಅರ್ಜುನನ ಪ್ರತಿಜ್ಞೆಯು ಇದ್ದಿತು. ಅದಕ್ಕಾಗಿಯೇ ದ್ರೌಪದಿಯು ಅದನ್ನು ನಿವಾರಿಸಿದಳು. ಅದರೂ ಅರ್ಜುನನು ಕೋಪಾವಿಷ್ಟನಾಗಿ ವಿರಾಟನನ್ನು ಶಿಕ್ಷಿಸಬೇಕೆಂದು ಹವಣಿಸಿದಾಗ ಧರ್ಮರಾಯನು ತಡೆದು "ನಾಳೆಯೇ ನಾವು ನಮ್ಮ ಛದ್ಮ ವೇಷಗಳನ್ನು ಬದಲಿಸಿ ಸಿಂಹಾಸನದ ಮೇಲೆ ಕುಳಿತುಕೊಳ್ಳೋಣ. ಆಗ ಸಾಮಂತನಾದ ಈ ವಿರಾಟನು ನಮಸ್ಕರಿಸಿದರೆ ಅವನನ್ನು ಕ್ಷಮಿಸಿ ಬಿಡೋಣ. ಇಲ್ಲವಾದರೆ ತಕ್ಕ ರೀತಿಯಲ್ಲಿ ಶಿಕ್ಷೆಯನ್ನು ವಿಧಿಸೋಣ" ಎಂದು ಸಮಾಧಾನ ಪಡಿಸಿದನು. ಇಲ್ಲಿ ಒಂದು ಧರ್ಮಸೂಕ್ಷ್ಮವನ್ನೂ ಧರ್ಮರಾಯನು ಹೇಳಿದನು. "ತಮ್ಮಾ ಕೇಳು, ಕೊಲ್ಲುತ್ತೇನೆಂದು ಹೇಳಿದ ಮೇಲೆ ಕೊಂದರೇನೇ ಕೊಂದಂತೆ ಎಂದು ಭಾವಿಸಬಾರದು. ತೇಜೋವಧೆಯನ್ನು (ನಿಂದೆ) ಮಾಡಿದರೂ ಕೊಂದಂತೆಯೇ ಆಗುತ್ತದೆ. ಹಾಗೆಯೇ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತೇನೆಂದು ಶಪಥ ಮಾಡಿದ್ದು ಆತ್ಮಹತ್ಯೆಯನ್ನು ಮಾಡಿಕೊಂಡರೇನೇ ಆತ್ಮಹತ್ಯೆ ಎಂದು ಭಾವಿಸಬಾರದು. ಆತ್ಮಪ್ರಶಂಸೆಯನ್ನು (ತನ್ನನ್ನು ತಾನು ಹೊಗಳಿಕೊಂಡರೂ) ಮಾಡಿಕೊಂಡರೂ ಅದು ಆತ್ಮಹತ್ಯೆಯೇ ಎನಿಸಿಕೊಳ್ಳುತ್ತದೆ. ಆದ್ದರಿಂದ ಈಗ ನೀನು ವಿರಾಟವನ್ನು ತೆಗಳಿ ನಿನ್ನನ್ನು ನೀನೇ ಪ್ರಶಂಶೆ ಮಾಡಿಕೋ. ಇದರಿಂದ ನಿನ್ನ ಶಪಥವು ನೆರವೇರಿದಂತೆಯೇ ಆಗುತ್ತದೆ. "ಸಾತ್ವಿಕರಲ್ಲಿ ದಯೆಯನ್ನು ತೋರುವುದೇ ಧರ್ಮ" ಎಂದು ಹೇಳಿದನು. ಆಗ ಅರ್ಜುನನು ವಿರಾಟನನ್ನು ಯಥೇಚ್ಛವಾಗಿ ನಿಂದಿಸಿ ತನ್ನನ್ನು ತಾನು ವಿಪರೀತವಾಗಿ ಹೊಗಳಿಕೊಂಡನು. ಆಗಲೇ ವಿರಾಟಪುತ್ರನಾದ ಉತ್ತರ ಕುಮಾರನು ಗೋಗ್ರಹಣ ಕದನದಲ್ಲಿ ತನಗುಂಟಾದ ಭಯವನ್ನೂ ತನ್ನ ಸಾರಥೀ ಎನಿಸಿದ್ದ ಬೃಹನ್ನಳೆಯ ಪರಾಕ್ರಮವನ್ನು ವರ್ಣಿಸಿ ತಮಗೆ ಉಂಟಾದ ಜಯವು ಈ ಬೃಹನ್ನಳೆಯಿಂದಲೇ ಎಂದು ಹೇಳಿದನು. ಅಲ್ಲಿಗೆ ವಿರಾಟರಾಜನು ಭಯ, ಸಂತೋಷಗಳಿಂದ ಸಮಚಿತ್ತವನ್ನು ಹೊಂದಿ ಅಂದಿನ ದಿನದ ಕಲಾಪಗಳನ್ನು ಮುಕ್ತಾಯಗೊಳಿಸಿದನು. ಪರಾಜಿತರಾದ ಬತ್ತಲೆ ಕೌರವರು ಕತ್ತಲೆಯಲ್ಲಿ ಮಾನವನ್ನು ಮುಚ್ಚಿಕೊಂಡು ಪಲಾಯನ ಮಾಡಿಬಿಟ್ಟರು.

> "ಕೃಷ್ಣಾಯ ಯಾದವೇಂದ್ರಾಯ।ಹರಯೇ ಪರಮಾತ್ಮನೇ ॥
> ಪ್ರಣತಃಕ್ಲೇಶನಾಶಾಯ । ಗೋವಿಂದಾಯ ನಮೋ ನಮಃ ॥"

ಶ್ರೀಕೃಷ್ಣ ಪರಮಾತ್ಮನ ಅನುಗ್ರಹದಿಂದ ಪಾಂಡವರ ಅಜ್ಞಾತವಾಸವು ಕಣ್ಣರೆಪ್ಪೆಯನ್ನು ಮುಚ್ಚಿ ತೆರೆಯುವುದರೊಳಗೆ ಮುಗಿದಂತೆ ಮುಗಿದು ಹೋಯಿತು. ಮರುದಿನವೇ ಅವರು ಪ್ರಾತರಾನ್ಹಿಕಗಳನ್ನು ಮುಗಿಸಿಕೊಂಡು ತಮ್ಮ ಛದ್ಮವೇಷಗಳಿಂದಲೇ ಆದರೆ ಒಟ್ಟಾಗಿ ಸೇರಿ ವಿರಾಟನ ಸಭಾಮಂಟಪವನ್ನು ಸೇರಿದರು. ಅಲ್ಲಿ ಧರ್ಮರಾಯನು ಸಿಂಹಾಸನದ ಮೇಲೆ ಕುಳಿತಿದ್ದನು. ಪಕ್ಕದಲ್ಲಿ ದ್ರೌಪದಿಯು ಕುಳಿತಿದ್ದಳು. ಇಕ್ಕೆಲಗಳಲ್ಲಿ ಭೀಮಾರ್ಜುನರು ಮತ್ತು ಮುಂಭಾಗದಲ್ಲಿ ಎಡ ಬಲಗಳಲ್ಲಿ ನಕುಲ ಸಹದೇವರು ನಿಂತಿದ್ದರು. ಇದನ್ನು ತಿಳಿದ ಕೂಡಲೇ ವಿರಾಟರಾಜನು ಕೆಂಡಮಂಡಲದಂತಾಗಿ ನೀವು ಉಪ್ಪುಂಡ ಮನೆಗೆ ದ್ರೋಹವನ್ನು ಬಗೆದಿರಿ. ನಿಮಗೆ

ಆಶ್ರಯವನ್ನಿತ್ತು ನಾನು ಮೂರ್ಖನಾದೆ. ನೀವು ಬಲತ್ಕಾರವಾಗಿ ಸ್ವಾಮಿದ್ರೋಹವನ್ನು ಮಾಡುತ್ತಿರುವಿರಿ. ಈಗಲೇ ನೀವು ನ್ಯಾಯಸಮ್ಮತವಾಸಿ ಸಿಂಹಾಸನದಿಂದಿಳಿದು ನನ್ನ ರಾಜ್ಯದಿಂದ ತೊಲಗಿರಿ" ಎಂದು ಗರ್ಜಿಸಿದನು. "ಬಲವಂತರಾದ ಮಾತ್ರಕ್ಕೆ ನೀವು ಹೀಗೆ ಮಾಡಬಹುದೇ? ನನ್ನ ದುರ್ದೈವಕ್ಕೆ ಈಗ ನಮ್ಮ ಕೀಚಕನೂ ಇಲ್ಲ. ನಮ್ಮನ್ನು ಎಂಥಾ ಕಷ್ಟ ಬಂದರೂ ಕಾಪಾಡುತ್ತಿದ್ದ ಪಾಂಡವರೂ ಇಲ್ಲವಾಗಿದ್ದಾರೆ. ನಾನೀಗ ಯಾರನ್ನು ಮೊರೆ ಹೋಗಲಿ? ಹೇ ಕೃಷ್ಣಾ ನೀ ನನ್ನ ಕಾಪಾಡು" ಎಂದು ಗೋಳಾಡಿದನು. ಆಗ ಪಾಂಡು ಕುವರರು ಈ ವಿರಾಟನಿಗೆ ತಮ್ಮ ಮೇಲಿರುವ ನಿಷ್ಠೆ ಅಭಿಮಾನ, ಗೌರವಗಳಿಗೆ ತಲೆದೂಗಿದರು. ಮರುಕ್ಷಣದಲ್ಲೇ ಪಾಂಡವರು ತಮ್ಮ ನಿಜರೂಪಗಳನ್ನು ಅಭಿವ್ಯಕ್ತ ಮಾಡಿ ತಾವೇ ಪಾಂಡವರು. ಈ ಸೈರಂಧ್ರಿಯೇ ದ್ರೌಪದಿಯು ಎಂದು ಹೇಳಿ ರಹಸ್ಯವನ್ನು ಬಯಲು ಮಾಡಿದರು. ಆಗ ವಿರಾಟನಿಗಾದ ಆನಂದವು ಅಷ್ಟಿಷ್ಟಲ್ಲ. "ಹಾ, ಪ್ರಭೋ ಧರ್ಮರಾಜ, ಭೀಮ, ಅರ್ಜುನ, ನಕುಲ, ಸಹದೇವ, ಅಮ್ಮಾ ದ್ರೌಪದೀ ನೀವು ಆ ಆತತಾಯಿ ದುರ್ಯೋಧನನಿಂದ ಇನ್ನೂ ಉಳಿದುಕೊಂಡಿರುವಿರಾ? ಹಾ, ದಯಾನಿಧೇ, ಶ್ರೀಕೃಷ್ಣಾ, ಭಕ್ತವತ್ಸಲಾ, ಪರಾಕ್, ಪರಾಕ್, ನಮೋನಮಃ। ನಮೋ ನಮಃ" ಎಂದು ಶ್ರೀಕೃಷ್ಣನನ್ನು ಸ್ಮರಿಸುತ್ತ ಧರ್ಮರಾಯನಿಗೆ ಎರಗಿ "ಮಹಾಪ್ರಭೋ, ನೀವು ನನ್ನ ಮನೆಯಲ್ಲಿ ಬಂದು ವರುಷ ಕಾಲ ಪರಿಯಂತವಾಗಿ ಪರಿಚಾರಕರಾಗಿ ಸೇವೆಯನ್ನು ಮಾಡಿದಿರಿ. ಎಷ್ಟೋ ಬಾರಿ ನಾನು ನಿಮ್ಮನ್ನು ಮೂದಲಿಸಿ ಮಾತನಾಡಿದ್ದುಂಟು. ಎಷ್ಟು ಬಗೆಯಿಂದ ನೀವು ಅದನ್ನು ಸಹಿಸಿದಿರಿ. ಪ್ರಭೋ ಚಕ್ರವರ್ತೀ ನನ್ನ ಹಾಗೂ ನನ್ನ ಪರಿವಾರದವರ ಅಪರಾಧವನ್ನು ಕ್ಷಮಿಸಿ ಕಾಪಾಡಿರಿ. ನೀವೇ ಈ ರಾಜ್ಯದ ಹೊಣೆಯನ್ನು ಸ್ವೀಕರಿಸಿ ಆ ಪಾಪಿ ದುರ್ಯೋಧನನಿಂದ ನಮ್ಮನ್ನು ಕಾಪಾಡಿರಿ. ಇದುವರೆಗೆ ಶಾಲಕ ಕೀಚಕನ ಭಯ, ದಾಕ್ಷಿಣ್ಯಗಳಿಗೆ ಬಲಿಯಾಗಿ ನಾನು ಶ್ರೀಕೃಷ್ಣನ ಸ್ಮರಣೆಯನ್ನು ಮಾಡಲು ಸಹ ಹೆದರುತ್ತಿದ್ದೆ. ಅವನೇ ನನ್ನ ರಕ್ಷಕನೆಂದು ಭ್ರಾಂತಿಗೊಳಗಾಗಿದ್ದೆ. ಇಂದಿಗೆ ನನ್ನ ಮತ್ತು ಪ್ರಜೆಗಳ ಭಾಗ್ಯದ ಬಾಗಿಲು ತೆಗದಂತಾಯಿತು. ನಮ್ಮನ್ನು ರಕ್ಷಿಸಿರೆಂದು ಪುನಃ ಪುನಃ ಬೇಡಿಕೊಂಡನು. ಆರ್ದ್ರ ಹೃದಯನಾಗಿ ಕೈಜೋಡಿಸಿಕೊಂಡು ನಿಂತಿದ್ದ ವಿರಾಟರಾಜನಿಗೆ ಧರ್ಮರಾಯನು ಅಭಯವನ್ನಿತ್ತು ನಿನ್ನ ರಾಜ್ಯವು ನಿನಗೇ ಇರಲಿ. ನಮ್ಮ ಗಡುವು ಇಂದಿಗೆ ಮುಗಿಯಿತು. ನೀನು ಮಾಡಿದ ಸಮಯೋಚಿತವಾದ ಉಪಕಾರಕ್ಕೆ ಪ್ರತಿ ಹೇಳಲು ನಮಗೂ ಬಾಯಿ ಇಲ್ಲ. ಮುಂದೆ ನಮ್ಮ ರಾಜ್ಯವನ್ನು ಪಡೆದುಕೊಂಡು ಶ್ರೀಹರಿಸೇವಾರೂಪವಾಗಿ ಪ್ರಜಾಪಾಲನೆಯನ್ನು ಮಾಡುತ್ತೇವೆ. ನಮಗೆ ಅಪ್ಪಣೆಯನ್ನು ನೀಡಬೇಕೆಂದನು. ಆಗ ವಿರಾಟರಾಯನು ವಿನಯಶೀಲನಾಗಿ "ಪ್ರಭು, ನನಗೆ ನಿಮ್ಮ ಸಾಮಂತಗಿರಿಯಿಂದ ಮಾತ್ರ ತೃಪ್ತಿಯಾಗಿಲ್ಲ. ನಿಮ್ಮ ಬಂಧುತ್ವ ಭಾಗ್ಯವೂ ನಮಗೆ ಲಭಿಸಲಿ. ಅನುಗ್ರಹಿಸಬೇಕು. ನನ್ನ ಕುಮಾರಿ ಉತ್ತರಾದೇವಿಯನ್ನು ನಿನ್ನ ತಮ್ಮನಾದ ಅರ್ಜುನನಿಗೆ ಕೊಟ್ಟು ವಿವಾಹವನ್ನು ಮಾಡಬೇಕೆಂದು ನಮ್ಮ ಬಯಕೆಯಾಗಿದೆ. ಬಡವನ ಮೇಲೆ ಕೃಪೆದೋರಲಾಗಲಿ" ಎಂದು ಬೇಡಿದನು. ಧಮಾತ್ಮನಾದ ವಿರಾಟರಾಜನ ಮನವಿಯನ್ನು ಸಹಾನುಭೂತಿಯಿಂದ ಸ್ವೀಕರಿಸಿದ ಧರ್ಮರಾಜನು ಅರ್ಜುನನು ಉತ್ತರಾದೇವಿಗೆ ನಾಟ್ಯ ವಿದ್ಯಾಗುರುವಾಗಿ ಪಿತೃಸಮಾನನಾದುದರಿಂದ ಉತ್ತರಾದೇವಿಯನ್ನು ಅರ್ಜುನನ ಪುತ್ರನಾದ ಅಭಿಮನ್ಯುವಿಗೆ ಇತ್ತು ವಿವಾಹವನ್ನು ಮಾಡಬಹುದೆಂದನು. ಇದಕ್ಕೆ ಇತ್ತ ದ್ರೌಪದಾದೇವಿಯೂ ಅತ್ತ ಸುಧೇಷ್ಣಾದೇವಿಯೂ ಸಂತೋಷದಿಂದ ಒಪ್ಪಿಗೆಯನ್ನು ಸೂಚಿಸಿದರು. ತರುವಾಯ ವಿರಾಟರಾಜನು ಸುಮುಹೂರ್ತದಲ್ಲಿ ಉತ್ತರಾದೇವಿ-ಅಭಿಮನ್ಯುವಿನ ವಿವಾಹವನ್ನು ಅತಿ ವಿಜೃಂಭಣೆಯಿಂದ ಮಾಡಿ ಬಹುಬಗೆಯಾದ ಬಳುವಳಿಗಳನ್ನು ಇತ್ತು ಕೃತಾರ್ಥನಾದನು.

**"ಪಿತಾಮಹಾಮೇಸಮರೇಂಜಯೈರ್ವಾ। ದೇವವ್ರತಾದ್ಯಾತಿ ರಥಃಸ್ತಿಮಿಂಗಲೈಃ॥**
**ದುರತ್ಯಯಂ ಕೌರವ ಸನ್ಯ ಸಾಗರಂ । ಕೃತಾಂತರಂವತ್ಸ ಪದಂಸಯಪ್ಲವಾಃ ॥ಭಾಗ॥"**

ಎಂದರೆ ಯಾವ ಶ್ರೀಕೃಷ್ಣ ಪರಮಾತ್ಮನ ಪರಮಾನುಗ್ರಹಕ್ಕೆ ಪಾತ್ರರಾದ ಪಾಂಡವರು ದ್ರೋಣ, ಭೀಷ್ಮ, ಕೃಪಾಚಾರ್ಯ, ಅಶ್ವತ್ಥಾಮರೇ ಮೊದಲಾದ ತಿಮಿಂಗಿಲಗಳಿಂದ ಸಂಭರಿತವಾದ ಕೌರವನ ಸೈನ್ಯ ಸಾಗರವನ್ನು ಗೋಷ್ಪಾದೋದಕದಂತೆ ದಾಟಲಿರುವರೋ ಅಂಥಾ ಪರಮಾತ್ಮನ ದಯದಿಂದ ಮುಕ್ತಿ ಯೋಗ್ಯನಾದ ವಿರಾಟರಾಜ, ಆತನ ಪತ್ನಿ, ಸುತ, ಸುತೆ, ಪರಿವಾರ, ಪ್ರಜೆಗಳನ್ನು ಭೀಮನು ಕೀಚಕೋಪ ಕೀಚಕರ ಕಪಿ ಮುಷ್ಟಿಯಿಂದ ಪಾರು ಮಾಡಿದ್ದು ಆಶ್ಚರ್ಯವೇ? ಪರಮಾತ್ಮನಿಗೆ ಪ್ರಥಮಾಂಗನೆನಿಸಿದ ಭೀಮನು ಈ ಬ್ರಹ್ಮಾಂಡದಲ್ಲಿ ಪರಮಾತ್ಮನಿಗೆ ಸಾದೃಶ್ಯ ರೂಪನಾಗಿರುವಾಗ ಈತನು ಸರ್ವಸಾರ ಭೋಕ್ತನೂ, ಭೋಗ್ಯ, ಭೋಕ್ತೃ ರೂಪನೂ ಆಗಿರುವನು. ("ಸರ್ವಸಾರ ಬೋಕ್ತಾಯ। ಭೋಗ್ಯ ಭೋಕ್ತೃರೂಪಾಯ॥ ಹರಿ ರಮಾ ಪ್ರಸಿದ್ಧಶಬ್ದಾತಿರಿಕ್ತಾನಂತ ವೇದ ವೇದ್ಯಾಯ – ಶ್ರೀಚಂದ್ರಿಕಾ ರಾಯರ ವಾಯುಗದ್ಯ). ಈತನು ಸುಧೇಷ್ಣಾ ದೇವಿಯ ಮೇಲಿನ ಅಂತಃಕರಣದಿಂದಲೇನೇ ಆಕೆಯು ಇತ್ತ ಸಕಲ ಭೋಜನೋದನಗಳನ್ನು ಸ್ವೀಕರಿಸಿದನು. ತಾಂಬೂಲಾದಿಗಳನ್ನು ಸವಿದನು. ವಡವೆ, ವಸ್ತ್ರ, ಭೂಷಣಾದಿಗಳನ್ನು ಧರಿಸಿದನು. ಪರಮಾತ್ಮನಿಗೆ ಪ್ರತಿಬಿಂಬವಾಗಿ, ಜಗತ್ತಿಗೆ ಬಿಂಬನಾಗಿ, ಭಗವದನುಗ್ರಹದಿಂದ ಇನ್ನೂರು ಬ್ರಹ್ಮಕಲ್ಪಗಳ ಪರಿಯಂತವಾಗಿ ಯಾವ ಮಹಾ ಸುಖ ಪ್ರಾರಬ್ಧವನ್ನು ಸವಿಯುತ್ತ ತನ್ನವರ ಪ್ರಾರಬ್ಧ (ಮುಕ್ತಿಯೋಗ್ಯರಿಗೆ) ಭೋಗವನ್ನು ಅಭಿವ್ಯಕ್ತಗೊಳಿಸಿ (ಅಪರೋಕ್ಷ ಜ್ಞಾನವನ್ನು ಕೊಟ್ಟು) ಸುಖ ದುಃಖಗಳನ್ನು ಸಮಾನವಾಗಿ ಕಂಡು ಹಿಗ್ಗುವಂತೆ ಮಾಡುತ್ತಿರುವನೋ ಅಂಥಾ ಭೀಮಸೇನನು ವಿರಾಟನಗರದಲ್ಲಿ ಕೇವಲ ಒಂದು ವರ್ಷಕಾಲ ಅಡಿಗೆ ಭಟ್ಟನಾಗಿ ನಿತ್ಯ ನೂರು ಖಂಡುಗ ("ನೂರಾರು ಖಂಡುಗ ಪಾಕಗೈದಾ ಹಸ್ತ" ಶ್ರೀವಿಜಯರಾಯರು) ಅಡಿಗೆ ಮಾಡಿ ಬಡಿಸಿದ್ದು ಆಶ್ಚರ್ಯವೇ? ಅಂದು ಮಾತ್ರ ಈತನು ಅಡಿಗೆ ಮಾಡಿ ಬಡಿಸಿದನೇ? ಇಂದಿಗೆ, ಕೈ ಬಿಟ್ಟಿರುವನೇ? ಅಂದಿಗೂ, ಇಂದಿಗೂ ಕಲ್ಪಾವಸಾನದವರೆಗೂ, ವಿರಾಟನಗರಕ್ಕೆ ಮಾತ್ರವಲ್ಲ, ಇಡೀ ಬ್ರಹ್ಮಾಂಡಕ್ಕೇ ರುಚಿಕಟ್ಟಾದ ಅಡಿಗೆಯನ್ನು ಮಾಡಿ ಬಡಿಸುತ್ತಿಲ್ಲವೇ? ಕಬ್ಬಿನರಸ, ಹಣ್ಣುಗಳು, ದ್ರಾಕ್ಷಿ, ಗೋಡಂಬಿ, ಯಾಲಕ್ಕಿ, ಲವಂಗ, ಕೇಸರಿ, ಉಪ್ಪು, ಖಾರ, ಹುಳಿ, ಹಾಗಲಕಾಯಿ ಕಹಿ, ಅಡಿಕೆ, ವೀಳ್ಯದೆಲೆ, ದವಸ, ಧಾನ್ಯಾದಿಗಳನ್ನು ಪೋಷಿಸಿ, ಅವುಗಳ ರುಚಿಗಳನ್ನು ಕಾಯ್ದು ನಿತ್ಯವೂ ನಮಗೆ ಉಣಿಸುತ್ತಿರುವವರು ಯಾರು? ಭಾರತೀಶನೇ (ಸೂರ್ಯ ಮತ್ತು ಚಂದ್ರಾಂತರ್ಯಾಮಿಗಳಾಗಿ) ಅಲ್ಲವೇ?" ಬಂಗಾರದ ಮೆರಗು ನವರತ್ನಗಳ ಕಾಂತಿ, ವಸ್ತ್ರಕ್ಕಾಗಿ ಹತ್ತಿ, ರೇಷ್ಮೆ, ಉಣ್ಣೆಗಳ ಅಭಿವೃದ್ಧಿ, ಜೀವರ ಅಷ್ಟ ಭೋಗಾರ್ಥವಾಗಿ ಅವರಿತ್ತ ಆಯುಷ್ಯ, ಆರೋಗ್ಯ, ಜ್ಞಾನಾದಿಗಳನ್ನು ನಿತ್ಯವೂ ಇತ್ತು ಸಲಹುತ್ತಿರುವವರು ಯಾರು? ಕರುಣಾಸಾಗರನಾದ ವಾಯುದೇವನೇ ಅಲ್ಲವೇ? ಇಂಥಾ ಪ್ರಚಂಡ ಸಾಮರ್ಥ್ಯ ಉಳ್ಳ ವಾಯುದೇವರಿಗೆ ವಿರಾಟ ಪೋಷಣೆಯೊಂದು ಘನತರವಾದ ವ್ಯಾಪಾರವೇ? ಕೇವಲ ಅಸುರ ಮೋಹನಾರ್ಥವಾಗಿ ಭೀಮನಿಗೆ ಇದ್ದದ್ದು ಇಷ್ಟೇ ಸಾಮರ್ಥ್ಯವೆಂದು ಅವರು ತಿಳಿಯಲಿ ಎಂದು ಅಷ್ಟೇ ಸಾಮರ್ಥ್ಯವನ್ನು ಮಾತ್ರ ಪ್ರಕಟಿಸಿದನೆಂದು ಶ್ರೀವಿಜಯದಾಸರು ಸಾರುತ್ತಾರೆ. ಈತನು ಸುಜೀವಿಗಳಿಗೆ ನೀಡುತ್ತಿರುವುದು ಇಹ ಸೌಖ್ಯವನ್ನು ಮಾತ್ರವಲ್ಲ. ಪರಲೋಕ ಸೌಖ್ಯವನ್ನೂ ನೀಡುವವನು ಈತನೇ। ಈತನದು ಶಕ್ತಿತಃ ಕಾರ್ಯವಲ್ಲ. ಲೇಶತಃ ಕಾರ್ಯಮಾತ್ರ. ಇದು ಶ್ರೀವೇದವ್ಯಾಸರ ಅಭಿಪ್ರಾಯವೇ ಆಗಿದೆ.

"ಸರ್ವೇಷಾಂ ಜೀವಾನಾಂ ಜ್ಞಾನ ಭಕ್ತಿ ವೈರಾಗ್ಯಂ ದತ್ವಾ ॥
ಸ್ವಾಂತಃ ಭಗವನ್ಮೂರ್ತಿಂ ದರ್ಶಯಿತ್ವಾ ॥
ಇಹಭಗವತ್ಸೇವಾಸಾಧನ ಸಾಮಗ್ರಾದಿಕಂದತ್ವಾ ॥
ಸ್ವಾನುಷ್ಠಿತ ಕರ್ಮಶೇಷ–ಜ್ಞಾನ ಶೇಷ–ಭಕ್ತಿಶೇಷಾದಿಕಂ ದತ್ವಾ ॥
ಸ್ರಕ್ಚಂದನ ತಾಂಬೂಲ ವನಿತಾದಿ ನಾನಾವಿಧಭೋಗಂ ದತ್ವಾ ॥
ಸ್ವಯಂ ತತ್ತ ಜೀವಾನಾಂ ಅಂತರ್ಯಾಮಿತಯಾ ಸ್ಥಿತ್ವಾ ॥
ಸರ್ವ ಕರ್ಮ ಕೃತ್ವಾ । ಸರ್ವಕರ್ಮಾಣಿ ಕಾರಯಿತ್ವಾ ।
ಪಾಲನಂ ಕರೋತೀತಿ ಯತೋತೋ ವಾಯೋಃ ಸ್ಥಿತಿ ಕರ್ತೃತ್ವ ಉಕ್ತಮೇವ ॥ಇತಿ॥"

ಭೀಮಸೇನನು ವಿರಾಟನಗರದಲ್ಲಿ ಉಂಡಿದ್ದು, ಉಟ್ಟಿದ್ದು, ತೊಟ್ಟಿದ್ದು ಉಣಿಸಿದ್ದು ಕೀಚಕನೊಡನೆ ಸೆಣಸಿದ್ದು ಕೇವಲ ಅತ್ಯಲ್ಪ ಸಾಮರ್ಥ್ಯದಿಂದ ಮಾತ್ರ. ಸ್ವರೂಪ ಸಾಮರ್ಥ್ಯವು ಸಾಕಲ್ಯೇನ ಗರುಡ, ಶೇಷ, ರುದ್ರಾದಿ ದೇವತೆಗಳಿಗೂ ಅಗಮ್ಯವಾದುದು.

ಇನ್ನು ಜಗನ್ಮೋಹಿನಿ ರೂಪದಿಮದ ಶ್ರೀಹರಿಯು ದೇವ, ದಾನವ, ಮಾನವ ಸಮೂಹವನ್ನು ದಿಗ್ಭ್ರಾಂತಗೊಳಿಸಿರುವಾಗ ಆತನ ಪ್ರೀತ್ಯರ್ಥವಾಗಿ ಭೀಮಸೇನನು ತಾನೂ ಕೀಚಕ, ವಧಾರ್ಥವಾಗಿಯೂ, ಸಕಲ ಸ್ತ್ರೀಯರ ರೂಪ ಲಾವಣ್ಯಗಳಿಗೆ (ತಥಾ ಪುರುಷರಿಗೂ ಸಹ) ಕಾರಣೀಭೂತನೆಂದು ಸಾರಲು ಮೂಲವಾಯುಭೇದ ವರ್ಜಿತನಾದ ಭೀಮಸೇನನು ಸ್ತ್ರೀರೂಪವನ್ನು ತಾಳಿದುದರಿಲ್ಲಿ ಆಶ್ಚರ್ಯವೇನಿದೆ? ಸ್ತ್ರೀ, ಪುಂ ರೂಪಗಳಿಗೆ ಅಭಿಮಾನಿಗಳಾದ ಇಂದ್ರ–ಶಚಿ, ಕಾಮ–ರತ್ರಿಯರಿಗೆ ನಿಯಾಮಕನಾದ ಭೀಮನು ಸ್ತ್ರೀರೂಪವನ್ನು ತಾಳಿದ್ದರೆ ಆ ರೂಪವನ್ನು ಶಚಿ–ರತಿಯರು ಭಕ್ತಿ ಭಾವದಿಂದ ತಲೆದೂಗಿ ಕೈ ಮುಗಿದರಂತೆ ಆಶ್ಚರ್ಯವೇನಿದೆ? ಬ್ರಹ್ಮಾಂಡದಲ್ಲಿನ ಸಕಲ ಜೀವರಾಶಿಗಳ ರೂಪಗಳು ವಾಯುವಿನಲ್ಲಿ ಇವೆ." ಅನಂತರೂಪಾಯ। ವಿಶೇಷಃ ಸ್ತ್ರೀ ಕೋಟಿ ರೂಪಾಯ" ಎಂದಂತೆ ಮೂರು ಕೋಟಿ ರೂಪಗಳು ವಾಯು ದೇವನಿಗೆ ಇವೆ. ಅವುಗಳಲ್ಲಿ ಗಗನಚರ, ಭೂಚರ, ಜಲಚರ ರೂಪಗಳು ವಾಯುದೇವನಲ್ಲಿ ಇವೆ. ಈ ರೂಪಗಳನ್ನು ಆಯಾ ಜೀವರಾಶಿಗಳಲ್ಲಿ ನಿಂತು ಅಭಿವ್ಯಕ್ತ ಮಾಡುತ್ತಿರುವವನು ವಾಯುದೇವರೇ.

"ಖೇಟಕುಕ್ಕುಟ ಜಲಟವೆಂಬ ತ್ರಿ ।
ಕೋಟಿ ರೂಪವ ಧರಿಸಿ ಸತತ ನಿ ।
ಶಾಟರನು ಸಂಹರಿಸಿ ಸಲಹುವ ಸಕಲ ಸಜ್ಜನರ ॥ ಹ.ಕ.ಸಾ.೨೩–೨೧ ॥"

ಶ್ರೀವಿಜಯದಾಸರು ಕೀಚಕವಧಾ ಪ್ರಸಂಗದಲ್ಲಿ ಭೀಮನು ತಾಳಿದ ಸ್ತ್ರೀ ರೂಪದ ವರ್ಣನೆಯನ್ನು ಇಲ್ಲಿ ಕಾಣಬಹುದು.

ಶ್ರೀವಿಜಯದಾಸರ ಕೃತಿಗಳು ಕೇವಲ ಭಕ್ತಿರಸ ಪ್ರಧಾನವಾದುವುಗಳು. ರಸರಾಜವೆನಿಸಿರುವ ಶೃಂಗಾರ ರಸವು ಅವರಿಗೆ ಸಿದ್ಧಿ ಎನಿಸಿರಲಿಲ್ಲ. ಅದಕ್ಕಾಗಿ ಅವರು ಹೇಗೆ ವರ ಕವಿಗಳಾಗುತ್ತಾರೆ? ಎಂಬ ಪ್ರಶ್ನೆಯನ್ನು ಮುಂದಿರಿಸಿ

ಒಂದು ವೇಳೆ ಅವರು ಶೃಂಗಾರರಸದಿಂದ ಒಂದು ಕವಿತೆಯನ್ನು ಮಾಡಿದರೆ ಅದರಿಂದ ದಾಸರು ಗುಪ್ತಕಾಮಿಗಳು ಎಂಬ ಆರೋಪವನ್ನು ಹೊರಿಸಲು ಕೆಲವರು ಹಂಚಿಕೆಯನ್ನು ಹೂಡಿ ಅವರ ಪ್ರಭಾವವನ್ನು ಕುಂದಿಸಲು ಹವಣಿಸಿದರು. ಆಗ ಜ್ಞಾನಿ ಕುಲತಿಲಕರಾದ ಶ್ರೀದಾಸರು ಶೃಂಗಾರ ರಸಭರಿತವಾದ ಕಾವ್ಯವನ್ನು ರಚಿಸಿದರೂ ಅದು ಗಂಡುಗಲಿ ಭೀಮನ ಸ್ತೋತ್ರರೂಪವಾದುದಾಗಿದ್ದುದರಿಂದ ಸ್ಪರ್ಧಾಳುಗಳು ದಾಸರ ಚರಣಗಳಿಗೆ ಬಾಗಿದರು. ಅದೇ ಈ ಪದ :- ರಾಗ ಭೈರವಿ – ಅಟ್ಟತಾಳ

ಭೀಮಶ್ಯಾಮ ಕಾಮಿನಿಯಾದನು ।
ಭೀಮಶ್ಯಾಮ ಕಾಮಿನಿಯಾದನು ॥ ಪ ॥
ಭೀಮಶ್ಯಾಮ ಕಾಮಿನಿಯಾಗಲು । ಕಾಮನ ಸತಿ ಪೌಲೋಮೆ ಸಕಲ ।
ವಾಮಲೋಚನೆಯಾರು ಮೌಳಿ । ಅಮಲ ಮನದಿ ತೂಗುತ ಪಾಡೆ ॥ಅ.ಪ॥
ದಾಯವಾಡಿ ಸೋತು ಅಂದು । ರಾಯಧರ್ಮ ಪಾಂಡವಾರು ।
ನ್ಯಾಯದಿಂ ಹರಿ ಸೇವೆ ಎಂದು । ಕಾಯದೊಳಗಸೂಯೆಪಡದೆ ।
ಮಾಯದಿಂ ವನವಾಯಿತೆಂದು । ರಾಯಮತ್ಸ್ಯನ ಪುರದಿ ತಮ್ಮ ।
ಕಾಯವನ್ನು ಅಡಗಿಸಿಟ್ಟು । ಅಯೋನಿಜೆಯ ಕೂಡಿ ಇರಲು ॥ ೧ ॥

ಬಾಚಿಹಿಕ್ಕುವ ಕೆಲಸಕೆ । ಪಾಂಚಾಲಿ ಮತ್ಸ್ಯನ ಚದುರೆಯಲ್ಲಿ ।
ಆಚರಣೆಯಿಂದ ಯಾಚಕರಂದದಿ । ವಾಚವಾಡುತ ಕಾಲೋಚಿತಕ್ಕೆ ।
ನೀಚರಲ್ಲಿರೆ ಕೀಚಕನಲ್ಲಿಗೆ । ಸೂಚಿಸಲು ಆಲೋಚನೆಯಿಂದ ।
ನಾಚಿಕೆಯಿಂದ ಚನ್ನೆಪೋಗಲು । ನೀಚ ಖಳನು ಕರವ ಚಾಚಲು ॥ ೨ ॥

ಎಲೆಲೆ ಪೆಣ್ಣೆ ನಿನ್ನೊನಪಿಗೆ । ಸೆಳೆದ ಕಾಮನ ಗೆಲ್ಲನೆಂದು ।
ಒಲಿಸಿಕೊ ಎನ್ನ ಕರುಣ । ಜಲಧಿ ನಾರಿ ಕುಲಸುಮಣಿಯೆ ।
ಬಳಲಿಸದೆ ಸಲಹಿದೊಡೆ ವೆ । ಗ್ಗಳೆಯ ಮಾಳ್ಪೆ ಇಳೆಯೊಳಗೆನೆ ।
ಖಳನ ಮಾತಿಗೆ ತಲೆಯ ತೂಗುತ್ತ । ಲಲನೆಯನ್ನು ಸಲಹಲಿಕ್ಕೆ ॥ ೩ ॥

ಉಟ್ಟ ಅಂಬರ ತೊಟ್ಟ ಕುಪ್ಪುಸ । ಇಟ್ಟ ಸಾದಿ ನ ಬೊಟ್ಟ ಫಣೆಲಿ ।
ಕಟ್ಟಿದ ಮುತ್ತಿನ ಪಟ್ಟಿಕೆ ಕಿವಿಯ । ಲಿಟ್ಟ ವಾಲೆ ತೂಗು ಮಣಿಯು
ಬಟ್ಟ ಕುಚಕೆ ಮುತ್ತಿನ ಗೊಂಚಲು । ಪಟ್ಟೆ ಕಂಕಣ ರ್‍ಯಾಗಟೆ ಚವುರಿ ।
ಧಿಟ್ಟ ಈರೈದು ಬೆರಳಿಗುಂಗುರ । ಮುಟ್ಟಮಾಸುವ ಸೀರೆಯುಟ್ಟು ॥ ೪ ॥

ಥೋರ ಮೌಕ್ತಿಕಹಾರ ವರ ಕೇಯೂರ ಮಿಸುನಿ ಮಂಗಳ ಧಾರ ।
ಹೀರ ವಿದ್ರುಮ ಭಾಪುರೆ ಉ । ತ್ತೂರಿಕೆ ಸುಭುಜದ ಕೀರ್ತಿ ।

ಮೂರು ರೇಖೆ ಉಳ್ಳ ಉದರ । ಚಾರು ನಾಭಿ ತೋರುತ ನಡುವು ।
ಗೀರುಗಂಧ ಗಂಬೂರ ಲೇಪ । ಧಾರಿ ಕಿಂಕಿಣಿ ಕಸ್ತೂರಿ ಸಹಿತ ॥ ೫ ॥

ವಂಕಿ ಡಾಬು ಚೂಡ ಕುಂಕುಮ । ಅಂಕ ಚಾಪ ಉಬ್ಬಿದ ಅತಿ ಆ ।
ಲಂಕಾರ ಭಾವದ ಪಂಕಜ ಮಾಲೆಕ । ಳಂಕವಿಲ್ಲದೆ ಸಂಕಟ ಕಳೆವ ।
ಪಂಕಜಾಂಘ್ರಿ ಝೇಂಕರಿಸೆ ಜಗ । ಶಂಕಿಸೆ ನಾನಾಲಂಕಾರದಿ ಹೊಸ ।
ಅಂಕುರ ವೀರ ಕಂಕಣ ತೊಟ್ಟು । ಬಿಂಕದಿಂದ ಕಂಕನನುಜ ॥ ೬ ॥

ಕಂಬುಗೊರಳು ದುಂಬಿ ಗುರುಳು ದಾ ।ಳಿಂಬ ದಂತನೀಲಾಂಬುದ ಮಿಂಚು ।
ಎಂಬ ತೆರದಿ ಅಂಬಕ ನೋಟದಿ । ತುಂಬಿ ಪೊಳೆವ ಬಿಂಬಾಧರವು ।
ಜಂಬೀರವರ್ಣದ ಬೊಂಬೆಯೋ । ತಂಬುಲಬಾಯಲ್ಲಿ ಹಿಂಭಾಗದ ಜಡೆ ।
ಕುಂಭಿಣಿಗಿಳಿಯೆ ಗಂಭೀರ ಪುರುಷನು । ಹಂಬಲಿಸಿದತಿ ಸಂಭ್ರಮದಿಂದಲಿ ॥ ೭ ॥

ಸಂಧ್ಯಾದೇವಿಯೋ ಇಂದ್ರನ್ನ ರಾಣಿಯೋ । ಕಂದರ್ಪ ಕೈಯರವಿಂದ ಮೊಗ್ಗೆಯೊ ।
ಚಂದ್ರನ್ನ ಸತಿಯೋ ಅಂದವರ್ಣಿಸಲಾ ।ರಿಂದ ಸಾಧ್ಯವು ಅಂದು ರಾತ್ರಿಲಿ ಹೀ।
ಗೆಂದು ಅಮರ ಸಂದೋಹ ಪಾಡೆ । ಮಂದಿರಕ್ಕೆ ನಗೆಯಿಂದ ಬಂದ ।
ಮಂದ ಲಹರಿ ತೋರುತಾಲಿ । ಅಂದು ಕುಂತಿ ನಂದನನಾದ ॥ ೮ ॥

ಭಂಡ ಉಡಿಯಲ್ಲಿ ಪರರ । ಹೆಂಡರು ಕೆಂಡ ಮಂಡಲದೊಳೆನ್ನ ।
ಗಂಡರು ಬಲು ಉದ್ದಂಡರು ನಿನ್ನನು । ಕಂಡರೆ ಬಿಡರು ಖಂಡ್ರಿಸುವರು ।
ಲೆಂಡ ಎನ್ನಲು ಮುಂಕೊಡು ದುಡುಕಿ । ಮಂಡೆಗಲ್ಲ ಕುಚವ ಮುಟ್ಟಿ ।
ಗಂಡು ಎದೆಯ ಕಂಡು ಖಳನು । ಬೆಂಡಾಗಿ ಪೋಗಲು ಬಹಳ ಭಯದಿ ॥ ೯ ॥

ನಾರಿಯಲ್ಲ ಮಕ್ಕಮಹಾ । ಮಾರಿ ಇದೂ ಎನುತ ಶಾ ।
ರೀರವತಿ ಕಠೋರ ಕಂಡು ಝು । ಝುರಿತನಾಗಿ ಯಾರು ನೀನು ।
ಯಾರು ಯಾರು ಎಂದು ಬಹು ವಿ । ಕಾರದಿಂದ ಕ್ರೂರನಾಗೆ ।
ಈರ ಮುಷ್ಟಿಯಿಂದ ಹೊಡೆಯೆ । ಕ್ರೂರ ಖಳನುಕೆಳಗೆ ಬೀಳಲು ॥ ೧೦ ॥

ಸರಸ ಸಂಧಿ ವಿರಸವಾಯ್ತು । ಕರಸಿದನು ಪುರದ ಅರಸು ।
ನರಸಿಂಹನ ನಿಜ ಅರಸಿ ಮೇಲೆ । ಇರಿಸೆ ಮನವ ಮಂದ ಅರಸ ।
ಅರಸಿ ನೋಡೆ ಜೀವದರಸ । ಒರಸಿ ಒಗೆದ ವಿಜಯ ವಿಠಲ ।
ಅರಸೆ ನಿನ್ನ ಲೀಲೆ ಎಂದು । ಸರಸಿಜಾಕ್ಷಿ ಕೂಡೆ ಪೂರಟ ॥ ೧೧ ॥ ॥ ಶ್ರೀ ॥

॥ ಪದ ॥ ವೆಂಕಟೇಶನ ಬಿಟ್ಟು । ಕಿಂಕರರೆಲ್ಲರು ।
ಕಂಕಭಟ್ಟನ ಮುಂದೆ । ಡೊಂಕಿದನೇಕೋ ॥
ಬೆಂಕಿಮಗಳ ಕೂಡೆ । ಕೊಂಕಿ ನಡೆದ ಕೆಟ್ಟ ।
ಅಂಕಿತದವನನು । ಬೆಂಕಿ ಸಖಜ ಸೀಳಿ ॥ ೨೫ ॥

**ಶಬ್ದಾರ್ಥ:** ವೆಂಕಟೇಶ (ವೇಂ = ಸಕಲ ಪಾಪಗಳನ್ನು; ಕಟ = ನಾಶಮಾಡುವವನು; ವೇಂ = ಸಕಲ ವೇದಗಳು; ಕಟ = ಸಮೂಹಗಳು; ಈಶ = ಒಡೆಯ; ಯಾರು ತನ್ನನ್ನು ನಂಬಿ ನಡೆಯುತ್ತಾರೋ ಅವರ ಸಕಲ ಪಾಪಗಳನ್ನು ನಾಶ ಮಾಡಿ; ವೇದಶಾಸ್ತ್ರಗಳ ಅರ್ಥವನ್ನು ತಿಳಿಯುವಂತೆ ಜ್ಞಾನವನ್ನು ಇತ್ತು ಅಪರೋಕ್ಷ ಜ್ಞಾನಿಗಳನ್ನಾಗಿ ಮಾಡುವ ಶ್ರೀಹರಿ; ಈತನಿಗೆ ಮತ್ತು ಶ್ರೀಲಕ್ಷ್ಮೀದೇವಿ. ಬಿಟ್ಟು = ಇವರಿಗೆ ಮಾತ್ರ ಕಿಂಕರನೆನಿಸಿದ ಭೀಮನು. ಈತನಿಗೆ ಉಳಿದವರೆಲ್ಲರೂ = ಗರುಡ, ಶೇಷಾದ್ಯಮರರೆಲ್ಲರೂ. ಕಿಂಕರರು = ಸೇವಕರು. ಹೀಗಿದ್ದ ಮೇಲೆ; ಕಂಕಭಟ್ಟ = ಮಾರುವೇಷದಲ್ಲಿ ಇದ್ದ ಧರ್ಮರಾಯನ ಮುಂದೆ; ಡೊಂಕಿದನೇಕೋ = ಆತನಿಗೆ ಆಗಾಗ ನಮಸ್ಕರಿಸುತ್ತಿದ್ದುದು ಯಾಕಿರಬಹುದು?; ಬೆಂಕಿ ಮಗಳು = ಅಗ್ನಿ ಸಂಜಾತೆ ದ್ರೌಪದಿ; ಕೊಂಕಿ ನಡೆದ = ದುರ್ವರ್ತನೆಯಿಂದ ವರ್ತಿಸಿದ; ಕೆಟ್ಟ ಅಂಕಿತದವನು = ದುಶ್ಶಾಸನ; ಬೆಂಕಿ ಸಖಜ = ಬೆಂಕಿಗೆ ಮಿತ್ರನುವಾಯು; ಆತನಜ = ಪುತ್ರ – ಭೀಮನು; ಸೀಳಿ = ಸಂಹರಿಸಿದನು.

**ಭಾವಾರ್ಥ:** ಜೀವೋತ್ತಮನಾದ ಭೀಮಸೇನನು ಲಕ್ಷ್ಮೀನಾರಾಯಣರನ್ನು ಬಿಟ್ಟು ಯಾರಿಗೂ ನಮಸ್ಕರಿಸುವವನಲ್ಲ. ಬದಲಿಗೆ ಸಕಲ ಜೀವಸ್ತೋಮಸಮಸ್ಕೃತನು. ಹೀಗಿರುವಾಗ ವಿರಾಟನಗರದಲ್ಲಿ ಅನೇಕ ವೇಳೆ ಧರ್ಮರಾಯನಿಗೆ ಅಧೀನನಾಗಿದ್ದವನಂತೆ ನಟಿಸುತ್ತ ನಮನಾದಿಗಳನ್ನು ಮಾಡುತ್ತಿದ್ದನು. ಆತನ ಆಜ್ಞೆಯನ್ನು ಸೇವಕನಂತೆ ಪಾಲಿಸುತ್ತಿದ್ದನು. ಕೀಚಕನನ್ನು ಸಂಹರಿಸಲು ಮಹಾಮರ ಒಂದರ ಕಡೆಗೆ ಈತನು ದೃಷ್ಟಿಯನ್ನು ಹರಿಸಿದಾಗ ಎಲಾ ವಲಲಾ ಈ ಮರವು ಇನ್ನೂ ಹಸಿಯಾಗಿಯೇ ಇದೆ. ಈಗ ಅದು ನಿನ್ನ ಉಪಯೋಗಕ್ಕೆ ಬಾರದು; ಎಂದು ಹೇಳಿದಾಗ ಭೀಮನು "ಸರಿ" ಎಂದು ಸುಮ್ಮನಾದನು. ಸಕಲ ಜೀವ ಪ್ರೇರಕನಾದ ಭೀಮನಿಗೆ ಈ ಮರ್ಮವು ತಿಳಿದಿರಲಿಲ್ಲವೇ? ಧರ್ಮಜನಿಗೆ ಸೇವಕನಂತೆ ನಟಿಸಿ, ಆತನಿಂದ ಸೇವೆಯನ್ನು ಸ್ವೀಕರಿಸಿ ತನ್ನ ಲೀಲೆಯನ್ನು ಮರೆಮಾಚಿ ಅಸುರರನ್ನು ಮೋಹಿಸಿದನು. ಈ ಯುಕ್ತಿಯನ್ನು ಗಮನಿಸಿದ ದೇವತೆಗಳು ಕೈಮುಗಿದರು. ಅಜ್ಞಾತ ವಾಸವು ಇನ್ನೂ ಮುಗಿದಿಲ್ಲವೆಂಬುದು ಧರ್ಮಜನಿಗಿಂತ ಭೀಮನಿಗೇ ಹೆಚ್ಚಾಗಿ ತಿಳಿದಿತ್ತು. ಆದರೆ ದಡ್ಡನಂತೆ ನಟಿಸಿ ತನ್ನ ಲೀಲೆಯನ್ನು ಮರೆಮಾಚಿದನು. ಭಗವತ್ಪ್ರೀತಿಗಾಗಿ.

**"ಮುಖ್ಯಪ್ರಾಣ ವಶೇ ಸರ್ವಂ । ಸವಿಷ್ಣೋರ್ವಶಗಃ ಸದಾ ॥ ಅ.ಭಾ ॥"**

ಭೀಮಸೇನನು ಜಗದ್ಗುರುವು. ಪರಮಾತ್ಮನು ಜಗತ್ಪಿತನಾದರೂ ಅವತಾರ ಕಾಲದಲ್ಲಿ ಲೋಕ ಶಿಕ್ಷಣಾರ್ಥವಾಗಿ ದಶರಥ, ವಸುದೇವರಿಗೆ ನಮಿಸಿದನು. ಅದರಂತೆ ಆತನ ಬಂಟನಾದ ಭೀಮನು ಜ್ಯೇಷ್ಠಭ್ರಾತೃವು ಪಿತೃಸಮಾನನೆಂಬುದನ್ನು ಜಗತ್ತಿಗೆ ತೋರಿಸಲಿಕ್ಕಾಗಿ ಧರ್ಮಜನಿಗೆ ವಿಧೇಯನಾಗಿ ನಡೆದುಕೊಂಡನು. ಇಷ್ಟು ಮಾತ್ರದಿಂದ ಶ್ರೀಹರಿಯ ಅಥವಾ ಭೀಮಸೇನನ ಸ್ವರೂಪ ಯೋಗ್ಯತೆಗೆ ಧಕ್ಕೆ ಬರುವುದಿಲ್ಲ.

"ದೇವಾನಾಂ ಸರ್ವ ವಿದುಷಾಮಪಿ । ಪ್ರಾಪ್ತೇ ನರೇಷು ಜನನೇ ನರವತ್ಪ್ರವೃತ್ತಿಃ ॥"
"ಪೂರ್ವಾಶ್ಚಪಶ್ಚಾತ್ । ಪುನರೇವ ಜಾತೋ । ನಾ ಶ್ರೇಷ್ಠತಾಮೇತಿ ಕಥಂಚಿದಸ್ಯ ॥ ತಾ.ನಿ. ॥"

ಶ್ರೀಕೃಷ್ಣ ಭಕ್ತರಾದ ಪಾಂಡವರು ವಿರಾಟ ನಗರವನ್ನು ಸಂರಕ್ಷಿಸಿದ ಮೇಲೆ ದ್ರೌಪದೇದೇವಿಯನ್ನು ಮುಡಿ ಪಿಡಿದು ಸಭೆಗೆ ಎಳೆತಂದ ದುಷ್ಟ ದುಶ್ಶಾಸನನ್ನು ಶೀಳಿ ಅವನ ನೆತ್ತರು ತೈಲವನ್ನು ದ್ರೌಪದಿಯ ಕೇಶರಾಶಿಗೆ ಸವರಿ ಅವನ ಕರುಳ ಪುಷ್ಪದಂಡೆಯನ್ನು ಆಕೆಯ ಮುಡಿಗೆ ಮುಡಿಸಬೇಕಾದ ಕಾರ್ಯವು ಸನ್ನಿಹಿತವಾಯಿತು. ಸ್ತ್ರೀಯೇ ಬೆಂಕಿ. ತತ್ರಾಪಿ ಬೆಂಕಿಯ ಮಗಳೇ ಆದ ದ್ರೌಪದಿಯನ್ನು ಹೀನಾಯಗೊಳಿಸಲು ಯತ್ನಿಸಿ ವಿಫಲನಾದ ದುರಾತ್ಮನಿಗೆ ದಾರುಣಮಯವಾದ ಮರಣವಲ್ಲದೆ ಮತ್ತಾವ ಫಲವುತಾನೇ ಸಿಕ್ಕೀತು?

ಪಾಂಡವರು ಅಜ್ಞಾತವಾಸವನ್ನು ಯಶಸ್ವಿಯಾಗಿ ನೆರವೇರಿಸಿದರು. ಉತ್ತರ ಗೋ ಗ್ರಹಣದಲ್ಲಿ ಪರಾಜಯವನ್ನು ಹೊಂದಿದ ಕೌರವರು ಅಸೂಯಾಜ್ಞಾಹುತಾಗ್ನಿಕೋಪಾ ಜ್ವಾಲಾ ಮುಖಿಗಳಾಗಿ ಅಭಿಮನ್ಯು – ಉತ್ತರಾದೇವಿಯ ಕಲ್ಯಾಣ ಪ್ರಸಂಗದಿಂದ ಪಾಂಡವರನ್ನು ನಿಸ್ಸಂಕೋಚವಾಗಿ ತಿಳಿದರು ಮತ್ತು ದುರ್ಯೋಧನನು ಕರ್ಣ, ದುಶ್ಶಾಸನ, ಶಕುನಿ, ಭೀಷ್ಮ, ದ್ರೋಣಾದಿ ಪ್ರಮುಖರನ್ನು ಸೇರಿಸಿ "ಪಾಂಡವರು ಅವಧಿ ಪೂರ್ವದಲ್ಲೇ ಗುರುತಿಸಲ್ಪಟ್ಟವರಾಗಿದ್ದಾರೆ. ಆದ್ದರಿಂದ ಅವರು ಪುನಃ ವನವಾಸಕ್ಕೆ ತೆರಳಬೇಕು" ಎಂದು ಹೂಂಕರಿಸಿದನು. ಅದನ್ನು ದುಶ್ಶಾಸನ, ಶಕುನಿ, ಜಯದ್ರಥ, ಕರ್ಣರು ಅನುಮೋದಿಸಿದರು. ಆದರೆ ಭೀಷ್ಮಾಚಾರ್ಯರು ಚಾಂದ್ರಮಾನದ ಲೆಕ್ಕಾಚಾರ ಪ್ರಕಾರವಾಗಿ ವನವಾಸವನ್ನು ಕೈಗೊಂಡಿರುವುದರಿಂದ ಚಾಂದ್ರಮಾನದ ಪ್ರಕಾರವಾಗಿ ಪಾಂಡವರ ವನವಾಸ ಮತ್ತು ಅಜ್ಞಾತ ವಾಸಗಳು ಯಶಸ್ವಿಯಾಗಿ ನೆರವೇರಿವೆ ಎಂದು ಹೇಳಿದರು. ದ್ರೋಣಾಚಾರ್ಯರು ಸಹ ಇದನ್ನೇ ಹೇಳಿದರು. ಇದಕ್ಕೆ ತೊಂಡಿ ನ್ಯಾಯಕ್ಕೆ ಹೆಸರಾದ ದುರ್ಯೋಧನನು ಪ್ರತಿಯಾಗಿ ದುರ್ವಾದಗಳನ್ನೇ ಮುಂದಿರಿಸಿದ. ಭೀಷ್ಮ, ದ್ರೋಣರ ಅಭಿಪ್ರಾಯವನ್ನು ಅವನು ಮನ್ನಿಸಲಿಲ್ಲ. ಈ ವಿಚಾರದಲ್ಲಿ ದೈವಜ್ಞರು ಲೆಕ್ಕಾಚಾರಮಾಡಿ ಪಾಂಡವರು ಸೌರಮಾನ ರೀತಿಯಾಗಿಯೂ ವನವಾಸ ಅಜ್ಞಾತವಾಸಗಳನ್ನು ಪೂರೈಸಿ ಹಲವು ದಿನಗಳಾದ ಮೇಲೆಯೇ ಪಾಂಡವರು ಪ್ರಕಟರಾಗಿರುವುದನ್ನು ಸ್ಥಿರಪಡಿಸಿದರು.

ಆದರೇನು? ಪೂರ್ವಾಗ್ರಹ ಪೀಡಿತನಾದ ದುರ್ಯೋಧನನು ಅತಿಯಾದ ಆಸೆ, ಅಸೂಯೆಗಳಿಂದ ಪೋಷಿತನಾಗಿ ಸ್ವರೂಪವೇ ಮೂರ್ತಿವೆತ್ತ ಹಠದಿಂದ ಎಲ್ಲರನ್ನೂ ತಿರಸ್ಕರಿಸಿ ಪಾಂಡವರು ಪುನಃ ವನವಾಸಿಗಳಾಗಲೇ ಬೇಕು ಎಂದು ಬೊಬ್ಬಿರಿದನು.

ಇತ್ತ ಪಾಂಡವರು ವಿರಾಟ ನಗರದಿಂದ ಪಾಂಚಾಲ ದೇಶಕ್ಕೆ ಬಂದು ಕೆಲವು ದಿನ ದ್ರುಪದನಲ್ಲಿ ಆತಿಥ್ಯವನ್ನು ಪಡೆದರು. ಮುಂದೆ ತಮ್ಮ ರಾಜ್ಯವನ್ನು ತಮಗೆ ಹಿಂದಿರುಗಿಸಬೇಕೆಂದು ದುರ್ಯೋಧನನಿಗೆ ಸಂದೇಶವನ್ನು ಕಳುಹಿಸಲು ವ್ಯವಸ್ಥೆಯನ್ನು ಮಾಡಿದರು. ಪಾಂಚಾಲ ನಗರಕ್ಕೆ ಶ್ರೀಕೃಷ್ಣನನ್ನು ಬರಮಾಡಿಕೊಂಡರು. ದ್ರುಪದನ ಸಭೆಯಲ್ಲಿ ಚರ್ಚಿಸಿ ಶ್ರೀಕೃಷ್ಣನ ಅನುಮತಿಯನ್ನು ಪಡೆದು ಪಾಂಡವರ ಸಂದೇಶವನ್ನು ದ್ರುಪದನ ಪುರೋಹಿತರ ಮುಖಾಂತರವಾಗಿ ಧೃತರಾಷ್ಟ್ರನಿಗೆ ತಲುಪಿಸಿದರು. ಬಂದ ಪುರೋಹಿತರನ್ನು ಗೌರವದಿಂದಲೇ ಕಂಡ ಧೃತರಾಷ್ಟ್ರನು

ಕಲ್ಮಾವೇಶದಿಂದ ಕಾದು ಕೆಂಡವಾಗಿದ್ದುದರಿಂದ ಪಾಂಡವರಿಗೆ ರಾಜ್ಯವನ್ನು ಹಿಂದಿರುಗಿಸುವ ವಿಚಾರದಲ್ಲಿ ಮೌನವನ್ನು ತಾಳಿದನು. ನಕಾರಾತ್ಮಕವಾಗಿ ತಲೆಯನ್ನು ಮಾತ್ರ ಅಡ್ಡಡ್ಡವಾಗಿ ತಿರುಗಿಸಿದನು. ಆಗ ಪುರೋಹಿತರು ಸಾಮೋಪಾಯದ ದಾಳಗಳನ್ನು ಎಸೆಯುತ್ತ ಧೃತರಾಷ್ಟನಿಗೆ ಬುದ್ಧಿವಾದವನ್ನು ಹೇಳಿದರು.

ಮಹಾರಾಜಾ, ಇತ್ತ ಕೇಳು, ಪಾಂಡವರು ದ್ಯೂತಪ್ರತಿಜ್ಞೆಯನ್ನು ಸರಿಯಾಗಿ ಪಾಲಿಸಿರುತ್ತಾರೆ. ಈಗ ನೀನು ಅವರ ರಾಜ್ಯವನ್ನು ಅವರಿಗೆ ಹಿಂದಿರುಗಿಸದಿದ್ದರೆ ಇನ್ನು ಮುಂದೆ ಮಹಾ ಅನರ್ಥವು ಕಾದಿದೆ. ಭೀಮಾರ್ಜುನರು ಸಾಮಾನ್ಯರಲ್ಲವೆಂಬುದು ನಿನಗೆ ಹೆಜ್ಜೆ ಹೆಜ್ಜೆಗೆ ಧೃಡಪಟ್ಟಿರುತ್ತದೆ. ಇನ್ನೂ ಅವರ ಪರಾಕ್ರಮದ ಬಗ್ಗೆ ನೀನು ಶಂಕಿಸುವುದು ಥರವಲ್ಲ.

"ಯಸ್ಯ ಭೀಮಾರ್ಜುನೌ ಯೋಧೌ । ನೇತಾಯಸ್ಯ ಜನಾರ್ದನಃ ॥

ಪರಾಕ್ರಮಿಗಳಾದ ಭೀಮಾರ್ಜುನರಿಗೆ ಶ್ರೀಕೃಷ್ಣನ ಮಾರ್ಗದರ್ಶನವಿದೆ. ಹಿಂದೆ ಎಂಥೆಂಥಾ ಪರಾಕ್ರಮಿಗಳಾದವರೂ ಇವರಿಂದ ಧ್ವಂಸರಾಗಿದ್ದಾರಲ್ಲವೇ? ಜರಾಸಂಧ, ಜಟಾಸುರ, ನಿವಾತಕವಚರನ್ನು ಅವರು "ಶೃತಾಸ್ತೇ ಭೀಮ ನಿಹತಾ । ಜರಾಸಂಧಾದಯೋ ಖಿಲಾಃ ॥

ಯಥಾಜಟಾಸುರ ಪಾಪಃ । ಸಂಚೂರ್ಣಿತ ಶಿರಾಸ್ತಮಃ ॥
ನಿವಾತಕವಚಾಶ್ಚೈವ । ಹತಾಃ ಪಾರ್ಥೇನ ತೇಶ್ರುತಾಃ ॥ ೨೪-೧೧॥

ಧ್ವಂಸ ಮಾಡಿರುವುದನ್ನು ನೀನು ತಿಳಿದೇ ಇರುವಿ. ಆದ್ದರಿಂದ ನೀನು ವಿವೇಕವನ್ನು ಹೊಂದಿ ನಿನ್ನ ಮಕ್ಕಳಿಗೆ ಬುದ್ಧಿವಾದವನ್ನು ಹೇಳಿ ಪಾಂಡವರ ರಾಜ್ಯವನ್ನು ಅವರಿಗೆ ಹಿಂದಿರುಗಿಸಿ ಸುಖವಾಗಿ ಬಾಳು. ಎಂದು ಬಹು ವಿಧವಾಗಿ ಬೋಧಿಸಿದರು. ಆದರೆ ತನ್ನ ಮಗನಿಗೆ ಬುದ್ಧಿಯನ್ನು ಹೇಳಲು ಶಕ್ಯವಿಲ್ಲವಾಗಿದ್ದುದರಿಂದ ಮಗನಿಗೇ ಹಿತವಾದರೆ ಆಗಲಿ ಎಂಬ ಪುತ್ರ ವ್ಯಾಮೋಹಿತನಾದ ಧೃತರಾಷ್ಟನು ಪುರೋಹಿತರ ಮಾತಿಗೆ ಒಡಂಬಡಲಿಲ್ಲ. ಅದಕ್ಕೆ ದುರ್ಯೋಧನಾದಿಗಳ ಒತ್ತಡವೂ ಪ್ರಬಲವಾಗಿತ್ತು. ಆದ್ದರಿಂದ ಧೃತರಾಷ್ಟನು ಪುರೋಹಿತರನ್ನು ಬರಿಗೈಯಲ್ಲಿ ಹಿಂದಿರುಗಿಸಿದನು.

ಇದಕ್ಕೂ ಮೊದಲೇ ಅಂದರೆ ಕೀಚಕವಧಾ ಪೂರ್ವದಲ್ಲಿಯೇ ಇನ್ನೇನು ಅಜ್ಞಾತವಾಸವು ಆರಂಭವಾಗುತ್ತಿದ್ದಂತೆಯೇ ದುರ್ಯೋಧನನು ತನ್ನ ಕಪಟ ಬುದ್ಧಿಗನುಗುಣವಾಗಿ ಜನರನ್ನು ವಂಚಿಸಿ ತನ್ನೆಡೆಗೆ ವಾಲಿಸಿಕೊಳ್ಳಲಿಕ್ಕಾಗಿ ಸುಳ್ಳಿನ ಕರಪತ್ರಗಳನ್ನು ಒಳ್ಳೇ ಸಂಪನ್ನ ಜನರ ಕೈಯಿಂದ ಒತ್ತಾಯ ಪೂರ್ವಕವಾಗಿ ಬರೆಸಿ ಪಾಂಡವರನ್ನು ಅಲ್ಲಿ ಕಂಡೆವು. ಇಲ್ಲಿ ಕಂಡೆವು ಎಂದು ಪ್ರಚಾರ ಮಾಡುತ್ತಾ ಸಜ್ಜನರ ಕಡೆಯಿಂದ ಮಾಡಿಸುತ್ತಾ ಪಾಂಡವರು ಕೈಗೆ ಸಿಕ್ಕೇ ಬಿದ್ದರು. ತಾವಾಗಿಯೇ ಪುನಃ ಹನ್ನೆರಡು ವರ್ಷ ವನವಾಸಕ್ಕೆ ಹೊರಟು ಹೋದರೆಂದು ಪ್ರಚಾರ ಮಾಡಿಸಿದನು. ಡಂಗೂರ ಹೊಡಿಸಿದನು. ಸಜ್ಜನರ ಬಾಯಿಂದ ಹೇಳಿಸಿದನು. ಕರಪತ್ರಗಳನ್ನು ಹಂಚಿಸಿ ಬಿಟ್ಟನು. ಸಜ್ಜನರ ಬಾಯಿಂದ, ಕೈಬರಹಗಳಿಂದ ಪ್ರಭಾವಿತರಾದ ಜನರು ಇದು ಸತ್ಯವೆಂದೇ ನಂಬಿದರು. ಪ್ರಚಾರವು ನಿರಂತರವಾಗಿ ಸಾಗಿದುದರಿಂದ ಜನರು ಪಾಂಡವರನ್ನು ಮರೆತು ಬಿಡುವ ಹಂತವನ್ನೂ ತಲುಪಿಬಿಟ್ಟಿದ್ದರು.

ದುಶ್ಶಾಸನನು ರಾಜ್ಯದಲ್ಲಿ ಅನೇಕ ಸತ್ಪುರುಷರನ್ನು ಗಡಿಪಾರು ಅಥವಾ ಮೃತ್ಯು ಸಿಬಿರವನ್ನು ಸೇರಿಸಲು ಹವಣಿಸಿದ್ದನು. ಆದರೆ ಶಕುನಿಯ ಸಲಹೆಯಂತೆ ದುರ್ಯೋಧನನು ಅದಕ್ಕೆ ಸಮ್ಮತಿಸಲಿಲ್ಲ. ಯಾಕೆಂದರೆ ಅಂಥಾ ಸಜ್ಜನರ ಬಾಯಿಂದ ಹೇಳಿಸಿ ಕೈಯಿಂದ ಬರೆಸಿದರೆ ಜನ ನಂಬುತ್ತಾರೆ. ಅಂಥವರ ಬಾಯಿಂದ ಪಾಂಡವರ ದೂಷಣೆಯನ್ನು ಮಾಡಿಸಿದರೆ, ತನ್ನನ್ನು ಹೊಗಳಿಸಿಕೊಂಡರೆ ಜನ ಮೆಚ್ಚಿಗೆ ಸಿಗುತ್ತದೆಂದು ಅವರ ತರ್ಕ! ದುಶ್ಶಾಸನನು ಸುಜನರನ್ನು ಓಡಿಸುವುದಿರಲಿ. ಆ ಸಜ್ಜನರೇ ದೇಶದಿಂದ ಹೊರ ಹೋಗಲು ಹವಣಿಸಿದ್ದರು. ಆದರೆ ದುರ್ಯೋಧನನೇ ಮೇಲಿನ ಕಾರಣಗಳಿಗಾಗಿ ಅವರಿಗೆ ಅಡ್ಡಗಾಲನ್ನು ಹಾಕಿದ್ದನು.

**"ಯದಾತಿ ಜ್ಞಾನಿ ಸದ್ಭಾವೇ । ನೈವಗೃಣ್ಹಂತಿ ತತ್ಪರಂ ॥**
**ಅಸ್ತೂರಾಣಾಂ ತಮಃ ಪ್ರಾಪ್ತಿಃ । ತತೋ ನಿಯಮತೋ ಭವೇತ್ ॥"**

ಹಿಂದಿರುಗಿದ ಧೃಪದನ ಪುರೋಹಿತರು ಹಸ್ತಿನಾವತಿಯಲ್ಲಿ ನಡೆದ ಕಲಾಪವನ್ನು ಪಾಂಡವ, ದ್ರುಪದ, ವಿರಾಟರಾಯನೇ ಮೊದಲಾದವರಿಗೆ ತಿಳಿಸಿದರು. ಯುದ್ಧವು ಅನಿವಾರ್ಯವೆಂಬುದು ದೃಢವಾಯಿತು. ಶ್ರೀಕೃಷ್ಣನಾದರೂ ಪರಿಸ್ಥಿತಿಯನ್ನು ಗಮನದಲ್ಲಿ ಇಟ್ಟು ಕೊಂಡು ದ್ವಾರಕಾಪುರಕ್ಕೆ ಹಿಂದಿರುಗಿದನು.

ಶ್ರೀ ಕೃಷ್ಣನು ದ್ವಾರಕೆಗೆ ಹಿಂದಿರುಗಿದ ಮೇಲೆ ಪಾಂಡವ ಕೌರವರು ಯುದ್ಧ ಸನ್ನಾಹಕ್ಕೆ ತೊಡಗಿದರು. ಉಭಯರೂ ತಮ್ಮ ತಮ್ಮ ಹಿತೈಷಿಗಳಾದ ರಾಜ ಸಾಮಂತರುಗಳನ್ನು ಸಂಧಿಸಿ ತಮಗೆ ಯುದ್ಧ ಸಹಾಯವನ್ನು ಮಾಡಬೇಕೆಂದು ಮನವಿಗಳನ್ನು ಸಲ್ಲಿಸಿದರು. ಈ ನಿಟ್ಟಿನಲ್ಲಿ ಪಾಂಡವರು ಏಳು ಅಕ್ಷೌಹಿಣೀ ಸೈನ್ಯವನ್ನು ಸಂಗ್ರಹಿಸಲು ಸಮರ್ಥರಾದರೆ ಕೌರವರು ಹನ್ನೊಂದು ಅಕ್ಷೌಹಿಣಿ ಸೈನ್ಯವನ್ನು ಸಂಗ್ರಹಿಸುವಲ್ಲಿ ಯಶಸ್ವಿಯಾದರು. ಭರತ ಖಂಡವು ಭೂಭಾರದಿಂದ ತಲ್ಲಣಿಸಿತು. ಅಕ್ಷೌಹಿಣಿಯ ಸಂಖ್ಯಾ ಬಲದ ಲೆಕ್ಕಾಚಾರವು ಈ ರೀತಿಯಾಗಿರುವುದು.

| | ಅಕ್ಷೋಹಿಣಿ | ರಥ-ರಥಿಕರು | ಗಜ-ಮಾವುತರು | ಅಶ್ವ-ರಾವುತರು | ಕಾಲಾಳುಗಳು |
|---|---|---|---|---|---|
| | ೧ ಅಕ್ಷೋಹಿಣಿಗೆ | ೨೧.೮೭೦ | ೨೧.೮೭೦ | ೬೫.೬೧೦ | ೧.೦೯.೩೫೦ |
| | ೭ ಅಕ್ಷೋಹಿಣಿಗೆ | ೧.೫೩.೦೯೦ | ೧.೫೩.೦೯೦ | ೪.೫೯.೨೭೦ | ೭.೬೫.೪೫೦ |
| | ೧೧ ಅಕ್ಷೋಹಿಣಿಗೆ | ೨.೪೦.೫೭೦ | ೨.೪೦.೫೭೦ | ೭.೨೧.೭೧೦ | ೧೨.೦೨.೮೫೦ |
| **ಒಟ್ಟು** | **೧೮ ಅಕ್ಷೋಹಿಣಿಗೆ** | **೩,೯೩,೬೬೦** | **೩,೯೩,೬೬೦** | **೧೧,೮೦,೯೮೦** | **೧೯,೬೮,೩೦೦** |

ಹೀಗೆ ಸೈನ್ಯಸಂಗ್ರಹ ಉದ್ಯೋಗದಲ್ಲಿ ಶ್ರೀಕೃಷ್ಣನನ್ನು ಸಂಧಿಸಲು ಉಭಯರೂ ಮರೆಯಲಿಲ್ಲ. ಪುರೋಗಾಮಿಯಾದ ದುರ್ಯೋಧನನು ತಾನೇ ಮೊದಲು ಹೋಗಿ ಶ್ರೀಕೃಷ್ಣನನ್ನು ತನ್ನಕಡೆಗೆ ಮಾಡಿಕೊಳ್ಳಲು ಹವಣಿಸಿದನು. ತಡ ಮಾಡದಲೇ ದ್ವಾರಕಾ ಪಟ್ಟಣಕ್ಕೆ, ಅಮೃತಕ್ಕೆ ಮೊದಲು ಹಾಲಾಹಲವು ಹುಟ್ಟಿದಂತೆ ಮಹಾಲಕ್ಷ್ಮೀಗಿಂತ ಮೊದಲು ಜೇಷ್ಠಾ (ಅಲಕ್ಷ್ಮೀ) ಹುಟ್ಟಿದಂತೆ, ಶುದ್ಧೇಕಾದಶಿಗಿಂತ ಮೊದಲು ವಿದ್ಧೇಕಾದಶಿಯು ಬಂದಂತೆ ಸುರರಿಗಿಂತ ಮೊದಲು ಅಸುರರು (ಪೂರ್ವ ದೇವತೆಗಳು) ಹುಟ್ಟಿದಂತೆ, ಸಿದ್ಧಾಂತಕ್ಕೆ ಮೊದಲು ಪೂರ್ವಪಕ್ಷವು ಹುಟ್ಟಿದಂತೆ, ಸಮುದ್ರಮಥನದಲ್ಲಿ ದೈತ್ಯರು ಮುಖ ಭಾಗವನ್ನು ಹಿಡಿದಂತೆ ಕುಪಂಡಿತನು ತೀರ್ಥ

ಶಾಲು ಸಂಭಾವನೆಗಳಿಗೆ ಎಲ್ಲರನ್ನೂ ಹಿಂದಕ್ಕೆ ನೂಕಿ ತಾನೇ ಮುಂದೆ ಬಂದ ಕೈ, ಮೈಗಳನ್ನು ಒಡ್ಡಿ ನಿಲ್ಲುವಂತೆ ಮೊದಲು ಬಂದ ಅವನು ಶ್ರೀಕೃಷ್ಣನ ಅರಮನೆಯನ್ನು ಪ್ರವೇಶಿಸಿದನು. ಆಗ ಶ್ರೀಕೃಷ್ಣನು ನಿದ್ರಾನಿಶಾದಿಗಳಿಂದ ರಹಿತನಾಗಿದ್ದಾಗ್ಯೂ ಯೋಗ ನಿದ್ರಾಮುದ್ರಾಂಕಿತನಾಗಿ ಪವಡಿಸಿದ್ದನು. ತಮೋಗುಣದ ಸಾಕಾರ ಮೂರ್ತಿಯಾಗಿದ್ದ ದುರ್ಯೋಧನನು ಅಹಂಕಾರ ಮದಭರಿತನಾಗಿ ಹೀಗೆ ಯೋಚಿಸಿದನು. "ನಾನು ಚಕ್ರವರ್ತಿ, ಶ್ರೀಕೃಷ್ಣನು ಯಾದವರಿಗೆ ರಾಜನು ಇವನು ಮಲಗಿರಲು ನಾನು ಇವನ ಕಾಲ ಕೆಳಗೆ ಕುಳಿತುಕೊಳ್ಳಬೇಕೇ? ಊಹುಂ, ನನ್ನ ಅಂತಸ್ತಿಗೆ ತಕ್ಕಂತೆ ಶ್ರೀಕೃಷ್ಣ ಶಿರೋಭಾಗದಲ್ಲಿರುವ ಕನಕಗದ್ದಿಗೆಯ ಮೇಲೇಯೇ ಕೂಡುತ್ತೇನೆ ಎಂದು ಅಲ್ಲಿಗೆ ಧಾವಿಸಿ ಬಂದು ಕುಳಿತು ಕೊಂಡನು.

ತರುವಾಯ ಅರ್ಜುನನು ಬಂದನು. ಸ್ವಾಮಿಯ ಪಾದಾರವಿಂದಗಳನ್ನು ಕಂಡು ನಮಿಸಿ ಮಂಡಿಯೂರಿ ಕೆಳಗೆ ಕುಳಿತನು. ಅಷ್ಟರಲ್ಲೇ ಎಚ್ಚೆತ್ತವನಂತೆ ಪ್ರಕಟಿಸಿದ ಶ್ರೀಕೃಷ್ಣನು ಮೊದಲು ಅರ್ಜುನನನ್ನು ಮಾತ್ರ ಕಂಡವನಂತೆ ಆತನೊಡನೆ ಸಂಭಾಷಿಸತೊಡಗಿದನು. ಆಗ ಕುಮತಿ ದುರ್ಯೋಧನನು ತಾನೇ ಮೊದಲು ಬಂದವನೆಂದು ತಿಳಿಸಿ ತನಗೆ ಯುದ್ಧ ಸಹಾಯವಮಾಡಬೇಕೆಂದು ಕೇಳಿದನು. ಆಗ ಶ್ರೀಕೃಷ್ಣನು ಈರ್ವರಿಗೂ ಸಮ್ಮತವಾಗಿರುವ ಉಪಾಯವನ್ನು ಮುಂದಿಟ್ಟು ಇಬ್ಬರ ಅಭಿಮತದಂತೆ ತಾನು ಪಾಂಡವರ ಪಕ್ಷವನ್ನು ವಹಿಸಿ ದುರ್ಯೋಧನನಿಗೆ ೧೦ ಲಕ್ಷ ಸೈನಿಕರನ್ನು ಇತ್ತು ಕೃತವರ್ಮನ ಸಹಿತವಾಗಿ ಕಳಿಸಿಕೊಟ್ಟನು. ತಾನು ಶಸ್ತ್ರವನ್ನು ಹಿಡಿಯುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿದನು. ಶ್ರೀಕೃಷ್ಣನು ಪಾಂಡವ ಪಕ್ಷನೆನಿಸಿದರೆ ಬಲರಾಮನು ದುರ್ಯೋಧನನ ಪಕ್ಷವನ್ನು ಸೇರಿದನು. ವಿರಾಟ, ದ್ರುಪದ, ಕೈಕೇಯ, ಧೃಷ್ಟಕೇತು, ಕಾಶೀರಾಜ, ಪುರುಜಿತ, ಕುಂತಿಭೋಜ, ಚೇಕಿತ, ಸಾತ್ಯಕಿ, ಪಾಂಡ್ಯ, ವೀರಶೇನ ಇವರೆಲ್ಲಾ ಪಾಂಡುಪಾಳೆಯದಲ್ಲಿ ಸೇರಿದರೆ ಅವಂತಿ ಅರಸರಾದ ವಿಂದಾನುವಿಂದರು, ಜಯತ್ಸೇನ, ಕೆಲವು ಕೈಕೇಯರು, ಕ್ಷೇಮಧೂರ್ತಿ, ದಂಡಧರ, ಕಳಿಂಗ, ಅಂಬಷ್ಟ, ಶ್ರುತಾಯು, ಅಚ್ಯುತಾಯು, ಬೃಹದ್ವಲ, ಸುದಕ್ಷಿಣ, ಶ್ರುತಾಯುಧ, ಸೈಂಧವ, ಅಲಂಬಸ, ಅಲಾಯುಧ, ಅಲಂಬ ಇತ್ಯಾದಿ ಅಸುರ ಭಾವದವರು ದುರ್ಯೋಧನನ ಪಕ್ಷವನ್ನು ಹೊಂದಿದರು. ಜೊತೆಗೆ ಭಗದತ್ತ, ಬಾಲ್ಹೀಕ, ಭೀಷ್ಮ, ದ್ರೋಣ, ಕೃಪ ಮೊದಲಾದ ಸಾತ್ವೀಕರೂ ಶ್ರೀಹರಿ ಪ್ರೇರಣೆಯಂತೆ (ಅಸುರ ಮೋಹನಕ್ಕಾಗಿಯೂ, ಅಸುರಾವೇಶದಿಂದಲೂ, ಪ್ರಾರಬ್ಧ ಭೋಗ ನಿಮಿತ್ತವಾಗಿಯೂ, ದುರ್ಯೋಧನನನ್ನು ಮೋಹಗೊಳಿಸಲಿಕ್ಕಾಗಿಯೂ) ಅವನ ಪಕ್ಷವನ್ನು ಸೇರಿದರು.

ಮಹಾ ಪರಾಕ್ರಮ ಶಾಲಿಯೂ, ವೀರ ಕ್ಷತ್ರಿಯನೂ, ದೈವ ಭಕ್ತನೂ, ಕರ್ಮಜ ದೇವತೆಯೂ, ಮದ್ರಾಧಿಪತಿಯೂ ಆದ ಶಲ್ಯ ಮಹಾರಾಜನಲ್ಲಿಗೆ ದುರ್ಯೋಧನ ಮತ್ತು ಅರ್ಜುನರು ಯುದ್ಧ ಸಹಾಯಾರ್ಥವಾಗಿ ಹೋದರು. ಆಗ ಮುತ್ಸದ್ದಿಯಾದ ಶಲ್ಯನು ತಾನು ಮನಸ್ಸಿನಲ್ಲಿ ಪಾಂಡವರಿಗೆ ಸಹಾಯವನ್ನು ಮಾಡಬೇಕೆಂದು ಬಯಸಿ ಅದನ್ನು ಬಹಿರಂಗದಲ್ಲಿ ತೋರಗೊಡದೆ ಕಾಲಾವಕಾಶವನ್ನು ಕೇಳಿ ಅವರೀರ್ವರನ್ನೂ ಬೀಳ್ಕೊಟ್ಟನು. ತರುವಾಯ ಹೀಗೆ ಚಿಂತಿಸಿದನು.

ಪಾಂಡವರು ಪರೋಪಕಾರಿಗಳು. ಅವರು ಮಾಡಿದ ಒಳ್ಳೇ ಕೆಲಸಗಳನ್ನು ಗುರುತಿಸಿ ಆ ನೆಪವನ್ನು ಮುಂದಿಟ್ಟು ಅವರ ಪಕ್ಷವನ್ನು ಸೇರುವೆನು ಎಂದು ಹವಣಿಸಿದನು. ಅಂತೆಯೇ ಪರೋಪಕಾರಾರ್ಥವಾಗಿ ಪಾಂಡವರು ಕೈಕೊಂಡ ಕೆಲಸಗಳ ಪರಿಪೀಕ್ಷಣೆಯ ಕಾರ್ಯಕ್ರಮವನ್ನು ರೂಪಿಸಿಕೊಂಡು ರಥಾರೂಢನಾಗಿ ಹೊರಟನು.

ಶ್ರೀಕೃಷ್ಣನನ್ನು ಅರ್ಚಿಸಿ ಹೊರಟ ಮಹಾರಾಜಂಗೆ ಸುಮಂಗಲಿಯರು ಆರತಿಗಳನ್ನು ಬೆಳಗಿದರು. ಜನಸ್ತೋಮವು ಪುಷ್ಪ ಮಳೆಯನ್ನು ಸುರಿಸಿದರು. ಮಹಾರಾಜರು ಆರತಿ ತಟ್ಟೆಗಳಿಗೆ ಸುವರ್ಣ ನಾಣ್ಯಗಳನ್ನು ಬೊಗಸೆ ಬೊಗಸೆಯಾಗಿ ಸುರಿದು ದೀರ್ಘ ಸುಮಂಗಲೀಭವ ಎಂದು ಆಶೀರ್ವದಿಸಿ ಮುಂದೆ ಸಾಗಿದರು.

ತಮಸು, ತಮಸು, ತಮಸು ಗುಣದ ಕಲಿ ದುರ್ಯೋಧನನ ವ್ಯಾಪಾರವು ಪಂಚಮ ಕಕ್ಷದ ಗರುಡ, ಶೇಷ, ರುದ್ರರ ಪರಿಯಂತವಾಗಿ ಸಾಗುತ್ತಿರುವಾಗ ಇನ್ನು ಶಲ್ಯ ಮಹಾರಾಜನು ಇವನ ಮುಂದೆ ಏನು ಮಹಾ! ಶಲ್ಯ ರಾಜರ ಮನದಿಂಗಿತವನ್ನು ಅರಿತ ದುರ್ಯೋಧನನು ಅವರು ಹೊರಟ ಮಾರ್ಗಗಳನ್ನು ಗುರುತಿಸಿ ಅವರ ಸಂಚಾರ ಪ್ರದೇಶಗಳಲ್ಲಿ ಸರ್ವವಿಧವಾದ ಸೌಕರ್ಯಗಳನ್ನು ಕಲ್ಪಿಸಿದನು. ಕೆರೆ, ಕಟ್ಟೆ, ಅರವಟ್ಟಿಗೆ, ಅನ್ನಛತ್ರ, ರಸ್ತೆ, ಹೂದೋಟ, ಉದ್ಯಾನ, ಸಾಲು ಮರಗಳು ರಂಜಿಸಿದುವು. ಅನ್ನಛತ್ರಗಳಲ್ಲಿ ಉಚಿತ ಮೃಷ್ಟಾನ್ನ ಭೋಜನ ವ್ಯವಸ್ಥೆಯನ್ನು ಮಾಡಿಸಿದ್ದನು. ಎಲ್ಲವನ್ನೂ ಕಂಡ ಮಹಾರಾಜರು ವಿಶ್ರಾಂತಿಗೆಂದು ತೆರಳಿದರು. ಅವರಿಳಿದ ಛತ್ರವು ರಾಜಭವನವನ್ನು ನಾಚಿಸುವಂತಿತ್ತು. ಒಳಪೊಕ್ಕ ಅರಸರಿಗೆ ಸ್ಫುರದ್ರೂಪಿಗಳಾದ ಅಂಗನೆಯರಿಂದ ಸ್ವಾಗತವಾಯಿತು. ಪೂರ್ಣಕುಂಭ ಪುಷ್ಪ ಚಾಮರ ಪುರಸ್ಸರವಾಗಿ ಚಾರರು ಸ್ವಾಗತ ಹಸ್ತವನ್ನು ನೀಡಿದರು. ಒಳಪೊಕ್ಕ ರಾಜರು ಸುವರ್ಣ ತಳಿಗೆಯ ಮುಂದೆ ಕುಳಿತರು. ಮೃಷ್ಟಾನ್ನ (ದುಷ್ಟನ್ನ) ಭೋಜನದ ಒಂದು ತುತ್ತು ಅವರ ಒಡಲನ್ನು ಸೇರಿದ್ದೇ ತಡ, ಈ ವ್ಯವಸ್ಥೆಯನ್ನು ಮಾಡಿರುವವರು ಪಾಂಡವರೇ ಎಂದು ಭ್ರಮಿಸಿ ಅವರು ಸಾರಿದರು "ಈ ವ್ಯವಸ್ಥೆಯನ್ನು ಯಾರು ಮಾಡಿರುವರೋ ಅವರ ಪಕ್ಷಕ್ಕೆ ಸೇರುತ್ತೇನೆಂದು! ತಕ್ಷಣವೇ ಅಲ್ಲಿ ಕಾದಿದ್ದ ದುರ್ಯೋಧನನು ಶಲ್ಯರಾಜರಲ್ಲಿಗೆ ಬಂದು "ಮಹಾರಾಜರೇ ಇಂದು ನೀವು ಸ್ವೀಕರಿಸಿದ ಆತಿಥ್ಯವು ನನ್ನದು. ನಿಮ್ಮ ವಚನದಂತೆ ನೀವು ನಮ್ಮ ಪಕ್ಷವನ್ನು ವಹಿಸಿ ನಮಗೆ ಸಹಾಯವನ್ನು ಮಾಡಿರಿ. ನಿಮ್ಮ ಪ್ರತಿಜ್ಞೆಯನ್ನು ನಡೆಸಿಕೊಡುವವರಾಗಿರಿ" ಎಂದನು. ಆಗ ಶಲ್ಯ ರಾಜರು ದಿಗ್ಭ್ರಾಂತರಾದರು. ಗತ್ಯಂತರವಿರಲಿಲ್ಲ ಉಂಡ ಅನ್ನವು ಅವರನ್ನು ಕಟ್ಟಿ ಹಾಕಿತ್ತು. ನಿರ್ಬಂಧಕ್ಕೆ ಸಿಲುಕಿ ಅವನ ಪಕ್ಷಕ್ಕೆ ಸೇರಿದರು.

ಶಲ್ಯರಾಜರು ಯಾರು? ಇವರ ಅಂಶವೇನು? ಎಂದರೆ ಶ್ರೀಮಧ್ವಾಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ ಹೀಗೆ ಹೇಳಿದ್ದಾರೆ.

> **"ಪ್ರಹ್ಲಾದಾಽ ವರಜೋಯಃ । ಸಲ್ಹಾದೋ ನಾಮಕೋ ಹರೇರ್ಭಕ್ತಃ ॥**
> **ಸ ಮಾರುತಾವೇಶಾತ್ ಪೃಥುವ್ಯಾಂ । ಬಲಾಧಿಕೋ ಭೂದ್ವರತಶಚಧಾತುಃ ಶಲ್ಯಶ್ಚ ನಾಮ್ನಾ ॥ ಅ. ೧೧ ಶ್ಲೋ. ೧೬೮ ॥"**

ಮುಂದೆ ಪದ್ಮಪುರಾಣದಲ್ಲಿ ಸಲ್ಹಾದರಾಜರೇ ಶಲ್ಯರೆಂದೂ, ಕಲಿಯೇ ದುರ್ಯೋಧನನೆಂದೂ ತಿಳಿಸಲಾಗಿದೆ.

> **"ದುರ್ಯೋಧನಃ ಕಲಿಃಪ್ರೋಕ್ತಃ । ಶಲ್ಯಃ ಸಲ್ಹಾದ ಉಚ್ಯತೇ ॥ ಪಾದ್ಮೇ ॥**

ಮೇಲಿನ ಕಥಾಂಶವು ತಾತ್ಪರ್ಯ ನಿರ್ಣಯದಲ್ಲಿ ಹೀಗೆ ಹೇಳಿದೆ.

"ಶಲ್ಯಂಚ ಪಾಂಡವಾನೇವಾ । ಯಾತಂ ಜ್ಞಾತ್ವಾ ಸುಯೋಧನಃ ॥
ಸುಸಭಾಕಾರಯಾಮಾಸ ಸರ್ವ ಭೋಗ ಸಮನ್ವಿತಃ ॥ ತಾ.ನಿ.ಅ.೨೪॥
ತಾಯುಧಿಷ್ಠಿಕೃಪ್ತಾಸ್ಸ । ಮತ್ವಾ ಶಲ್ಯೋಽಬ್ರವೀದಿದಂ ॥ ಶ್ಲೋ ೩೩ ॥
ಯೇತಾ ಕಾರಯಾಮಾಸ । ತದಭೀಷ್ಮಂ ಕರೋಮ್ಯಹಂ ॥ ೩೪ ॥
ಲೀನಃ ಶೃತ್ವಾ ಧಾರ್ತರಾಷ್ಟ್ರಃ । ಸತ್ಯಂಕುರ್ವಿತ್ಯ ಭಾಷತ ॥
ದೇಹಿಮೇಯುದ್ಧ ಸಾಹಯ್ಯ । ಮಿತಿಸೋಽಪಿ ಯಶೋಽರ್ಥಯನ್ ॥ ೩೫ ॥
ಬುಧ್ಯಾ ಬಲೇನ ಜ್ಞಾನೇನ । ಧೈರ್ಯಾದ್ಯೈರಪಿಯೋಽಧಿಕಃ ॥
ರಧಿನಃ ಸಾರಥಿಃ ಸಸ್ಯಾ। ದರ್ಜುನಸ್ಯ ಯಥಾ ಹರಿಃ ॥ ಅ. ೨೭ – ಶ್ಲೋ ೨೬ ॥

ಇಲ್ಲಿ ಒಂದು ವಿಚಾರವು ತಿಳಿಯಾಗಬೇಕಾಗಿದೆ. ಶಲ್ಯಮಹಾರಾಜರಿಗೆ ಮನದಲ್ಲಿ ಇದ್ದುದು ಯೋಗ್ಯರಾದ ಪಾಂಡವರಿಗೆ ಸಹಾಯವನ್ನು ಮಾಡಬೇಕೆಂದು. ಹೀಗಿರುವಾಗ ಶ್ರೀಹರಿಯು ಹೀಗೇಕೆ ಮಾಡಿದನು? ಎಂದರೆ ಮನಸಿನಂತೆ ನಡೆಸುವ ಶ್ರೀಹರಿಯು ಅವರ ಇಚ್ಛೆಯನ್ನು ನೆರವೇರಿಸಲಿಕ್ಕಾಗಿಯೇ ಹೀಗೆ ಮಾಡಿದನು. ಅರ್ಜುನನನ್ನು ಕೊಲ್ಲುವೆನೆಂದು ಶಪಥ ಮಾಡಿದ ಕರ್ಣನ ಆಯುಷ್ಯವು ಕ್ಷೀಣವಾಗಬೇಕಾದರೆ ಅವನ ತೇಜೋ ವಧೆಯಾದರೆ ಮಾತ್ರ ಸಾಧ್ಯವಿತ್ತು. ಇದು ಪರಶುರಾಮನ ಶಾಪವು. ಈ ಕರ್ಣನ ತೇಜೋವಧೆಯಾಗ ಬೇಕಾದರೆ ಅದು ಶಲ್ಯನಿಂದ ಮಾತ್ರ ಸಾಧ್ಯವಿತ್ತು. ಈ ಶಲ್ಯನು ಪಾಂಡವರ ಪಕ್ಷದಲ್ಲಿ ಇದ್ದು ಕರ್ಣನನ್ನು ದೂಷಿಸಿದ್ದರೆ ಅದು ಶತ್ರು ದೂಷಣೆಯಾಗಿ ತೇಜೋ ವಧೆ ಎನಿಸುತ್ತಿರಲಿಲ್ಲ. ಸ್ವಪಕ್ಷದವರೇ ಛೀ ಮಾಡಿದರೆ ಅದು ತೇಜೋವಧೆ ಎನಿಸುತ್ತದೆ. ಅದಕ್ಕಾಗಿಯೇ ಶಲ್ಯರು ದುರ್ಯೋಧನನ ಪಕ್ಷವನ್ನು ಸೇರುವಂತೆ ಮಾಡಿ ಅವರಿಂದ ಕರ್ಣನ ತೇಜೋವಧೆ ಮಾಡಿಸಿದನು.

"ವಿನಾಶ ಕಾಲೇ ವಿಪರೀತ ಬುದ್ಧಿ" ಎಂದಂತೆ ದುರ್ಯೋಧನನು ಮಹಾರಥಿಕರಾದ ಶಲ್ಯರಾಜರಿಗೆ ರಥಿಕ ಪಟ್ಟವನ್ನು ನೀಡದೆ ಒತ್ತಾಯಪೂರ್ವಕವಾಗಿ ಅವರನ್ನು ಸಾರಥಿಯ ಸ್ಥಾನದಲ್ಲಿ ಕೂಡಿಸಿದನು. ಕರ್ಣನು ರಥಿಕನಾದನು. ಮನನೊಂದ ಶಲ್ಯ ಮಹಾರಾಜರು ಹಲವು ಬಗೆಯಲ್ಲಿ ಕರ್ಣನ ದೋಷಗಳನ್ನೆತ್ತಿ ತೋರಿಸಿ ಅವನ ಶುಷ್ಕ ಪೌರುಷ ವಾಕ್ಯಗಳನ್ನು ಗಾಳಿಗೆ ತೂರಿದರು. ಅಪಮಾನಿತನಾದ ಕರ್ಣನು ಅವರೆದುರು ತಲೆ ಎತ್ತದಂತಾದನು. ಕೊನೆಗೆ ಶಲ್ಯರಾಜರು ಕನಿಷ್ಟ ರಣರಂಗದಲ್ಲಿ ಕರ್ಣನು ತಾವು ಹೇಳಿದಂತಾದರೂ ಕೇಳಬೇಕು. ತಪ್ಪಿದರೆ ರಣರಂಗದಿಂದ ನಿರ್ಗಮಿಸುವುದಾಗಿ ಎಚ್ಚರಿಕೆಯನ್ನಿತ್ತು ಕರ್ಣನ ರಥಕ್ಕೆ ಸಾರಥಿಯಾದರು.

ಶಲ್ಯರಾಜರೇ ಜಗನ್ನಾಥದಾಸರಾಗಿ ಬಂದು ಹೇಳಿದ್ದು ಹೀಗೆ

ತಾಪತ್ರಯಗಳಿಂದ ನೊಂದೇ । ಮಹಾ।
ಪಾಪಿಷ್ಟರಲ್ಯನ್ನ ತಿಂದೇ । ಇನ್ನು ।
ಆ ಪ್ರೇತೇಶ್ವರನ ಮುಂದೇ । ಪೋಗಿ ।
ನಾ ಪೇಳಿಕೊಳಲೇನೊ ತಂದೇ ॥

"ಒಂದು ಗೇಣೊಡಲನ್ನಕಾಗೀ । ಅಲ್ಪ । ಮಂದಭಾಗ್ಯರ ಮನೆಗೆ ಪೋಗೀ ॥
ದೈನ್ಯದಿಂದ ಸತ್ಕರ್ಮಗಳನೀಗೀ । ಕಂದಿ । ಕುಂದಿದೆನೊಸಲಹೊ । ಲೇಸಾಗೀ ॥"

ಹೀಗೆ ಅವರು ಪಶ್ಚಾತ್ತಾಪ ಪಟ್ಟರೂ ಶ್ರೀಹರಿಯು ತಮ್ಮ ಮನದ ಅಭೀಷ್ಟೆಯನ್ನು ನೆರವೇರಿಸುವುದಕ್ಕಾಗಿಯೇ (ಕರ್ಣನ ತೇಜೋವಧಾರ್ಥವಾಗಿ) ತಮ್ಮನ್ನು ದುರ್ಯೋಧನನ ಪಕ್ಷಕ್ಕೆ ಸೇರಿಸಿದನೆಂದು ತಿಳಿದು ಶ್ರೀಹರಿಯ ಸಂಕಲ್ಪವನ್ನು ನೆನೆದು ಹಿಗ್ಗಿದರು.

"ಮನದೊಳಗೆ ತಾನಿಪ್ಪ । ಮನವೆಂದೆನಿಸಿಕೊಂಬನು ।
ಮನದ ವೃತ್ತಿಗ । ಳನು ಸರಿಸಿ ಬೋಗಗಳೀವನು ತ್ರಿವಿಧ ಚೇತನಕೆ ॥
ಮನವನಿತ್ತರೆ ತನ್ನನೀವನು । ತನುವ ದಂಡಿಸಿ ದಿನ ದಿನದಿ ಸಾ ।
ಧನವ ಮಾಳ್ಪರಿಗೀವನು ಸ್ವರ್ಗಾದಿ ಭೋಗಗಳಾ ॥ ಹ.ಕ.ಸಾ ॥

ಹೀಗೆ ಅವರ ಅವತಾರ ವಾಣಿ.

ತರುವಾಯ ಪಾಂಡವರ ಪ್ರಶಂಸೆಯನ್ನು ಪದೇಪದೇ ಕೇಳಿಸಿಕೊಳ್ಳುತ್ತಿದ್ದ ಭೀತನಾದ ಧೃತರಾಷ್ಟ್ರನು ಸಂಜಯನ ಮುಖಾಂತರವಾಗಿ ಯುದ್ಧವು ಬೇಡ. ರಾಜ್ಯವನ್ನೂ ಕೇಳಬಾರದು. ಸಾಮಾನ್ಯ ಪ್ರಜೆಯಾಗಿ ಬಾಳಿರಿ ಎಂದು ಧರ್ಮರಾಯನಿಗೆ ಹೇಳಿ ಕಳುಹಿಸಿದನು.

ಸಂಜಯನು ಧರ್ಮರಾಯನಲ್ಲಿಗೆ ಬಂದು ರಾಜ್ಯವನ್ನು ಕೇಳಬೇಡಿ ಯುದ್ಧವನ್ನೂ ಮಾಡಬೇಡಿ ವೃಥಾ ಜನ ಸಾಯುತ್ತಾರೆ. ಅದರಿಂದ ನಿಮಗೆ ಪಾಪವು ಬರುತ್ತದೆ ಎಂದು ಹೇಳಿದನು. ಇದನ್ನು ಭೀಮ ದ್ರೌಪದಿಯರು ಒಪ್ಪಲಿಲ್ಲ. ಧರ್ಮರಾಯ, ಶ್ರೀಕೃಷ್ಣರು ಭೀಮ ದ್ರೌಪದಿಯರ ವಾದವನ್ನು ಅನುಮೋದಿಸಿದರು. ನಿರಾಶನಾಗಿ ಮರಳಿ ಬಂದ ಸಂಜಯನು ಇದ್ದ ವಿಷಯವನ್ನು ಧೃತರಾಷ್ಟ್ರನಿಗೆ ತಿಳಿಸಲಾಗಿ ಧೃತರಾಷ್ಟ್ರನು ವಿದುರನ ಸಲಹೆಯನ್ನು ಕೇಳಿದನು. ಆಗ ವಿದುರನು ಪಾಂಡವರಿಗೆ ಅವರ ರಾಜ್ಯವನ್ನು ಮರಳಿ ನೀಡುವುದೇ ಧರ್ಮವೆಂದು ಹೇಳಿದನು ಮತ್ತು ಪಾಂಡವರಿಗೆ ಅವರ ರಾಜ್ಯವನ್ನು ಮರಳಿ ಅವರಿಗೆ ಕೊಡದಿದ್ದರೆ ಪಾಪವು ಬರುತ್ತದೆಯೆಂದು ಹೇಳಿದನು. ಇದಕ್ಕೆ ಒಪ್ಪದ ಧೃತರಾಷ್ಟ್ರನು ತನ್ನಿಂದ ಮತ್ತು ತನ್ನ ಮಕ್ಕಳಿಂದ ಆಗುತ್ತಿರುವ ಅಯಾಯದ ಪಾಪದಿಂದ ಮುಕ್ತನಾಗಲು ಪಾಪವನ್ನು ಮಾಡಿದರೆ ವಿಷ್ಣು ತತ್ವವನ್ನು ಕೇಳಿದರಾಯಿತು ಎಂದು ಬ್ರಾಹ್ಮಣರು ಹೇಳುತ್ತಿರುತ್ತಾರೆ ಈಗ ಅದನ್ನು ಬಗೆದು, ವಿದುರನನ್ನು ಕುರಿತು ಆ ವಿಷ್ಣು ತತ್ವವನ್ನು ತನಗೆ ಬೋಧಿಸಬೇಕೆಂದು ಕೇಳಿದನು. ಆದರೆ ವಿದುರನು ಅದಕ್ಕೊಪ್ಪದೆ "ನಾನೂಲ್ಲೆಪ್ಪ. ನೀನು ಆ ಸನಾತನ ಮುನಿಯನ್ನು ಕರೆಸಿ ಆತನಿಂದ ಕೇಳಿಕೋ" ಎಂದು ಹೇಳಿ ತಪ್ಪಿಸಿಕೊಂಡುಬಿಟ್ಟನು. ಆಗ ಧೃತರಾಷ್ಟ್ರನು ಸನಾತನ ಮುನಿಯನ್ನು ಕರೆಸಿಕೊಂಡನು. ಆದರೆ ಆ ಮುನಿಗಳು ವಿಷ್ಣು ತತ್ವಗಳು ಕಪಟಿಯಾದವನಿಗೆ ಸಿದ್ಧಿಸುವುದಿಲ್ಲ. ರಾಜ್ಯವೂ ಉಳಿಯಬೇಕು, ಪಾಪವೂ ಬಂದಿರಬಾರದು ಎಂದರೆ ಹೇಗೆ? ಎಂದು ಹೇಳಿ ಹೊರಟು ಹೋದರು.

ಇಷ್ಟಾದ ಮೇಲೆ ಪಾಂಡವರಿಗೆ ಕೆಟ್ಟ ಹೆಸರು ಬರಬಾರದೆಂತಲೂ ಲೋಕನೀತಿಯನ್ನು ಲೋಕಕ್ಕೆ ಪ್ರಕಟಿಸಲಿಕ್ಕಾಗಿಯೂ ಶ್ರೀಕೃಷ್ಣನು ಕೊನೆಯ ಅಸ್ತ್ರವಾಗಿ ಸಂಧಾನಕ್ಕೆ ಹೊರಟನು. ಆಗ ಭೀಮ ದ್ರೌಪದಿಯರು "ಕೃಷ್ಣಾ ನೀನು ಹೋಗಬೇಡ. ನಮಗೆ ಯುದ್ಧವೇ ಬೇಕು" ಎಂದು ಕೈಮುಗಿದರು. ಉಳಿದವರು "ಹೋಗಿ ಬರಲಿ ಬಿಡಿ" ಎಂದರು. ಅತ್ತ ದುರ್ಯೋಧನನ ಪಾಳೆಯದಲ್ಲಿ ಶ್ರೀಕೃಷ್ಣನು ಬರುವ ವಾರ್ತೆಯು ಹಬ್ಬಿತು. ಅದನ್ನು ಕೇಳಿದ ದುರ್ಯೋಧನನು ಶ್ರೀಕೃಷ್ಣನು ಇಲ್ಲಿಗೆ ಬರುವುದೇ ಬೇಡ. ನನಗೆ ಯುದ್ಧವೇ ಬೇಕು ಎಂದನು. ಆದರೆ ಕರ್ಣ, ಶಕುನಿ, ದುಶ್ಶಾಸನಾದಿಗಳು ಬಂದು ಹೋಗಲಿ ಬಿಡಿ. ಆತನಿಗೆ ಮರ್ಯಾದೆ ಮಾಡದೇ ಆತನ ಮಾತನ್ನು ಕೇಳದೆ ಹಿಂದಕ್ಕಟ್ಟಿದರಾಯಿತು ಎಂದರು.

ಈ ಪ್ರಸಂಗದಲ್ಲಿ ಅರಿಯ ಬೇಕಾದ ಪ್ರಮೇಯವಿದೆ. ಅದೇನೆಂದರೆ ಯುದ್ಧವು ಪಾಪವೆಂದರೆ ಭೀಮ-ದುರ್ಯೋಧನರಿಬ್ಬರು ಯುದ್ಧವೇ ಬೇಕೆಂದು ಹಟವನ್ನು ತೋರಿರುವುದರಿಂದ ಇಬ್ಬರೂ ಪಾಪ ಭಾಗಿಗಳೇ ಅಥವಾ ಅದು ಕ್ಷತ್ರಿಯರ ಧರ್ಮ. ಪುಣ್ಯ ಪದವೆಂದರೆ ಇಬ್ಬರೂ ಪುಣ್ಯಾತ್ಮರೇ. ಹೀಗಿರುವಾಗ ಭೀಮನು ಮಾತ್ರ ಪುಣ್ಯಾತ್ಮನು ಹೇಗೆ? ದುರ್ಯೋಧನನು ಪಾಪಾತ್ಮನು ಹೇಗೆ ಆಗುತ್ತಾರೆ? ಎಂದರೆ ಯುದ್ಧಾದಿ ಕರ್ಮಗಳಿಂದ ಬರುವ ಫಲವು ನಶ್ವರವೂ (ಸ್ವರ್ಗ) ಗೌಣವೂ ಆಗಿರುತ್ತದೆ. ಅದು ಕರ್ಮಕಾಂಡ. ಅದಕ್ಕೆ ಮಹತ್ವವಿಲ್ಲ.

ಆದರೆ ಜ್ಞಾನಪೂರ್ವಕವಾದ ಉಪಾಸನೆಯು ಶಾಶ್ವತವಾದ ಮೋಕ್ಷ ಅಥವಾ ತಮಸ್ಸಿಗೆ ಕಾರಣವಾಗುತ್ತದೆ. ಇಲ್ಲಿ ಭೀಮ ದುರ್ಯೋಧನರ ಕರ್ಮ ಪ್ರಸಕ್ತಿಗಿಂತಲೂ ಜ್ಞಾನ ಪ್ರಸಕ್ತಿಯು ಗ್ರಾಹ್ಯವಾದುದು. ಭೀಮನ ಮಾತಿನಲ್ಲಿ "ಕೃಷ್ಣಾ ನೀನು ಹೋಗಬೇಡಾ" ಎಂಬುದು ಅತಿರೋಹಿತ ವಿಜ್ಞಾನಿಯಾದ ಋಜುಪುಂಗವನಾದ ಭೀಮನಿಗೆ ಭೂಷಣಪ್ರಾಯವಾದುದೇ ಆಗಿದೆ. ನೀನು ಹೋಗಬೇಡಾ ಎಂದರೆ ಜ್ಞಾನಪ್ರದನಾದ ನೀನು ನಮ್ಮ ಮನಸ್ಸಿನಿಂದ ಮರೆಯಾಗಬೇಡಾ ಎಂಬ ಅರ್ಥವೇ ಇಲ್ಲಿ ಅಡಗಿದೆ. ಆದರೆ ತಮೋ ಯೋಗ್ಯನಾದ ದುರ್ಯೋಧನನಿಗೆ ಶ್ರೀಕೃಷ್ಣನು ಬರುವುದೇ (ಸ್ಮರಣೆಗೆ) ಬೇಡಾ ಎಂಬುದು ಇಲ್ಲಿ ಅಡಗಿದೆ. ಭೀಮನ (ಸಾತ್ವಿಕರ) ಪಕ್ಷವನ್ನು ಹೊಂದಿದ್ದರಿಂದ ಧರ್ಮರಾಯಾದಿಗಳು ಶ್ರೀಕೃಷ್ಣನು 'ಹೋಗಿ ಬರಲಿ' (ಹೋದರೂ ಪುನಃ ಪ್ರಾಪ್ತಿ ಆಗಲಿ) ಎಂದರು. ಆದರೆ ಪಾಪಿಯ ಪಕ್ಷವನ್ನು ವಹಿಸಿದವರು 'ಬಂದು ಹೋಗಲಿ' (ಬಂದರೂ ಪುನಃ ನಷ್ಟವಾಗಲಿ) ಎಂದರು. ಹೋದದ್ದು ಬಂದರೆ ಲಾಭ. ಬಂದದ್ದು ಹೋದರೆ ನಷ್ಟ. ಇದೇ ಸಜ್ಜನ-ದುರ್ಜನರ ಸಹವಾಸಕ್ಕೆ ಇರುವ ವ್ಯತ್ಯಾಸ ಲಾಭ-ನಷ್ಟಗಳು. "ಮಹತ್ಸೇವಾಂದ್ವಾರಮಾಹುರ್ವಿಮುಕ್ತೇ । ಸ್ತಮೋದ್ವಾರಂ ಯೋಷಿತಾಂ ಸಂಗಿ ಸಂಗ" ಎನ್ನುತ್ತದೆ ಭಾಗವತ. ಶ್ರೀಕೃಷ್ಣಪರಮಾತ್ಮನು ಇಬ್ಬರ ಮಾತನ್ನೂ ಕೇಳಲಿಲ್ಲ. ಹೋಗಬೇಡವೆಂದರೆ ಹೋದನು. ಬರಬೇಡವೆಂದರೆ ಬಂದೇ ಬಂದನು. ಸ್ವಪ್ರಯೋಜನ ರಹಿತ" "ಸರ್ವತಂತ್ರ ಸ್ವತಂತ್ರ" ಜೀವರ ಸ್ವಭಾವಗಳನ್ನು ಅಭಿವ್ಯಕ್ತ ಮಾಡಿ ಫಲಗಳನ್ನು ಉಣಿಸಲು ಪ್ರವೃತ್ತನಾಗುತ್ತಾನೆ.

ಇನ್ನೂ ಒಂದು ಪ್ರಮೇಯವು ಇಲ್ಲಿ ತಿಳಿಯಲ್ಪಡಬೇಕಾಗಿದೆ. ಅದೇನೆಂದರೆ ಶ್ರೀಕೃಷ್ಣನಲ್ಲಿಗೆ ಯುದ್ಧ ಸಹಾಯಾರ್ಥವಾಗಿ ದುರ್ಯೋಧನನು ಮತ್ತು ಅರ್ಜುನನು ಇಬ್ಬರೂ ಬಂದಾಗ ಮೊದಲು ಬಂದ ದುರ್ಯೋಧನನು ಅವನು ಅಹಂಕಾರದಿಂದ ಬಂದು ಶ್ರೀಕೃಷ್ಣನ ತಲೆಯ ಹತ್ತಿರ ಕುಳಿತನು. ಇದು ತಪ್ಪು. ಅರ್ಜುನನು ವಿನಯಶೀಲನಾಗಿ ಬಂದು ಶ್ರೀಹರಿಯ ಚರಣ ಸನ್ನಿಧಿಯಲ್ಲಿ ಕುಳಿತನು. ಅದಕ್ಕಾಗಿಯೇ ಶ್ರೀಕೃಷ್ಣನು ಅರ್ಜುನನಿಗೆ ಒಲಿದು ಜಯವನ್ನಿತ್ತನು. ದುಷ್ಟ ದುರ್ಯೋಧನನನ್ನು ನಿಗ್ರಹಿಸಿದನು ಎನ್ನುತ್ತಾರೆ. ಆದರೆ ದುರ್ಯೋಧನನು

ವಯಸ್ಸಿನಲ್ಲಿ ಹಿರಿಯನು. ಮೊದಲು ಬಂದಿದ್ದಾನೆ. ಅಧಿಕಾರದಲ್ಲಿ ಇದ್ದಾನೆ. ಈ ಪರಿಯಾದ ಯೋಗ್ಯತೆಯಿಂದ ಅವನು ಶ್ರೀಕೃಷ್ಣನ ತಲೆಯ ಹತ್ತಿರ ಕುಳಿತಿದ್ದುದರಲ್ಲಿ ತಪ್ಪೇನಿದೆ? ಎಂದರೆ ಯಾರು ಎಲ್ಲಿ ಕುಳಿತರು ಎಂಬುದು ಇಲ್ಲಿ ಮುಖ್ಯವಲ್ಲ, ಯಾಕೆ ಕುಳಿತರು ಎಂಬಲ್ಲಿದೆ ತತ್ವ ಬಂಗಾರ. ದುರ್ಯೋಧನನು ಬಂದವನು ಸ್ವಗತಭೇದ ವಿವರ್ಜಿತನಾರ ಶ್ರೀಕೃಷ್ಣನ ಅವಯವಗಳಲ್ಲಿ ಭೇದವನ್ನು ಚಿಂತಿಸಿ, ಶಿರೋಭಾಗವು ಶ್ರೇಷ್ಠ, ಪಾದಭಾಗವು ನೀಚವೆಂದು ತಿಳಿಯುವುದರ ಮೂಲಕ ಪರಮಾತ್ಮನನ್ನು ಪ್ರಾಕೃತ ಪುರುಷನೆಂದು ಬಗೆದು ಆತನ ಅಡಿದಾವರಗಳಿಗೆ ನಮಿಸಲಿಲ್ಲ. ಭಗವಂತನ ಅವಯವಗಳಲ್ಲಿ ಭೇದ ಚಿಂತಿಸುವವನು ಆತತಾಯಿ. ಅಸದುಪಾಸಕ. ತಮೋಯೋಗ್ಯನೆಂದು ಸಕಲ ಶಾಸ್ತ್ರಗಳು ಸಾರುತ್ತವೆ. ಶ್ರೀಹರಿಯಲ್ಲಿ ಅವಯುವ ಭೇದಚಿಂತನೆ, ಅವತಾರಗಳಲ್ಲಿ ಪೃಥಕ್ ಚಿಂತನೆಗಳು ಅಸದುಪಾಸನೆಗಳು ಎನಿಸುತ್ತವೆ. "ಅಸದುಪಾಸನಯಾತ್ಮಹನಃ । ಇತ್ಯುಕ್ತ್ವಾತ್ ॥ಭಾಷ್ಯ॥"

ಸುರರು ಪರಮಾತ್ಮನಲ್ಲಿ ನವ ವಿಧವಾದ ಭಕ್ತಿಗಳನ್ನು ಮಾಡುವಂತೆ ನವವಿಧವಾದ ದ್ವೇಷಗಳನ್ನು ದೈತ್ಯರು ಭಗವಂತನಲ್ಲಿ ಅನುಸರಿಸುತ್ತಾರೆ. ಆ ನವವಿಧ ದ್ವೇಷಗಳಾವುವೆಂದರೆ.

**"ಜೀವಾऽಭೇದೋ ನಿರ್ಗುಣತ್ವಂ। ಅಪೂರ್ಣ ಗುಣತಾ ತಥಾ ॥**
**ಸಮಾಧಿಕ್ಯೇ ತಥಾನ್ಯೇಷಾ । ಭೇದಸ್ತದ್ಗತ ಏವಚ ॥**
**ಪ್ರಾದುರ್ಭಾವ ವಿಪರ್ಯಾಸ । ತದ್ಭಕ್ತ ದ್ವೇಷ ಏವಚ ॥**
**ತತ್ಪ್ರಮಾಣಸ್ಯ ನಿಂದಾಚ । ಏತೇ ದ್ವೇಷಾऽ ಖಿಲಾ ಮತಾ ॥"** ಎಂಬವು.

ಎಲ್ಲಾ ದುರ್ಗುಣಗಳ ಸಾಕಾರ ಮೂರ್ತಿಯೇ ಆದ ದುರ್ಯೋಧನನು ಇಲ್ಲಿ ಶ್ರೀಕೃಷ್ಣನ ಅವಯವಗಳಲ್ಲಿ ಭೇದಚಿಂತನೆಯ ಮೂಲಕ ತನ್ನ ಸ್ವರೂಪವನ್ನು ಮರೆಸಿದನು. **"ಮಿಥ್ಯಾಜ್ಞಾನೇನಚ ತಮೋ ॥"**

ಅದೇ ಅರ್ಜುನನು ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಭಕ್ತಿಯನ್ನು ಅರ್ಪಿಸಿ ಆತನು ಸರ್ವಾವಯವ ಪರಿಪೂರ್ಣನು ಸ್ವಗತ ಭೇದವಿಶೂನ್ಯನು ಎಂದು ಬಗೆದು ನಮಿಸಿದನು ! "ಸಜ್ಞಾನಂದ ಬಾಹುಕಃ । ಸಜ್ಞಾನಂದಪ್ಲ ದೇಹಸ್ತ । ಸಜ್ಞಾನಂದ ಪಾದವಾನ್, ಏವಂ ಭೋತೋ ಮಹಾವಿಷ್ಣೋ ರ್ಯಥಾರ್ಥಂ । ಜಗದೀಡ್ಯತುಃ॥ ಸಜ್ಞಾನಂದ ಶಿರ್ಷೋಸೌ ಏವಂ ಭೂತೋ ಮಹಾ ವಿಷ್ಣೋರ್ಯಥಾರ್ಥಂ ಜಗದೀಡ್ಯತುಃ ॥ ಎಂಬ ಪ್ರಮಾಣಾನುಸಾರವಾಗಿ ನಮಿಸಿದ ಅರ್ಜುನನು ಶ್ರೀಕೃಷ್ಣನ ಪರಮಾನುಗ್ರಹಕ್ಕೆ ಪಾತ್ರನಾದನು. ಸರ್ವಾಂತರ್ಯಾಮಿಯಾದ ಶ್ರೀಹರಿಯಲ್ಲಿ ಮೇಲು ಕೀಳೆಂಬ ಪ್ರಸಕ್ತಿ ಇಲ್ಲ. "ಜ್ಞಾನೇನ್ಯೆವ ಪರಂ ಪದಂ" ಪರಮಾತ್ಮನ ಪಾದಗಳೆಂದರೆ ವೇದಗಳು ಅವುಗಳನ್ನು ಆಶ್ರೈಸಿದವರೇ ಮುಕ್ತಿಯೋಗ್ಯರು. ಶಿರವೆಂದರೆ ಪೂರ್ವಪಕ್ಷ (ಅಪಾರ್ಥ). ಪಾದವೆಂದರೆ ಉತ್ತರ ಪಕ್ಷ (ಸಿದ್ಧಾಂತ) ಶೇಷನ ಶಿರವು ವಿಷಯುಕ್ತ. ಬಾಲವು ಅಮೃತಮಯ. ಸಮುದ್ರ ಮಥನದ ಅಧ್ಯಾತ್ಮಿಕ ಅರ್ಥ ಇಲ್ಲಿ ಅಡಗಿದೆ.

**ಪರಮ ಸತ್ಪುರುಷಾರ್ಥ ರೂಪನು । ಹರಿಯು ಲೋಕಕೆ ಎಂದು ।**
**ಪರಮಾದರದಿ ಸದುಪಾಸನೆಯಗೈವರಿಗಿತ್ತಪನು ತನ್ನ ॥**
**ಮರೆದು ಧರ್ಮಾರ್ಥಗಳ ಕಾಮಿಸುವರಿಗೆ ನಗುತತಿ ಶೀಘ್ರದಿಂದಲಿ ।**
**ಸುರಪ ತನಯ ಸೂಯೋಧನರಿಗಿತ್ತಂತೆ ಕೊಡುತಿಪ್ಪ ॥ ಹ ॥ ಕ ॥ ಸಾ ॥**

ಪಾಂಡವರಿಂದ ಬೀಳ್ಕೊಂಡ ಶ್ರೀಕೃಷ್ಣನು ಸಾತ್ಯಕಿಯೊಡನೆ ಮತ್ತು ಬ್ರಾಹ್ಮಣರಿಂದ ಕೂಡಿಕೊಂಡು ಹಸ್ತಿನಾವತಿಗೆ ಬಂದನು. ದೈತ್ಯರು ಶ್ರೀಹರಿಯ ಅವಯವಗಳಲ್ಲಿ ಮಾತ್ರ ಭೇದಚಿಂತನೆಯನ್ನು ಮಾಡುತ್ತಾರೆ. ಎಂದಲ್ಲ. ಅವರು ಆತನ ಅವತಾರಗಳಲ್ಲಿಯೂ ಭೇದಚಿಂತನೆಯ ಮೂಲಕ ಅಸುರೋಪಾಸನೆಯನ್ನು ಮಾಡುತ್ತಾರೆ. ಅವರು ಹಾಗೆಯೇ ಮಾಡಲಿ ಎಂದು ವೇದವ್ಯಾಸ, ಪರಶುರಾಮ ರೂಪಗಳಿಂದ ಶ್ರೀಕೃಷ್ಣ ರೂಪವನ್ನು ಹಿಂಬಾಲಿಸಿದನು. (ವ್ಯಾಸ ರಾಮಾದಿ ರೂಪೇಷು । ಋಷಿ ವಿಪ್ರತ್ವ ವಿಚಿಂತನಂ । ತೇ ಸರ್ವೇ ಅಸುರಾಜ್ಞೇಯಾ । ನಾತ್ರ ಕಾರ್ಯಾ ವಿಚಾರಣಾ ॥ ಗಾರುಡೇ ॥" (ಇಲ್ಲಿ ರಾಮನೆಂದರೆ ಪರಶುರಾಮನೆಂದು ತಿಳಿಯಬೇಕು). ತಾನು ಸರ್ವ ವ್ಯಾಪಿಯಾಗಿದ್ದರೂ ಕೇವಲ ಹಸ್ತಿನಾವತಿಗೆ ಬಂದನು ಎನಿಸಿ ಅಸುರರಿಗೆ ಮೋಹವನ್ನೂ, ದಿವಿಜರಿಗೆ ತನ್ನ ಲೀಲಾ ವಿಶೇಷಗಳನ್ನೂ ತೋರಿದನು.

ಬಂದ ಶ್ರೀಕೃಷ್ಣನನ್ನು ಭೀಷ್ಮಾಚಾರ್ಯರೇ ಮೊದಲಾದ ಪ್ರಮುಖರು ಶಿರಸಾಸ್ಟಾಂಗ ಪ್ರಣಾಮಗಳೊಂದಿಗೆ ಸ್ವಾಗತವನ್ನು ನೀಡಿ ಅರ್ಚಿಸಿದರು. ದುರ್ಯೋಧನನು ಮಾತ್ರ ಸಿಂಹವಿಷ್ಟಗದಿಂದ ಏಳಲಿಲ್ಲ; ಶ್ರೀಕೃಷ್ಣನಿಗೆ ನಮಿಸಲಿಲ್ಲ. ಆಗ ಶ್ರೀಕೃಷ್ಣನು ತನ್ನ ಉಂಗುಷ್ಟದಿಂದ ಭೂಮಿಯನ್ನು ಅದುಮಲಾಗಿ ಸಿಂಹಾಸನವು ಸಮತಟ್ಟು ರಹಿತವಾಗಿ ಥಕ್ಕನೆ ವಾಲಿತು. ಸಿಂಹಾಸನವು ಗುರುತ್ವ ದೋಷಯುಕ್ತವಾದುದರಿಂದ ಆ ದುರ್ಯೋಧನನು ಅದರ ಮೇಲಿನಿಂದ ಜಾರಿ ಶ್ರೀಕೃಷ್ಣನ ಅಡಿಗಳಿಗೆ ಬಂದು ಬಿದ್ದನು. ಯಾವನ ಇಚ್ಛಾ ಮಾತ್ರದಿಂದಲೇ ಈ ಬ್ರಹ್ಮಾಂಡವು ಸಮತೋಲನೆಯಿಂದ ಅಸ್ಖಲಿತವಾಗಿ ನಿಂತಿರುವುದೋ, ಯಾವಾತನ ಅನುಗ್ರಹ ಮಾತ್ರದಿಂದಲೇ ತಾನು ಸಿಂಹಾಸನವನ್ನೇರಿದನೋ ಆ ಜ್ಞಾನವೇ ಇಲ್ಲದ ಈತ ಮೋಯೋಗ್ಯನು ಈಗ ಪದಚ್ಯುತಿಯ ಸೂಚನೆಯನ್ನು ಕಂಡುದುದರಲ್ಲಿ ಆಶ್ಚರ್ಯವೇನಿದೆ? "ಸರ್ಪ ಕೇತನ ಗರ್ವಹರ ವಿಜಯ ವಿಠ್ಠಲರೇಯ"ನು ನಸುನಗುತ್ತ ಕುರುಕುಲ ಸಾರಭೌಮನನ್ನು ಹಿಡಿದೆತ್ತಿ "ಗೋಪಾಲಕರಿಗೇಕೆ ಭೂಪಾಲಕರ ನಮನ?" ಭೂಮಿ, ಕನಕಗಳಲ್ಲಿ ಆಸೆ ಇಟ್ಟವರಿಗೆ ಶ್ರೀಹರಿಯು ಒಲಿಯನು. ಗೋ (ಜ್ಞಾನ) ಪಾಲಕರಿಗೆ ಮಾತ್ರ ಶ್ರೀಹರಿಯು ಪ್ರೀತನಾಗುವನು, ಎಂದನು. ಧಾರ್ಮಿಕ ಮಾತಿನ ಉಪಚಾರ – ಅಪಚಾರಗಳ ತರುವಾಯ ನ್ಯಾಯ ಸಮ್ಮತವಾಗಿ ಪಾಂಡವರಿಗೆ ಅವರ ರಾಜ್ಯವನ್ನು ಬಿಟ್ಟು ಕೊಡಬೇಕೆಂದು ಶ್ರೀಕೃಷ್ಣನು ಬಹುಪರಿಯಾಗಿ ದೃಷ್ಟಾಂತಗಳನ್ನಿತ್ತು ಜೀವಹಾನಿಯನ್ನು ತಪ್ಪಿಸಿ ಸುಖದಿಂದ ಬಾಳಬೇಕೆಂದು ದುರ್ಯೋಧನನಿಗೆ ಹೇಳಿದನು.

ಅದಕ್ಕೆ ದುರ್ಯೋಧನನು "ಬಿಡಿ ನುಡಿಗೆ (ಸಾಮ) ಬಿಡೆ ಭೂಮಿ। ನಡುವಿನವರಿಗೆ (ಭೇದ) ನಡುಗೆ। ಅಡಿ ಸ್ಥಳವ (ದಾನ) ಕೊಡಲಾರೆ । ಪಡೆ ಸಹಿತ ಬಾ (ದಂಡ) ಕೃಷ್ಣ॥ ಬೇಡಿದ್ದು ಅಡಿ ಮೂರು । ಪಡೆದದ್ದು ಬ್ರಹ್ಮಾಂಡ ॥ ನಡೆಯದೋನಿನ್ನಾಟ । ಪೊಡವೀಶನ ಮುಂದೆ । ಬಿಡು ಸಾಕು ಮಾತುಗಳ । ಎಡೆ ಸಿದ್ಧವಾಗಿಹುದು । ಒಡಲ ಧರ್ಮವ ಮುಗಿಸಿ । ಪಿಡಿ ನಿನ್ನ ದಾರಿಯನು । ನುಡಿ ಮುಂದುವರಿಸಿದರೆ । ಹಿಡಿದು ಕಟ್ಟುವೆ ನಿನ್ನ" ಎಂದನು. ಈ ಚೆನ್ನುಡಿಯು ಅವನ ಸ್ವರೂಪಕ್ಕೆ ಹಿಡಿದ ಕನ್ನಡಿಯಲ್ಲವೇ? ಆ ಕೂಡಲೇ ಶ್ರೀಕೃಷ್ಣನು ದಿಗ್ಗನೆ ಆಸನದಿಂದ ಎದ್ದು ಹೇ ದುರ್ಯೋಧನಾ, ನಾವು ನಿನ್ನಲ್ಲಿ ಊಟ ಮಾಡಬೇಕಾದರೆ ಮೂರು ಕಾರಣಗಳು ಬೇಕು. ಒಂದು ನನಗೆ ಹಸಿವಾಗಿರಬೇಕು. ಎರಡನೇಯದಾಗಿ ನೀನು ಪ್ರೀತಿಯಿಂದ ಉಣಬಡಿಸುವಂತಿರಬೇಕು. ಮೂರನೆಯದಾಗಿ ನನಗೆ ಗತಿ ಇಲ್ಲದಂತಿರಬೇಕು. ಇಲ್ಲಿ ಮೂರಕ್ಕೂ ಅತ್ಯಂತ ಅಭಾವವಿರುವಾಗ ಭೋಜನದ ಪ್ರಸಕ್ತಿಯು ಹೇಗೆ ತಾನೇ ಬಂದೀತು? ಮೇಲಾಗಿ "ದ್ವಿಷದನ್ನಂ ನಭೋಕ್ತವ್ಯಂ । ದ್ವಿಷಂತಂ ನೈವ ಭೋಜಯೇತ್ ॥ ಪಾಂಡವಾನ್ ದ್ವಿಷಸೇ ರಾಜನ್ । ಮಮ ಜೀವಾಸ್ತು ಪಾಂಡವಾಃ ॥ ಯದ್ವೇಷ್ಟಿ ಸ ಮಾಂ ದ್ವೇಷ್ಯೇ ॥"

ಅಂದರೆ "ಎಲೋ ವಿಪರೀತ ಬುದ್ಧಿಯೇ, ದ್ವೇಷಿಗಳಲ್ಲಿ ಉಣ್ಣಬಾರದು. ದ್ವೇಷಿಗಳಿಗೆ ಉಣಲೀಯಬಾರದು. ನನ್ನ ಮಿತ್ರನ ಮಿತ್ರನು ನನಗೆ ಮಿತ್ರನು. ನನ್ನ ಮಿತ್ರನ ಶತ್ರು ನನಗೆ ಶತ್ರುವು. ನನ್ನ ಶತ್ರುವಿನ ಮಿತ್ರನು ನನ್ನ ಶತ್ರುವು. ನನ್ನ ಶತ್ರುವಿನ ಶತ್ರುವು ನನಗೆ ಮಿತ್ರನು. ಈ ರೀತಿ ಇರುವಾಗ ನನ್ನ ಜೀವಕ್ಕೆ ಸಮರಾದ ಪಾಂಡವರನ್ನು ದ್ವೇಷಿಸುವುದರ ಮೂಲಕ ನೀನು ನನ್ನ ಶತ್ರು ಸ್ಥಾನದಲ್ಲಿಯೇ ನಿಂತಿರುವೆ. ನಿನ್ನ ಉಪಚಾರವು ನನಗೇಕೆ? ನಿನ್ನ ಅವನತಿಯ ಕಾಲವು ಸನ್ನಿಹಿತವಾಗಿದೆ" ಎಂದು ಹೇಳುತ್ತ ನಿರ್ಗಮಿಸಲು ಉದ್ಯುಕ್ತನಾದನು.

ಹೀಗೆ ಶ್ರೀಕೃಷ್ಣನು ಎದ್ದ ಕೂಡಲೇ ಆತನನ್ನು ಬಂಧಿಸಲು ಕುಪಿತನಾದ ಆ ದುರ್ಯೋಧನನು ತನ್ನ ದೂತರಿಗೆ ಸೂಚನೆಯನ್ನಿತ್ತನು. ದುರ್ಯೋಧನನ ದೂತರು ಅಡಿ ಮುಂದಿಡುವಷ್ಟರೊಳಗೆ ಶ್ರೀಕೃಷ್ಣನು ಅಮಿತ ಸೂರ್ಯ ಪ್ರಕಾಶಮಯವಾದ ತನ್ನ ದಿವ್ಯ ರೂಪವನ್ನು ಧೃತರಾಷ್ಟನಿಗೆ ತೋರಿಸಿದನು. (ಆತನಿಗೆ ದಿವ್ಯ ಚಕ್ಷುಸುಗಳನ್ನು ಇತ್ತನು) ಅದನ್ನು ಕಂಡ ಧೃತರಾಷ್ಟನು ಈ ದಿವ್ಯ ರೂಪದರ್ಶನವಾದ ತರುವಾಯ ಮತ್ತೊಂದು ಭಗವದನ್ಯ ರೂಪದರ್ಶನವು ತನಗೆ ಬೇಡೆಂದು ಮೊದಲಿನಂತೆಯೇ ತನ್ನನ್ನು ಅಂಧನನ್ನಾಗಿರಿಸುವಂತೆ ಬೇಡಿಕೊಂಡನು. ಶ್ರೀಕೃಷ್ಣನು ಅವನಿಗೆ ಹಾಗೆ ಅನುಗ್ರಹಿಸಿದನು. ತರುವಾಯ ತಾನು ದುರ್ಯೋಧನನಿಗೆ ಅಪರಿಮಿತ ಸಂಖ್ಯಾಕ ಕೃಷ್ಣರೂಪಗಳನ್ನು ತೋರಲಾಗಿ ಆ ಕುಮತಿಯು ಯಾರನ್ನು ಬಂಧಿಸಬೇಕೆಂದು ತಿಳಿಯದೆ ಭ್ರಾಂತನಾದನು. ಅಲ್ಲಿ ನೆರೆದಿದ್ದವರೆಲ್ಲಾ ಒಬ್ಬರು ಮತ್ತೊಬ್ಬರಿಗೆ ಕೃಷ್ಣನಂತೆ ತೋರಿದರು ಆಗ ರಾಜದೂತರು ಕೃಷ್ಣನೆಂದೇ ಭ್ರಮಿಸಿ ದುರ್ಯೋಧನನನ್ನೇ ಬಂಧಿಸಿದರು. ಶ್ರೀ ಕೃಷ್ಣನು ತನ್ನ ವ್ಯಾಪ್ತರೂಪವನ್ನು ಸಮಾರೋಪಗೊಳಿಸಿದ ಮೇಲೆ ಬಂಧನದಲ್ಲಿ ಸಿಲುಕಿದ್ದ ದುರ್ಯೋಧನನು ಶ್ರೀಕೃಷ್ಣನು ಮಹಾಮಹಿಮನೆಂದು ತಿಳಿಯದೆ ಸ್ವರೂಪಕ್ಕೆ ತಕ್ಕಂತೆ "ಇವನು ಮಾಯಾವಿ, ಇಂದ್ರಜಾಲಿಕ, ಕಪಟಿ" ಎಂದು ಜರಿದನು. ವೈರವರ್ಜಿತನಾದ ಪರಮಾತ್ಮನು ಯಶೋದೆ, ಅಕ್ರೂರ, ಭೀಷ್ಮ, ಮಾರ್ಕಾಂಡೇಯ ಮತ್ತು ಅರ್ಜುನನಿಗಿಂತಲೂ ಮೊದಲೇ ವಿಶ್ವರೂಪವನ್ನು ದುರ್ಯೋಧನನಿಗೆ ತೋರಿದನು. ಆದರೆ ಪ್ರಯೋಜನವೇನು?

ಅರಮನೆಯಿಂದ ನಿರ್ಗಮಿಸಿದ ಶ್ರೀಕೃಷ್ಣನು ವಿದುರನಲ್ಲಿಗೆ ಬರಲಾಗಿ ಆ ವಿದುರನು ತನ್ನ ದೇಹದಲ್ಲೇ ಇರುವವನು ಇಲ್ಲಿಗೆ ಲೀಲಾಮಾನುಷ ವಿಗ್ರಹನಾಗಿ ಬಂದಿರುವುದನ್ನು ಚಿಂತಿಸುತ್ತ, ಶ್ರೀಕೃಷ್ಣನು ವಿದುರನಿತ್ತ ಹಾಲನ್ನು ಸ್ವೀಕರಿಸಿ ಹಸಿವೆಯನ್ನು ಅಡಗಿಸಿಕೊಂಡನು ಎಂಬ ಅಯಥಾರ್ಥ ಜ್ಞಾನವು. ದುರ್ಯೋಧನಾದಿಗಳಿಗೆ ದಟ್ಟವಾಗಲಿ ಎಂದೇ ತಿಳಿದು ಆತನಿಗೆ ಒಂದು ಬಟ್ಟಲ ಹಾಲನ್ನು ನೀಡಿದನು. ಆ ಹಾಲನ್ನು ಕುಡಿದುದನ್ನು ದೃತ್ಯರು ಮಾತ್ರ ನೋಡಿದರು. ಆದರೆ ಆ ಹಾಲನ್ನು ನಿಜವಾಗಿ ಕುಡಿದು ಕೃಷ್ಣಾರ್ಪಣವೆಂದು ಹೇಳಿದ್ದು ವಿದುರನೇ ಹೊರತಾಗಿ ಕೃಷ್ಣನಲ್ಲ. ಜೀವರು ತಿನ್ನುವ, ಕುಡಿಯುವ ಸಮಸ್ತ ವಸ್ತುಗಳೂ ದೇಹದ ಪೋಷಣೆಗಾಗಿಯೇ ಹೋಗುತ್ತವೆ. ಆ ದೇಹವಾದರೂ ಪೃಥ್ವೀ ತತ್ವಯುಕ್ತವಾದುದು. ಈ ಪೃಥ್ವೀ ತತ್ವಕ್ಕೆ ನಿಯಾಮವಾದಕ ಭಗವದ್ರೂಪವು ಶ್ರೀಕೃಷ್ಣ ರೂಪವೇ ಆಗಿದೆ. ಶ್ರೀಕೃಷ್ಣನು ಪ್ರಾಕೃತ ರಸದಿಂದ ಜೀವರ ದೇಹ ಪೋಷಣೆಯನ್ನು ಮಾತ್ರ ಮಾಡುತ್ತಾನೆ. ತಾನು ತನ್ನ ಸ್ವಾಬ್ಧಿ ರಸವನ್ನು ಮಾತ್ರ ಸ್ವೀಕರಿಸುತ್ತಾನೆ. ಈ ಬಿಂಬಕ್ರಿಯಾ ವ್ಯಾಪಾರವನ್ನು ವಿದುರನು ಕಂಡು ತಾನು ಕುಡಿದ ಹಾಲನ್ನು ಶ್ರೀಕೃಷ್ಣನು ಕುಡಿದನೆಂದು ಚಿಂತಿಸಿ ನಿತ್ಯೋಪವಾಸಿಯಾದನು. ಹಾಲಿನಲ್ಲಿದ್ದ ವಿಷ್ಣು ರೂಪವು ಜಠರಾಗ್ನಿ ಗತನಾದ ಪರಶುರಾಮನ ದ್ವಾರ ತನ್ನ ದೇಹಸ್ಥ ಶ್ರೀಕೃಷ್ಣನ ರೂಪದಲ್ಲಿ ಅಂತರ್ಧಾನವಾಗುವುದನ್ನು ಕಂಡು ವಿದುರನು ಹಿಗ್ಗಿ ನಲಿ ನಲಿದಾಡಿದನು. ವಿದುರನ ಈ ಭಾಗ್ಯವನ್ನು ಕಂಡು ದೇವಾನು ದೇವತೆಗಳು ತಲೆದೂಗಿದರು. "ವಿದುರನ ಭಾಗ್ಯವಿದು ॥ ಪದುಮಜಾಂಡವೆ ತಲೆ ತೂಗುತಲಿಹುದು ॥" ಎಂದರು ಶ್ರೀಪುರಂದರದಾಸರು. ವಿದುರನು ಅಂದು ಮಾತ್ರ

ಶ್ರೀಕೃಷ್ಣನಿಗೆ ಅರ್ಪಿಸಿದ ಹಾಲನ್ನು ಕುಡಿದನೇ ಅಥವಾ ಆ ಹಾಲಿನಲ್ಲಿ ಮಾತ್ರ ವಿಷ್ಣು, ಕೃಷ್ಣರನ್ನು ಕಂಡನೇ? ಎಂದರೆ ಹಾಗಲ್ಲ. ಆತನು ಪ್ರತಿನಿತ್ಯದಲ್ಲಿಯೂ ತಾನು ಭುಂಜಿಸುವ ಸಕಲ ಭಕ್ಷಗಳಲ್ಲಿಯೂ ಆಯಾ ಭಗವದ್ರೂಪಗಳು ಶ್ರೀಕೃಷ್ಣನಲ್ಲೇ ಅಂತರ್ಧಾನವಾಗುತ್ತಿರುವುದನ್ನು ಕಂಡು ಹಿಗ್ಗುತ್ತಿದ್ದನು. ಬಿಂಬಕ್ರಿಯಾದ್ವಾರ ದೇಹ ಪೋಷಣೆ, ಆತ್ಮರಂಜನೆಯನ್ನು ಮಾಡುತ್ತಾನೆ. ಇದಕ್ಕನ್ನುತ್ತಾರೆ ನೈವೇದ್ಯ ಎಂತ! ಇದಕ್ಕನ್ನುತ್ತಾರೆ ಊಟ ಎಂತ ॥ ಚಿದಾನಂದಾತ್ಮಕನಾದ ಶ್ರೀಕೃಷ್ಣನು ಪ್ರಾಕೃತ ರಸಗಳನ್ನು ಸ್ವೀಕರಿಸುವುದಿಲ್ಲ. ಜೀವರೂ ಸ್ವೀಕರಿಸುವುದಿಲ್ಲ. ಉಂಡದ್ದು ಪ್ರಾಕೃತ ದೇಹ ಪೋಷಣೆಗೆ ಅನುಕೂಲವಾಗುತ್ತದೆ. ಇದನ್ನು ಶ್ರೀಕೃಷ್ಣನು ಮಾಡುತ್ತಾನೆ.

ಶ್ರೀಕೃಷ್ಣ ಪರಮಾತ್ಮನು ಹಸ್ತಿನಾವತಿಯಲ್ಲಿ ಕುಂತೀದೇವಿಯನ್ನು ಸಂಧಿಸಿ ಪಾಂಡವರ ಯೋಗಕ್ಷೇಮವನ್ನು ತಿಳಿಸಿ ಅಲ್ಲಿಂದ ಕರ್ಣನನ್ನು ಸಂಧಿಸಿದನು. ಶ್ರೀಕೃಷ್ಣನು ಕರ್ಣನನ್ನು ಸಂಧಿಸಿ ಅವನ ಜನ್ಮವೃತ್ತಾಂತವನ್ನು ಬಹಿರಂಗಪಡಿಸುತ್ತಾ "ಹೇ ಕರ್ಣಾ ನೀನು ಕುಂತೀ ದೇವಿಯ ಜೇಷ್ಠ ಪುತ್ರನೇ ಆಗಿರುವಿ. ನೀನು ಪಾಂಡವರ ಪಕ್ಷವನ್ನು ವಹಿಸಿದುದೇ ಆದರೆ ನಿನಗೆ ಆ ಅಂಗಸಾಮಂತ ರಾಜ್ಯ ಮಾತ್ರವಲ್ಲ. ಇಡೀ ಭರತಖಂಡಕ್ಕೇ ನಿನ್ನನ್ನು ಚಕ್ರವರ್ತಿಯನ್ನಾಗಿಯೇ ಮಾಡುತ್ತೇನೆ. ನಿನ್ನ ಮೇಲಿನ ಪ್ರೀತಿಯಿಂದ ದುರ್ಯೋಧನನೂ ಯುದ್ಧ ಯೋಚನೆಯನ್ನು ಬಿಡಬಹುದು. ಆಗ ಕುರುಪಾಂಡವರ ಐಕ್ಯಮತ್ಯದಿಂದ ತ್ರಿಜಗದ್ಭರಿತವಾದ ಕೀರ್ತಿಯು ನಿಮಗುಂಟಾಗುತ್ತದೆ. ಆದ್ದರಿಂದ ನೀನು ಪಾಂಡವರ ಪಕ್ಷವನ್ನು ವಹಿಸು" ಎಂದನು ಆದರೆ ಸಹಸ್ರವರ್ಮನಾಮಕ ದೈತ್ಯನ ಆವೇಶಯುಕ್ತನಾದ, ಈ ಸೂರ್ಯಾಂಶ ಸಂಭೂತನಾದ ಕರ್ಣನು ಶ್ರೀಕೃಷ್ಣನ ಮಾತಿಗೆ ಒಡಂಬಡಲಿಲ್ಲ. ಅವನು ಶ್ರೀಕೃಷ್ಣನಿಗೆ ಹೇಳಿದನು. "ಹೇ ಕೃಷ್ಣಾ ನಿನ್ನ ಸಂದೇಶವು ನನಗೆ ಬಹಳ ತಡವಾಗಿ ಮುಟ್ಟಿತು. ಈಗ ನೀನು ನನ್ನ ಜನ್ಮ ವೃತ್ತಾಂತವನ್ನು ತಿಳಿಸುವುದರ ಮೂಲಕ ನೀನು ನನ್ನ ಸ್ಥೈರ್ಯವನ್ನು ಉಡುಗಿಸಿ ಏಕಕಾಲದಲ್ಲಿ ನನ್ನನ್ನೂ ನನ್ನ ಧಣಿ ದುರ್ಯೋಧನನನ್ನೂ ಯುದ್ಧವಿಲ್ಲದೆ, ಶಸ್ತ್ರವಿಲ್ಲದೇ (ಯುದ್ಧವಿಲ್ಲದೆ, ಶಸ್ತ್ರವಿಲ್ಲದೆ) ಸಂಹರಿಸಿಬಿಟ್ಟಿರುವೆ. ಆದರೆ ಈಗ ನಾನು ನನ್ನ ಸ್ವಾಮಿಗೆ ದ್ರೋಹವನ್ನು ಬಗೆಯಲಾರೆ.

"ಜಿತೇನ ಲಭ್ಯತೇ ಲಕ್ಷ್ಮೀಃ । ಹತೇನಾಽಪಿಸುರಾಂಗನಾ ॥
ಕ್ಷಣೇ ವಿಧ್ವಂಸಿತೇ ಕಾಯೇ । ಕಾಚಿಂತಾ ಮರಣೇ ರಣೇ ॥
ನಿಮಂತ್ರಣೋತ್ಸುಕೋ ವಿಪ್ರಃ । ಗಾವೋ ನವ ತೃಣೋತ್ಸುಕಃ ॥
ಭರ್ತಾಗಮೋತ್ಸುಕೋ ನಾರೀ । ಅಹಂ ಕೃಷ್ಣ ರಣೋತ್ಸುಕಃ ॥
ವಿಪ್ರ ಹಸ್ತೇ ಧನಂ ದದ್ಯಾತ್ । ಸ್ವಭಾರ್ಯಾಯಾಂಚ ಯೌವನಂ ॥
ಸ್ವಾಮಿ ಕಾರ್ಯೇಷುಚ ಪ್ರಾಣಂ । ನಿಶ್ಚಯೋ ಮಮ ಮಾಧವ ॥"

ಎಂದು ಹೇಳಿ ಸಾಂಪ್ರದಾಯಿಕವಾಗಿ ಶ್ರೀಕೃಷ್ಣನಿಗೆ ನಮಸ್ಕರಿಸಿ ಕರ್ಣನು ಅಲ್ಲಿಂದ ನಿರ್ಗಮಿಸಿದನು. ಭಗವದ್ದ್ವೇಷದಲ್ಲಿ ಪರಿಯಸಾನವಾಗುವ ಶಪಥಗಳು, ಸ್ವಾಮಿನಿಷ್ಠೆ, ಪಿತೃವಾಕ್ಯ, ಗುರ್ವಾಜ್ಞೆ, ಪ್ರತಿಜ್ಞೆಗಳು ಸದ್ಧರ್ಮ ಕರ್ಮಗಳೆನಿಸುವುದಿಲ್ಲ. "ಪಾಪಂ ಭವತಿ ಧರ್ಮೋಽಪಿಯೇನಭಕ್ತ್ಯಾ ಕೃತೋಹರೇಃ ॥" ಹಾಗೆಂಯೇ ಭಗವತ್ಪ್ರೀತ್ಯರ್ಥವಾಗಿ ಉಲ್ಲಂಘಿಸಿದ ಪ್ರತಿಜ್ಞೆಗಳು ಅಧರ್ಮವೆನಿಸುವುದಿಲ್ಲ. ಉದಾ:-ರುಕ್ಮಾಂಗದನು ಮೋಹಿನಿಗೆ ಇತ್ತ ವಚನವನ್ನು ಪಾಲಿಸಲಿಲ್ಲ ಪ್ರಹ್ಲಾದನು ಪಿತೃವಾಕ್ಯವನ್ನು ಪಾಲಿಸಲಿಲ್ಲ.

ಶ್ರೀಕೃಷ್ಣನಾದರೋ ಸೂರ್ಯನಿಗೆ ಖಳ ಸಹಸ್ರವರ್ಮನಿಂದ ಮೋಕ್ಷವನ್ನೀಯ ಬೇಕಾಗಿತ್ತು. ಅದಕ್ಕೆ ಕುಂತೀದೇವಿಯ ಕೊಡುಗೆ (ಮಾತೃಭಿಕ್ಷೆ)ಗಾಗಿ ಶ್ರೀಕೃಷ್ಣನು ಕುಂತಿದೇವಿಯಲ್ಲಿಗೆ ಬಂದು ಆಕೆಗೆ ಆ ಕರ್ಣನನ್ನು ಸಂಧಿಸಿ ತಾನು ತಾಯಿಯೆಂದೂ, ಪಾಂಡವರ ಪಕ್ಷವನ್ನು ವಹಿಸಬೇಕೆಂದೂ, ತಪ್ಪಿದರೆ ಪಾಂಡವರನ್ನು ಕೊಲ್ಲಬಾರದೆಂದೂ ಕೇಳಿಕೊಳ್ಳಲು ನಿರೂಪಿಸಿದನು. ಅದರಂತೆ ಕುಂತೀ ದೇವಿಯು ಕರ್ಣನಲ್ಲಿಗೆ ಬಂದು ಪರಿಪರಿಯಾಗಿ ಕರ್ಣನಲ್ಲಿ ಮಾತೃವಾತ್ಸಲ್ಯವನ್ನು ತೋರಿ ತನ್ನ ಮನದಿಂಗಿತವನ್ನು ಬಿಚ್ಚಿದಳು. ಧರ್ಮಸಂಕಟದಿಂದ ಬಳಲಿದ ಕರ್ಣನು ತಾಯಿಯ ಅಪೇಕ್ಷೆಯಂತೆ ತೊಟ್ಟ ಬಾಣವನ್ನು ತೊಡುವುದಿಲ್ಲವೆಂತಲೂ, ಪಾಂಡವರಲ್ಲಿ ವಿನಾ ಅರ್ಜುನ ತನ್ನ ಕೈಗೆ ಯಾರು ಸಿಕ್ಕರೂ ಅವರನ್ನು ಕೊಲ್ಲುವುದಿಲ್ಲವೆಂದೂ ವಚನವನ್ನಿತ್ತು ನಿರ್ಗಮಿಸಿದನು. (ಯುದ್ಧದಲ್ಲಿ ಅಭಿಮನ್ಯುವು ಕರ್ಣನ ಕೈಗೆ ಸಿಕ್ಕಾಗ ಆತನನ್ನು ತಾನು ಕೈಯಾರೆ ಕೊಲ್ಲದೆ ಸೈಂಧವ-(ಜಯದ್ರಥನಿಂದ ಕೊಲ್ಲಿಸಿದನು).

ಶ್ರೀಕೃಷ್ಣನು ಅಶ್ವತ್ಥಾಮಾಚಾರ್ಯರನ್ನು ಸಂಧಿಸಿ ಪಾಂಡವ ಮಿತ್ರನಾಗಬೇಕೆಂದು ಹೇಳಿದನು. ಆಗ ಅಶ್ವತ್ಥಾಮಾಚಾರ್ಯರು ಎಲ್ಲಿಯವರೆಗೆ ತನ್ನ ತಂದೆಯಾದ ದ್ರೋಣಾಚಾರ್ಯರು ಜೀವಿಸಿರುವರೋ ಅಲ್ಲಿಯವರೆಗೆ ತಾನು ಪಾಂಡವರಿಗೆ ಮಿತ್ರನಾಗಿರುವೆನು ಎಂದು ಹೇಳಿ ಹೊರಟರು.

ಇಲ್ಲಿಯವರೆಗೆ ಸಂದ ಮಹಾಭಾರತದ ವಿಚಾರಧಾರೆಯು ಬೇರೆಲ್ಲೋ ಘಟಿಸಿದ ಪ್ರಕರಣವೆಂದು ತಿಳಿಯಬಾರದು. ನಮ್ಮ ದೇಹದಲ್ಲೇ ಎಡಭಾಗದಲ್ಲಿ ಕೌರವರು, ಬಲಭಾಗದಲ್ಲಿ ಪಾಂಡವರು ಒಂದೊಂದಂಶದಿಂದ ಪ್ರತಿನಿತ್ಯವೂ ತತ್ತ್ವಾಭಿಮಾನಿಗಳಾಗಿ ಹೋರಾಡುತ್ತಿರುವರೆಂದು ತಿಳಿಯಬೇಕು. ನಾವು ತಿನ್ನುವ ಆಹಾರ, ಸಹವಾಸಗಳನ್ನು ಅನುಸರಿಸಿ ಈ ಅಸುರ – ದೇವತೆಗಳ ವ್ಯಾಪಾರವು ನಮ್ಮಲ್ಲಿ ನಡೆಯುತ್ತವೆ. ದುರಾನ್ನಾದಿಗಳಿಂದ ದ್ರೋಣ, ಭೀಷ್ಮರಂಥಾ ದೇವತೆಗಳೂ ಮೂರ್ಛಿತರಾಗಿ ನಮ್ಮ ದೇಹದಲ್ಲಿ ಇದ್ದು ದುಷ್ಕರ್ಮ, ಅಜ್ಞಾನಾದಿಗಳೇ ಪ್ರಚುರವಾಗಿರುತ್ತವೆ. ಶ್ರೀಹರಿ, ವಾಯು, ಗುರುಗಳ ಅನುಗ್ರಹದಿಂದಲೇ ಇವು ಪರಿಹಾರವಾಗುವುದು. ಅನ್ಯಥಾ ನರಕಾದಿ ಅನರ್ಥಗಳೇ ಪ್ರಾಪ್ತಿಯಾಗುವುದು.

ಅನಿವಾರ್ಯವಾದ ಯುದ್ಧವು ಕಾರ್ಯೋನ್ಮುಖ ಪ್ರಸಂಗದಿಂದ ವಿಜೃಂಭಿಸಿತು. "ಕುರುಕ್ಷೇತ್ರದಲ್ಲಿ ಕೌರವರು ಪಾಂಡವರು ತಮ್ಮ ತಮ್ಮ ಸೈನಿಕರ ಶಿಬಿರಗಳನ್ನು ಸ್ಥಾಪಿಸಿದರು. ಸಂಗ್ರಾಮವು ಸನ್ನಿಹಿತವಾದ ಕೂಡಲೇ ಶ್ರೀಕೃಷ್ಣನು ಅರ್ಜುನನ ರಥವನ್ನು ತಂದು ರಣರಂಗದಲ್ಲಿ ನಿಲ್ಲಿಸಿದನು. ಗುರು, ಪಿತಾಮಹ, ಕರ್ಣ ಶಲ್ಯಾದಿ ಕುರುಬಲ ಪ್ರಮುಖರು ಯುದ್ಧ ಮುಖದಲ್ಲಿ ರಾರಾಜಿಸಿದರು. ಇತ್ತಂಡದಲ್ಲಿ ಸೈನ್ಯಸಾಗರ ಸಿದ್ಧವಾಗಿ ನಿಂತಿತ್ತು. ಆ ಕ್ಷಣದಲ್ಲಿ ಎಲ್ಲವನ್ನೂ ಒಂದು ಬಾರಿ ಭೀಭತ್ಸನಯನಗಳಿಂದ ವೀಕ್ಷಿಸಿದ ಅರ್ಜುನನು ಇದ್ದಕ್ಕಿದಂತೆ ಗಾಂಡೀವವನ್ನು ರಥದಲ್ಲಿ ಇರಿಸಿ ಶ್ರೀಕೃಷ್ಣನಿಗೆ ಕೈಮುಗಿದು "ಸ್ವಾಮಿ, ನನಗೆ ಈ ಯುದ್ಧವು ಬೇಡಾ. ಈ ಯುದ್ಧದಿಂದ ಎಷ್ಟು ಜನ ಬಾಂಧವರು, ಮಿತ್ರರು, ಅಮಾಯಕರು ಮರಣವನ್ನು ಹೊಂದುವರು. ಎಷ್ಟು ಕುಟುಂಬಗಳು ನಿರ್ಗತಿಕರಾಗುವರು. ಈ ಹತ್ಯಾಕಾಂಡದಿಂದ ಪ್ರಾಪ್ತವಾಗುವ ಪಾಪರಾಶಿಯು ಮೇರು ಪರ್ವತವನ್ನು ಮೀರಿಸುವುದು. ಬೇಡ, ಕೃಷ್ಣಾ ಬೇಡ. ಈ ಯುದ್ಧವು ಬೇಡವೇ ಬೇಡ. ಆ ದುರ್ಯೋಧನನೇ ರಾಜ್ಯಭಾರವನ್ನು ಮಾಡಲಿ. ಅವನ ರಾಜ್ಯದಲ್ಲಿ ನಾವು ಭಿಕ್ಷೆ ಬೇಡಿ ಬದುಕುತ್ತೇವೆ" ಎಂದು ಬಾಷ್ಪಲೋಚನನಾದನು.

ಅದಕ್ಕೆ ಶ್ರೀಕೃಷ್ಣನು ಗೀತೋಪದೇಶವನ್ನು ಮಾಡಿ "ಹೇ ಅರ್ಜುನಾ ಇತ್ತ ಕೇಳು. ಜಗತ್ತಿನಲ್ಲಿ ಅಧರ್ಮವು

ಅಳಿಯಬೇಕು. ಸದ್ಧರ್ಮವು ಉಳಿಯಬೇಕು. ಅದಕ್ಕಾಗಿಯೇ ಕ್ಷತ್ರಿಯ ಧರ್ಮವು ವಿಧಿಸಲ್ಪಟ್ಟಿದೆ. ಅದರಿಂದ ವಿಮುಖರಾದರೆ ಸಜ್ಜನರಿಗೆ ದುಃಖವು ತಪ್ಪುವುದಿಲ್ಲ. ಆಗ ಪಾಪ ಸಂಘಟನೆಯು ತಪ್ಪುವುದಿಲ್ಲ. "ದೇಹಸ್ಯ ಸರ್ವಥಾ ನಾಶ ।ಅನಾಶಶ್ಚೇತನಸ್ಯಚ ॥" ಎಂದಂತೆ ಎಂದಿದ್ದರೂ ದೇಹಕ್ಕೆ ನಾಶವು ತಪ್ಪದು. ಜೀವಕ್ಕೆ ನಾಶವೇ ಇಲ್ಲ. ಅಂದ ಬಳಿಕ ನೀನು ಸಂಹರಿಸದಿದ್ದರೂ ಮೃತ್ಯುವೆಂಬುವದು ಜೀವರಿಗೆ ತಪ್ಪಿದ್ದಲ್ಲವು. "ಬ್ರಹ್ಮೇಶಾದಿ ಕ್ಷರಸ್ಯಚ ॥" ಬ್ರಹ್ಮ ರುದ್ರಾದಿಗಳಿಗೂ ದೇಹ ವಿಯೋಗವಿದೆ. ನನ್ನ ಪೂಜಾ ರೂಪವಾದ ನಿನ್ನ ಕರ್ತವ್ಯವನ್ನು ನೀನು ಮಾಡು. ಇಲ್ಲವೇ ಆ ಕಾರ್ಯವನ್ನು ನಾನು ನಿನ್ನಿಂದಲೇ ಮಾಡಿಸುತ್ತೇನೆ. ಆಗ ನೀನು ಸತ್ಫಲ ವಂಚಿತನಾಗುವಿ. ಅದ್ದರಿಮದ ನಿರ್ವಿಕಾರ ಮನಸ್ಸಿನಿಂದ ಯುದ್ಧೋನ್ಮುಖನಾಗು. ಅದರಿಂದ ಬರುವ ಫಲದ ಕಡೆ ನೀನು ಗಮನವನ್ನು ನೀಡ ಬೇಡ. ಇದೇ ರೀತಿಯಾಗಿ ಸಮಸ್ತ ವರ್ಣಾಶ್ರದವರೂ ತಮ್ಮ ತಮ್ಮ ಕರ್ತವ್ಯಗಳನ್ನು ನನ್ನ ಪೂಜೆ ಎಂದೇ ಭಾವಿಸಿ ಫಲಸಂಗ ರಹಿತರಾಗಿ ಮಾಡಬೇಕು. ನನಗರ್ಪಿತವಾದ ಸಕಲ ಕರ್ಮಗಳೂ ಪುಣ್ಯಕರ್ಮಗಳೇ. ನಿನ್ನ ಕರ್ತೃತ್ವವನ್ನು ನೀನು ಮರೆತು ನಿನ್ನ ಧರ್ಮವನ್ನು ನೀನು ಪಾಲಿಸಿ ಅದನ್ನು ನನಗರ್ಪಿಸು" ಇತ್ಯಾದಿಯಾಗಿ ಅರ್ಜುನನಿಗೆ ಬೋಧಿಸಿದನು.

ಗೀತೋಪದೇಶವು ಆದದ್ದು ಹನುಮಂತನಿಗೆ ಎನ್ನುತ್ತಾರೆ. ಅದು ತಪ್ಪು. ಹನುಮಂತನು ಯುದ್ಧಕ್ಕೆ ನಿಂತಿರಲಿಲ್ಲ. ಹನುಮಂತನಿಗೆ ಅಜ್ಞಾನ, ಸಂಶಯಾದಿಗಳಿರುವುದಿಲ್ಲ. ಶ್ರೀಕೃಷ್ಣನ ಉಪದೇಶವು ಇಲ್ಲಿ ಅರ್ಜುನನಿಗೆ ಆದುದು ವಿಭೂತಿಪರವಾದುದೇ ವಿನಃ ಬಿಂಬೋಪದೇಶವಲ್ಲ. ಯಕ್ಷ್ಯಮರೇಂದ್ರ ಸಂವಾದ ರೂಪವು ನೀತಪರವಾದುದು. ಆ ಪ್ರಸಂಗವು ಇಲ್ಲಿ ಅನ್ವಯವಾಗುವುದಿಲ್ಲ. ಇಲ್ಲಿಯದು ವಿಪಕ್ಷಿತ ಪ್ರಸಂಗ ಮಾತ್ರ ಮತ್ತು ಲೋಕಶಿಕ್ಷಣಾತ್ಮಕವಾದುದು. ಇಂದ್ರನಿಗೆ ಉಮಾದೇವಿಯು ಮಾಡಿದ್ದು ಬಿಂಬೋಪದೇಶ. ಶ್ರೀಕೃಷ್ಣನು ಮಾಡಿದ್ದು ಹಿತೋಪದೇಶ.

ಕೊನೆಗೆ ಶ್ರೀಕೃಷ್ಣನು ಅರ್ಜುನನಿಗೆ ತನ್ನ ವಿಶ್ವರೂಪವನ್ನು ತೋರಿಸಿ ಆತನ ಸಮಸ್ತ ಸಂಶಯಗಳನ್ನು ನಿವಾರಣೆ ಮಾಡಿದ ಮೇಲೆ ಅರ್ಜುನನು ನಿರಸ್ತ ಸಂದೇಹ ಉಳ್ಳವನಾಗಿ ಯುದ್ಧೋನ್ಮುಖನಾದನು.

ಶ್ರೀಕೃಷ್ಣನು ಪಾಂಚಜನ್ಯ ಘೋಷಣೆಯನ್ನು ಮಾಡುತ್ತಿರಲು ಅರ್ಜುನನು ದೇವದತ್ತ ಶಂಖವನ್ನು ಊದಿದನು. ಯುದ್ಧವು ಆರಂಭವಾಯಿತು. ಗದಾಧಾರಿಯಾಗಿ ಭೀಮನು ಕೌರವರ ಸೇನೆಗೆ ನುಗ್ಗಿದನು. ಪರಸ್ಪರರು ನಾನಾವಿಧವಾದ ಆಯುಧಗಳನ್ನು ಪ್ರಯೋಗಿಸಿ ಹೊಡೆದಾಡಿದರು. ಶಲ್ಯ ರಾಜರಿಂದ ಉತ್ತರಕುಮಾರನು ಸಂಹೃತನಾದನು. ದ್ರೋಣಾಚಾರ್ಯ, ಭೀಷ್ಮರನ್ನು ಭೀಮನು ತನ್ನ ಪ್ರಹಾರದಿಂದ ಯುದ್ಧರಂಗದಿಂದ ಓಡಿಸಿದನು. ತರುವಾಯ ಭೀಮನು ತನ್ನ ಪ್ರಹಾರಗಳನ್ನು ಮುಂದುವರಿಸುತ್ತ ಶತ್ರು ಸೈನ್ಯವನ್ನು ಸದೆಬಡಿದನು. ಮಹಾ ಕ್ರೋಧವಶರಾಗಿ ಭೀಮನೆಡೆಗೆ ಮುನ್ನುಗ್ಗಿ ಬಂದ ಧೃತರಾಷ್ಟ್ರನ ಪುತ್ರರಲ್ಲಿ ೨೫ ಜನರನ್ನು ಭೀಮನು ಕ್ಷಣಾರ್ಧದಲ್ಲಿ ಸಂಹರಿಸಿಬಿಟ್ಟನು. ಅವರಲ್ಲಿ ಭೀಮನ ಮುಖ್ಯ ಗುರಿಯಾಗಿದ್ದ ದಾಯಾದಿ ಖಳಪ್ರಮುಖನಾದ ದುಶ್ಶಾಸನನೊಡನೆ ಕೆಲಕಾಲ ರಣಕ್ರೀಡೆಯನ್ನು ತೋರಿಸಿದನು. ತ್ರೇತಾಯುಗದ ಮೇಘನಾದ (ಇಂದ್ರಜಿತು) ಇವನೇ ಈಗ ದುಶ್ಶಾಸನನಾಗಿ ಭೀಮನೊಡನೆ ಸೆಣಸಲು ಸನ್ನದ್ಧನಾಗಿದ್ದನು. ಹಿಂದೆ ಈ ಪಾಪಿಯ ಸಂಹಾರವು ಲಕ್ಷ್ಮಣನಿಗೆ ಮೀಸಲಾಗಿದ್ದುದರಿಂದ ಭವಿಷ್ಯದ್ಭೀಮ (ಹನುಮಂತ)ನು ಆಗ ಇವನನ್ನು ಸಂಹರಿಸಲಿಲ್ಲ. ಕೇವಲ ಅವನ ಬ್ರಹ್ಮಾಸ್ತ್ರವನ್ನು ಮಾತ್ರ ವಿಫಲಗೊಳಿಸಿ ಬಿಟ್ಟಿದ್ದನು. ಈಗ ಈ ಯುಗದಲ್ಲಿ ಭೀಮನಿಗೆ ಇವನು ತೃಣ ಸಮಾನನಾಗಿದ್ದರೂ ಸಾಮಾನ್ಯರಿಗೆ ಇವನ ತ್ರಾಣ ಪರಿಚಯವನ್ನು ಮಾಡಿಸಲಿಕ್ಕಾಗಿ ಇವನೊಡನೆ ಕೆಲವು ಕಾಲ ಸೆಣಸಾಡಿದನು. ದೈತ್ಯರಿಗೆ ಈ ಖಳನೇ

ಬಹು ಬಲಶಾಲಿ ಎಂಬ ಭ್ರಾಂತಿಯನ್ನು ಹುಟ್ಟಿಸಲಿಕ್ಕಾಗಿಯೂ ಸೆಣಸಾಡಿದನು. ಭಗವದಿಚ್ಛಾಕ್ರಿಯೆಗಳನ್ನೇ ಸದಾಕಾಲವೂ ಚಿಂತಿಸುವ ಭೀಮನು ಆ ಪಾಪಿಯ ಸಂಹಾರ ಕ್ಷಣವು ಪ್ರಾಪ್ತಿಯಾಗುತ್ತಿದ್ದಂತೆ ಸ್ವಬಿಂಬ ಮೂರ್ತಿಯಾದ ನರಸಿಂಹನನ್ನು ಸ್ಮರಿಸುತ್ತಾ 'ಮನ್ಯುಸೂಕ್ತ'ವನ್ನು ಪಠಿಸುತ್ತ ಮಹಾ ಗದೋರ್ದಂಡದಿಂದ ಖಳನ ಎದೆಗೆ ಅಪ್ಪಳಿಸಿದನು. ಅಸುರರ ಲಿಂಗಭಂಗಕಾಲದಲ್ಲಿ ನೀಡುವಂಥಾ ಎಂಭತ್ತು ಮಣಭಾರದ ಉಕ್ಕಿನ ಗದೆಯು ದುಶ್ಶಾಸನನ ಎದೆಯನ್ನು ಅಪ್ಪಳಿಸಿದುದೇ ತಡ. ಅವನ ದೇಹವು ಅಪ್ಪಚ್ಚಿಯಾಗಿ ಬಿಟ್ಟಿತು. ಬಿರುಗಾಳಿಗೆ ಸಿಕ್ಕು ಬುಡಸಹಿತವಾಗಿ ಮೂಲೋತ್ಪಾಟನವಾದ ಮಹಾ ವಟವೃಕ್ಷವು ಭೂಮಿಗೆ ಬೀಳುವಂತೆ ದುಶ್ಶಾಸನ ದೇಹವು ಭೂಮಿಯನು ಕಚ್ಚಿತು.

ತಕ್ಷಣವೇ ಭೀಮನು ಆ ದುಶ್ಶಾಸನನ ಎದೆಯ ಮೇಲೆ ಹಾರಿ ಕುಳಿತು ಮರಿಸಿಂಗವು ಮದಗಜದ ಕುಂಭಸ್ಥಳವನ್ನು ಭೇದಿಸುವಂತೆ ಅವನ ಎದೆಯನ್ನು ಸೀಳಿದನು. ಕಾರಂಜಿಯಂತೆ ಚಿಮ್ಮಿದ ರಕ್ತವನ್ನು ತನ್ನ ಬೊಗಸೆಯಲ್ಲಿ ತುಂಬಿಕೊಂಡು ಪಾನ ಮಾಡುವವನಂತೆ ತೋರಿದನು ಮತ್ತು ತನ್ನ ಪ್ರತಿಜ್ಞೆಯಂತೆ ರುಧಿರ ತೈಲವನ್ನು ತನ್ನ ಬೊಗಸೆಯಲ್ಲಿ ತುಂಬಿಕೊಂಡು ತಂದು ಲೇಪಿಸಿ ದ್ರೌಪದಾ ದೇವಿಯ ಮುಕ್ತ ಕೇಶರಾಶಿಯನ್ನು ಮೃದುಗೊಳಿಸಿದನು. ತನ್ನ ದಶಾಂಗುಲಿ ಬಾಚಣಿಕೆಯಿಂದ ದ್ರೌಪದಿಯ ಕೇಶಗಳನ್ನು ಬಾಚಿ ಜಡೆ ಹೆಣೆದು ತುರುಬನ್ನು ಕಟ್ಟಿ ಅದಕ್ಕೆ ದುಶ್ಶಾಸನನ ಒಡಲನ್ನು ಬಗೆದು ಅಭಿನವ ನರಸಿಂಹನಾಗಿ ಅವನ ಕರುಳ ದಂಡೆಗಳನ್ನು ಸೆಳೆದು ಮುದ್ದೆ ಮಾಡಿ ತಂದು ಮಾಂಸದ ಪುಷ್ಪ ಗುಚ್ಛವನ್ನು ಆಕೆಯ ತುರುಬಿಗೆ ಮುಡಿಸಿ ಸಿಂಹನಾದವನ್ನು ಮಾಡುತ್ತ ರಣರಂಗದಲ್ಲಿ ನಾಟ್ಯವಾಡಿದನು. ಆಗ ಅಸುರ ಸಂದೋಹವು "ಹಗೇ ಹಗೇ" ಎಂದರೆ ಅಮರ ಸಂದೋಹವು "ಉಘೇ ಉಘೇ" ಎಂದು ಜಯಘೋಷವನ್ನು ಮಾಡುತ್ತಿದ್ದಿತು. ಆ ದುರಂತ ಪ್ರಹಾರದಿಂದ ದುಶ್ಶಾಸನನು ತಮೋದ್ವಾರವನ್ನು ಸೇರಿದನು.

ಯುದ್ಧದಲ್ಲಿ ಕಾಲನೇಮಿಯಿಂದ ಆವಿಷ್ಟನಾಗಿದ್ದ ಅಭಿಮನ್ಯುವನ್ನು ಜಯದ್ರಥ, ಕರ್ಣರುಶಕ್ಕಿನಿಂದ (ಮೋಸದಿಂದ) ಸಂಹರಿಸಿದರು. ಅರ್ಜುನನು ಜಯದ್ರಥನನ್ನು ಸಂಹರಿಸಿದನು.

## ಅಭಿಮನ್ಯು

ಈ ಕಾಲನೇಮಿಯೇ ಕಂಸನು. ಇವನು ಕೃಷ್ಣನಿಂದ ಹತನಾಗುವಾಗ "ಹೇ ಕೃಷ್ಣಾ ನೀನು ನನ್ನ ತಂಗಿಯಲ್ಲಿ ಹುಟ್ಟಿ ನನ್ನನ್ನು ಕೊಲ್ಲುತ್ತಿರುವ ಇದೇ ರೀತಿಯಾಗಿ ನಾನೂ ನಿನ್ನ ತಂಗಿಯಲ್ಲಿಯೇ, ನಿನಗೆ ಸೋದರಳಿಯನಾಗಿಯೇ ಹುಟ್ಟಿ ನಿನ್ನನ್ನು ಸಂಹರಿಸಿ ಸೇಡನ್ನು ತೀರಿಸಿಕೊಳ್ಳುತ್ತೇನೆ" ಎಂದು ಶಪಥವನ್ನು ಮಾಡಿ ದೇಹ ತ್ಯಾಗವನ್ನು ಮಾಡಿದ್ದನು.

ಒಮ್ಮೆ ಸುಭದ್ರಾದೇವಿಯು ಶ್ರೀಕೃಷ್ಣನಲ್ಲಿಗೆ ಬಂದು "ಅಣ್ಣಾ ನಾನು ನಿನ್ನ ತಂಗಿ, ಆದರೂ ಇಷ್ಟಪ್ರದನೆಂದು ಬಿರುದುಳ್ಳ ನಿನ್ನ ತಂಗಿಯನ್ನು ಎಲ್ಲರೂ ಬಂಜೆ ಎನ್ನುತ್ತಿದ್ದಾರೆ. ನನಗೇಕೆ ಮಕ್ಕಳಾಗಲಿಲ್ಲ? ಎಂದು ಕೇಳಿದಳು. ಅದಕ್ಕೆ ಶ್ರೀಕೃಷ್ಣನು "ಬೇಡ ಬಿಡಮ್ಮ, ನೀನು ಈಗಲೇ ಸುಖವಾಗಿರುವಿ. ಇಲ್ಲದ ವಸ್ತುವಿಗಿಂತ ಇದ್ದು ಹೋಗುವ ವಸ್ತುಗಳು ಹೆಚ್ಚು ದುಃಖಕ್ಕೆ ಕಾರಣವಾಗುತ್ತವೆ. ಎಂದು ಸಮಾಧಾನವನ್ನು ಹೇಳಿದನು. ಆದರೆ ಸುಭದ್ರಾದೇವಿಯು ಹಟ ಮಾಡಿ ಕೃಷ್ಣನಿಂದ ವ್ರತೋಪದೇಶವನ್ನು ಪಡೆದು ಆಚರಿಸಿ ಗರ್ಭವತಿಯಾದಳು. ಆಕೆಯ ಗರ್ಭದಲ್ಲಿ ಕಾಲನೇಮಿಯಿಂದ

ಆವಿಷ್ಟನಾಗಿದ್ದ ಬುಧನು ಬೆಳೆಯುತ್ತಿದ್ದನು. ಇವನ ಸಾಮರ್ಥ್ಯವು ಗರ್ಭದಲ್ಲೆ ಉಪಮರ್ದವಾಗಬೇಕಾಗಿತ್ತು. ಅದರ ಪ್ರಸಂಗವು ಹೀಗಿದೆ:–

ಶ್ರೀಕೃಷ್ಣನನ್ನು ಕೊಲ್ಲಬೇಕೆಂದು ಮದನಾಮಕ ದೈತ್ಯನೊಬ್ಬನು ಒಂದು ಉಕ್ಕಿನ ಪೆಟ್ಟಿಗೆಯನ್ನು ನಿರ್ಮಾಣ ಮಾಡಿಕೊಂಡು ಆ ಪೆಟ್ಟಿಗೆಯಲ್ಲಿ ಶ್ರೀಕೃಷ್ಣನನ್ನು ಮುಚ್ಚಿ ಹಾಕಿ ಸಂಹರಿಸಬೇಕೆಂದು ಹವಣಿಸಿದನು. ಆಗ ಶ್ರೀಕೃಷ್ಣನು ವೃದ್ಧಬ್ರಾಹ್ಮಣನಾಗಿ ಅವನ ಎದುರಿಗೆ ಬಂದು ನಿಂತು ಆ ದೈತ್ಯನ ಮುಂದಿನ ಪ್ರಸಂಗವೇನೆಂದು ಕೇಳಿದನು. ಆಗ ಆ ದೈತ್ಯನು ಪೆಟ್ಟಿಗೆಯನ್ನು ತೋರಿಸಿ ಇದರಲ್ಲಿ ಶ್ರೀಕೃಷ್ಣನನ್ನು ಹಾಕಿ ಮುಚ್ಚಿ ಕೊಲ್ಲುವೆನೆಂದನು. ಆಗ ಆ ಪರಬ್ರಾಹ್ಮಣನು ಆ ಪೆಟ್ಟಿಯಲ್ಲಿ ಸಂದು ಇರಬಾರದು. ಇದ್ದರೆ ಅಲ್ಲಿಂದಲೇ ಕೃಷ್ಣನು ಪಾರಾಗುವನೆಂದು ಹೇಳಿದನು. ಆಗ ಆ ದೈತ್ಯನು ಈ ಪೆಟ್ಟಿಗೆಯು ಸುಭದ್ರವಾಗಿದೆ ಎಂದನು. ಆದರೆ ಬ್ರಾಹ್ಮಣನು ಸಂಶಯವನ್ನು ವ್ಯಕ್ತ ಮಾಡುತ್ತ ತಾನು ಆ ಪೆಟ್ಟಿಗೆಯನ್ನು ಪರೀಕ್ಷಿಸುವೆನೆಂದು ಹೇಳಿ ಆ ಪೆಟ್ಟಿಗೆಯಲ್ಲಿ ಕುಳಿತನು. ತರುವಾಯ ಆ ದೈತ್ಯನು ಆ ಪೆಟ್ಟಿಗೆಯನ್ನು ಮುಚ್ಚಿ ತೆಗೆದು ಇದು ಹೇಗಿದೆ ಎಂದು ಕೇಳಿದನು. ಅದಕ್ಕೆ ಆ ಬ್ರಾಹ್ಮಣನು ಈ ಪೆಟ್ಟಿಗೆಯಲ್ಲಿ ಸಣ್ಣ ರಂಧ್ರವಿದೆ. ಅದು ಹೊರಗೆ ಕಾಣಿಸುವುದಿಲ್ಲ. ಒಳಗಡೆಯಿಂದ ನೋಡಿದರೆ ಮಾತ್ರ ಗೊತ್ತಾಗುತ್ತದೆ ಎಂದು ಹೇಳಿದನು. ಆ ಬ್ರಾಹ್ಮಣನ ಮಾತನ್ನು ನಂಬದೆ ಆ ದೈತ್ಯನು ತಾನೇ ಸ್ವತಃ ಆ ರಂಧ್ರವನ್ನು ಪರೀಕ್ಷಿಸುವೆನೆಂದು ಹೇಳಿ ಪೆಟ್ಟಿಗೆಯೊಳಗೆ ಕುಳಿತನು. ತಕ್ಷಣವೇ ಶ್ರೀಕೃಷ್ಣನು ಆ ಪೆಟ್ಟಿಗೆಯನ್ನು ಮುಚ್ಚಿ ಬೀಗ ಮುದ್ರೆಯನ್ನು ಜಡಿದನು. ಅಲ್ಲಿಗೆ ಆ ದೈತ್ಯನ ಕಥೆ ಮುಗಿಯಿತು.

ಶ್ರೀಕೃಷ್ಣನು ದೈತ್ಯನ ಮೃತದೇಹಯುಕ್ತವಾದ ಪೆಟ್ಟಿಗೆಯನ್ನು ತಂದು ಅದಕ್ಕೆ ಬೀಗ ಹಾಕದೇ ಒಂದೆಡೆ ಇಟ್ಟು ಸುಭದ್ರಾದೇವಿಯನ್ನು ಕರೆದು "ಈ ಪೆಟ್ಟಿಯಲ್ಲಿ ಏನೋ ಇದೆ. ಅದನ್ನು ನೀನು ತೆಗೆದು ನೋಡಬೇಡಾ" ಎಂದು ಹೇಳಿದನು. ಬೀಗ ಹಾಕದೆ ಹಾಗೆ ಹೇಳಿದರೆ ಯಾರಿಗಾದರೂ ಅದರಲ್ಲೇನಿದೆ ಎಂದು ನೋಡುವ ಕುತೂಹಲವು ಹುಟ್ಟದೇ ಇರುತ್ತದೆಯೇ? ಕೆಲವು ದಿನ ಸುಮ್ಮನಿದ್ದ ಸುಭದ್ರೆಯು "ಅಯ್ಯೋ ನಮ್ಮಣ್ಣನ ಮಾತೇನು? ನೋಡಿದರೇನಾಗುತ್ತದೆ? ಅದರಲ್ಲಿರುವ ವಸ್ತು ನನಗೇನೂ ಬೇಡಾ. ಆದರೆ ನೋಡಬಾರದೇಕೆ?" ಎಂದು ಹಂಬಲಿಸುತ್ತ ಪೆಟ್ಟಿಗೆಯನ್ನು ತೆಗೆದೇ ಬಿಟ್ಟಳು. ಆದರೆ ಆ ಪೆಟ್ಟಿಗೆಯಲ್ಲಿದ್ದ ಭಯಂಕರನಾದ ದೈತ್ಯನ ಮೃತ ಶರೀರವನ್ನು ನೋಡಿ ಹೆದರಿದ ಸುಭದ್ರೆಯು ಮೂರ್ಛೆಹೋದಳು. ಆಗ ಎಲ್ಲರೂ ಗಾಬರಿಯಾಗಿ ಬಂದು ಮುಂದೇನು ಮಾಡಬೇಕೆಂದು ಚಿಂತಾಕ್ರಾಂತರಾಗಿ ನಿಂತಿರುವಾಗ ಶ್ರೀಕೃಷ್ಣನು ಒಂದು ಎಲ್ಲರಿಗಿಂತಲೂ ತಾನೇ ಹೆಚ್ಚು ಗಾಬರಿಯಾಗಿ (ಭಕ್ತರು ತನ್ನ ಮಾತನ್ನು ಕೇಳದಿದ್ದಾಗ ದೇವರೇ ಗಾಬರಿಯಾಗುತ್ತಾನಂತೆ. ಅಷ್ಟು ಅಂತಃಕರಣ ಅವನಿಗೆ) ಈಕೆ ನನ್ನ ಮಾತನ್ನು ಕೇಳಲಿಲ್ಲ. ನಾವು ಗಂಡಸರು. ಏನೇನೋ ಇರುತ್ತವೆ. ಹೆಂಗಸರು ಅದರ ಪರೀಕ್ಷೆಗೆ ಕೈ ಹಾಕಬಾರದು. ಹೋಗಲಿ. ಇನ್ನೇನು ಮಾಡುವುದು? ಈಕೆಗೆ ಭಯವು ಆವರಿಸಿದೆ. ಪರಿಹಾರವಾಗುತ್ತದೆ" ಎಂದು ಹೇಳುತ್ತ ತನ್ನ ಚಕ್ರವನ್ನು ತೊಳೆದು ಆ ನೀರನ್ನು ಸುಭದ್ರಾ ದೇವಿಗೆ ಕುಡಿಸಿದನು. ಅಷ್ಟು ಮಾತ್ರದಿಂದ ಸುಭದ್ರಾದೇವಿಯು ಚೇತರಿಸಿ ಕೊಂಡು ಎದ್ದಳು. ಆದರೆ ಶ್ರೀಕೃಷ್ಣನು ಚಕ್ರಧೌತಜಲವನ್ನು ಸುಭದ್ರಾದೇವಿಗೆ ಪಾನ ಮಾಡಿಸಿದ ಕೂಡಲೇ ಆಕೆಯ ಗರ್ಭಸ್ಥ ಶಿಶುವಿಗೆ ಇದ್ದ ಸಹಸ್ರ ತೋಳುಗಳು ಕತ್ತರಿಸಲ್ಪಟ್ಟು ಇದ್ದ ಎರಡು ರೆಕ್ಕೆಗಳೂ ಉದುರಿ ಹೋದುವು. ಶ್ರೀಕೃಷ್ಣನು ಹೇಳಿದನು. "ತಂಗೀ ನನ್ನ ಮಾತನ್ನು ನೀನು ಕೇಳಲಿಲ್ಲಾ. ನೀನು ಗರ್ಭಿಣಿಯಾಗಿದ್ದು ಹೆದರಿಬಿಟ್ಟಿರುವುದರಿಂದ ನಿನ್ನ ಮಗನು ಆಯುರ್ಹೀನನಾಗಿದ್ದಾನೆ. ಪ್ರಾರಬ್ಧವು ಇದ್ದಂತಾಗುತ್ತದೆ. ಆಗಲಿ ಬಿಡಮ್ಮಾ" ಎಂದು ಸಮಾಧಾನವನ್ನು

ಹೇಳಿದನು. ತರುವಾಯ ಕೇವಲ ದ್ವಿಭುಜಯುಕ್ತನಾಗಿ ಜನಿಸಿದ ಅಭಿಮನ್ಯುವು ಚಕ್ರವ್ಯೂಹವನ್ನು ಭೇದಿಸಲಾಗದೆ, ಗಗನಕ್ಕೆ ಹಾರಲಾಗದೆ ತನ್ನ ಹದಿನಾರನೇ ವಯಸ್ಸಿನಲ್ಲಿಯೇ ಕುರುಕ್ಷೇತ್ರದಲ್ಲಿ ಹೋರಾಡಿ ಕರ್ಣ, ಜಯದ್ರಥರ ಕುಟಿಲ ಕೃತ್ಯಕ್ಕೆ ಬಲಿಯಾದನು. ದುಷ್ಟಕಾಲನೇಮಿಯ ಶಪಥವು ಈಡೇರಲಿಲ್ಲ.

ಭೀಷ್ಮಾಚಾರ್ಯರ ಯುದ್ಧ ಕೌಶಲ್ಯವು ಪಾಂಡವರನ್ನು ದಿಕ್ಕುಗೆಡಿಸಿತ್ತು. ಅರ್ಜುನನ ಸಾರಥಿಯಾಗಿದ್ದ ಕೃಷ್ಣನ ಮೇಲೆ ಬಾಣವನ್ನು ಪ್ರಯೋಗಿಸಿದ ಭೀಷ್ಮರು ಆತನ ತಲೆಗೆ ಗಾಯವನ್ನುಂಟು ಮಾಡಿದರು. (ಅದು ಶ್ರೀಹರಿಯ ಪ್ರೀತ್ಯರ್ಥವಾಗಿ ಬಿಟ್ಟ ಬಾಣವು. ಯಾಕೆಂದರೆ ಅಪ್ರಾಕೃತಕಾಯನಿಗೆ ಛೇಧ, ಭೇಧಾದಿಗಳು ಉಂಟೇ? ಇಲ್ಲ. ಆ ದುರ್ಯೋಧನನಾದಿಗಳು ಹಾಗೆ ಅಸದುಪಾಸನೆಯನ್ನು ಮಾಡಲೆಂದೇ ಅವರು ಹಾಗೆ ಮಾಡಿದರು) ಅದಕ್ಕೆ ತಕ್ಕಂತೆ ಶ್ರೀಕೃಷ್ಣನೂ ರಥಾಂಗ ಪಾಣಿಯಾಗಿ ಭೀಷ್ಮಚಾರ್ಯರ ಮೇಲೆ ದಾಳಿ ನಡೆಸಿದನು. ಆಗ ದುರ್ಯೋಧನಾದಿಗಳು ಶ್ರೀಕೃಷ್ಣನು ವಚನ ಭ್ರಷ್ಟನೆಂದು ಹೇಳಿದರು. ನಿತ್ಯ ಜಾಗೃತಗಳೇ ಆದ ಭಗವದ್ರೂಪಗಳಲ್ಲಿ ಒಂದಾದ ರಥಾಂಗ ಧರ ರೂಪವನ್ನು ಶ್ರೀಕೃಷ್ಣನು ಭೀಷ್ಮರಿಗೆ ತೋರಿಸಿ ಅವರನ್ನು ಕೃತಾರ್ಥರನ್ನಾಗಿ ಮಾಡಿದನು.

ಭೀಮಾರ್ಜುನರು ಭೀಷ್ಮಾಚಾರ್ಯರನ್ನು ಗೆಲ್ಲಲು ಸಮರ್ಥರೇ ಆಗಿದ್ದರು. ಆದರೆ ಪಿತಾಮಹರೆಂಬ ಗೌರವ ಕಾರಣದಿಂದ ಶ್ರೀಕೃಷ್ಣನನ್ನು ಜೊತೆಗೆ ಕೂಡಿಸಿಕೊಂಡು ಭೀಷ್ಮರನ್ನು ಸಂಧಿಸಿ ತಮಗೆ ಜಯವನ್ನು ಪಾಲಿಸಬೇಕೆಂದು ಬೇಡಿಕೊಂಡರು. ಆಗ ಭೀಷ್ಮಾಚಾರ್ಯರು ಮರುದಿನ ಯುದ್ಧದಲ್ಲಿ ಶಿಖಂಡಿಯನ್ನು ನೇಮಿಸಬೇಕೆಂದು ತಿಳಿಸಿ ತಾವು ಶಿಖಂಡಿಯೊಡನೆ ಯುದ್ಧವನ್ನು ಮಾಡದೆ ಶರತಲ್ಪಗತರಾಗಿ ಇಚ್ಛಾಮರಣ ಪ್ರತಿಜ್ಞೆಯನ್ನು ನೆರವೇರಿಸುವುದಾಗಿ ವಚನವನ್ನು ಇತ್ತು ಕಳುಹಿಸಿದರು.

ಒಂದು ಸನ್ನಿವೇಶದಲ್ಲಿ ಶಕುನಿಯಿಂದ ಪ್ರೇರಿತನಾದ ದುರ್ಯೋಧನನು ಭೀಷ್ಮರಲ್ಲಿಗೆ ಬಂದು ಬಹುವಾಗಿ ದೂಷಿಸಿದನು. "ನನ್ನ ಅನ್ನವನ್ನು ತಿನ್ನುತ್ತಿರುವ ನೀವು ಪಾಂಡವ ಪಕ್ಷಪಾತಿಗಳು. ತಿನ್ನುವುದು ನನ್ನ ಅನ್ನವನ್ನು, ಹೊಗಳುತ್ತಿರುವುದು ಪಾಂಡವರನ್ನು. ಸಾಕು ನಿಮ್ಮ ಈ ಸ್ವಾಮಿದ್ರೋಹತನ. ಇನ್ನಾದರೂ ಸರಿಯಾಗಿ ಯುದ್ಧವನ್ನು ಮಾಡಿ ನನ್ನ ಋಣವನ್ನು ತೀರಿಸಿರಿ" ಎಂದು ಗರ್ಜಿಸಿದನು. ಅದಕ್ಕೆ ಭೀಷ್ಮಚಾರ್ಯರು ಶಪಥವನ್ನೇ ಮಾಡಿಬಿಟ್ಟರು. ನಾನು ನಾಳಿನ ಕದನದಲ್ಲಿ ಪಾಂಡವರನ್ನು ಜೈಸುತ್ತೇನೆ. ತಪ್ಪಿದರೆ ಶರತಲ್ಪಶಯ್ಯನಾಗುತ್ತೇನೆ" ಎಂದು. ಈ ರೀತಿಯಾಗಿ ಭೀಷ್ಮರನ್ನು ರೊಚ್ಚಿಗೆಬ್ಬಿಸಿದ ಖೂಳನು ಸಂತೋಷದಿಂದ ನಿರ್ಗಮಿಸಿದನು. ಆದರೆ ಭೀಷ್ಮರ ಈ ಪ್ರತಿಜ್ಞೆಯು ಪಾಂಡವರನ್ನು ತಲ್ಲಣಗೊಳಿಸಿತು. ಪಾಂಡವರು ದ್ರೌಪದಾದೇವಿಯನ್ನು ಕರೆದು ಸಮಾಲೋಚಿಸಿದರು. ದ್ರೌಪದಿಯಾದರೂ ಶ್ರೀಕೃಷ್ಣನನ್ನೇ ಸ್ಮರಿಸಿದಳು.

ನೆನೆವವರ ಮನದಲ್ಲಿರುವ ಸ್ವಾಮಿಯು ದ್ರೌಪದಿಯ ಎದುರಿನಲ್ಲೇ ಪ್ರತ್ಯಕ್ಷನಾದನು ಮತ್ತು ತನ್ನನ್ನು ಕರೆದ ಉದ್ದೇಶವೇನೆಂದು ಕೇಳಿದನು. ಅದಕ್ಕೆ ದ್ರೌಪದಿಯು ಆತನ ಅಡಿಗಳಿಗೆ ಎರಗಿ "ಅಣ್ಣಾ, ಪಾಂಡವರನ್ನು ಭೀಷ್ಮರ ಪ್ರತಿಜ್ಞೆಯಿಂದ ರಕ್ಷಣೆ ಮಾಡಬೇಕು" ಎಂದು ಬೇಡಿಕೊಂಡನು. ತಕ್ಷಣವೇ ಶ್ರೀಕೃಷ್ಣನು ದ್ರೌಪದಿಗೆ ಮಹಾರಾಣಿ ಪೋಷಾಕನ್ನು ಧರಿಸಿ, ಸುವರ್ಣ ತಟ್ಟೆಯಲ್ಲಿ ಖಡ್ಗ, ಕಿರೀಟಗಳನ್ನು ಸಿದ್ಧ ಮಾಡಿಕೊಂಡು ಬಾ" ಎಂದು ಹೇಳಿದನು. ಆದರೆ ರಾಜ್ಯಭ್ರಷ್ಟರಾಗಿದ್ದ ಪಾಂಡವರಿಗೆ ಇವೆಲ್ಲ ಎಲ್ಲಿಂದ ಬರಬೇಕು? ದ್ರೌಪದಿಯು ಶ್ರೀಕೃಷ್ಣನನ್ನು ಕೇಳಿದಳು. "ಅಣ್ಣಾ ಇದು ಕುಚೇಷ್ಟೆಯ ಸಮಯವೇ?" ಎಂದು ಅದಕ್ಕೆ ಕೃಷ್ಣನು ಹೇಳಿದನು. "ತಂಗೀ ನಾನು ಕುಚೇಷ್ಟಕನೇ? ಈಗಲೇ

ನಿನ್ನ ಅತ್ತಿಗೆಯನ್ನು ಸ್ಮರಿಸು. ಎಲ್ಲವನ್ನೂ ಅವಳೇ ದೊರಕಿಸುತ್ತಾಳೆ" ಎಂದು. ಆಗ ದ್ರೌಪದಿಯು ರುಕ್ಮಿಣೀ ಅಭಿನ್ನಳಾದ ದುರ್ಗಾದೇವಿಯನ್ನು ಸ್ಮರಿಸಿದಳು. ತಕ್ಷಣವೇ ಆಕೆಯು ಉಟ್ಟದ್ದು ಪೀತಾಂಬರವಾಯಿತು. ಕೈಯ್ಯಲ್ಲಿ ಖಡ್ಗ, ಕಿರೀಟ ಶೋಭಿತವಾದ ಸುವರ್ಣ ತಾಂಬಾಣವು ಝಗ ಝಗಿಸಿತು. ಶ್ರೀಕೃಷ್ಣನು ದಂಡಧಾರಿ ಸೇವಕನಾಗಿ ದ್ರೌಪದಿಯ ಹಿಂದೆ ರಕ್ಷಕನಾಗಿ ನಿಂತನು. ಸಂಧ್ಯಾವಂದನಾವಸಾನ ಕಾಲದಲ್ಲಿ ಈ ರಾಣಿ, ಸೇವಕರೀರ್ವರೂ ಶಸ್ತ್ರ ಸಜ್ಜಿತವಾಗಿ ಪಹರೆ ರಕ್ಷಿತವಾಗಿದ್ದ ಭೀಷ್ಮರ ಶಿಬಿರವನ್ನು ಪ್ರವೇಶಿಸಿದರು. ಮುಸುಕಿನ ಮರೆಯಲ್ಲಿ ಮುಖಾಚ್ಛಾದಿತಳಾಗಿದ್ದ ದ್ರೌಪದಿಯನ್ನು ಪಟುಭಟರು ಮಹಾರಾಣಿ ಭಾನುಮತಿ ಎಂದೇ ಭಾವಿಸಿ ತಲೆ ಎತ್ತದೆ ಒಳಬಿಟ್ಟರು.

ಸಂಧ್ಯಾ ತಪೋನಿರತರಾಗಿ ಭೀಷ್ಮಾಚಾರ್ಯರು ಆಗ ತಾನೆ ಸ್ಥಿತ ಪ್ರಜ್ಞತ್ವದಿಂದ ಬಹಿರ್ಮುಖರಾಗಿ" ಹಾ ಕೃಷ್ಣಾ ಎಂದು ಕೈಮುಗಿಯುತ್ತಿದ್ದಂತೆ ದ್ರೌಪದಿಯು ಮುಕುಟ, ಶಸ್ತ್ರಯುಕ್ತವಾದ ಸುವರ್ಣ ಪಾತ್ರೆಯನ್ನು ಭೀಷ್ಮರ ಮುಂದಿರಿಸಿ ನಮಸ್ಕರಿಸಿದಳು. ತಕ್ಷಣವೇ ಭೀಷ್ಮಾಚಾರ್ಯರು ಆಕೆಗೆ "ದೀರ್ಘ ಸುಮಂಗಲೀ ಭವ" ಎಂದು ಆಶೀರ್ವದಿಸಿದರು. ಆಗ ದ್ರೌಪದಿಯು "ತಾತಾ, ನಿಮ್ಮ ಆಶೀರ್ವಾದವು ನಿಜವಾದುದೇ?" ಎಂದು ಕೇಳಿದಳು. ಆಗ ಭೀಷ್ಮಾಚಾರ್ಯರು "ತಾಯಿ, ನನ್ನ ಧರ್ಮ ಕರ್ಮಗಳಿಂದ ಶ್ರೀಹರಿಯು ಪ್ರೀತನಾಗಿದ್ದರೆ ಅಕ್ಷರಶಃ ನನ್ನ ಆಶೀರ್ವಾದವು ಶತಸಿದ್ಧವೆಂದು ತಿಳಿಯಮ್ಮಾ" ಎಂದು ಹೇಳಿದರು. ಆಗ ದ್ರೌಪದಿಯು ತನ್ನ ಮುಸುಕನ್ನು ಅನಾವರಣ ಮಾಡಿ ಭೀಷ್ಮರ ಎದುರಿಗೆ ಕೈಜೋಡಿಸಿಕೊಂಡು ನಿಂತಿದ್ದಳು. ಆಗ ದ್ರೌಪದಿಯನ್ನು ಕಂಡ ಭೀಷ್ಮಾಚಾರ್ಯರು ಆಶ್ಚರ್ಯಾನಂದ ಭರಿತರಾಗಿ "ಏನು? ನೀನು ದ್ರೌಪದಾದೇವಿ! ನಾನು ನಿನ್ನನ್ನು ಭಾನುಮತಿ ಎಂದೇ ತಿಳಿದಿದ್ದೆ. ನೀನು ಇಲ್ಲಿಗೆ ಹೇಗಮ್ಮಾ ಬಂದೇ? ಶತೃಪಾಳೆಯದಿಂದ ಒಂದು ನೊಣವೂ ಸಹ ಇತ್ತ ಸುಳಿಯಲು ಸಾಧ್ಯವಿಲ್ಲ. ನೀನು ಹೇಗೆ ಬಂದೆ?" ಎಂದು ಕೇಳಿದರು. ಅದಕ್ಕೆ ದ್ರೌಪದಿಯು "ತಾತಾ, ಇಲ್ಲಿಗೆ ನನ್ನ ಸೇವಕನು ನನ್ನನ್ನು ಕರೆದುಕೊಂಡು ಬಂದನು. ಅದಿರಲಿ, ನಿಮ್ಮ ಆಶೀರ್ವಾದದ ಗತಿ ಏನು? ನಿಮ್ಮ ಶಪಥದ ಪಾಡೇನು?" ಎಂದು ಕೇಳಿದಳು. ಅದಕ್ಕೆ ಭೀಷ್ಮರು, "ಅವ್ವಾ, ನನ್ನ ಶಪಥ ಹಾಳಾಯ್ತು. ಆಶೀರ್ವಾದವು ಬದುಕಿತು. ಆ ಸ್ವಾಮಿಯು ನನ್ನನ್ನು ವಚನಭ್ರಷ್ಟನನ್ನಾಗಿ ಮಾಡಿ ಅಪಕೀರ್ತಿಗೆ ಗುರಿಪಡಿಸದ ಹಾಗೆ ನನ್ನ ಶಪಥದ ಉತ್ತರಾರ್ಧದಲ್ಲಿ ಶರತಲ್ಪಗಾಮಿಯಾಗುತ್ತೇನೆ ಎಂದು ನುಡಿಸಿ, ಕಾಪಾಡಿರುವನಮ್ಮಾ. ನಾಳಿನ ಕದನದಲ್ಲಿ ನಾನು ಉತ್ತರಾರ್ಧ ಶಪಥದಂತೆ ಶರತಲ್ಪಗಾಮಿಯಾಗಿ ಉತ್ತರಾಯಣದಲ್ಲಿ ದೇಹತ್ಯಾಗವನ್ನು ಮಾಡುತ್ತೇನೆ. ಶ್ರೀಹರಿಯನ್ನು ನಂಬಿದವರಿಗೆ ಅಪಜಯವಿಲ್ಲ. ದುರಾತ್ಮರಿಗೆ ಜಯವಿಲ್ಲ. ಅಮ್ಮಾ, ಇರಲಿ ನೀನು ನಿನ್ನ ಸೇವಕನೊಂದಿಗೆ ಇಲ್ಲಿಗೆ ಬಂದಿರಬೇಕಾದರೆ ನಿನ್ನ ಸೇವಕನ ಜಾಣ್ಮೆಯು ಸಾಮಾನ್ಯವಾದುದಲ್ಲ. ಆ ಸೇವಕನು ಯಾರು? ಎಲ್ಲಿರುವನು? ತೋರುವಿಯಾ"s ಎಂದು ಕೇಳಿದರು. (ದೇವರನ್ನು ಶ್ರೀಭಾರತೀದೇವಿಯಲ್ಲದೆ ಮತ್ಯಾರು ತಾನೇ ತೋರಿಸಿಯಾರು?) ಅದಕ್ಕೆ ದ್ರೌಪದಿಯು "ತಾತಾ, ಆತನು ಇಕೋ (ಅಕೋ ಅಲ್ಲ – ದೂರ ಇಲ್ಲ. ಹೃದಯದಲ್ಲೇ) ಇಲ್ಲೇ ಇರುವನು ನೋಡು" ಎಂದು ತನ್ನ ದೂತನೆಡೆಗೆ ಬೆಟ್ಟು ಮಾಡಿ ತೋರಿಸಿದಳು. ಆಗ ಭೀಷ್ಮರು ಕಣ್ಣುಬಿಟ್ಟು ಅವನತ್ತ ನೋಡಿದರು. "ಭಲೇ ಭಲೇ, ಹದಿನಾಲ್ಕು ಲೋಕಕೆ ದಾತಾ। ಹರಿ। ಪಾಂಡವರ ಮನೆದೂತಾ ॥" ಎಂದು ಶ್ಲಾಘಿಸುತ್ತ ಆ ದೂತನನ್ನು ಕುರಿತು "ಎಲೈ ದೂತಾ, ಇವರು ನಿನಗೆ ಎಷ್ಟು ಸಂಬಳವನ್ನು ಕೊಡುತ್ತಿದ್ದಾರೆ?" ಎಂದು ಕೇಳಿದರು. ಅದಕ್ಕೆ ಆ ದೂತನು "ಅಜ್ಜಾ, ನನಗೆ ಇವರು ಒಂದು ಲಕ್ಷ ಕೊಡುತ್ತಾರೆ" ಎಂದು ಹೇಳಿದನು. ಅದಕ್ಕೆ ಭೀಷ್ಮರು ಹೇ ದೂತಾ, ನಾನು ನಿನಗೆ ಹತ್ತು ಲಕ್ಷ ಕೊಡುತ್ತೇನೆ. ನನ್ನಲ್ಲಿಗೆ ಬರುವಿಯಾ? ಎಂದು ಕೇಳಿದರು. ಅದಕ್ಕೆ ಆ ದೂತನು" ನೀವು ಈಗಾಗಲೇ ಹತ್ತಾರು ಕಡೆ ಲಕ್ಷವನ್ನು ಕೊಡುತ್ತಲೇ ಇರುವಿರಿ. ಅದು ನನಗೆ ಬೇಕಿಲ್ಲ. ನನ್ನ ಕಡೆ ಒಂದು ಲಕ್ಷವನ್ನು

ಯಾರು ಕೊಡುತ್ತಾರೋ ಅಂಥವರಿಗೆ ಮಾತ್ರ ನಾನು ಸೇವಕ" ಎಂದು ಹೇಳುತ್ತಾ ದ್ರೌಪದಿಯೊಡನೆ ಅಲ್ಲಿಂದ ನಿರ್ಗಮಿಸಿದನು.

**"ಕಾಸೂ ಈಸಿಗೆ ಸಂಬಳ ಬಯಸಾ। ಲೇಸಾದರು ಆಯಾಸವಗೊಳಿಸಾ ॥**
**ಸಾಸಿರನಾಮದೊಡೆಯ ಶಿರಿಯರಸಾ।**
**ಭಾಸುರ ಗುಣ ಗಣ ವಿಜಯವಿಠಲ ತನ್ನ**
**ದಾಸರ ಬಳಿಯಲಿ ಬಲುಸರಸಾ॥" (ಶ್ರೀವಿಜಯದಾಸರು)**

ಮರುದಿನ ಯುದ್ಧವು ಪ್ರಾರಂಭವಾಯಿತು. ಭೀಷ್ಮಾಚಾರ್ಯರ ಶೌರ್ಯವು ತ್ರೇತಾಯುಗದ ಜಾಂಬವಂತನ ಶೌರ್ಯವನ್ನು ಹೋಲುತ್ತಿತ್ತು. ಯುದ್ಧದಲ್ಲಿ ಪಾಂಡವರು ತತ್ತರಿಸಿದರು. ಕೊನೆಗೆ ಭೀಷ್ಮರ ಇಚ್ಛೆಯಂತೆ ದೃಪದ ಪುತ್ರಿಯಾದ ಶಿಖಂಡಿಯನ್ನು ಭೀಷ್ಮರ ಸಮ್ಮುಖದಲ್ಲಿ ಯುದ್ಧಕ್ಕಾಗಿ ನಿಲ್ಲಿಸಲಾಗಿ ಭೀಷ್ಮಾಚಾರ್ಯರು ಆ ಶಿಖಂಡಿಯೊಡನೆ ಸೆಣಸಿದರೆ ಜಯಾಪಜಯಗಳು ಏನು ಲಭಿಸಿದರೂ ಅಪಹಾಸ್ಯಕ್ಕೆ ಗುರಿಯಾಗುವುದು ತಪ್ಪುವುದಿಲ್ಲ ಎಂಬ ಈ ನ್ಯಾಯವನ್ನು ಅನುಸರಿಸಿ ಅವರು ಶಸ್ತ್ರ ಸನ್ಯಾಸವನ್ನು ಸ್ವೀಕರಿಸಿದರು. ಆಗ ಶ್ರೀಕೃಷ್ಣನ ಆಜ್ಞೆಯಂತೆ ಅರ್ಜುನನು ಅರ್ಧಚಂದ್ರಾಯುಧದಿಂದ ಭೀಷ್ಮರಿಗೆ ತಾಡನ ಮಾಡಿದುದರಿಂದಲೂ ಮತ್ತು ಧರ್ಮರಾಯಾದಿಗಳೂ ಅವರ ಮೇಲೆ ಶರವೃಷ್ಟಿಯನ್ನು ಕರೆದುದರಿಂದಲೂ ಭೀಷ್ಮಾಚಾರ್ಯರು ಭೂಮಿಗೆ ಒರಗಿದರು. ಆಗ ಅರ್ಜುನನಿಂದ ನಿರ್ಮಿತವಾಗಿದ್ದ ಶರತಲ್ಪದ ಮೇಲೆ ಒರಗಿದ ಭೀಷ್ಮರಿಗೆ ರೋಮ ರೋಮ ಕೂಪಗಳಲ್ಲೂ ಬಾಣಗಳು ಪ್ರವೇಶಿಸಿದವು. ಅವರ ದೇಹದಿಂದ ರಕ್ತದ ಕೋಡಿಯು ಹರಿಯಿತು. ಆಗ ಭೀಷ್ಮಾಚಾರ್ಯರು ಅತೀವ ದಾಹದಿಂದ ಬಳಲಿ ನೀರನ್ನು ಬೇಡಿದರು. ರಣರಂಗದಲ್ಲಿ ನೀರೆಲ್ಲಿ ಸಿಗಬೇಕು? ತಕ್ಷಣವೇ ಅರ್ಜುನನು ತನ್ನ ಬಾಣವನ್ನು ಭೂಮಿಗೆ ಬಿಡಲಾಗಿ ಭೂಗತದಲ್ಲಿದ್ದ ಗಂಗಾಜಲವು ಕಾರಂಜಿಯಾಗಿ ಪುಟಿದು ಬಾಯ್ದೆರೆದು ಮಲಗಿದ್ದ ಭೀಷ್ಮರ ದಾಹವನ್ನು ತಣಿಸಿತು. ಇದರಿಂದ ಸಂತುಷ್ಟರಾದ ಭೀಷ್ಮರು ಜಲದಾನದ ಮಹಿಮೆಯನ್ನೂ, ಪಾಂಡವರ ಶಕ್ತಿಯನ್ನೂ ಕೃಷ್ಣನ ಮಹಿಮೆಯನ್ನೂ ವರ್ಣಿಸುತ್ತ ಕೊನೆಗೂ ಕೌರವರಿಗೆ ಬುದ್ಧಿವಾದವನ್ನು ಹೇಳಿದರು; ಯುದ್ಧವನ್ನು ನಿಲ್ಲಿಸಿ ಪಾಂಡವರಿಗೆ ಅರ್ಧ ರಾಜ್ಯವನ್ನಿತ್ತು ಸುಖವಾಗಿ ಬಾಳಿರೆಂದು. ಆದರೆ ಆ ದುರ್ಯೋಧನನು ಭೀಷ್ಮರ ವಚನವನ್ನು ಕಿವಿಗೂ ಹಾಕಿಕೊಳ್ಳದೆ ಅಲ್ಲಿಂದ ನಿರ್ಗಮಿಸಿದನು.

ಭೀಷ್ಮಾಚಾರ್ಯರು ಇಚ್ಛಾ ಮರಣಿಗಳಾಗಿದ್ದುದರಿಂದ ಅವರು ತಕ್ಷಣವೇ ತಮ್ಮ ದೇಹವನ್ನು ಆಗಿದ್ದ ದಕ್ಷಿಣಾಯನಕಾಲ ನಿಮಿತ್ತವಾಗಿ ತ್ಯಜಿಸಲು ಇಷ್ಟ ಪಡದೆ ಉತ್ತರಾಯಣ ಪುಣ್ಯಕಾಲವು ಬರುವತನಕವೂ ಕಾದಿದ್ದರು. ಆ ವೇಳೆಗೆ ಅವರು ಧರ್ಮರಾಯಾದಿಗಳಿಗೆ ಬಹುವಿಧವಾದ ಧರ್ಮ ತತ್ವಗಳನ್ನು ಬೋಧಿಸಿದರು. ಅವರು ಬೋಧಿಸಿದ ತತ್ವಗಳಲ್ಲಿ ಮುಖ್ಯವಾದುವೆಂದರೆ ಕ್ಷತ್ರಿಯನಾದವನು ತನ್ನ ಪ್ರಾಣವನ್ನಾದರೂ ಪಣಕ್ಕಿಟ್ಟು ಗೋ, ಬ್ರಾಹ್ಮಣ, ಪತಿವ್ರತಾಸ್ತ್ರೀ, ದುರ್ಬಲ, ಬಾಲಕರ ಪ್ರಾಣ, ಮಾನಗಳನ್ನು ರಕ್ಷಿಸಬೇಕೆಂಬುದು. ಭೀಷ್ಮಾಚಾರ್ಯರು ಈ ಮಾತುಗಳನ್ನು ಹೇಳುತ್ತಲೇ ಅಲ್ಲಿದ್ದ ದ್ರೌಪದಿಯು ಕೇಳಿದಳು. "ತಾತಾ ಅನ್ಯಾಯದ ಜೂಜಾಟ, ಕಾಳಕೂಟದ ಊಟ, ಅರಗಿನ ಮನೆಯಲ್ಲಿಯ ಅಗ್ನಿಯ ಆರ್ಭಟ, ಸಭೆಯಲ್ಲಿ ನನಗೆ ಬರಬಹುದಿದ್ದ ಮಾನ ಸಂಕಟ, ವಿನಾ ಕಾರಣ ಅರಣ್ಯಕ್ಕೆ ನಮ್ಮ ಓಟ ಇವುಗಳನ್ನು ಕಂಡೂ ಕಾಣದಂತಿದ್ದ ನಿಮ್ಮಿಂದ ನಮಗೆ ಇಂದು ಈ ತೆರನಾದ ಪಾಠ! ಈ ಜ್ಞಾನವು ನಿಮಗೆ

ಆಗ ಎಲ್ಲಿಗೆ ಹೋಗಿತ್ತು. ಈಗ ಹೇಗೆ ಬಂದಿತು?" ಎಂದು ಕೇಳಿದಳು. ಅದಕ್ಕೆ ಭೀಷ್ಮಾಚಾರ್ಯರು ಹೇಳಿದರು. "ತಾಯಿ, ನಾನು ಅಂದು ತಿಂದಿದ್ದ ದುರಾನ್ನ ಪೋಷಿತವಾದ ರಕ್ತದ ನಿಮಿತ್ತವಾಗಿ ನನ್ನ ಜ್ಞಾನವು ಕಲಿಯ ಕೈವಶವಾಗಿತ್ತು. ಇಕೋ, ಆ ದುಷ್ಟ ರಕ್ತವು ಇಂದು ನಾನು ಮಲಗಿದ ಶರತಲ್ಪದ ನಿಮಿತ್ತವಾಗಿ ಪೂರ್ಣವಾಗಿ ಸೋರಿ ಹೋಗಿದೆ. ನನ್ನ ಮೂಲ ಸ್ವರೂಪ ಜ್ಞಾನವು ನನಗೆ ಈಗ ಪ್ರಾಪ್ತವಾಗಿದೆ. ಇದೇ ಇಂದಿನ ನನ್ನ ತತ್ವ ಬೋಧನೆಯ ರಹಸ್ಯವೆಂದು ಹೇಳಿದರು.

"ಸಂತತಂ ಚಿಂತಯೇನಂತ। ಮಂತಕಾಲೇ ವಿಶೇಷತಃ॥"

ಎಂದಂತೆ ಶ್ರೀಹರಿಯ ಚಿಂತನೆಯಲ್ಲೇ ಮಗ್ನರಾಗಿದ್ದ ಭೀಷ್ಮಾಚಾರ್ಯರಿಗೆ ಶ್ರೀಕೃಷ್ಣನು ಎದುರಿಗಿದ್ದೇ ದರ್ಶನವನ್ನು ನೀಡುತ್ತಿದ್ದನು. ಶ್ರೀಕೃಷ್ಣನನ್ನೇ ನೋಡುತ್ತಾ, ನೋಡುತ್ತಾ ಆನಂದ ಪರವಶರಾದ ಭೀಷ್ಮಚಾರ್ಯರು ಉತ್ತರಾಯಣ ಪುಣ್ಯಕಾಲವು ಬರುತ್ತಲೇ ದೇಹವನ್ನು ತ್ಯಜಿಸಲು ಯತ್ನಿಸಿದರು. ಆ ತಕ್ಷಣವೇ ಶ್ರೀಕೃಷ್ಣನು ಭೀಷ್ಮರ ದೃಷ್ಟಿಯಿಂದ ಮರೆಯಾದನು. ಆಗ ಭೀಷ್ಮರ ಸ್ಮೃತಿಯು ವಸುಲೋಕದ ಕಡೆಗೆ ಹೊರಳಿತು. ಕೂಡಲೇ ಅವರು ದೇಹವನ್ನು ತ್ಯಜಿಸಿ ವಸುಲೋಕದಲ್ಲೇ ತಮ್ಮ ಮೂಲರೂಪವನ್ನು ಸೇರಿದರು. ಭೀಷ್ಮಾಚಾರ್ಯರ ಕಲ್ಪಸಾಧನವು ಇನ್ನೂ ಮುಗಿದಿರಲಿಲ್ಲವಾದುದರಿಂದ ಮುಂದಿನ ಸಾಧನಕ್ಕಾಗಿ ಅವರು ಸ್ವಲೋಕವನ್ನು ಸೇರಿದರು. ಇದು ಒಂದು ಬಗೆ ಪ್ರಾರಬ್ಧ ಭೋಗದ ಮುಕ್ತಿಯೇ ಹೊರತಾಗಿ ಸ್ವರೂಪಾನಂದಾವಿರ್ಭಾವ ರೂಪವಾದ ಮೋಕ್ಷವಲ್ಲ. ಕರ್ಮವನ್ನು ಅನುಸರಿಸಿ ಜನ್ಮಗಳು ಬರುವುದಿಲ್ಲ. ಜನ್ಮವನ್ನನುಸರಿಸಿ ಕರ್ಮಗಳು ಎಸಗಲ್ಪಡುತ್ತವೆ. ಕರ್ಮಗಳು ಪ್ರಾರಬ್ಧವನ್ನು ಅವಲಂಬಿಸಿರುತ್ತವೆ.

ಉತ್ತರಾಯಣ ದಕ್ಷಿಣಾಯನ ಇನ್ನು ದೇಹತ್ಯಾಗದ ವಿಚಾರವಾಗಿ ಉತ್ತರಾಯಣ ಕಾಲದಲ್ಲಿ ದೇಹತ್ಯಾಗ ಮಾಡಿದರೆ ಮೋಕ್ಷವೆಂದೂ, ದಕ್ಷಿಣಾಯನದಲ್ಲಿ ತ್ಯಾಗ ಮಾಡಿದರೆ ನರಕವೆಂದೂ ಪ್ರಚಲಿತವಾಗಿ ಹೇಳುತ್ತಾರೆ ಮತ್ತು ಅದಕ್ಕಾಗಿಯೇ ಭೀಷ್ಮಾಚಾರ್ಯರು ಉತ್ತರಾಯಣ ಪುಣ್ಯಕಾಲವು ಬರುವುದಕ್ಕಾಗಿ ಹಂಬಲಿಸಿದ್ದು ಎಂದೂ ಹೇಳುತ್ತಾರೆ. ಅಂದರೆ ಹಲವರು ಇಲ್ಲಿ ಉತ್ತರಾಯಣ – ದಕ್ಷಿಣಾಯನ ಎಂದರೆ ಮಕರ ಸಂಕ್ರಮಣ ಕಾಲ ಮತ್ತು ಕರ್ಕಸಂಕ್ರಮಣ ಕಾಲವೆಂದು ತಿಳಿಯುತ್ತಾರೆ. ಆದರೆ ಈ ಸಂಕ್ರಮಣ ಕಾಲಗಳು ದೇಹತ್ಯಾಗಕ್ಕೆ ಸಂಬಂಧಪಟ್ಟ ಆಯನಗಳಲ್ಲ. ದೇಹತ್ಯಾಗ ಕಾಲದಲ್ಲಿ ದೇಹಸ್ತ ಎಡ, ಬಲಭಾಗಗಳಲ್ಲಿ ಇರುವ ಒಟ್ಟು ೭೨೦೦೦ ನಾಡಿಗಳಲ್ಲಿ ಬಲಭಾಗದಿಂದ ಎಡ ಕಿವಿಯವರೆಗೆ ೫೦೦ ನಾಡಿಗಳು ಹೋಗಿರುತ್ತವೆ. ಈ ನಾಡಿಗಳ ಮುಖಾಂತವಾಗಿ ಜೀವನು ಸಾಗಿ ದೇಹವನ್ನು ಬಿಟ್ಟರೆ ಇದನ್ನು ದಕ್ಷಿಣಾಯನ ಎನ್ನುತ್ತಾರೆ. ಇದಕ್ಕೆ ನರಕವು ಪ್ರಾಪ್ತಿಯಾಗುತ್ತದೆ. ಅದೇ ರೀತಿಯಾಗಿ ಎಡಗಡೆಯಲ್ಲಿ ಇರುವ ೫೦೦ ನಾಡಿಗಳು ಒಲಗಿವಿಯನ್ನು ಸೇರಿದ್ದು ಈ ನಾಡಿಗಳ ಮುಖಾಂತರವಾಗಿ ಸಾಗಿ ಜೀವನು ದೇಹವನ್ನು ಬಿಟ್ಟರೆ ಇದಕ್ಕೆ ಉತ್ತರಾಯಣ ಎನ್ನುತ್ತಾರೆ. ಈ ವಿಧವಾದ ದೇಹ ತ್ಯಾಗಕ್ಕೆ ಉತ್ತಮ (ಸ್ವರ್ಗಾದಿ) ಲೋಕಗಳು ಪ್ರಾಪ್ತವಾಗುತ್ತದೆ. ಇದನ್ನೇ ಮಾನಸ ಸ್ಮೃತಿಯಲ್ಲಿ ಶ್ರೀಐಜಿ ಸ್ವಾಮಿಗಳು ಹೀಗೆ ಹೇಳಿದ್ದಾರೆ.

॥ಪಿಂಗಳಾ ದಕ್ಷಿಣಾನಾಡೀ । ಇಲಾ ವಾಮಾ ಪ್ರಚೋದಿತಾ ॥
ಪಿಂಗಳಾಂಶಾಃ ಪಂಚ ಶತ। ನಾಡ್ಯೋವೈ ದಕ್ಷಿಣಾಯನಃ ॥ ೧೬೯ ॥

ಏತಾಶ್ಚ ದಕ್ಷಿಣಾ ನಾಡ್ಯಃ । ತಿರ್ಯಗ್ವಾಮೇ ಪ್ರಸಾರಿತಾಃ ॥
ಆತತಾಶ್ಚಾಸುಸೂರ್ಯಸ್ಯ । ದಕ್ಷಿಣಾಯನ ದಶ್ಮಯಃ ॥ ೧೭೦ ॥
ದಕ್ಷಿಣಾಯನ ಮಾರ್ಗೋsಯಂ । ಧೂಮಾದಿರಿತಿ ವಿಶ್ರುತಃ ॥
ಪಿತೃಯಾನಂ ತಮೇವಾಹುಃ । ಶೃತಿ ಸ್ಥಾನಂ ವಿಧೇಯತೇ ॥ ೧೭೧ ॥

ಯೇಚ ಧೂಮಾದಿ ಮಾರ್ಗಸ್ಥಾಃ । ಯಾವದ್ದೇಹಸ್ಥಿರಾಂಶುಭಿಃ ॥
ನಿರ್ಯಾಂತಿ ವಾಮ ಕರ್ಣಾಂತೇ । ತಮೋಗಾಃ ಪಿತೃ ಯಾನಗಾಃ ॥ ೧೭೪ ॥

ಇಲಾಂಶಾಶ್ಚ ಶತಂ ಪಂಚ । ನಾಡ್ಯಶ್ಚೈವೋತ್ತರಾಯಣಃ ॥
ಉತ್ತರಾಯಣ ನಾಡ್ಯಸ್ತು । ತಿರ್ಯಗ್ದಕ್ಷಿಣ ಸಂಸ್ಥಿತಾಃ ॥ ೧೭೨ ॥

ತಾಸ್ವಾ ತತಾಶ್ಚ ಸೂರ್ಯಸ್ಯ । ರಶ್ಮಯಃ ಶ್ಚೋತ್ತರಾಯಣಃ ॥
ಉತ್ತರಾಯಣ ಮಾರ್ಗೋsಯಂ । ಅರ್ಚಿರಾದಿರಿತಿ ಸ್ಮೃತಃ ॥ ೧೭೩ ॥

ಯೇಚಾರ್ಚಿರಾದಿ ಮಾರ್ಗಸ್ಥಾಃ । ಮುಕ್ತಿ ಯೋಗ್ಯಾಶ್ಚ ಮಾನುಷಾಂ ।
ತೇಯಾಂತಿ ದಕ್ಷಿಣಾತ್ಕರ್ಣಾ । ದ್ರಶ್ಮಿಭಿರ್ದೇವಯಾನಗಾಃ ॥ ೧೭೫ ॥

ಹೀಗೆ ಸಾಧನ ಪೂರ್ತಿಯಾಗದವರು ಸಾಧನ ತತ್ಪರರಾಗಿದ್ದಾಗ ಪ್ರಾರಬ್ಧವಶಾತ್ ದಕ್ಷಿಣಾಯನ – ಉತ್ತರಾಯಣಮಾರ್ಗದಿಂದ ದೇಹತ್ಯಾಗವನ್ನು ಮಾಡುತ್ತ ನರಕ – ಸ್ವರ್ಗಭೂಮಿಗಳಲ್ಲಿ ಸಂಚರಿಸುತ್ತಿರುತ್ತಾರೆ. ಆದರೆ ಬ್ರಹ್ಮಕಲ್ಪಸಾಧನವು ಮುಗಿದ ಮುಕ್ತಿ ಯೋಗ್ಯರು ಪಿಂಗಳಾ (ದಕ್ಷಿಣ) ಎಡಕಿವಿ. ಇಳಾ (ಉತ್ತರ) ಬಲಕಿವಿ ನಾಡಿಮಾರ್ಗಗಳನ್ನು ಬಿಟ್ಟು ಸುಷುಮ್ನನಾಡಿ (ಊರ್ಧ್ವ) ಮಾರ್ಗವಾಗಿ ದೇಹವನ್ನು ತ್ಯಜಿಸಿ ಮುಕ್ತಿಯನ್ನು ಹೊಂದುತ್ತಾರೆ. ಇವರು ಎಡ. ಬಲ ಕಿವಿಗಳ ಮಾರ್ಗವನ್ನು ಬಿಟ್ಟು ಬ್ರಹ್ಮರಂಧ್ರದ ಮೂಲಕವಾಗಿ ಸಾಗುತ್ತಾರೆ.

"ಸುಷುಮ್ನಾ ಮಾರ್ಗತೋ ಬ್ರಹ್ಮ । ರಂಧ್ರಾದುತ್ಕ್ರಮ್ಯ ವಾಯುನಾ ॥
ಸಾರ್ಧಂ ಬ್ರಹ್ಮ ಪದಂ ಪ್ರಾಪ್ಯ । ತೇನ ಯಾಂತಿ ಪರಂ ಪದಂ ॥ ೧೭೬ ॥

ಹೀಗೆ ಉತ್ತರಾಯಣ. ದಕ್ಷಿಣಾಯಾನಗಳನ್ನು ತಿಳಿಯದೇ ಹೋದರೆ ಮಧ್ವಮತದಲ್ಲಿ ಅವತರಿಸಿದ ಶ್ರೀಪದ್ಮನಾಭ–ಜಯತೀರ್ಥರು. ಶ್ರೀರಾಘವೇಂದ್ರ ತೀರ್ಥರೂ. ಶ್ರೀವಿಜಯದಾಸರೂ ಶ್ರೀಗೋಪಾಲ. ಜಗನ್ನಾಥ ದಾಸರೂ ಇವರೇ ಮೊದಲಾದವರು. ಸಾಮಾನ್ಯವಾಗಿ ದಕ್ಷಿಣಾಯನ ಮಾಸಗಳಲ್ಲೇ ಕೀರ್ತಿಶೇಷರಾಗಿದ್ದಾರೆ ಅಲ್ಲವೇ? ಅವರ ಸ್ಥಿತಿಗತಿಗಳೇನು? ಎಂಬ ಪ್ರಶ್ನೆಯು ಹುಟ್ಟುತ್ತದೆ. ಇದಕ್ಕೆ ಕಾಲವನ್ನು ಗಣನೆಗೆ ತಾರದೆ ನಾಡೀ ಮಾರ್ಗಗಳನ್ನು

ಗಣನೆಗೆ ತೆಗೆದುಕೊಳ್ಳಬೇಕು. ಇವರು ಕಾಲನಿಮಿತ್ತವಾಗಿ ದಕ್ಷಿಣಾಯನದಲ್ಲಿ ದೇಹವನ್ನು ವಿಸರ್ಜಿಸಿದ್ದರೂ ನಾಡೀರೀತ್ಯಾ ಉತ್ತರಾಯಣದಲ್ಲೇ ದೇಹತ್ಯಾಗವನ್ನು ಮಾಡಿರುವರೆಂದು ತಿಳಿಯಬೇಕು.

ಭೀಷ್ಮಾಚಾರ್ಯರು ಉತ್ತರಾಯಣ ಕಾಲವು ಬರುವವರೆಗೆ ಏಕೆ ಕಾಯಬೇಕಾಗಿತ್ತು? ಎಂದು ಕೇಳಿದರೆ ಅವರು ಶರತಲ್ಪಗಾಮಿಗಳಾದ ದಿನದಿಂದ ತಮ್ಮ ಯೋಗ ಸಾಮರ್ಥ್ಯದಿಂದ ಇಳಾ ನಾಡೀ ಮುಖಾಂತರವಾಗಿ ಉತ್ತರಾಯಣ ಮಾರ್ಗದಿಂದ ತಮ್ಮ ದೇಹವನ್ನು ತ್ಯಜಿಸಲು ಉದ್ಯುಕ್ತರಾದಾಗ ಅವರ ನಾಡೀ ಸಂಚಾರ ಕಾಲವು ಉತ್ತರಾಯಣ ಕಾಲದವರೆಗೆ ಸಾಗಿತ್ತು. ಅಷ್ಟೇ ಇದು ಕಾಕತಾಲಿಕ ನ್ಯಾಯ. ಯೋಗಿವರ್ಯರಾದ ಭೀಷ್ಮಾಚಾರ್ಯರಿಗೇ ಹೀಗೆ ಕಾಲಾವಕಾಶವು ಬೇಕಾಗಿರುತ್ತಾಗಿರುವಾಗ ಇನ್ನು ಸಾಮಾನ್ಯರು ಸಾಧನವಿಲ್ಲದೆ ಹೇಗೆ ತಾನೇ ಉದ್ಧಾರವಾದಾರು?

ಇನ್ನು ಭಗವದ್ಗೀತೆಯಲ್ಲಿ ಹೇಳಿರುವುದನ್ನು ಗಮನಿಸಿದರೆ ಜೀವನು ದೇಹತ್ಯಾಗವನ್ನು ಮಾಡುವಾಗ ಏನನ್ನು ಸ್ಮರಣೆಗೆ ತಂದು ಕೊಳ್ಳುತ್ತಾನೋ ಅದೇ ಜನ್ಮವನ್ನು ಮುಂದೆ ಹೊಂದುತ್ತಾನೆ ಎಂದು ತಿಳಿಯುತ್ತದೆ. "ತಂತಮೇನ್ಯೆತಿ"

"ಯಂಯಂ ವಾಪಿ ಸ್ಮರನ್ ಭಾವಂ । ತ್ಯಜತ್ಯಂತೇ ಕಲೇವರಂ ॥
ತಂ ತಮೇ ವೈತಿ ಕೌಂತೇಯ । ಸದಾ ಸದ್ಭಾವ ಭಾವಿತಃ ॥ ಅ. ೮ ಶ್ಲೋ. ೬ ॥"

ಹಾಗಿದ್ದ ಮೇಲೆ ಕರ್ಮಕ್ಕೆ ತಕ್ಕಂತೆ ಜನ್ಮಗಳು ಬರುತ್ತವೆ ಎಂದಿರುವಾಗ ಲಿಂಗ ಶರೀರದಲ್ಲಿ ನಿಗದಿಯಾಗಿರುವ ಪ್ರಾರಬ್ಧರೂಪವಾದ ಜನ್ಮಗಳೇ ಮುಂದೆ ಬರುತ್ತವೆ. ಸ್ಮರಣೆಗೆ ತಕ್ಕಂತೆ ಅಲ್ಲ ಎಂದು ಹೇಗೆ ಹೇಳಲು ಸಾಧ್ಯ? ಎಂದರೆ ಸತತವಾಗಿ ಭಗವಚ್ಚಿಂತನೆಯನ್ನು ಮಾಡುತ್ತಿರುವವರಿಗೆ ಅವರು ಸ್ಮರಿಸುತ್ತಿರುವ ಭಗವದ್ಗುಣ, ರೂಪ, ಕ್ರಿಯೆಗಳು ಅವರಿಗೆ ಮುಂದೆ ಸ್ಮೃತಿ ಪಥದಲ್ಲಿ ಹೊಳೆಯುತ್ತಾ ಸಾಗುತ್ತದೆ. ಆದರೆ ಅಂತ್ಯಕಾಲದಲ್ಲಿ ಅವರಿಗೆ ಪ್ರಾರಬ್ಧರೂಪವಾಗಿ ಮುಂದೆ ಯಾವ ಜನ್ಮವು ಬರುವುದಿರತ್ತದೆಯೋ ಅದೇ ಜನ್ಮದ ರೂಪವನ್ನೇ ಶ್ರೀಹರಿಯು ಬಿಂಬನಾಗಿ ತೋರುತ್ತಾನೆ. ಆಗ ಜೀವನು ಸದಾಚಿಂತಿಸುತ್ತಿದ್ದ ಅವಾಂತರ ರೂಪಗಳು ಮರೆಯಾಗಿ ವಿಭೂತಿಪರವಾದ ಜನ್ಮ (ಸದರಿ ಪ್ರಾಣಿಗಳ) ರೂಪವೇ ಸ್ಮರಿಸಲ್ಪಡುತ್ತದೆ. ಆಗ ಆ ಜೀವನಿಗೆ ಅದೇ ಜನ್ಮವು ಪ್ರಾಪ್ತಿಯಾಗುತ್ತದೆ. ಹಾಗಿದ್ದ ಮೇಲೆ ಭಗತ್ಸ್ಮತಿಗೆ ಫಲವೇನು? ಗೀತಾ ವಾಕ್ಯದ ಗತಿ ಏನು? ಎಂದರೆ ಇವರಡೂ ಇಲ್ಲಿ ವ್ಯರ್ಥವಾಗಿಲ್ಲ. ಸಾರ್ಥಕತೆಯನ್ನೇ ಹೊಂದಿವೆ.

ಹೇಗೆಂದರೆ ಭಗವತ್ಸ್ಮರಣೆಯಿಂದಲೇ ಸಾಗಿದ ಜೀವನಿಗೆ ಮುಂದೆ ಬರುವ (ಕುತ್ಸಿತ ಜನ್ಮವಾಗಿರಲೂ ಬಹುದು – ಪ್ರಾರಬ್ಧವನ್ನು ಅರಿತ ಅಪರೋಕ್ಷ ಜ್ಞಾನಿಗಳಿಗೆ ಕುತ್ಸಿತ್ವ ಜನ್ಮಗಳೆಂಬುವವೇ ಇಲ್ಲ – ತನ್ನದಲ್ಲವಾದ ಸ್ವರೂಪ ಭಿನ್ನವಾದ ಇತರ ಜನ್ಮಗಳು ಯಾವುದಾದರೂ ಏನು?)

ಜನ್ಮಗಳನ್ನು ಶ್ರೀಹರಿಯು ಆಯಾರೂಪಗಳಿಗೆ ತಾನೇ ಬಿಂಬನಾಗಿ ದರ್ಶನವನ್ನಿತ್ತು ಅವರಿಗೆ ಆಯಾ ಜನ್ಮಗಳನ್ನೇ ಕೊಡುತ್ತಾನೆ. ಹಾಗಾದರೆ ಅವನ ನಿರಂತರ ಸ್ಮರಣೆಗೆ ಫಲವೇನು? ಎಂದು ಮತ್ತೂ ಕೇಳಿದರೆ ಹೀಗೆ ಭಗವಂತನ ಸ್ಮರಣೆಯಿಂದ ಬರುವ ಪ್ರಾರಬ್ಧ ಜನ್ಮಗಳ ದೆಸೆಯಿಂದ ಜೀವನು ಅಭಿಮಾನ ಮುಕ್ತನಾಗಿ ಆಯಾ ಜನ್ಮದ ಸುಖ-ದುಃಖಗಳಿಂದ ನಿರ್ಲೇಪಿತನಾಗಿ ಸುಖವಾಗಿ ಸಾಗುತ್ತಾನೆ. ಹೀಗೆ ಕಲ್ಪಸಾಧನ ಮುಗಿಯುವವರೆಗೂ ಜೀವನು

ಸಾಗುತ್ತಾನೆ. ಅಂದ ಬಳಿಕ ಈತನು ಜೀವನ್ಮುಕ್ತನೆನಿಸುತ್ತಾನೆ. ಇವರು ವಿರಾಜಾ ಸ್ನಾನಕಾಲದಲ್ಲಿ ಸ್ವರೂಪ ಬಿಂಬ ದರ್ಶನದಿಂದ (ಅವಾಂತರ ಬಿಂಬಗಳನ್ನು ಬಿಟ್ಟು) ಪುಳಕಿತರಾಗಿ ಲಿಂಗಭಂಗವನ್ನು ಹೊಂದಿ ಮುಕ್ತರಾಗುತ್ತಾರೆ."

ಮರಣಕಾಲದಲ್ಲಿ ಬರುವ ಚಿಂತನೆಯು ಭಗವತ್ಪರವಾಗಿದ್ದರೆ ಬರುವ ಕುತ್ಸಿತ ಜನ್ಮಗಳು ನಿರ್ಲಿಪ್ತವಾಗಿ ಸಾಗುತ್ತವೆ. ವಿಷಯಾಸಕ್ತನಿಗೆ ಅವೇ ಜನ್ಮಗಳು ಬಾಧಕವಾಗಿ ಪರಿಣಮಿಸುತ್ತವೆ.

**ಅಪರೋಕ್ಷಜ್ಞಾನಿನಾಂ । ಪ್ರಾರಬ್ಧ ಕರ್ಮಾವಸಾನೇ ಸ್ಮರಂತ್ಯಜತೀತಿಭವತ್ಯೇವ"**

ಎಂದರೆ ಪ್ರಾರಬ್ಧ ಕರ್ಮಾವಸಾನಕಾಲವೆಂದರೆ ಲಿಂಗಭಂಗದಿಂದಾಗುವ ಸಮಯದಲ್ಲಿ ಎಂದು ತಿಳಿಯಬೇಕು. ಆಗ ಪರಮಾತ್ಮನು ಜೀವರಿಗೆ ನೈಜವಾದ ತನ್ನ ಬಿಂಬ ಚಿಂತನೆಯನ್ನು ನೀಡುವನು. ಹಾಗೆ ಆತನನ್ನು ಚಿಂತಿಸುವವರಿಗೆ ತನ್ನನ್ನೇ (ಮೋಕ್ಷವನ್ನೇ) ಕೊಡುತ್ತಾನೆ.

**"ಅಂತಕಾಲೇಚ ಮಾಮೇಚ । ಸ್ಮರನ್ । ಮುಕ್ತ್ವಾ ಕಲೇವರಂ ॥**
**ಯಃ ಪ್ರಯಾತಿ ಸ ಮದ್ಭಾವಂ । ಯಾತಿನಾಸ್ತ್ಯತ್ರಸಂಶಯಃ ॥ ೮ ॥ ೫ ॥**

"ಅಂತಕಾಲೇ" ಎಂದರೆ ಇಲ್ಲಿ ಲಿಂಗ ಭಂಗ ಕಾಲದಲ್ಲಿ ಎಂದು ತಿಳಿಯಬೇಕು. ಯಾಕೆಂದರೆ ಪ್ರಾರಬ್ಧ ಭೋಗಕಾಲದಲ್ಲಿ ಪ್ರಾಪ್ತವಾಗುವ ಅನೇಕ ಅವಾಂತರ ದೇಹಗಳು ಅವಶ್ಯವಾಗಿಯೂ ಭೋಕ್ತವ್ಯಗಳೇ ಆಗಿರುತ್ತವೆ. ಅಂಥಾ ಕಾಲಗಳಲ್ಲಿ ಅವಾಂತರ ದೇಹ ತ್ಯಾಗ ಕಾಲದಲ್ಲಿ ಭಕ್ತರಿಗೆ ಶ್ರೀಹರಿಯು ಭಾವೀ ಅವಾಂತರ ದೇಹಗಳ ರೂಪದಿಂದಲೇ ದರ್ಶನವನ್ನಿತ್ತು ಆಯಾ ದೇಹಗಳಲ್ಲಿ ಅವರನ್ನು ತಂದು ಅಭಿಮಾನ ರಹಿತರನ್ನಾಗಿ ಮಾಡಿ "ಆಯಿತು" ಎನಿಸುತ್ತಾನೆ. ಇದನ್ನೇ ಪ್ರಾರಬ್ಧ ಉಪಮರ್ದ ಎನ್ನುತ್ತಾರೆ. ಶ್ರೀಹರಿ ಸ್ಮೃತಿಗೆ ಅಭಿಮಾನ ಪರಿತ್ಯಾಗವೇ ಫಲ.

ಇಂಥಾ ಅಪರೋಕ್ಷ ಜ್ಞಾನಿಗಳಿಗೆ ತಮ್ಮ ಸ್ವರೂಪ ಜ್ಞಾನೋದಯವಾಗಿರುತ್ತದೆ. ಸ್ವಬಿಂಬ ದರ್ಶನವಾಗಿರುತ್ತದೆ. ಅಂದ ಬಳಿಕ ಅವರು ಹೊಂದುವ ಪ್ರಾರಬ್ಧ ದೇಹಗಳ ಬಗ್ಗೆ ಅವರು ಅಭಿಮಾನವನ್ನು ಏಕೆ ಹೊಂದುತ್ತಾರೆ.? ಅವಾಂತರ ಉಪಾಸ್ಯ ಮೂರ್ತಿಗಳನ್ನೂ ಸಹ ಅವರು ಆಶ್ರೈಸುವುದು ಔಪಚಾರಿಕವಾಗಿ.

ಒಮ್ಮೆ ಶ್ರೀವಿಜಯದಾಸರು ಪಂಡರಾಪುರದಲ್ಲಿ ಧ್ಯಾನಕ್ಕೆ ಕುಳಿತಿದ್ದಾಗ ಶ್ರೀಹರಿಯು ಶೂದ್ರನ ರೂಪದಿಂದ ದರ್ಶನವನ್ನಿತ್ತನು. ಆಗ ಶ್ರೀದಾಸರು ॥ ಇದೆ ಇದೇ ರೂಪವಾದರೆ । ಮದನಾರಿಗಾದರೂ ಮೋಕ್ಷವಿಲ್ಲ । ಹೃದಯದೊಳಗಿದ್ದ ಬಿಂಬರೂಪವತೋರೋ" ಎಂದು ಸ್ತೋತ್ರ ಮಾಡಿದರು.

ಅಪರೋಕ್ಷ ಜ್ಞಾನಿಗಳು ಮಾಡುವ ಉಪಾಸನೆಗಳು ಹೀಗಿರುತ್ತವೆ ಎಂದರೆ ಒಂದು ದೃಷ್ಟಾಂತದಿಂದ ತಿಳಿಯುವುದು ಲೇಸು.

ಒಬ್ಬ ವ್ಯಕ್ತಿಯು ಒಂದು ದೇವಸ್ಥಾನಕ್ಕೆ ಹೊರಟಾಗ ಆತನ ಸ್ಮೃತಿಯಲ್ಲಿ ಆ ದೇವಸ್ಥಾನವೇ ಇರುತ್ತದೆ. ಆದರೆ ದಾರಿಯಲ್ಲಿ ಬಹುಬಗೆಯಾದ ಸೌಧಗಳೂ, ಮನೆಗಳೂ, ಗುಡಿಸಲುಗಳೂ, ತಗ್ಗು, ದಿಣ್ಣೆ, ತಿಪ್ಪೆ, ಕುಪ್ಪೆ, ತೋಟ ತಟಾಕ

ಇತ್ಯಾದಿಗಳೂ ಬರುತ್ತವೆ. ಆದರೆ ಇವುಗಳನ್ನು ನೋಡುತ್ತ ಸಾಗಿದ ಆ ವ್ಯಕ್ತಿಗೆ ಇವುಗಳಿಂದ ಏನಾದರೂ ಲಾಭ-ನಷ್ಟಗಳು ಉಂಟೆ? ಹಿಂದೆ ಕಳೆದು ಸಾಗಿದ ಮನೆಗಳ ಸ್ಮರಣೆ ಉಂಟು. ಮುಂದೆ ಬರಲಿರುವ ಮನೆಗಳೂ ಕಾಣಿಸುತ್ತಲೇ ಇರುತ್ತವೆ. ದೇವಸ್ಥಾನವನ್ನು ಗುರಿ ಇಟ್ಟುಕೊಂಡು ಸಾಗಿದ ಮನುಷ್ಯನಿಗೆ ಈ ಹೋದ ಮತ್ತು ಬರುವ ಮನೆಗಳ ಅರಿವು ಇದ್ದರೂ, ಅವುಗಳನ್ನು ತಾಕಿಕೊಂಡೇ ನೋಡುತ್ತ ಸಾಗಿದ್ದರೂ ಈ ಮನೆ ಮಾರುಗಳ ಲಕ್ಷಣ – ಅವಲಕ್ಷಣಗಳು ಇವರ ಮೇಲೆ ಯಾವ ಪರಿಣಾಮವನ್ನು ಬೀರುತ್ತವೆ? ಹೀಗೆ ಸದನಗಳೋಪಾದಿಯಾಗಿ ಪ್ರಾಪ್ತವಾಗುವ ಜನ್ಮಗಳನ್ನು ಲೆಕ್ಕಿಸದೇ ಆಯಾ ಜನ್ಮಗಳಲ್ಲಿ ಅವಾಂತರ ಮೂರ್ತಿಗಳೆನಿಸುವ ಆ ಪ್ರಾಣಿಗಳ ರೂಪದ ಭಗವಂತನನ್ನು ತಮ್ಮ ಹೃದಯದಲ್ಲಿ ಚಿಂತಿಸುತ್ತಾ ಗರ್ಭಗುಡಿಯಲ್ಲಿದ್ದ ದೇವರನ್ನು ಚಿಂತಿಸುತ್ತಿರುವಂತೆ ಸ್ವಬಿಂಬವನ್ನು ಚಿಂತಿಸುತ್ತಾ ಸಾಗಿರುತ್ತಾರೆ. ಚಿಂತನೆಯಲ್ಲಿ ದೇವರು, ಗುಡಿಯು ಇದ್ದರೂ ದಾರಿಯಲ್ಲಿನ ಮನೆಗಳು ಜನಗಳೂ ಕಾಣದೇ ಇರುವುದಿಲ್ಲ. ಹಾಗೆಯೇ ಸ್ವರೂಪ – ಬಿಂಬ ದರ್ಶನವಾಗಿದ್ದರೂ ದಾರಿಯು ಸವೆಯದೆ ಗುಡಿ, ದೇವರ ದರ್ಶನಗಳು ಸಾಧ್ಯವಿಲ್ಲದಂತೆ ನಿಗದಿತ ಕಲ್ಪಸಾಧನೆಯು ಮುಗಿಯುವವರೆಗೂ ಅವಾಂತರ ಜನ್ಮಗಳೂ, ಹಲವು ಬಗೆ ಮೂರ್ತಿಗಳ ಉಪಾಸನೆಗಳೂ ತಪ್ಪುವುದಿಲ್ಲ.

ಜಡಭರತ, ನೃಗ ಮಹಾರಾಜರು ಹರಿಣ, ಕೃಕಲಾಸ್ (ಓತೀಕಾಟ) ಜನಗಳನ್ನು ಚಿಂತಿಸಿದರು. ಆದ್ದರಿಂದ ಅವರಿಗೆ ಹರಿಣ, ಮತ್ತು ಓತೀಕಾಟ ಜನ್ಮಗಳು ಬಂದವು. ಆದ್ದರಿಂದ ನಾವು ನಮ್ಮ ಸುತ್ತಮುತ್ತಲಿನ ಪ್ರಾಣಿಗಳನ್ನು ಚಿಂತಿಸಬಾರದು. ಆ ವಾಸನೆಯಿಂದ ನಮಗೆ ಅದೇ ಜನ್ಮಗಳು ಬರುತ್ತವೆ ಎಂದು ಗೀತೆಯ ಶ್ಲೋಕಕ್ಕೆ ಅರ್ಥವನ್ನು ಹೇಳುತ್ತಾರೆ. ಈ ವ್ಯಾಖ್ಯಾನಕ್ಕೆ ಸಾಮಾನ್ಯ ನೀತಿಗೆ ಮಾತ್ರ ಸೀಮಿತವಾದುದು. ಸದಾ ನಮಗೆ ಭಗವಚ್ಚಿಂತನೆಯು ಇರಬೇಕು ಎಂಬ ಜ್ಞಾನವನ್ನು ಇದು ಹುಟ್ಟಿಸುತ್ತದೆ. ಸಾಧುವೇ? ಆದರೆ ಪ್ರಾರಬ್ಧ ಭೋಗದ ವಿಚಾರದಲ್ಲಿ ಬೇಡವೆಂದರೂ ಬರುವುದು ಜಿಂಕೆ, ಕೃಕಲಾಪಗಳ ಸ್ಮರಣೆಯೇ. ಅದೇ ಜನ್ಮವೇ? ಆದರೆ ಶ್ರೀಹರಿಯ ಸ್ಮರಣೆಯಿಂದ ಈ ಜನ್ಮಗಳು ಅವರಿಗೆ ಪರಿಣಾಮಕಾರಿಗಳಾಗಿರಲಿಲ್ಲ. ಇಲ್ಲಿ ಭೀಷ್ಮಾಚಾರ್ಯರಿಗಾದರೂ ಆದುದು ಇದೇ. ಸದಾ ಶ್ರೀಕೃಷ್ಣನನ್ನೇ ಕಾಣುತ್ತಿದ್ದರೂ ಅವರಿಗೆ ವಸುಲೋಕದ ಸ್ಮೃತಿಯು ಬರಲು ಅವರ ಉಳಿದ ಕಲ್ಪ ಸಾಧನವೂ ಮತ್ತು ಪ್ರಾರಬ್ಧವೂ ಕಾರಣವಾಗಿತ್ತು. ಎಲ್ಲರಿಗೂ ಆಗುವುದು ಇದೇ ರೀತಿಯಾಗಿಯೇ. ರಿಯಾಯಿತಿ ಎಂಬುದೇ ಇಲ್ಲ. ಭೀಷ್ಮಾಚಾರ್ಯರಿಗೆ ವಸುಲೋಕ ಪ್ರಾಪ್ತಿಯಾದುದು ಪ್ರತಿಬಂಧಕವಲ್ಲ. ಇಲ್ಲಿ ಅವರಿಗೆ ಪ್ರಾರಬ್ಧದ ಒಂದಂಶವು ಕ್ಷಯವಾಯಿತೆಂದೇ ತಿಳಿಯಬೇಕು.

ಇನ್ನು ಮುಂದೆ ಈ ಉಪಾಸನಾ ಕ್ರಮದ ಉತ್ತರಾಂಶವನ್ನು ಕುರಿತು ಹೇಳುವುದು ಉಚಿತವಾಗಿದೆ. ಅದೇನೆಂದರೆ ಭಗವಂತನ ಸ್ಮರಣೆಯನ್ನು ಮಾಡಿದರೂ ಸರಿ ಕುತ್ಸಿತ ಜನ್ಮಗಳು ತಪ್ಪುವುದಿಲ್ಲ. ಮಾಡದಿದ್ದರೂ ಸರಿ. ಕುತ್ಸಿತ ಜನ್ಮಗಳು ಬರುತ್ತವೆ ಎಂದ ಮೇಲೆ ಭಗವಂತನ ಸ್ಮರಣೆಯಾದರೂ ಯಾಕೆ ಬೇಕು? ಎಂದರೆ ಭಗವಂತನ ಸ್ಮರಣೆಪೂರ್ವಕವಾಗಿ ಬರುವ ದೇಹಗಳ ಮೇಲೆ ಜೀವನಿಗೆ ಅಭಿಮಾನವು ನಷ್ಟವಾಗಿ ಪ್ರಾಕೃತ ಸುಖ-ದುಃಖಗಳು ಬಾಧಿಸುವುದಿಲ್ಲ. ಗರ್ಭಯಾತನ-ಮರಣ ಸಂಕಟಗಳಿರುವುದಿಲ್ಲ. ಒಮ್ಮೆ ಭಗವದಪರೋಕ್ಷ ಜ್ಞಾನವಾಯಿತೆಂದರೆ ಮೋಕ್ಷ ಪರ್ಯಂತವಾಗಿಯೂ ಸುಖವಾಗಿ ಸಾಗುತ್ತಾರೆ. ಆ ಭಗವದ್ವಿಸ್ಮೃತಿಯಿಂದ ವಿಷಯ ಲೋಲುಪರಾದವರು ಬರುವ ಹೀನ ಜನ್ಮಗಳಿಂದ ಭಯಂಕರವಾದ ದ್ವಂದ್ವಗಳಿಗೆ ತುತ್ತಾಗಿ ದುಃಖಭಾಗಿಗಳಾಗುತ್ತಾರೆ. ಮುಕ್ತಿ ಯೋಗ್ಯನಾದ ಜೀವನು ಅಪರೋಕ್ಷ ಜ್ಞಾನವನ್ನು ಪಡೆಯುವವರೆಗೂ ಸಂಸ್ಕೃತಿ ದುಃಖಗಳಿಗೆ ಭಾಗಿಯಾಗಿರುತ್ತಾನೆ. ಎಷ್ಟು ಬೇಗ ಜಾಗ್ರತನಾಗಿ

ಶ್ರುತಿ, ಸ್ಮೃತ್ಯುಕ್ತ ಸಚ್ಛಾ ಸ್ತ್ರಾಲಾಪಗಳಿಂದ ಅಜ್ಞಾನವನ್ನು ನೀಗಿಕೊಂಡು ಗುರುಪ್ರಸಾದದಿಂದ ಅಪರೋಕ್ಷ ಜ್ಞಾನಿಯಾಗುತ್ತಾನೋ ಅಷ್ಟು ಬೇಗನೇ ಆತನು ಯಾತನೆಯಿಂದ ಮುಕ್ತನಾಗುತ್ತಾನೆ. ಹೇಗೋ ಮುಕ್ತಿ ಯೋಗ್ಯನಿಗೆ ತಮಸ್ಸಿಲ್ಲ. ಮುಕ್ತಿಯಾಗಿಯೇ ಆಗುತ್ತದೆ. ಸಾಧನವೇಕೆ ಬೇಕು? ಬೇಡವೇ ಬೇಡ ಎಂದರೆ ಸ್ವಕಲ್ಪಾವಸಾನದವರೆ ಅವನು ದುಃಖವನ್ನೇ ಅನುಭವಿಸಿ ಆಮೇಲೆ ಮುಕ್ತನಾಗಬಹುದು. ಆದರೆ ಮುಕ್ತಿ ಯೋಗ್ಯನಾದ ಜೀವನು ಸ್ವರೂಪತಃ ಹಾಗೆ ಮಾಡುವುದಿಲ್ಲ. ಭಗವತ್ಸ್ಮೃತಿಯಿಂದ ಬರುವ ಜನ್ಮಗಳು ತಾರಕಗಳು, ವಿಸ್ಮೃತಿಯಿಂದ ಬರುವ ಜನ್ಮಗಳು ಮಾರಕಗಳು. ಭಗವದ್ಭಕ್ತಿಯು ಮೋಕ್ಷಾತ್ ಪರತರವಾದುದು. ಬಹುಬಗೆಯಾದ ಜೀವರಾಶಿಗೆ ಹೊಂದಿರುವ ಚಿತ್ರವಿಚಿತ್ರವಾದ ರೂಪಗಳೆಲ್ಲವೂ ಭಗವಂತನ ಸಾದೃಸಗಳೇ. ಇವುಗಳನ್ನು ನೋಡಿ ಈ ರೂಪಗಳು ಭಗವಂತನಲ್ಲಿ ಇವೆ ಎಂದು ತಿಳಿದು ಇವು ಭಗವಂತನಿಗೆ ಪ್ರತಿಬಿಂಬಗಳೆಂದು ಭಾವಿಸಬೇಕು. ಆಗ ಕಂಡ ಕಂಡದ್ದೆಲ್ಲ ಹರಿಮೂರ್ತಿ ಎನಿಸುತ್ತದೆ. ಈ ಎಲ್ಲಾ ರೂಪಗಳಲ್ಲಿ ಭಗವಚ್ಚಿಂತನೆಯುಳ್ಳವರೆಗೆ ದೇಹತ್ಯಾಗ ಕಾಲದಲ್ಲಿ ಯಾವ ಜನ್ಮದ ರೂಪವು ಬರಬೇಕಾಗಿದೆಯೂ ಅದೇ ಸ್ಮರಣೆಯನ್ನು ಕೊಡ ಬೇಕಾಗಿದ್ದು ಆ ರೂಪದ ಸ್ಮರಣೆಯನ್ನು ಭಗವಂತನೇ ಇತ್ತು. ಆ ಜನ್ಮಕ್ಕೆ ತರುತ್ತಾನೆ. ಅಲ್ಲಿ ಸಾಧನೆಯನ್ನು ಮಾಡಿಸುತ್ತಾನೆ. ಇದನ್ನರಿತವರಿಗೆ ಆ ಜನ್ಮದ ನಿಮಿತ್ತವಾದ ಬಾಧೆಯು ಇರುವುದಿಲ್ಲ. ಒಳ್ಳೇ ಕೆಲಸ ಮಾಡಿದರೆ ಒಳ್ಳೇ ಜನ್ಮ ಬರುತ್ತದೆ ಎಂದು ತಿಳಿಯಬಾರದು. ಒಳ್ಳೇ ಕೆಲಸ ಮಾಡಿದರೆ ಬಂದ ಜನ್ಮವು ಯಾವುದೇ ಇರಲಿ ಅದು ಒಳ್ಳೆಯದೇ ಆಗುತ್ತದೆ ಎಂದು ತಿಳಿಯಬೇಕು.

ಸಾಧನ ಕಾಲದಲ್ಲಿ (ಅಪರೋಕ್ಷ ಜ್ಞಾನವಾಗಿದ್ದರೂ) ಭಗವಂತನು ನಾನಾ ರೂಪಗಳಿಂದ ದರ್ಶನವನ್ನೀಯುತ್ತಾ (ಅಂದರೆ ನಾನಾ ಜನ್ಮಗಳನ್ನು ಕೊಡುತ್ತಾನೆ ಎಂದೇ ಅರ್ಥ) ಲಿಂಗಭಂಗವಾಗುವ ಸಮಯಕ್ಕೆ ತನ್ನ ಬಹು ರೂಪಗಳನ್ನು ಉಪಸಂಹರಿಸಿ – ಹಾಗೆಯೇ ಶೇಷಸಾಧನ ಜೀವನಿಗೆ ಬರಬಹುದಾಗಿರುವಂಥ ಬಹು ಜನ್ಮಗಳನ್ನೂ ಮುಕ್ತಸಾಧನ ಜೀವನಿಗೆ ಉಪಸಂಹರಿಸಿ ಸ್ವರೂಪವನ್ನು ಅಭಿವ್ಯಕ್ತಗೊಳಿಸಿ ತನ್ನ ಬಿಂಬವನ್ನು ಮಾತ್ರ ಜೀವನಿಗೆ ದರ್ಶನವನ್ನು ಮಾಡಿಸಿ ಮುಕ್ತಿಯನ್ನೈದಿಸುತ್ತಾನೆ. ಅಪರೋಕ್ಷ ಜ್ಞಾನಿಗಳೆಂದರೆ ಸ್ವರೂಪ ಜ್ಞಾನವಾದವರೆಂದೇ ಅರ್ಥ. ಅಂದ ಮೇಲೆ ಲಿಂಗಭಂಗವಾಗುವಾಗ ಸ್ವರೂಪದರ್ಶನ ಮಾಡಿಸುತ್ತಾನೆ ಎಂದರೆ ಏನರ್ಥ? ಎಂದರೆ ಕಲ್ಪಸಾಧನೆಯು ಮುಗಿಯದೆ ಇರುವ ಅಪರೋಕ್ಷ ಜ್ಞಾನಿಗಳಿಗೆ ಸ್ವರೂಪದ ಜೊತೆಗೆ ಪ್ರಾರಬ್ಧ ರೂಪವಾದ ಜನ್ಮಗಳು ದೇಹತ್ಯಾಗ ಕಾಲದಲ್ಲಿ ಸ್ಮರಣೆಗೆ ಬರುತ್ತವೆ. ಆಗ ಅದೇ ದೇಹಗಳನ್ನು ಅವರು ಪಡೆದು ಬಿಂಬ ಚಿಂತನೆಯಲ್ಲಿಯೇ ಸಾಗುತ್ತಾರೆ. ಪ್ರತಿಬಂಧಕವಿಲ್ಲ. ಆದರೆ ಲಿಂಗಭಂಗಕಾಲದಲ್ಲಿ ಕೇವಲ ತನ್ನ ಸ್ವರೂಪವು ಮಾತ್ರ ಉಳಿದಿರುತ್ತದೆ. ಆ ಸ್ವರೂಪಕ್ಕೆ ತಕ್ಕ ಬಿಂಬ ಮಾತ್ರ ಜೀವನಿಗೆ ತೋರುತ್ತದೆ ಎಂದು ತಿಳಿಯಬೇಕು. ಅಂದರೆ ತನು ತ್ರಯ ರಹಿತನಾಗಿ ಸ್ವರೂಪ ದೇಹದಿಂದ ಮಾತ್ರ ಇರುವವನಾಗುತ್ತಾನೆ. ಅಲ್ಲಿಗೆ ಜೀವನಿಗೆ ಪ್ರಾರಬ್ಧ ರೂಪವಾಗಿ ಅಂಟಿದ ಬಹು ಜನ್ಮಗಳು ನಿವೃತ್ತಿಯಾಗುತ್ತವೆ. ಹಾಗೆಯೇ ಭಗವಂತನು ತನ್ನ ಬಹು ರೂಪಗಳನ್ನು ಏಕೀ ಭಾವಗೊಳಿಸಿ ಬಿಂಬನೆನಿಸಿ ಸುಖವನ್ನೀಯುತ್ತಾನೆ. ಇದನ್ನೇ ಮಂಡೂಕ್ಯೊಪನಿಷತ್ತಿನಲ್ಲಿ "ಅದೃಷ್ಟಂ । ಅವ್ಯವಹಾರ್ಯಂ । ಪ್ರಪಂಚೋಪಶಮಂ । ಶಿವಂ । ಅದ್ವೈತಂ" ಎಂದು ಹೇಳಿರುತ್ತದೆ.

ಇದರ ಅರ್ಥವೇನೆಂದರೆ – ಜೀವಪರ:

ಅದೃಷ್ಟಂ = ಪುನರ್ಜನ್ಮವಿಲ್ಲ; ಅವ್ಯವಹಾರ್ಯಂ = ಸಾಧನಾದಿಗಳಿಲ್ಲ; ಪ್ರಪಂಚೋಪಶಮಂ = ಸೃಷ್ಟಿಗೆ ಬರುವುದು ಇಲ್ಲ. ಶಿವಂ = ಸುಖವಾಗಿರುತ್ತಾನೆ. ಅದ್ವೈತಂ = ಲಿಂಗಶರೀರವು ಇದ್ದಾಗ ಪ್ರಾಪ್ತವಾಗುತ್ತಿದ್ದ ಅನೇಕ

ದೇಹಗಳ ಪ್ರಾಪ್ತಿತ್ವವು ನಷ್ಟವಾಗಿ "ಸ್ವರೂಪ"ದಿಂದ ಮಾತ್ರ ಉಳಿದುಕೊಳ್ಳುತ್ತಾನೆ. ಇದು ಪ್ರತಿಬಿಂಬನೆನಿಸುವ ಜೀವನ ಸ್ಥಿತಿಯಾದರೆ ಇನ್ನು ಪರಮಾತ್ಮನ ಬಗ್ಗೆ ಹೇಳುವುದಾದರೆ ಪರಮಾತ್ಮನು ಜೀವನ ದೆಶೆಯಿಂದ ಅಭಿವ್ಯಕ್ತನಾಗಿ ಅವರೊಡನೆ ತನ್ನ ಅಂಶದಿಂದ ಅಂತರ್ಯಾಮಿಯಾಗಿ ಅದೃಷ್ಟ = ಹುಟ್ಟುವುದಿಲ್ಲ; ಅವ್ಯವಹಾರ್ಯಂ = ಸಾಧನ ಮಾಡಿಸುವುದಿಲ್ಲ; ಪ್ರಪಂಚೋಪಶಮಂ = ಮುಕ್ತ ಜೀವನ ವಿವಿಕ್ತಾದಿಂದ ಪ್ರಪಂಚಕ್ಕೆ ಅವನನ್ನು ತಂದು ತಾನು ಅವನೊಡನೆ ವಿಹರಿಸುವುದಿಲ್ಲ; ಶಿವಂ = ಜ್ಞಾನಾನಂದಮಯನಾಗಿ ಜ್ಞಾನಾನಂದವನ್ನು ಜೀವನಿಗೆ ನೀಡುತ್ತಾನೆ; ಅದ್ವೈತಂ = ಬಿಂಬೈಕ ವಿನಃ ಬೇರೆ ಅವಾಂತರ ಅವತಾರ ಉಪಾಸ್ಯ ಮೂರ್ತಿ ರೂಪಗಳನ್ನು ಮುಕ್ತ ಜೀವರಿಗೆ ತೋರುವುದಿಲ್ಲ. ಒಂದೇ ಸ್ವರೂಪಯುಕ್ತನಾದ ಜೀವನಿಗೆ ಒಂದೇ ಬಿಂಬ ರೂಪನಾಗಿ ಆನಂದವನ್ನೀಯುವನು. ಸಾಂಶರು ಮುಕ್ತಿಯಲ್ಲಿ ಏಕ ಕಾಲದಲ್ಲಿ ಬಹು ರೂಪ ಧಾರಣ – ಚಿಂತನೆ ಮಾಡಿದರೂ ಮರಳಿ ಬಿಂಬಕ್ಕೇ ಬಂದು ನಿಲ್ಲುತ್ತಾರೆ. ನಿರಂಶರೂ ಏಕೇಕ ಕಾಲದಲ್ಲಿ ಏಕ ರೂಪದಂತೆ ಬಹು ರೂಪಗಳನ್ನು ತಾಳಿಕೊಂಡರೂ ಕೊನೆಗೆ ಸ್ವರೂಪಕ್ಕೇ ಬಂದು ನಿಲ್ಲುತ್ತಾರೆ.

ಪ್ರಾರಬ್ಧಕ್ಕೆ ಇರುವುದು ಎರಡು ಮುಖಗಳು. ಒಂದು ಸದಾ ನಗುತ್ತಿರುತ್ತದೆ. ಮತ್ತೊಂದು ಸದಾ ಅಳುತ್ತಿರುತ್ತದೆ. ಈ ಪ್ರಾರಬ್ಧವು ಬ್ರಹ್ಮನಿಂದಾರಂಭಿಸಿ ಕಲಿ ಪರಿಯಂತವಾಗಿ ಸರ್ವರಿಗೂ (ಲಕ್ಷ್ಮೀ ನಾರಾಯಣರನ್ನು ಮತ್ತು ಮುಕ್ತರನ್ನು ಮಾತ್ರ ಬಿಟ್ಟು) ತನ್ನ ಮುಖ ದ್ವಂದ್ವದ ದರ್ಶನವನ್ನು ಸದಾ ಕಾಲವೂ ಮಾಡಿಸುತ್ತಲೇ ಇರುತ್ತದೆ. ಬ್ರಹ್ಮನು ಸದಾ ಈ ಪ್ರಾರಬ್ಧದ ನಗು ಮುಖವನ್ನೇ ನೋಡುತ್ತಿರುತ್ತಾನೆ. ಆದರೆ ಕಲಿಯು ಮಾತ್ರ ಅಳು ಮುಖವನ್ನೇ ನೋಡುತ್ತಿರುತ್ತಾನೆ. ಉಳಿದವರು ಕೆಲವೊಮ್ಮೆ ನಗು ಮುಖವನ್ನೂ, ಕೆಲವೊಮ್ಮೆ ಅಳು ಮುಖವನ್ನೂ ನೋಡುತ್ತಿರುತ್ತಾರೆ. ಈ ಎರಡು ಮುಖಗಳು ಯಾವುವು ಎಂದರೆ ನಗು ಮುಖವೆಂದರೆ ಸುಖ ಪ್ರಾರಬ್ಧ; ಅಳು ಮುಖವೆಂದರೆ ದುಃಖ ಪ್ರಾರಬ್ಧ.

ಬ್ರಹ್ಮನಿಂದಾರಂಭಿಸಿ ಅಮುಕ್ತರಾದ (ಸಾಧನ ಶೇಷಉಳ್ಳ) ಸಮಸ್ತ ಅಪರೋಕ್ಷ ಜ್ಞಾನಿಗಳು ಈ ಪ್ರಾರಬ್ಧನ ಮುಖವನ್ನೇ ನೋಡದೇ ಶ್ರೀ ಲಕ್ಷ್ಮೀನಾರಾಯಣರನ್ನು ಮಾತ್ರ ನೋಡಿ ಓಗ್ಗುತ್ತಿರುತ್ತಾರೆ. ಈ ಪ್ರಾರಬ್ಧ ಪುರುಷನು ಇವರ ಬೆಂಬತ್ತಿದ್ದರೂ ಪರಮಾತ್ಮನ ದರ್ಶನದಿಂದ ಆನಂದವು ಉಂಟಾಗುತ್ತಿರುವಾಗ ಸ್ವರೂಪ ಮಿತ್ರನಲ್ಲದ ಕಪಟಿಯಾದ ಈ ಹಿತ ಶತ್ರುವಿನಿಂದ ನಮಗೇನು ಲಾಭ? ಎಂದು ತಿಳಿದು ಇವನನ್ನು ಧಿಕ್ಕರಿಸಿ ಉದಾಸೀನರಾಗಿ ಮೋಕ್ಷಪರಿಯಂತವಾಗಿ ಸಾಗುತ್ತಾರೆ. ಅಂದರೆ ಸುಖ-ದುಃಖಾದಿ (ಪ್ರಾರಬ್ಧ)ಗಳಿಂದ ಮೋಹಿತರಾಗದೆ ಭಗವದ್ಭಕ್ತಿಯಲ್ಲಿ ಲೀನರಾಗಿ ಮೋಕ್ಷ ಸದೃಶವಾದ ಆನಂದದಲ್ಲಿ ಮುಳುಗಿರುತ್ತಾರೆ ಎಂದರ್ಥ. ಭೀಷ್ಮಾಚಾರ್ಯರು ವಸುಲೋಕವನ್ನು ಆನಂದದಿಂದಲೇ ಹೊಂದಿದರು.

ಮಾಂಡೋಕ್ಯೋಪನಿಷತ್ತಿನ ಪ್ರಕಾರ "ದ್ವೈತಸ್ಯ ಅಗ್ರಹಣಂ ತುಲ್ಯಂ । ಉಭಯೋಃ ಪ್ರಾಜ್ಞ ತುರ್ಯಯೋಃ" ಎಂದು ಹೇಳಿರುವಲ್ಲಿ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ಜಗದ್ವ್ಯಾಪಾರ ನಿರತವಾದ ಭಗವನ್ಮೂರ್ತಿಗಳಿಗೂ, ಜಗದ್ವ್ಯಾಪಾರವಿಲ್ಲದ ತುರಿಯನಾಮಕ ಪರಮಾತ್ಮನಿಗೂ ಭೇದವನ್ನು ಚಿಂತಿಸಬಾರದೆಂದು ನಿಶ್ಚಯವಾಗಿ ಹೇಳಲಾಗಿದೆ. ಶ್ರೀಹರಿಕಥಾಽಮೃತಸಾರದಲ್ಲಿ "ಮುಕ್ತ ಬಿಂಬನು ತುರಿಯ" ಎಂದು ಹೇಳುವುದರ ಮೂಲಕ ಇಡೀ ಮುಕ್ತ ಜೀವ ಗಣಕ್ಕೆ ಸಾಮೂಹಿಕವಾಗಿ "ತುರಿಯ"ನು ಬಿಂಬನಾಗಿದ್ದಾನೆ ಎಂದು ತಿಳಿದು ಬರುತ್ತದೆ. ಹಾಗಿದ್ದ ಮೇಲೆ ಎಲ್ಲರಿಗೂ ತುರಿಯನೇ ಬಿಂಬನೆಂದರೆ ಮುಕ್ತಿಯಲ್ಲಿ ತಾರತಮ್ಯಕ್ಕೆ ಚ್ಯುತಿ ಬರುತ್ತದೆ. ಅಲ್ಲವೆ? ಎಂದರೆ" ದ್ವೈತಸ್ಯ ಅಗ್ರಹಣಂ" ಎಂಬ ವಾಕ್ಯದಿಂದಲೂ ಮುಕ್ತಿಯಲ್ಲಿನ ಅನೇಕ ಭಗವನ್ಮೂರ್ತಿಗಳಲ್ಲಿ ಪರಸ್ಪರ ಭೇದವನ್ನು ಚಿಂತಿಸಬಾರದೆಂದು

ತಾರತಮ್ಯಕ್ಕೆ ಚ್ಯುತಿಯು ಬರುವಂತಾಗುತ್ತದಲ್ಲಾ ಎಂದರೆ ಇದಲ್ಲದೆ ಮುಕ್ತಿಯಲ್ಲಿನ ಭಿನ್ನ ಯೋಗ್ಯತೆಯು ಜೀವರಾಶಿಗಳು ಸತ್ಯಭೂತವಾಗಿರುವುದರಿಂದ ಅವರವರ ಗುಣ, ರೂಪ, ಪ್ರಕ್ರಿಯೆಗಳಿಗೆ ಅನುಗುಣವಾಗಿ ಅವರ ಬಿಂಬರೂಪಗಳು ಬೇರೆ ಬೇರೆಯಾಗಿಯೇ ಇರುವಾಗ ಭಗವದ್ಗುಣ ರೂಪಗಳಿಗೆ ಅಭೇದ ಚಿಂತನೆಯು ಹೇಗೆ ಸಾಧ್ಯ? ಎಂದರೆ ಪರ ಪ್ರಯೋಜನಾರ್ಥವಾಗಿ ಪರಮಾತ್ಮನ ಬಿಂಬ ರೂಪಗಳು ಬೇರೆ ಬೇರೆಯಾಗಿ ನಿರಂತರವಾಗಿ ಇದ್ದರೂ ಅವು ಪರಸ್ಪರ ಭಗವದನ್ಯವೆಂದು ತಿಳಿಯಬಾರದು. ಜೀವರು ಭಿನ್ನ ವಿಭಿನ್ನರೂಪಗಳಿಂದ ಮುಕ್ತಿಯಲ್ಲಿ ಅಸಂಖ್ಯಾತರಾಗಿ ಇರುವರು. ಇವರ ಬಿಂಬವು ಸಹ ಭಿನ್ನ, ವಿಭಿನ್ನವಾಗಿಯೇ ನಿರಂತರವಾಗಿ ಚ್ಯುತಿರಹಿತವಾಗಿ ಇರುವಾಗ "ಅಭಿನ್ನ" ಎಂದು ಹೇಗೆ ತಿಳಿಯುವುದು? ಎಂದರೆ ಮುಕ್ತನಾದ ಒಬ್ಬ ಜೀವನಿಗೆ ಅವನ ಬಿಂಬ ರೂಪ ಒಂದನ್ನು ಬಿಟ್ಟು, ಹಿಂದೆ ಸಾಧನ ಕಾಲದಲ್ಲಿ ಒಬ್ಬನಿಗೆ ಅನಂತ ಜನ್ಮಗಳನ್ನು ಇತ್ತು ತನ್ನ ಅನಂತ ರೂಪಗಳನ್ನು ತೋರಿದಂತೆ ಇಲ್ಲಿ ತೋರುವುದಿಲ್ಲ. ಇಲ್ಲಿ ಆ ಒಬ್ಬ ಜೀವನಿಗೆ ಅವನ ಸ್ವರೂಪ ಒಂದನ್ನು ಮಾತ್ರ ತೋರಿಸುತ್ತ ಹಾಗೇ ತನ್ನ ಬಿಂಬವಂದನ್ನು ಮಾತ್ರ ಆ ಜೀವನಿಗೆ ತೋರುತ್ತಾನೆ. ಇದರಂತೆ ಎಲ್ಲಾ ಜೀವರೂ ತಮ್ಮ ಸ್ವರೂಪ ಮತ್ತು ಏಕೈಕ ಬಿಂಬವನ್ನು ಮಾತ್ರ ಕಾಣುತ್ತಿರುತ್ತಾರೆ. ಈ ವಿವಿಕ್ಷಾದಿಂದ ಭಗವದ್ಬಿಂಬ ರೂಪವು "ಅದ್ವೈತ" ಪರವಾಗಿದೆ ಎಂದು ತಿಳಿಯಬೇಕು. ಹಾಗೆಯೇ ಜೀವನೂ ಸಹ ತನ್ನ ಸ್ವರೂಪವನ್ನು ಬಿಟ್ಟು ಅನ್ಯ ಪ್ರಾಕೃತ ದೇಹಗಳನ್ನು ಪಡೆಯದೆ ಅದ್ವೈತನಾಗುತ್ತಾನೆಂದು ಜೀವಪರವಾಗಿ ತಿಳಿಯಬೇಕು. (ಭಿನ್ನ ರೂಪಗಳೆಂದರೆ ಜಿಂಕೆಗಳು ಅಸಂಖ್ಯಾತವಾಗಿರುವವು. ಜಿಂಕೆಗೆ ಜಿಂಕೆ ಭಿನ್ನ ರೂಪ. ಹುಲಿಗೆ ಹುಲಿ, ಸಿಂಹಕ್ಕೆ ಸಿಂಹ ಭಿನ್ನ ರೂಪಗಳು ಆದರೆ ಜಿಂಕೆಗೆ ಹುಲಿ, ಹುಲಿಗೆ ಸಿಂಹ ಇವು ವಿಭಿನ್ನ ರೂಪಗಳು). ಜೀವನು ಬಹುರೂಪ (ಜನ್ಮ) ರಹಿತನಾಗಿ ಸ್ವರೂಪ ಮಾತ್ರದಿಂದ ಅದ್ವೈತನಾಗುತ್ತಾನೆ. ಪರಮಾತ್ಮನು ಬಹು ರೂಪ ರಹಿತನಾಗಿ ಮುಕ್ತ ಜೀವ ಒಬ್ಬನಿಗೆ ತನ್ನ ಒಂದೇ ಬಿಂಬ ದರ್ಶನವನ್ನಿತ್ತು ಅದ್ವೈತ ಎನಿಸುತ್ತಾನೆ. ಮುಕ್ತ ಸಮೂಹಕ್ಕೆ ಬಿಂಬ ತುರಿಯ. ಪೃಥಕ ಮುಕ್ತ ಜೀವರಿಗೆ ಪ್ರಪ್ರತ್ಯೇಕ ಬಿಂಬ ರೂಪವು ರಕ್ಷಕವಾಗಿರುತ್ತದೆ.

ಈ ರೀತಿಯಾಗಿ ಭೀಷ್ಮಾಚಾರ್ಯರ ರಣ ಪ್ರಸಂಗವು ಮುಕ್ತಾಯವಾದ ಮೇಲೆ ದುರ್ಯೋಧನನು ದ್ರೋಣ ಮತ್ತು ಕರ್ಣನನ್ನು ಯುದ್ಧಕ್ಕೆ ನೇಮಿಸಿದನು. ದ್ರೋಣಾಚಾರ್ಯರ ಪರಾಕ್ರಮಕ್ಕೆ ನಡುಗಿದ ಪಾಂಡವರು ಭೀಮಸೇನನನ್ನು ಮುಂದಿಟ್ಟು ಯುದ್ಧ ಮಾಡಿದರು. ದ್ರೋಣಾಚಾರ್ಯರಿಗೆ ಅಶ್ವತ್ಥಾಮ, ಶಲ್ಯ ಮಹಾರಾಜರು ಬೆಂಬಲವಾಗಿ ನಿಂತರು.

ದ್ರೋಣಾಚಾರ್ಯರು ಅಕ್ಷೋಹಿಣಿಗಟ್ಟಲೆ ಸೈನ್ಯವನ್ನು ಸಂಹರಿಸಿದರು. ಇದರಿಂದ ತತ್ತರಿಸಿದರು ಪಾಂಡವರು ಶ್ರೀಕೃಷ್ಣನ ಸಲಹೆಯಂತೆ ಧರ್ಮರಾಜನು " ಅಶ್ವತ್ಥಾಮಾ ಹತಃ" ಎಂದು ಘೋಷಿಸಿದನು. ಅಂದು ಮಾಲವ ದೇಶದ ಅರಸನ ಅಶ್ವತ್ಥಾಮ ಎಂಬುವ ಆನೆಯು ಯುದ್ಧದಲ್ಲಿ ಮೃತಿಯನ್ನು ಹೊಂದಿತ್ತು. ಆದರೆ ಇದನ್ನು ನೆಪವಾಡಿಕೊಂಡು ದ್ರೋಣಾಚಾರ್ಯರನ್ನು ಯುದ್ಧದಿಂದ ವಿಮುಖರನ್ನಾಗಿ ಮಾಡಲು ಹೂಡಿದ ತಂತ್ರಕ್ಕೆ ದ್ರೋಣಾಚಾರ್ಯರು ಬಲಿಯಾದರು. ಅವರು ತಮ್ಮ ದೇಹವನ್ನು ಯೋಗದಿಂದ ತ್ಯಜಿಸಿ ತಮ್ಮ ಮೂಲವನ್ನು ಸೇರಿದರು. ತರುವಾಯ ದುಷ್ಟದ್ಯುಮ್ನನು ದ್ರೋಣಾಚಾರ್ಯರ ದೇಹವನ್ನು ಛಿದ್ರಮಾಡಿದನು. ಮುಂದೆ ಈ ದುಷ್ಟದ್ಯುಮ್ನನನ್ನು ಅಶ್ವತ್ಥಾಮಾಚಾರ್ಯರು ಸಂಹರಿಸಿದರು.

ತರುವಾಯ ತಂದೆಯ ವಿಯೋಗದಿಂದ ಕ್ರುದ್ಧರಾದ ಅಶ್ವತ್ಥಾಮಾಚಾರ್ಯರು ಪಾಂಡವರ ಮೇಲೆ ನಾರಾಯಣಾಸ್ತ್ರವನ್ನು ಬಿಟ್ಟರು.

**"ಆಶ್ರುತ್ಯ ತಾತಂ । ನಿಹತಂ ಪ್ರತಿಜ್ಞಾಂ ॥ ಚಕಾರ ನಿಶ್ಶೇಕ್ಷ ರಿಪು ಪ್ರಮಾಥೇ ॥**
**ನಾರಾಯಣಾಸ್ತ್ರಂ । ವಿಸಸರ್ಜ ಕೋಪಾತ್ ॥ ತದಾಭೀತಾ । ಭೀಮಮೃತೇ ಸಮಸ್ತಾ ॥**
**ತಾ. ನಿ. ೨೬-೨೯೯ ॥**

ಆಗ ಎಲ್ಲಾ ಪಾಂಡು ಪಕ್ಷದವರು ಭೀತರಾದರು. ಆದರೆ ಭೀಮನು ಮಾತ್ರ ಭಯ ಪಡಲಿಲ್ಲ. ಆಗ ಶ್ರೀಕೃಷ್ಣನು ನಾರಾಯಣಾಸ್ತ್ರಕ್ಕೆ ಎಲ್ಲರು ತಲೆಬಾಗಿ ನಮಿಸಿರಿ ಎಂದು ಹೇಳಿದನು. ಆಗ ಭೀಮನ ವಿನಃ ಎಲ್ಲರೂ ಆ ಶಸ್ತ್ರ ಶ್ರೇಷ್ಠಕ್ಕೆ ತಲೆ ಬಾಗಿ ಬದುಕುಳಿದರು. ಭೀಮಸೇನನು ಅಶ್ವತ್ಥಾಮಾಚಾರ್ಯರಿಗಿಂತ ಶ್ರೇಷ್ಠನಾದುದರಿಂದ ಅಶ್ವತ್ಥಾಮಾಚಾರ್ಯರ ಮಂತ್ರ ಸಿದ್ಧಿಯು ಭೀಮಸೇನನ ಮೇಲೆ ಪರಿಣಾಮವನ್ನು ಬೀರುವಂತಿರಲಿಲ್ಲ.

ಮುಂದೆ ಸಾಗಿದ್ದು ಕರ್ಣಾರ್ಜುನರ ಯುದ್ಧವು ಕರ್ಣನ ಸಾರಥಿಯಾಗಿ ಮದ್ರಾಧಿಪತಿ ಶಲ್ಯನು ನೇಮಿಸಲ್ಪಟ್ಟನು. ಅರ್ಜುನನ ಸಾರಥಿಯು ಶ್ರೀಕೃಷ್ಣನು. ಪಾಂಡವರಿಗೆ ಜಯವಾಗಬೇಕೆಂಬ ಉದ್ದೇಶದಿಂದ ಶಲ್ಯನು ಕರ್ಣನ ತೇಜೋವಧೆಯನ್ನು ಮಾಡಿದ್ದನು. ಯುದ್ಧದಲ್ಲಿ ಶ್ರೀಕೃಷ್ಣನು ಕರ್ಣನ ಸರ್ಪಾಸ್ತ್ರದಿಂದ ಅರ್ಜುನನನ್ನು ರಕ್ಷಿಸಿ ಅರ್ಜುನನಿಂದ ಕರ್ಣನ ಶಿರಚ್ಛೇದವನ್ನು ಮಾಡಿಸಿದನು. ತರುವಾಯ ಶಲ್ಯ ಧರ್ಮರಾಜರ ಯುದ್ಧದಲ್ಲಿ ಧರ್ಮರಾಜನು ಶಲ್ಯನನ್ನು ಶಕ್ತ್ಯಾಯುಧದಿಂದ ಸಂಹರಿಸಿದನು. ಸತ್ಯ, ಧರ್ಮ ಕರ್ಮಗಳಲ್ಲಿ ಆಸಕ್ತನಾಗಿದ್ದ ಶ್ರೀಕೃಷ್ಣನ ಭಕ್ತನಾಗಿದ್ದ ಶಲ್ಯನು ಸ್ವರ್ಗದಲ್ಲಿ ಇಂದ್ರನಿಂದ ಮಾನಿತನಾದನು.

**"ಸತ್ಯ ಧರ್ಮರಥಃ ಶಲ್ಯ । ಇಂದ್ರಸ್ಯಾತಿಥಿ ತಾಮಗಾತ್ ॥ ೨೮-೩೨ ॥**

ಅಧರ್ಮಮೂರ್ತಿಯಾದ ದುರ್ಯೋಧನನು ಬ್ರಾಹ್ಮಣರಾಗಿದ್ದರೂ ದ್ರೋಣ ಅಶ್ವತ್ಥಾಮಾಚಾರ್ಯರಿಂದಲೂ ಅವರ ಸ್ವಧರ್ಮವನ್ನು ಬಿಡಿಸಿ ಅವರನ್ನು ಯುದ್ಧದಲ್ಲಿ ತೊಡಗಿಸಿದನು. ಈ ಕಲಿಯುಗದಲ್ಲಿ ಅದೆಷ್ಟು ಜನ ಬ್ರಾಹ್ಮಣರು ಸ್ತ್ರೀಯರೂ ಖಾಕೀ, ಕೋವಿಗಳನ್ನು ಹಿಡಿದು ಜೀವನವನ್ನು ಸಾಗಿಸುತ್ತಿದ್ದಾರೋ ಅಥವಾ ಜೀವನವನ್ನು ಕೊನೆಗೊಳಿಸಿದ್ದಾರೋ ಶ್ರೀಹರಿಗೆ ಗೊತ್ತು.

॥ ಪದ ॥ ಉದಕದೊಳಡಗಿದ । ಅಧಮನ ಸೆಳೆದು ।
ಗದಾಯುಧದಿಂದಲಿ । ಸದೆಬಡಿಯೇ ॥
ಗದಗದ ನಡುಗಿತು । ಹದಿನೆಂಟನಾಕ್ಷೋಹಿಣಿ ।
ಇದು ಏನು ಅಚ್ಚರಿ । ಗದಾಧರ ದಾಸಗೇ ॥ ೨೬ ॥

**ಶಬ್ದಾರ್ಥ:** ಉದಕದೊಳು = ನೀರಿನಲ್ಲಿ; ಅಡಗಿದ ಬಚ್ಚಿಟ್ಟುಕೊಂಡಿದ್ದ; ಅಧಮನ = ನೀಚನಾದ ದುರ್ಯೋಧನನನ್ನು; ಸೆಳದು = ಮೇಲಕ್ಕೆ ಎಳೆದು ತಂದು; ಗದಾಯುಧದಿಂದಲಿ = ಗದೆ ಎಂಬ ಆಯುಧದಿಂದ; ಸದೆಬಡಿಯೇ = ಸಂಹರಿಸಲು; ಗದಗದ ನಡುಗಿತು = ಹೆದರಿತು; ಹದಿನೆಂಟಕ್ಷೌಹಿಣಿ = ಕುರು + ಪಾಂಡವರ ಸೈನಿಕರು; ಏನು ಅಚ್ಚರಿ = ಆಶ್ಚರ್ಯವೇನೂ ಇಲ್ಲ; ಗದಾಧರ = ಪಿತೃಕಾರ್ಯ ಸಂದರ್ಭದಲ್ಲಿ ಚಿಂತಿತನಾದ ಭಗವದ್ರೂಪ = ವಿಷ್ಣು; ದಾಸಗೆ = ಈತನ ಸೇವಕನಾದ ಭೀಮಸೇನನಿಗೆ.

**ವಿಶೇಷಾರ್ಥ:** ಶ್ರೀಹರಿ (ಶ್ರೀಕೃಷ್ಣ), ವಾಯು (ಭೀಮಸೇನ)ಗಳ ಅನುಗ್ರಹಕ್ಕೆ ಪಾತ್ರರಾದ ಪಾಂಡವರು ಕುರುಕ್ಷೇತ್ರ ಯುದ್ಧದಲ್ಲಿ ಭಾಗಿಗಳಾಗಿದ್ದ ಅತಿರಥ ಮಹಾರಥರನ್ನು ಸದೆಬಡಿಯಲಾಗಿ ದುಷ್ಟ ಕುಲವು ನಿರ್ನಾಮವಾಯಿತು. ಉಳಿದ ಪ್ರಮುಖರೆಂದರೆ ದುರ್ಯೋಧನ ಅಶ್ವತ್ಥಾಮ, ಕೃಪಾಚಾರ್ಯ ಮತ್ತು ಕೃತಾವರ್ಮ ಇವರು.

ಇವರೆಲ್ಲರೂ ವೈಶಂಪಾಯನ ಸರೋವರದಲ್ಲಿ ಜಲ ಸ್ಥಂಭನ ಮಂತ್ರವನ್ನು ಏಳು ದಿನಗಳ ಪರಿಯಂತವಾಗಿ ಪಠಿಸಿ ಆ ಮಂತ್ರದ ಬಲದಿಂದ ಮೃತಿ ಹೊಂದಿದ್ದ ಕೌರವ ಪಕ್ಷದವರನ್ನೆಲ್ಲಾ ಪುನಃ ಬದುಕಿಸಿ ಪಾಂಡವರೊಡನೆ ಯುದ್ಧ ಹೂಡಲು ಹವಣಿಸಿದರು. ಈ ಜಲ ಸ್ಥಂಭನ ಮಂತ್ರವು ಇವರಿಗೆ ದೂರ್ವಾಸ ಮುನಿಗಳಿಂದ ಪ್ರಾಪ್ತವಾಗಿತ್ತು. ಈ ಮರ್ಮವನ್ನು ತಿಳಿದ ಪಾಂಡವರು ಭೀಮನ ಸಹಿತವಾಗಿ ವೈಶಂಪಾಯನ ಸರೋವರಕ್ಕೆ ಧಾವಿಸಿದರು. ಪಾಂಡವರನ್ನು ಕಂಡ ಕೂಡಲೇ ದುರ್ಯೋಧನನೊಬ್ಬನನ್ನು ಬಿಟ್ಟು ಉಳಿದವರು ಆ ಸರೋವರದಿಂದ ಓಡಿ ಹೋದರು.

ಈ ರಣಧೀರರು ದುರ್ಯೋಧನನೊಬ್ಬನನ್ನು ಮಾತ್ರ ಬಿಟ್ಟು ಯಾಕೆ ಓಡಿ ಹೋದರು? ಎಂದರೆ ಸಹಜವಾಗಿಯೇ ಇವರು ಪ್ರಾಣಭೀತಿಯಿಂದ ಓಡಿ ಹೋದರು.

ಎಂಬ ಅಯಥಾರ್ಥ ಜ್ಞಾನವು ದುರ್ಯೋಧನನಿಗೆ ಬರಲೆಂದು ಓಡಿಹೋದರು ಮತ್ತು ಮುಕ್ತಿಯೋಗ್ಯರಾದ ಇವರು ದುರ್ಯೋಧನನ ಅವಸಾನವನ್ನು ಅಪೇಕ್ಷಿಸಿ ಓಡಿ ಹೋದವರಂತೆ ತೋರಿದರು. ದುರ್ಯೋಧನನು ದುಷ್ಟನೇ ಆಗಿದ್ದುದರಿಂದ ಅವನನ್ನು ವಂಚಿಸಿ ಓಡಿ ಹೋದ ಇವರಿಗೆ ಸ್ವಾಮಿ ದ್ರೋಹ ದೋಷವು ತಟ್ಟಲಿಲ್ಲ ಭೀಮ ಪರಾಕ್ರಮಕ್ಕೆ ಇವರು ಭೀತರಾದುದು ಸಹಜವೇ ಸರಿ. ಜೀವಗಳ್ಳತನವು ಯೋಧರಿಗೆ ಭೂಷಣವಲ್ಲ. ಆದರೆ ದುರ್ಯೋಧನನ ಸಹವಾಸದಿಂದಲೇ ಅವರಿಗೆ ಅಂಥಾ ಸ್ವಾಮಿದ್ರೋಹ ಬುದ್ಧಿಯು ಹುಟ್ಟಿದ್ದು. ಅವರ ದುರ್ಬುದ್ಧಿಯು ದುಷ್ಟ ನಿಗ್ರಹದಲ್ಲಿಯೇ ಪರಿಯವಸಾನವಾದುದರಿಂದ ಇವರ ಸಾಧನಕ್ಕೆ ಅದು ಪ್ರತಿಬಂಧಕವಾಗಲಿಲ್ಲ.

ಸರಿ ಉಳಿದವನೊಬ್ಬನು ದುರ್ಯೋಧನನು ಮಾತ್ರ. ಅವನು ಜಲ ಸ್ತಂಭನ ಸಿದ್ಧಿಗಾಗಿ ವೈಶಂಪಾಯನ ಸರೋವರದಲ್ಲಿ ಜಲಾಂತರ್ಗಾಮಿಯಾದನು. ಈ ಸಂದರ್ಭದಲ್ಲಿ ಒಂದು ಕಥಾಂತರವು ಹೀಗೆ ಪ್ರಚಲಿತವಾಗಿದೆ.

ಖಳ ದುರ್ಯೋಧನನು ವೈಶಂಪಾಯನ ಸರೋವರವನ್ನು ಪ್ರವೇಶಿಸುವಾಗ ಅಲ್ಲೇ ಒಂದೆಡೆ ಕಟ್ಟೆಯ ಮೇಲೆ ಗಣಪತಿಯು ಕುಳಿತಿದ್ದನು. ಈತನನ್ನು ಕಂಡ ಆ ದುರ್ಯೋಧನನು "ಹೇ ಗಣಪ, ನಾನು ಈ ಸರೋವರದಲ್ಲಿ ಈಗ ಬಚ್ಚಿಟ್ಟುಕೊಳ್ಳುತ್ತಿದ್ದೇನೆ. ನೀನೇನಾದರೂ ನಾನು ಇಲ್ಲಿ ಇರುವುದನ್ನು ಭೀಮನಿಗೆ ತಿಳಿಸಿದರೆ ನಿನ್ನ ಹೊಟ್ಟೆಯನ್ನು ಒಡೆದು ಬಿಡುತ್ತೇನೆ ಎಂದು ಹೇಳಿ ಸರೋವರವನ್ನು ಪ್ರವೇಶಿಸಿದನು. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿಗೆ ಭೀಮನು ಬಂದು "ಹೇ ಗಣಪ, ನೀನು ಈಗ ಆ ದುರ್ಯೋಧನನು ಎಲ್ಲಿ ಇರುವನು ಎಂಬುದನ್ನು ನನಗೆ ತಿಳಿಸಬೇಕು. ಇಲ್ಲವಾದರೆ ನಿನ್ನ ಹೊಟ್ಟೆಯನ್ನು ಒಡೆದು ಬಿಡುತ್ತೇನೆ" ಎಂದು ಗರ್ಜಿಸಿದನು. ಆಗ ಪಾಪ! ಆ ಗಣಪತಿಯು ಏನು ಮಾಡಬೇಕು? ಹೇಳಿದರೆ ದುರ್ಯೋಧನನು ಹೊಟ್ಟೆಯನ್ನು ಒಡೆಯುತ್ತಾನೆ. ಹೇಳದಿದ್ದರೆ ಭೀಮನು ಹೊಟ್ಟೆಯನ್ನು ಒಡೆಯುತ್ತಾನೆ. ಏನು ಮಾಡಿದರೂ ನನ್ನ ಹೊಟ್ಟೆಗೆ ಪೀಕಲಾಟವು ಬಂತಲ್ಲಪ್ಪಾ ಎಂದು ಯೋಚಿಸಿದನು. ಆಗ ಗಣಪತಿಯು ಭಕ್ತ ವರನಾದುದರಿಂದ ಆತನಿಗೆ ಒಂದುಪಾಯವು ಹೊಳೆಯಿತು. ಅದೇನೆಂದರೆ ಬಾಯಿಂದ ಗಟ್ಟಿಯಾಗಿ ದುರ್ಯೋಧನನು ಎಲ್ಲಿದ್ದಾನೆ ಎಂಬುದು ನನಗೆ ಗೊತ್ತಿಲ್ಲ ಎಂದು ಅರಚುವುದು. ಕೈಸನ್ನೆಯಿಂದ ದುರ್ಯೋಧನನು ಅಡಗಿ ಕುಳಿತಿರುವ ಸ್ಥಳವನ್ನು ಸೂಚಿಸುವುದು. ಹೀಗೆ ಮಾಡಿದರೆ ಇಬ್ಬರಿಂದಲೂ ಪಾರಾಗಬಹುದೆಂದು ತಿಳಿದು ಯೋಚಿಸಿ ಗಟ್ಟಿಯಾಗಿ "ಭೀಮಪ್ಪಾ । ಆ ದುರ್ಯೋಧನನು ಇಲ್ಲಿಗೆ ಬಂದಿಲ್ಲ. ಇಲ್ಲಿಗೆ ಬಂದಿಲ್ಲ"ಎಂದು ಗಟ್ಟಿಯಾಗಿ ಕೂಗುತ್ತ ಕೈ ಬೆರಳಿನಿಂದ ದುರ್ಯೋಧನನು ಅಡಗಿದ್ದ ನಿರ್ದಿಷ್ಟವಾದ ಸ್ಥಳವನ್ನು ಸೂಚಿಸಿದನು.

ಇಲ್ಲಿ ನಾವು ತಿಳಿಯುವ ಅಂಶವೇನೆಂದರೆ ಸಚ್ಛಾಸ್ತ್ರವೇ ಭೀಮ. ದುಶ್ಶಾಸ್ತ್ರವೇ ದುರ್ಯೋಧನ. ಗಣಪತಿಯು ಶಬ್ದತತ್ತ್ವಾಭಿಮಾನಿಯು, ಗಣಪತಿಯ ಹೊಟ್ಟೆ ಎಂದರೆ ಶಬ್ದವೇ. ಭೀಮ, ದುರ್ಯೋಧನರಿಬ್ಬರ ಗುರಿ ಇದ್ದುದು ಶಬ್ದದ ಮೇಲೆಯೇ. ಸಚ್ಛಾಸ್ತ್ರ ಪರ (ಶಬ್ದ) ದಿಂದ ದುರ್ಯೋಧನಾದಿಗಳನ್ನು ಮೋಹಗೊಳಿಸಿ ನಾಶ ಮಾಡುವನು. ಇದು ಆಧ್ಯಾತ್ಮಪರವಾದ ಚಿಂತನೆಯು.

ಜಗದ್ವ್ಯಾಪ್ತನಾದ ಭೀಮನಿಗೆ ದುರ್ಯೋಧನನು ಅಡಗಿ ಕುಳಿತಿರುವುದು ಗೊತ್ತಿರಲಿಲ್ಲವೇ? ದುರ್ಯೋಧನಾದಿಗಳಲ್ಲಿ ಅಂತಃ ಪ್ರೇರಕರಾಗಿ ಸರೋವರದಲ್ಲಿ ಅಡಗಿಕುಳಿತುಕೊಳ್ಳುವಂತೆ ಪ್ರೇರಿಸಿದಾತನೇ ಭೀಮನು (ಮೂಲ ರೂಪದಿಂದ) ಹೀಗಿರುವಾಗ ಈತನು ಗಣಪತಿಯನ್ನು ಯಾಕೆ ಕೇಳಿದನು? ಎಂದರೆ ಹನುಮಂತನಾಗಿ ಸೀತೆಯನ್ನು ಹುಡುಕಿದಂತೆ ತಾನೊಬ್ಬ ಅಜ್ಞಾನಿ. ದುರ್ಯೋಧನನು ಅಡಗಿಕುಳಿತು ಕೊಂಡಿದ್ದು ಆ ಭೀಮನಿಗೆ ಗೊತ್ತಾಗಿರಲೇ ಇಲ್ಲ. ಗಣಪತಿಯು ಹೇಳಿದ ಮೇಲೆ ಇತರರಂತೆ ಭೀಮನಿಗೆ ಗೊತ್ತಾಯಿತು ಎಂಬ ಅಜ್ಞಾನವು ದೈತ್ಯರಿಗೆ ಬರಲಿ ಎಂದು ಭೀಮನು ಶ್ರೀಹರಿ ಪ್ರೀತ್ಯರ್ಥವಾಗಿ ಹಾಗೆ ಅಜ್ಞಾನಿಯಂತೆ ನಟಿಸಿದನು. ಭೀಮನ ಗದಾ ಪ್ರಹಾರಕ್ಕಿಂತಲೂ ಭಯಂಕರವಾದ ಪ್ರಹಾರವು ಈ ನಟನೆಯು ಈ ಅಜ್ಞಾನಕ್ಕೆ ಫಲವು ತಮಸ್ಸೇ ಆಗಿದೆ.

ದುರ್ಯೋಧನನು ಜಲ ಪ್ರವೇಶ ಮಾಡಿದ್ದಾಗ ಶ್ರೀಕೃಷ್ಣನ ಆಜ್ಞೆಯಂತೆ ಧರ್ಮರಾಜನು ಆ ದುಷ್ಟನನ್ನು ಬಹುಬಗೆಯಾಗಿ ನಿಂದಿಸಿ ಯುದ್ಧಕ್ಕೆ ಸನ್ನದ್ಧನಾಗೆಂದು ಆಹ್ವಾನವನ್ನಿತ್ತನು. ಆಗ ಬುಸುಗುಟ್ಟುತ್ತ ಹೊರ ಬಂದ ಆ

ಕಲಿಯು ಧರ್ಮಜನಿಗೆ ನೀನೇ ರಾಜ್ಯಭಾರವನ್ನು ಮಾಡು ನಾನು ವನ ಪ್ರವೇಶವನ್ನು ಮಾಡುತ್ತೇನೆ ಎಂದಾಗ ಧರ್ಮರಾಜನು "ಎಲೇ ಪಾಪಿ! ಹಿಂದೆ ನೀನು" **ಸೂಚ್ಯಗ್ರ ವೇಧಿತಾಂ ಪೃಥ್ವೀಂ । ದಾತುಂ ನೈಚ್ಛಃಕಥಂಚನ"** ಎಂದರೆ ಆಗ ಸೂಜಿ ಮೊನೆಗೆ ತಾಕುವಷ್ಟು ಮಣ್ಣನ್ನು ಸಹ ನಮಗೆ ನೀಡುವುದಿಲ್ಲವೆಂದು ಹೇಳಿ ಈಗ ಸಮಸ್ತ ಕುಲ, ಗುರು, ಬಾಂಧವರನ್ನು ಕೊಲ್ಲಿಸಿದ ತರುವಾಯ ರಾಜ್ಯವನ್ನು ನೀಡುತ್ತೇನೆಂದು ಹೇಳಿ ಜೀವಗಳ್ಳನಾಗಿ ವನಾಭಿಮುಖಾನಾಗಿರುವಿಯಾ? ಇಲ್ಲ. ನಿನ್ನನ್ನು ಸಂಹರಿಸಿಯೇ ನಾವು ರಾಜ್ಯವನ್ನು ಪಡೆಯುತ್ತೇವೆ" ಎಂದು ಮಾರುತ್ತರವನ್ನು ನೀಡಿದನು. ಆಗ ದುರ್ಯೋಧನನು ತಾನು ಯುದ್ಧೋನ್ಮುಖನಾಗಿ ಸಿದ್ಧನಾಗಿರುವುದನ್ನು ತಿಳಿಸಿದನು ಮತ್ತು ತನಗೆ ಈಗ ಯಾವ ಕವಚ, ಶಿರ ಸ್ತ್ರಾಣ ಆಯುಧಗಳೂ ಇಲ್ಲ. ನೀವು ಬಹಳ ಜನರಿರುವಿರಿ. ನಾನು ಏಕಾಂಗಿಯು" ಎಂದು ಹೇಳಿದಾಗ ಧರ್ಮರಾಜನು "ನಾವೆಲ್ಲರೂ ನಿನ್ನ ಮೇಲೆ ಬೀಳುವುದಿಲ್ಲ. ನಮ್ಮಲ್ಲಿ ನೀನು ಒಬ್ಬರನ್ನು ಗೆದ್ದರೂ ಸಾಕು ನಾವು ಸೋತಂತೆಯೇ ಇಗೋ ತೆಗೆದುಕೋ ಈ ಶಿರಸ್ತ್ರಾಣ, ಕವಚಗಳನ್ನು. ಈಗ ಕರೆ, ಯುದ್ಧಕ್ಕೆ ನಮ್ಮಲ್ಲಿ ಒಬ್ಬರನ್ನು" ಎಂದು ಹೇಳಿದಾಗ ದುರ್ಯೋಧನನು ಅಹಂಕಾರದಿಂದಲೇ ತನಗೆ ಎದುರಾಳಿ ಭೀಮನೇ. ಆತನೊಡನೆ ಕಾದಲು ನನಗೆ ಭೀಮನಲ್ಲಿರುವಂತಹ ಗದೆಯೇ ಬೇಕು" ಎಂದು ಹೇಳಿದನು. ತಕ್ಷಣವೇ ಧರ್ಮರಾಯನು ಕೌರವೇಂದ್ರನು ಬೇಡಿದ ಎಲ್ಲಾ ಯುದ್ಧ ಸಾಮಾಗ್ರಿಗಳನ್ನೂ, ಗದೆಯನ್ನೂ ಇತ್ತು ಯುದ್ಧ ಮಾಡೆಂದನು.

ಸರಿ, ಭೀಮ ದುರ್ಯೋಧನರ ಗದಾ ಯುದ್ಧವು ಪ್ರಾರಂಭವಾಯಿತು. ಪರಸ್ಪರರು ಹೋರಾಡಿದರು. ಗದಾಯುದ್ಧದ ನಿಯಮದಂತೆ ನಾಭಿಯಿಂದ ಕೆಳಗೆ ಗದಾ ಪ್ರಹಾರವನ್ನು ಮಾಡಬಾರದು. ಆದರೆ ಭೀಮನು ದುರ್ಯೋಧನನ ಊರು ಭಂಗ ಮಾಡುವೆನೆಂದು ಮೊದಲೇ ಪ್ರತಿಜ್ಞೆಯನ್ನು ಮಾಡಿಬಿಟ್ಟಿದ್ದನು. ಆತತಾಯಿಯಾದವನ್ನು ಅಧರ್ಮದಿಂದಲಾದರೂ ಸರಿ. ಸಂಹರಿಸಿದರೆ ಅದು ಧರ್ಮವೇ ಆಗುತ್ತದೆ. ತಮೋ ಯೋಗ್ಯರಲ್ಲಿ ಧರ್ಮ ಯುದ್ಧವು ಉಚಿತವಲ್ಲ. ಮೇಲಾಗಿ ಗದಾ ಪ್ರಹಾರ ಸಮಯದಲ್ಲಿ ಆಘಾತವನ್ನು ತಪ್ಪಿಸಿಕೊಳ್ಳಲು ದುರ್ಯೋಧನನು ತನ್ನ ದೇಹವನ್ನು ತಲೆ ಕೆಳಮಾಡಿ ಕಾಲುಗಳನ್ನು ಮೇಲೆ ಮಾಡಿದುದರಿಂದ ಭೀಮನ ಪ್ರಹಾರವು ದುರ್ಯೋಧನನ ಊರುಗಳ ಮೇಲೆ ಆದುದರಿಂದ ದೋಷಕ್ಕೆ ದುರ್ಯೋಧನನೇ ಭಾಗಿಯಾದನು.

ಹಿಂದೆ ಉತ್ತರ ಗೋಗ್ರಹಣ ಕಾಲದಲ್ಲಿ ಕೀಚಕನ ಮರಣ ವಾರ್ತೆಯನ್ನು ಕೇಳಿದ್ದ ಈ ದುರ್ಯೋಧನನು ಭಾರತದ ಮಹಾ ಪ್ರತಾಪಶಾಲಿಗಳಾದ ನಾಲ್ವರಲ್ಲಿ ಮೊದಲನೆಯ ಸ್ಥಾನದಲ್ಲಿ ಭೀಮನನ್ನು ಗುಣಿಸಿದ್ದನು. ಈ ನಾಲ್ವರಲ್ಲಿ ತಾನೊಬ್ಬನು ಎಂದೂ ತಿಳಿದಿರಲಿಲ್ಲ. ಈ ಯಥಾರ್ಥವಾದ ಜ್ಞಾನದ ನಿಮಿತ್ತವಾಗಿ ಭೀಮನು ಒಂದೇ ಏಟಿಗೆ ದುರ್ಯೋಧನನನ್ನು ಸಂಹರಿಸಬಲ್ಲವನಾಗಿದ್ದರೂ ಅದರ ಬದಲಿಗೆ ದುರ್ಯೋಧನನು ಬೀಸಿದ ಗದಾದಂಡದಿಂದ ಜರ್ಝರಿತನಾದವನಂತೆ ನಟಿಸಿದನು. ಆಗ ದುರ್ಯೋಧನನು ಭೀಮನಿಗಿಂತಲೂ ತಾನೇ ಬಲಾಢ್ಯನೆಂದು ಭಾವಿಸಿ ಬೊಬ್ಬಿರಿದನು. ಅಲ್ಲಿಗೆ ಅಯಥಾರ್ಥ ಜ್ಞಾನದಿಂದ ಇವನ ಪುಣ್ಯವು ನಷ್ಟವಾಯಿತು. ಮರುಕ್ಷಣದಲ್ಲೇ ಭೀಮನು ಋಷಭ ಸೂಕ್ತವನ್ನು ಪಠಿಸುತ್ತ ತನ್ನ ಗದೆಯನ್ನು ದುರ್ಯೋಧನನ ವಕ್ಷಸ್ಥಳಕ್ಕೆ ಅಪ್ಪಳಿಸಿದನು. ಆಗ ಕುಟಿಲಮತಿಯಾದ ದುರ್ಯೋಧನನು ತನ್ನ ಉದರ ರಕ್ಷಣೆಗಾಗಿ ಊರನ್ನು ಒಡ್ಡಿದನು. ಅಂದರೆ ತಲೆಕೆಳಕಾಗಿ ಲಾಗವನ್ನು ಹಾಕಿದನು. ತಕ್ಷಣವೇ ಆ ಗದಾ ಪ್ರಹಾರವು ದುರ್ಯೋಧನನ ತೊಡೆಗಳನ್ನು ನುಚ್ಚು ನೂರು ಮಾಡಿಬಿಟ್ಟಿತು. ತರುವಾಯ ದುರ್ಯೋಧನನು ಗತಪ್ರಾಣನಾಗಿ ಭೂಮಿಗೆ ಒರಗಿದನು. ಆಗ **"ಮೋದೇತ**

**ಸಾಧುರಪಿ ವೃಶ್ಚಿಕ ಸರ್ಪ ಹತ್ಯಾಂ"** ಎಂಬಂತೆ ಅತ್ಯಂತ ಸಂತೋಷಭರಿತರಾದ ದೇವತೆಗಳು ಗಗನದಲ್ಲಿ ನಿಂತು ಆನಂದಾಶ್ರುಗಳೆಂಬಂತೆ ಪುಷ್ಪವೃಷ್ಟಿಯನ್ನು ಸುರಿಸಿದರು. ಹದಿನೆಂಟು ಅಕ್ಷೋಹಿಣಿ ಸೈನ್ಯಕ್ಕೆ ಭಯಂಕರವಾಗಿದ್ದ ಮಹಾ ಗದಾ ಯುದ್ಧವು? ಭೀಮಸೇನನಿಗೆ ಅದು ಒಂದು ತೃಣವಾಗಿತ್ತೇ ಹೊರತಾಗಿ ಬೇರೆಯಲ್ಲ. ಸಕಲ ಜೀವರಾಶಿಗಳು ಯಮಧರ್ಮನಿಂದ ಕ್ಷಯವಾಗುತ್ತವೆ. ಆದರೆ ಯಮನು ನಿಮಿತ್ತ ಮಾತ್ರ. ಯಮನಲ್ಲಿ ಅಂತರ್ಯಾಮಿಯಾಗಿ ಭೂತ ಕ್ಷಯ ಮಾಡುವವನು ವಾಯುದೇವರೇ. ಆ ದೇವನಿಗೆ ನಿಯಾಮಕನು ಗದಾಧರನು, ಈತನು ವಾಯು ದೇವರ ದ್ವಾರ ಸಕಲ ಜೀವರನ್ನು ತನ್ನ ಪಾದಕ್ಕೆ ಸೇರಿಸಿಕೊಳ್ಳುತ್ತಾನೆ. ಹೀಗೆ ಗದಾಧರ ದಾಸನಾದ ವಾಯುದೇವರಿಗೆ ಕುರುಸೈನ್ಯ ಹನನ ಮಾಡಿದ ಕಾರ್ಯ ದೊಡ್ಡದೇನೂ ಆಗಿರಲಿಲ್ಲ.

ತರುವಾಯ ಪಾಂಡವರು ಹಸ್ತಿನಾಪುರದಲ್ಲಿ ಪಟ್ಟಾಭಿಷಿಕ್ತರಾಗಿ ಧರ್ಮದಿಂದ ರಾಜ್ಯ ಪರಿಪಾಲನೆಯನ್ನು ಮಾಡಿದರು. ದುಷ್ಟರಾದ ಕೌರವರನ್ನು ಸಂಹರಿಸಿದುದರಿಂದ ಇವರಿಗೆ ಯಾವ ಬಂಧು ಹತ್ಯಾ ದೋಷವೂ ತಾಕಲಿಲ್ಲ. ಬದಲಿಗೆ ಪುಣ್ಯವೇ ಬಂದಿತು. ಆದರೂ ಧರ್ಮರಾಯನು ಲೋಕ ಶಿಕ್ಷಣಾರ್ಥವಾಗಿ ಅಶ್ವಮೇಧಯಾಗವನ್ನು ಮಾಡಿ ಶ್ರೀಹರಿಗೆ ಅರ್ಪಿಸಿ ಕೃತಾರ್ಥನಾದನು. ಮುಂದೆ ಈ ಪಾಂಡವರ ವಂಶವು ಕ್ಷೇಮಕಾಂತರಾಜನ ಪರಿಯಂತವಾಗಿ ಅವಿಚ್ಛಿನ್ನವಾಗಿ ಸಾಗಿ ಬಂದಿತು.

ಖಳ ದುರ್ಯೋಧನನು ತನ್ನ ಅವಸಾನ ಪೂರ್ವದಲ್ಲಿ ಧರ್ಮರಾಯನಿಗೆ ರಾಜ್ಯವನ್ನು ಬಿಟ್ಟು ಕೊಟ್ಟು ವನಕ್ಕೆ ತೆರಳುತ್ತೇನೆ ಎಂದು ಹೇಳಿದ್ದು ಪಶ್ಚಾತ್ತಾಪರಿಂದ ಅಲ್ಲ. ಬದಲಿಗೆ ನೀಚಾತಿ ನೀಚನಾದ ತನ್ನಲ್ಲಿ ಪಾಂಡವರು ಅನುಕಂಪವನ್ನು ತೋರಿದರೆ ಸಾಕು. ಅಷ್ಟು ಮಾತ್ರದಿಂದಲೇ ಅವರನ್ನು ಸಾಧನ ಭ್ರಷ್ಟರನ್ನಾಗಿ ಮಾಡುವಲ್ಲಿಯಾದರೂ ತಾನು ಜಯಶೀಲನಾಗಬೇಕೆಂದು ಹಾಗೆ ಹೇಳಿದನು. ಇದು ಸಾಧನ ದೃಷ್ಟಿಯಲ್ಲಿ ಯುದ್ಧದ ಜಯಕ್ಕಿಂತಲೂ ಬಲವಾದ ಜಯವೆನಿಸುತ್ತಿತ್ತು. ಅಸದುಪಾಸನೆಯೇ ಕಲಿಗೆ ತಕ್ಕ ಐಶ್ವರ್ಯ. ಆದರೆ ಮುಕ್ತಿ ಯೋಗ್ಯರಾದ ಪಾಂಡವರು ಅವನ ಕುಟಿಲ ತಂತ್ರಕ್ಕೆ ಮರುಳಾಗದೆ ಅವನನ್ನು ಯುದ್ಧದಲ್ಲಿಯೇ ಸಂಹರಿಸಿ ಶ್ರೀಹರಿಯ ಪ್ರೀತಿಗೆ ಪಾತ್ರರಾದರೆಂದು ತಿಳಿಯಬೇಕು. ದುಷ್ಟರಲ್ಲಿ ತೋರುವ ಅನುಕಂಪವು ಮಹಾಪಾಪಕರವಾದುದು. ಇದನ್ನು ಈಶಾವಾಶ್ಯೋಪನಿಷತ್ತು ಹೀಗೆ ಹೇಳುತ್ತದೆ.

**॥ಉ॥ ಅಂಧಂತಮಃ ಪ್ರವಿಶ್ಯಂತಿ। ಯೇ ಅವಿದ್ಯಾಮುಪಾಸತೆ ॥**
**ತತೋಭೂಯ ಇವತೇತಮೋಯಾ ಉವಿದ್ಯಯಾಗಂ ರತಾಃ ॥ ಉ॥**
**॥ಭಾ॥ ಅನ್ಯಥೋಪಾಸಕಾಯೇತು । ತಯೋಂಧಂ ಯಾಂತ್ಯಸಂಶಯಃ ॥**
**ತತೋಽಧಿಕಮಿವ ವ್ಯಕ್ತಾಂ। ಯಾಂತಿತೇಷಾಮನಿಂದಕಾಃ ॥**

**ಅಯಥಾರ್ಥಸ್ಯ ನಿಂದಾಚ ಯೇ ವಿದುಃ ಸಹ ಸಜ್ಜನಾಃ ॥**

ಎಂದರೆ ಇದರ ಭಾವಾರ್ಥವು ಹೀಗಿದೆ" ಯಾರು ಧರ್ಮ ವಿರುದ್ಧವಾದ ಕಾರ್ಯವನ್ನು ಮಾಡುತ್ತಾರೋ ಅವರಿಗೆ ತಮಸ್ಸಾಗುತ್ತದೆ. ಅಂಥಾ ಧರ್ಮ ದ್ರೋಹಿಗಳನ್ನು ನಿಗ್ರಹಿಸದಿದ್ದರೆ ಅವರಿಗಿಂತಲೂ ಹೆಚ್ಚಿನ ತಮಸ್ಸು ಇವರಿಗಾಗುತ್ತದೆ" ಎಂದು ಇದರ ಅರ್ಥ. ಆದ್ದರಿಂದ ಅತಿರೋಹಿತ ವಿಜ್ಞಾನಿಯಾದ ಭೀಮಸೇನನು ಆ ಕಲಿಯ

ಅಂಶ ಸಂಭೂತನನ್ನು ನಿಷ್ಕರುಣೆಯಿಂದಲೇ ಸಂಹರಿಸಿದನು. ಈ ದುರ್ಯೋಧನನು ಯುದ್ಧ ಪೂರ್ವದಲ್ಲಿ ನೂರು ವರ್ಷಗಳ ಕಂದಾಯವನ್ನು ಪ್ರಜೆಗಳಿಂದ ಮುಂಗಡವಾಗಿಯೇ ಪಡೆದುಕೊಂಡು ಬಿತ್ತನೆಗಾಗಿ ಎಂದು ಒಂದೂ ಹಸಿಕಾಳು-ಕಡಿ-ಧಾನ್ಯಗಳಿರದಂತೆ ಹುರಿಸಿಟ್ಟು ಬಿಟ್ಟಿದ್ದನಂತೆ ಪಾಂಡವರು ಗೆದ್ದರೆ ಅದ್ಹೇಗೆ ಅವರು ರಾಜ್ಯಭಾರವನ್ನು ಮಾಡುತ್ತಾರೋ ಮಾಡಲಿ ಎಂದು. ಇಂಥಾ ದುರ್ಯೋಧನನ ಮತಿ ಸಂತತಿಯವರು ಇಂದಿಗೂ ಇಲ್ಲವೆನ್ನುವಂತಿಲ್ಲ. ರೂಪಾಂತರ, ಕಾಯಾಂತರಗಳಿಂದ ತುಂಬಿ ತುಳುಕುತ್ತಿದ್ದಾರೆ. ಧರ್ಮ ರಾಯನ ಧರ್ಮಬುದ್ಧಿಯಿಂದಲೂ, ಸೂರ್ಯ ಚಂದ್ರರಲ್ಲಿ ಅಂತರ್ಯಾಮಿಗಳಾಗಿರುವ ಭೀಮ-ದ್ರೌಪದಿಯರ ದಯದಿಂದಲೂ, ಶ್ರೀಕೃಷ್ಣ ಪರಮಾತ್ಮನ ಅನುಗ್ರಹ ವಿಶೇಷದಿಂದಲೂ ಭರ್ಜಿತವಾದ ಔಷಧಿ (ಬೀಜಾದಿ) ಗಳು ಪುನಃ ಅಂಕುರಿಸಿದವು.

॥ ಪದ ॥ ಚಂಡ ಪ್ರಚಂಡ ಭೈ । ರುಂಡ ರಾಯರ ಗಂಡ।
ಪಂಡಿತಾಗ್ರಣಿ ಗದಾ । ದಂಡ ಮಾರ್ತಾಂಡ॥
ಪುಂಡರೀಕಾಕ್ಷನಡಿ । ಮಂಡಿತ ಕರದಂಡ ।
ತೊಂಡನೆನಿಪ ಉ । ದ್ದಂಡ ಅಖಂಡ ॥ ೨೭ ॥

**ಶಬ್ದಾರ್ಥ:** ಚಂಡ = ಪ್ರಕಾಶ; ಪ್ರಚಂಡ = ಮಹಾ ಪ್ರತಾಪಶಾಲಿ; ಭೈರುಂಡ = ಗಜ ಸಿಂಹಗಳನ್ನೇ ನುಂಗವ ಎರಡು ತಲೆಯ ಪಕ್ಷಿ = ಮಹಾ ಪರಾಕ್ರಮ ಸಂಕೇತ; ರಾಯರ ಗಂಡ = ರಾಜಾದಿಗಳಿಗೆ ರಾಜ; ಪಂಡಿತಾಗ್ರಣಿ = ಜ್ಞಾನಿ ಕುಲದಲ್ಲಿ ಅಗ್ರಗಣ್ಯ = ಶ್ರೇಷ್ಠ; ಗದಾದಂಡ = ಗದೆಯನ್ನೇ ಆಯುಧವನ್ನಾಗಿ ಉಳ್ಳವನು; ಮಾರ್ತಾಂಡ = ಸೂರ್ಯ; ಪುಂಡರೀಕಾಕ್ಷನ = ಶ್ರೀಹರಿ = ಕೃಷ್ಣನ; ಅಡಿ = ಪಾದಗಳಿಗೆ; ಮಂಡಿತನೆನಿಪ = ಅರ್ಪಿಸಿದವುಗಳಾದ; ಕರದಂಡ = ಬಾಹುಗಳೆಂಬ ದಂಡಗಳನ್ನು (ಕರಕಮಲಗಳನ್ನು ಹೊಂದಿದವನಾದ) ತೊಂಡ ನೆನಿಪ = ಸೇವಕನೆನಿಸಿರುವ; ಉದ್ದಂಡ = ಶ್ರೇಷ್ಠನಾದ (ಹರಿಭಕ್ತ); ಅಖಂಡ = ಬ್ರಹ್ಮಾಂಡ ವಿಗ್ರಹನೆನಿಸಿ ಮೂಲಾವತಾರಗಳಿಗೆ ಭೇದಗಳಿಲ್ಲದವನಾದ ಭೀಮಸೇನನು.

**ಭಾವಾರ್ಥ:** ಶ್ರೀಹರಿ, ರಮಾದೇವಿಯ ತರುವಾಯ ಅತ್ಯಂತ ಜ್ಞಾನ, ಬಲ, ಐಶ್ವರ್ಯಾದಿಗಳಿಂದ ಭೂಷಿತನಾದ ದೇವತೆ ಎಂದರೆ ವಾಯುದೇವರೇ ! ದೇವ, ಮಾನವ ದಾನವ ಸಂಕುಲದಲ್ಲಿ ವಾಯುವಿಗೆ ಸಮಾನರಾಗಲೀ ಅಧಿಕರಾಗಲೀ ಯಾರೂ ಇಲ್ಲ. ತತ್ರಾಪಿ ಈ ವಾಯುದೇವನು ಭೀಮಾವತಾರ ಕಾಲದಲ್ಲಿ, ಅಂದರೆ ದ್ವಾಪರಯುಗದಲ್ಲಿ ಅತ್ಯಂತವಾಗಿ ಬಲ ಕಾರ್ಯವನ್ನು ಪ್ರಕಟಿಸಿರುತ್ತಾನೆ. ಮಹಾ ಪ್ರತಾಪಶಾಲಿಯಾಗಿ, ವೈರಿಗಜಮಸ್ತಕಾಂಕುಶನಾಗಿ ಅಜೇಯನಾಗಿ ಜೃಂಭಿಸಿರುತ್ತಾನೆ. ರಾಜಾಧಿರಾಜರುಗಳನ್ನು ರಕ್ಷಿಸಿ, ದುಷ್ಟ ಕ್ಷತ್ರಿಯ ಕುಲವನ್ನು ಶಿಕ್ಷಿಸಿರುತ್ತಾನೆ. ಸಕಲ ರಾಜರುಗಳಿಗೆ ರಾಜ್ಯ ಪದವಿಯ ಪ್ರಾಪ್ತಿಯು ಈತನಿಂದಲೇ ಇನ್ನು ಪಾಂಡಿತ್ಯದಲ್ಲಿ ಋಜುಪುಂಗವನೆನಿಸಿ ವಿದ್ಯಾಭಿಮಾನಿ ದೇವತೆಗಳಾದ ವಾಣಿ ಭಾರತೀದೇವಿಯರಿಗೆ ಜ್ಞಾನಪ್ರದನಾಗಿ ಇರುವರು ಎಂದ ಮೇಲೆ ಈತನನ್ನು ಪಂಡಿತಾಗ್ರಣಿ ಎಂದು ಬಣ್ಣಿಸಿರುವಲ್ಲಿ ಆಶ್ಚರ್ಯವೇನಿದೆ?

"ಜ್ಞಾನಾಯು ರೂಪಕನು ನೀನಹುದು ವಾಣಿ ಪಂ ।
ಚಾನನಾದ್ಯಮರರಿಗೆ ಪ್ರಾಣದೇವ ॥
ದೀನ ವತ್ಸಲನೆಂದು ನಾನಿನ್ನ ಮೊರೆಹೊಕ್ಕೆ ।
ದಾನವಾರಣ್ಯ ಕೃಶಾನು ಸರ್ವದ ಎನ್ನ ॥ ೪ ॥
ಅಪಮೃತ್ಯು ಪರಿಹರಿಸೊ, ಅನಿಲ ದೇವ " ॥ ಎಂದರು ಶ್ರೀ ಜಗನ್ನಾಥದಾಸರು.

ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು ಖಿಲ ವಾಯು ಸ್ತುತಿಯಲ್ಲಿ
"ಭೀಮಸೇನ ಸಮೋನಾಸ್ತಿ । ಸೇನೆಯೋರುಭಯೋರಪಿ ॥
ಪಾಂಡಿತ್ವೇಚ ಪಟುತ್ವೇಚ । ಶೂರತ್ವೇಚ ಬಲೇಪಿಚ ॥ "

ಎಂದು ಸಂಗ್ರಹವಾಗಿ ನಿರೂಪಿಸಿರುತ್ತಾರೆ.

ಕುರು ಪಾಂಡವರ ಸೇನೆಗಳಲ್ಲಿ ಭೀಮನಂಥಾ ಪರಾಕ್ರಮಶಾಲಿಗಳು ಯಾರೂ ಇರಲಿಲ್ಲ. ಹಿಂದೆಯಾಗಲೀ, ಇಂದು, ಮುಂದೆಯಾಗಲೀ ಈತನು ಈತನೇ ಹೊರತಾಗಿ ಈತನಂಥವರು ಯಾರೂ ಇಲ್ಲ. ಮುಕ್ತಿಯೋಗ್ಯರಿಗೆ ಅಪರೋಕ್ಷ ಜ್ಞಾನವನ್ನೂ, ರಾಜಸರಿಗೆ ಮಿಶ್ರ (ಸಂಸ್ಕೃತಿ) ಜ್ಞಾನವನ್ನೂ, ದೈತ್ಯರಿಗೆ ಮಿಥ್ಯಾ ಜ್ಞಾನವನ್ನೂ ಈಯುತ್ತಿರುವ ಈ ವಾಯು ಸಂಜಾತನಿಗೆ ಯಾರನ್ನು ಸಮನೆಂದು ಹೇಳಲಾದೀತು? ಏಕಾಂತ ಭಕ್ತನೆನಿಸಿ ಸದಾಕಾಲವೂ ಶ್ರೀಹರಿಯ ಚಿಂತನೆಯಲ್ಲಿಯೇ ಕಾಲ ಕಳೆಯುತ್ತಿರುವ ಈ ವಾಯು ದೇವರಿಗೆ ಯಾರು ಪಾಠವನ್ನು ಹೇಳಿ ಕೊಡಲಾದೀತು? ನಮ್ಮ ಶಬ್ದ ಸಂಪತ್ತು ಈತನನ್ನು ಪಂಡಿತಾಗ್ರಣಿ ಎಂದಷ್ಟೇ ಕರೆಯಲು ಮಾತ್ರ ಸಾಧ್ಯವಾದೀತು.

ವಾಯುದೇವರ ಆಯುಧವು ಗದೆಯು. ಆದರೆ ಆತನಿಗೆ ಈ ಗದೆಯ ಅವಶ್ಯಕತೆ ಇದೆಯೇ? ಎಂಬುದು ಪ್ರಶ್ನೆ. ಅಸುರರಿಗೆ ಹರಿವಿಸ್ಮೃತಿಯನ್ನು ನೀಡುತ್ತಿರುವ ಈತನ ಪ್ರೇರಕಾಸ್ತ್ರಕಿಂತಲೂ ಗದೆಯು ದೊಡ್ಡದೇನಲ್ಲ. ದುರ್ಯೋಧನನಿಗೆ ಗದೆಯು ದೊಡ್ಡದೆನಿಸಿತ್ತೇ ಹೊರತಾಗಿ ಭೀಮನಿಗಲ್ಲ. ಗದೆಯೇ ಮಹಾಯುಧವು. ಅದರ ಸಹಾಯದಿಂದಲೇ ಭೀಮನು ದುರ್ಯೋಧನನನ್ನು ಕೊಂದನು ಎಂಬ ಅಯಥಾರ್ಥ ಜ್ಞಾನವು ಅಸುರರಿಗೆ ಬರಲಿ ಎಂದೂ ಮತ್ತು ಆ ಗದೆಯೇ ಇತರ ದೇವತೆಗಳಿಗೆ ಭೀಮನು ಮೂಲಶಕ್ತಿಯನ್ನು ವಹಿಸದೇ ಈ ಗದಾಪ್ರಹಾರ ಲೀಲಾ ಮಾತ್ರದಿಂದಲೇ ಅಸುರರನ್ನು ಸಂಹರಿಸಬಲ್ಲನೆಂಬ ಜ್ಞಾನವನ್ನು ಇತ್ತು ಕಾಪಾಡಲೂ ಹಾಗೆ ಈತನು ಈ ಅವತಾರದಲ್ಲಿ ಗದಾಧಾರಿಯಾಗಿ ವಿಹರಿಸಿದನು. ವಾಯುದೇವನು ಸೂರ್ಯಮಂಡಲ ಮಧ್ಯವರ್ತಿಯು ಈತನೇ ಮಾರ್ತಾಂಡನೆನಸಿ ಜಗತ್ತಿಗೆ ಬೆಳಕನ್ನು ನೀಡುತ್ತಿರುವನು ಈತನ ದೆಶೆಯಿಂದಲೇ ಸೂರ್ಯನಿಗೆ ಸೂರ್ಯನೆಂಬ ಹೆಸರು ಬಂದಿರುವುದು.ಸೂರ್ಯನಿಂದಾಗುತ್ತಿರುವ ಸಕಲ ವ್ಯಾಪಾರಗಳು ಈತನ ಪ್ರೇರಣೆಯಿಂದಲೇ ಆಗುತ್ತಿವೆ.

ಭೀಮಸೇನನು ಸದಾ ಶ್ರೀಹರಿಯ ಪಾದ ಕಮಲಗಳಿಗೆ ಅರ್ಪಿತವಾದ ತೋಳು ದಂಡಗಳನ್ನು ಉಳ್ಳವನಾಗಿದ್ದಾನೆ. ಅಂದರೆ ಅಧ್ಯಾತ್ಮಿಕವಾಗಿ ಪುಂಡರೀಕವೆಂದರೆ ಕಮಲವು. ಕಮಲದ ಮೊಗ್ಗು ಎನಿಸಿರುವ 'ಓಂ' ಕಾರವು ಅರಳುತ್ತ ಸಾಗಿ ಸಕಲ ವೇದಾರ್ಥಗಳನ್ನು ವಿಕಸಿಸುತ್ತದೆ. ಅಂಥಾ ಪರಮಾತ್ಮನ 'ಅಡಿ' ಎಂದರೆ 'ಪಾದ', ಪಾದವೆಂದರೆ ವೇದ ಪಂಕ್ತಿಗಳು. ಇಂಥಾ ವೇದ ಪಂಕ್ತಿಗಳನ್ನೇ ಸರಿಯಾಗಿ ಅರ್ಥಮಾಡಿಕೊಂಡು ಇತರರಿಗೆ (ದಂಡ) ಬೋಧಿಸುವ ಕಾರ್ಯದಲ್ಲಿಯೇ ನಿರತವಾಗಿರುವ ದಾಸ ಶ್ರೇಷ್ಠ, ಗುರುಪುಂಗವ ಜೀವೋತ್ತುಮನಾದ ಭೀಮಸೇನನಿಗೆ ಶ್ರೀಹರಿ, ರಮಾ ವಿನಃ ಮತ್ಯಾರು ತಾನೇ ಹಿರಿಯರು? ಸದಾ ಹರಿಪರವಾದ ಜ್ಞಾನ ಉಳ್ಳವನು ಎಂದು ಅರ್ಥ.

ಇನ್ನು ಶ್ರೀವಾಯುದೇವರು ಹೇಗೆ ಅಖಂಡರು? ಎಂದರೆ ಬ್ರಹ್ಮಾಂಡದಲ್ಲಿ ಖಂಡ, ತುಂಡವಾಗಿರುವ ಇಪ್ಪತ್ನಾಲ್ಕು ತತ್ವಗಳಿಗೆ ಅಭಿಮನಿಗಳಾದ ತತ್ವಾಭಿಮಾನಿ ದೇವತೆಗಳು ಪ್ರತಿಯೊಬ್ಬರೂ ಪ್ರಪ್ರತ್ಯೇಕವಾಗಿ ತಮ್ಮ ತಮ್ಮ ಏಕೈಕ ತತ್ವಕಾರ್ಯಗಳನ್ನು ಮಾತ್ರ ನಿರ್ವಹಿಸುತ್ತಿದ್ದಾರೆ. ಇವರೆಲ್ಲರಲ್ಲಿಯೂ ವಾಯುದೇವನು ತಾನೇ ಒಬ್ಬನು. ಇಪ್ಪತ್ನಾಲ್ಕು (ಮಾತ್ರವಲ್ಲ ಮೂರು ರೂಪ, ಇಪ್ಪತ್ನಾಲ್ಕುರೂಪ, ಮೂರು ಕೋಟಿ ರೂಪ, ಒಂಭತ್ತು ಕೋಟಿ ರೂಪ ಮತ್ತು ಅನಂತ) ರೂಪಗಳಿಂದ ಯುಕ್ತನಾಗಿ ಬ್ರಹ್ಮಾಂಡದ ವ್ಯಾಪರವನ್ನು ಮಾಡುತ್ತಿರುವನು. ಹೀಗೆ ಒಂದು ಬ್ರಹ್ಮಾಂಡ ಪರಿಮಿತವಾದ ಸಕಲ ವ್ಯಾಪಾರಗಳನ್ನು ಅನಂತ ರೂಪಗಳಿಂದ ವಾಯು ದೇವರು ಮಾಡುತ್ತಿದ್ದರೂ ಅವರ ಮೂಲಕ್ಕೂ, ಅವತಾರಗಳಿಗೂ, ಅಣು ಮಹಜ್ಜೀವಾಂತರ್ಯಾಮಿಯಾದ ರೂಪಗಳಿಗೂ, ಒಬ್ಬ ಜೀವನ ತನು ಚತುಷ್ಟಯಗತ ಪವಮಾನ, ಸೂತ್ರ, ಸೂಕ್ಷ್ಮ, ಮಾತರೀಶ್ವವೆಂಬ ರೂಪಗಳಿಗೂ, ಮುಖ್ಯಪ್ರಾಣರೂಪಕ್ಕೂ ಪರಸ್ಪರ

ಭೇದವಿಲ್ಲ. ಒಂದು ಬ್ರಹ್ಮಾಂಡಗತ ಸಂಪೂರ್ಣವಾದ ಖಂಡಾಃ ಖಂಡ ಸಮಸ್ತ ಭಗವದ್ರೂಪಗಳನ್ನು ತಾನೂ ಖಂಡಾ ಖಂಡ ರೂಪಗಳಿಂದ ಸೇವೆಯನ್ನು ಮಾಡಿ ಆತನಿಗೆ ನಿರ್ವ್ಯಾಜ ಭಕ್ತಿಯಿಂದ ಅರ್ಪಿಸುವವನಾಗಿದ್ದಾನೆ. ಜೀವನ ಗಾತ್ರವು ಅಣುರೂಪವಾಗಿದ್ದು ಆ ಬ್ರಹ್ಮ ತೃಣಜೀವ ಪರಿಯಂತವಾಗಿ ಎಲ್ಲರ ಗಾತ್ರವೂ ಒಂದೇ ಆಗಿದ್ದರೂ ಸಾಮಾನ್ಯ ಜೀವನ ತೇಜೋ ವ್ಯಾಪ್ತಿಯು ದೇಹ ಅಥವಾ ತತ್ವ ಪರಿಮಿತವಾಗಿರುತ್ತದೆ. ಆದರೆ ವಾಯು ದೇವರ ತೇಜೋ ವ್ಯಾಪ್ತಿಯು ಬ್ರಹ್ಮಾಂಡ ಪರಿಯಂತವಾಗಿರುತ್ತದೆ. ನಿರಂಶ ಜೀವರಿಗೆ ಸಾಂಶತ್ವವೇ ಇಲ್ಲ. ಇನ್ನು ಸಾಂಶ ದೇವತೆಗಳು ತಮ್ಮ ತತ್ವ ಕಾರ್ಯಗಳನ್ನು ನಿರ್ವಹಿಸುತ್ತಿರುವಾಗ ಅವರ ಅಂಶಾಂಶಗಳಿಗೂ ಅವರ ಮೂಲರೂಪಕ್ಕೂ ನ್ಯೂನಾಧಿಕ್ಯತೆಗಳು ಇರುತ್ತವೆ. ಆದರೆ ವಾಯುದೇವನಿಗೆ ಈ ಬಗೆಯಾದ ವಿಕಾರತ್ವಗಳಿಲ್ಲ. ಇತರ ದೇವತೆಗಳು ಏಕೈಕ ತತ್ವ ಪತಿಗಳೇ ಹೊರತಾಗಿ 'ವಿಶ್ವ' ವ್ಯಾಪಕರಲ್ಲ. ಇವರಲ್ಲಿ ವಾಯುದೇವರ ಪ್ರೇರಕತ್ವವು ಉಂಟು. ವಾಯುದೇವರಿಗೆ ಇವರ ಪ್ರೇರಕತ್ವವು ಇಲ್ಲ. "ಸುಪರ್ಣಾಧ್ಯಧಿಕ ತತ್ವಜ್ಞಾನಾಯ। ತದಭಿಮಾನ ವರ್ಜಿತ ಗುಣ ಪೂರ್ಣಾಯ ॥ ವಾಯುಗದ್ಯ" ಎಂದರು ॥ ಶ್ರೀ ವ್ಯಾಸರಾಜರು.

ಸೂರ್ಯನು ಕಣ್ಣಿನ ಕೆಲಸವನ್ನೂ, ಚಂದ್ರನು ಶ್ರವಣ ವ್ಯಾಪಾರವನ್ನೂ ಅಗ್ನಿಯು ವಾಗ್ವ್ಯಾಪಾರವನ್ನೂ ದಕ್ಷಪ್ರಜೇಶನು ಪಾಣಿಸ್ಥನಾಗಿ, ಜಯಂತನು ಪಾದಸ್ಥಿತನಾಗಿ ಹೀಗೇಯೇ ಇತರ ದೇವತೆಗಳು ಒಂದೊಂದು ತತ್ವ ವ್ಯಾಪಾರವನ್ನು ಮಾತ್ರ ಮಾಡುತ್ತಿರುವವರಾಗಿದ್ದರೆ ಸಕಲ ವ್ಯಾಪಾರಗಳನ್ನೂ ವಾಯುದೇವರು ಮಾಡಿ ಮಾಡಿಸುತ್ತ ಸ್ವಗತ ಭೇದ ವರ್ಜಿತ(ಅಖಂಡ)ರಾಗಿ ವಿರಾಜಮಾನರಾಗಿದ್ದಾರೆ. ಪರಮಾತ್ಮನ ಸ್ವಗತ ಭೇದ ವಿವರ್ಜಿತತ್ವಕ್ಕೂ ವಾಯುದೇವರ ಸ್ವಗತ ಭೇದ ವಿವರ್ಜಿತತ್ವಕ್ಕೂ ಇರುವ ವ್ಯತ್ಯಾಸವೆಂದರೆ ವಾಯುದೇವರು ತಮ್ಮ ಸಾಧನ ಹಾಗೂ ಲಿಂಗ ಶರೀರಗಳಿಂದ ಭಿನ್ನರು. ಚಿದಾನಂದಾತ್ಮಕ ಶರೀರನೆನಿಸಿದ ಶ್ರೀಹರಿಗೆ ಸಾಧನವೂ ಇಲ್ಲ. ಆತನಿಂದ ಭಿನ್ನವೆನಿಸುವ ಶರೀರವೂ ಆತನಿಗೆ ಇಲ್ಲ.

ಪರಮಾತ್ಮನಿಗೆ ಲಿಂಗ ಶರೀರವಿಲ್ಲ. "ಅಕಾಯಂ ಲಿಂಗವರ್ಜ್ಯನಾತ್ (ಭಿಷ್ಯ)" ಆತನ ಅವಯವಗಳಿಗೆ ಪರಸ್ಪರ ಭೇದವಿಲ್ಲ. ಮೂಲಾವತಾರ, ಅಂಶ, ಆವೇಶದಿಗಳಿಗೆ ಭೇದವಿಲ್ಲ. ಆದರೆ ವಾಯುದೇವರಿಗೆ ಲಿಂಗಶರೀರವಿದೆ. ಅವರು ಅಂಶಾಂಶಗಳಿಂದ ಇತರ ತ್ರಿವಿಧ ಜೀವರಾಶಿಗಳಲ್ಲಿ ಅಂತರ್ಯಾಮಿಗಳಾಗಿ ವ್ಯಾಪಾರ ನಿರತರಾಗಿದ್ದಾರೆ. ಹಾಗೆ ಆತನು ಭಿನ್ನಾಂಶಗಳಿಂದ ಇತರರಲ್ಲಿ ಅಂತರ್ಯಾಮಿಗಳಾಗಿರಬೇಕಾದರೆ ಅವರು ಸ್ವರೂಪದಿಂದ ಮಾತ್ರ ಅಂತರ್ಯಾಮಿಯಾಗಿರುತ್ತಾರೋ ಅಥವಾ ಲಿಂಗ ಶರೀರದ ಅಂಶಗಳೊಳಗೆ ಇದ್ದು ಅಂಶಗಳಿಂದ ಇತರರಲ್ಲಿ ಅಂತರ್ಯಾಮಿಗಳಾಗಿರುತ್ತಾರೋ ಎಂಬ ಪ್ರಶ್ನೆಯು ಬಂದರೆ ಎಲ್ಲಿಯವರೆಗೆ ವಾಯುದೇವರು ಬ್ರಹ್ಮನಾಗಿ ಒಂದು ಕಲ್ಪ ಸಾಧನವನ್ನು ಮುಗಿಸಿಕೊಂಡು ವಿರಜಾ ಸ್ನಾನಾನಂತರ ಮುಕ್ತಿಯನ್ನು ಹೊಂದುವರೋ ಅಲ್ಲಿಯವರೆಗೆ ಲಿಂಗಶರೀರವು ಅವರಿಗೆ ಇದ್ದೇ ಇರುತ್ತದೆ. ಶ್ರೀವಾಯುದೇವರು ಲಿಂಗ ಶರೀರ ರಹಿತರೇನೂ ಅಲ್ಲ. ಅವರಿಗೆ ಲಿಂಗ ಶರೀರವಿದೆ. ಹಾಗಾದರೆ ಅವರು ಇತರ ಲಿಂಗ ಶರೀರಯುತರಾದ ಜೀವರಲ್ಲಿ ಅದ್ಹೇಗೆ ಅಂತರ್ಯಾಮಿಗಳಾಗಿರಲು ಸಾಧ್ಯ? ಎಂದರೆ ಶ್ರೀ ವಾಯುದೇವರ ಲಿಂಗ ಶರೀರಕ್ಕೂ ಇತರ ದೇವ, ಮಾನವ, ದಾನವರ ಲಿಂಗ ಶರೀರಕ್ಕೂ ಬಹಳ ವ್ಯತ್ಯಾಸವಿದೆ. ವಾಯುದೇವರ ಶರೀರವು ಸ್ಥೂಲವಾದುದಲ್ಲ. ದಗ್ಧ ಪಟಾಯಮಾನವಾದುದು. ದ್ರವ ವಿದ್ಯುತ್ ಅಥವಾ ಅನಿಲದಂತೆ ಅನ್ಯ ಜಡವಸ್ತುವಿನಲ್ಲಿ ವ್ಯಾಪಿಸಿಕೊಳ್ಳಬಲ್ಲಂತಹುದು ಅವರ ಲಿಂಗ ಶರೀರವು. ಉದಾ: ಬಟ್ಟೆಯು ಜಡ, ಜಲವು ಜಡ ಆದರೆ ಜಲವು ಬಟ್ಟೆಯಲ್ಲಿ ವ್ಯಾಪಿಸಿಕೊಳ್ಳಬಲ್ಲುದಲ್ಲವೇ? ಹಾಗೆಯೇ ಸ್ಥೂಲ ಲಿಂಗ ಶರೀರಗಳಲ್ಲಿ

ಸೂಕ್ಷ್ಮ ಲಿಂಗ ಶರೀರವು ವ್ಯಾಪ್ತವಾಗಬಲ್ಲುದು. ಇನ್ನು ಅವರ ಆತ್ಮವಂತೂ ಸಾಂಶ ಶಿರೋಮಣಿಯಾದುದು. ಆದುದರಿಂದ ವಾಯುದೇವರು ಲಿಂಗ ಮತ್ತು ಭೂತ ತ್ರಯಾತ್ಮಕವಾದ ಶರೀರಗಳಿಂದ ಯುಕ್ತರಾಗಿಯೇ ಇತರ ಸ್ವರೂಪ ಜೀವರಲ್ಲಿ ಹಾಗೂ ತನುತ್ರಯಗಳಲ್ಲಿಯೂ ಅಂತರ್ಯಾಮಿಯಾಗಿ ವ್ಯಾಪಾರವನ್ನು ಮಾಡುವರು. ಭಿನ್ನ ತತ್ವ ಕಾರ್ಯಗಳನ್ನು ಮಾಡಲು ವಾಯುದೇವರು ಭಿನ್ನ, ಭಿನ್ನ ರೂಪಗಳನ್ನು ತಾಳಿದರೂ ಅವರ ಭಿನ್ನ ಭಿನ್ನ ರೂಪಗಳಿಗೆ ಪರಸ್ಪರ ಭೇದವಿಲ್ಲ. ಈ ಅಭೇದವು ವಾಯು ದೇವನ ಸ್ವರೂಪಕ್ಕೆ ಸೇರಿದುದು. ಲಿಂಗ ಮತ್ತು ಭೂತ ತ್ರಯ ಶರೀರಗಳಿಗೆ ಸೇರಿದುದಲ್ಲ. ಸ್ವರೂಪ, ಲಿಂಗ ಮತ್ತು ಭೂತ ದೇಹಗಳು ಪರಸ್ಪರ ಭಿನ್ನವಾದುವುಗಳೇ. ಸ್ವರೂಪಾಂಶಗಳು ಮಾತ್ರ ಭೇದರಹಿತವಾದುವುಗಳು. ಆದ್ದರಿಂದ ವಾಯುವಿನ ಅಂಶ, ಆವೇಶ ಅವತಾರಗಳಲ್ಲಿ ಭೇದವಿಲ್ಲ. ಅದಕ್ಕೆ ಆತನು ಅಖಂಡನೆನಿಸಿ ಬ್ರಹ್ಮಾಂಡದಲ್ಲಿ ನೆಲೆಸಿರುವನು. ಪ್ರತಿಯೊಬ್ಬ ಜೀವರ ಲಿಂಗ ಶರೀರಗಳು ಭಿನ್ನ, ಭಿನ್ನವಾದ ಸೂಕ್ಷ್ಮ, ಸ್ಥೂಲಗಳಿಂದ ಯುಕ್ತವಾಗಿರುತ್ತವೆ. ಉನ್ನತರಲ್ಲಿ ಸೂಕ್ಷ್ಮಾಧಿಕವಾಗಿಯೂ ಕನಿಯರಲ್ಲಿ ಸ್ಥೂಲಾಧಿಕ್ಯತೆಗಳಿಂದಲೂ ಯುಕ್ತವಾಗಿ ಲಿಂಗಶರೀರವು ಕಾರ್ಯತತ್ಪರವಾಗಿರುತ್ತದೆ. ಇಪ್ಪತ್ನಾಲ್ಕು ತತ್ವಾಭಿಮಾನಿಗಳಲ್ಲಿ ನಿಂತು ಇಪ್ಪತ್ನಾಲ್ಕು ರೂಪಗಳಿಂದ ಯುಕ್ತನಾಗಿ ವಾಯುದೇವರು ಒಬ್ಬನೇ ತತ್ವಕಾರ್ಯಗಳನ್ನು ಮಾಡುವುದರಿಂದ ವಾಯು ದೇವರು ಅಖಂಡನಾಗಿದ್ದಾನೆ. ಪರಸ್ಪರ ನ್ಯೂನಾ ತಿರಿಕ್ತತೆಗಳು ಇವರಲ್ಲಿ ಇಲ್ಲ.

ಪರಮಾತ್ಮನಂತೆ ಅವ್ಯಾಕೃತಾಕಾಶ ವ್ಯಾಪ್ತಳಾದ ಲಕ್ಷ್ಮೀದೇವಿಯೂ ಲಿಂಗ ವರ್ಜಿತಳು ಮತ್ತು ಸಮ ಕಾಲ, ದೇಶ, ರೂಪ ವ್ಯಾಪ್ತಳು. ಸ್ವಗತ ಭೇದ ವಿವರ್ಜಿತಳು. ಸೀತಾ, ರುಕ್ಮಿಣೆ, ಭಾಮಾ ಇತ್ಯಾದಿ ರೂಪಗಳಲ್ಲಿ ಭೇದರ ಹಿತಳು. ನ್ಯೂನಾತಿರಿಕ್ತ ದೋಷ ರಹಿತಳು. ಸ್ವರೂಪ ಮೂರ್ತಿ ಆತ್ಮ ಭಿನ್ನ ದೇಹ ರಹಿತಳು. ಅಕ್ಷರ ಪುರುಷಳು.

ವಾಯುದೇವರು ಸಾಧನಕಾಲದಲ್ಲಿ ಸ್ವರೂಪಾತ್ಮ ಭಿನ್ನವಾದ ಲಿಂಗಾದಿ ಭೂತ ತ್ರಯಾತ್ಮಕವಾದ ಅತಿ ಸೂಕ್ಷ್ಮ ಅತಿ ಸ್ಥೂಲಾದಿ (ಭೂ, ಆಕಾಶಬಿಟ್ಟು) ಅಪ್, ತೇಜ, ವಾಯು ತತ್ವಾತ್ಮಕವಾದ ಪ್ರಾಕೃತ ದೇಹ ಉಳ್ಳವರು. ಸ್ವರೂಪಾಂಶಗಳಲ್ಲಿ ಭೇದರ ಹಿತರು ಕ್ಷರ ಪುರುಷನು.

ಸಾಂಶರಾದ ದೇವತೆಗಳು ಸಾಧನಕಾಲದಲ್ಲಿ ಸ್ವರೂಪ ಭಿನ್ನವಾದ ಸ್ಥೂಲ, ಲಿಂಗಾದಿ ದೇಹಯುಕ್ತರು. ಸ್ವರೂಪಾಂಶಗಳಲ್ಲಿ ಪರಸ್ಪರ ನ್ಯೂನಾತಿರಿಕ್ತ ದೋಷ ಉಳ್ಳವುಳ್ಳವರು. ಇವರು ಕ್ಷರ ಪುರುಷರು.

ನಿರಂಶರು ಸ್ವರೂಪ ಭಿನ್ನವಾದ ಅನಿರುದ್ಧ ಲಿಂಗ, ಸ್ಥೂಲ ದೇಹಗಳುಳ್ಳವರು. ಕ್ಷರ ಪುರುಷರು. ಇವರು ಅಖಂಡ ಸ್ವರೂಪರೇ ಹೊರತು ಅಂಶಗಳಿಂದ ಯುಕ್ತರಲ್ಲ.

ಮುಕ್ತಿಯಲ್ಲಿ ಸಾಂಶ ದೇವತೆಗಳು ಒಮ್ಮೊಮ್ಮೆ ಐಚ್ಛಿತ ಭಿನ್ನ ಭಿನ್ನ ಶರೀರಗಳನ್ನೂ ಮತ್ತು ಏಕ ಕಾಲದಲ್ಲಿ ಹಲವು ಬಗೆ ರೂಪಗಳನ್ನೂ ಧರಿಸಿ ಭಗವತ್ಸೇವೆಯ ರೂಪವಾದ ಬಿಂಬೋಪಾಸನೆಯನ್ನು ಮಾಡುತ್ತಾ ಸುಖಿಗಳಾಗಿರುತ್ತಾರೆ. ಅಲ್ಲಿ ಇವರು ಸ್ವಗತ ಭೇದ ವಿವರ್ಜಿತರಾಗಿರುತ್ತಾರೆ. ಸ್ವರೂಪವು ಮೋದಮಯ ಶರೀರವೇ ಆಗಿರುತ್ತದೆ. ಅಂಶಾಂಶ ಅಂಶಿಗಳಲ್ಲಿ ನ್ಯೂನಾತಿರಿಕ್ತತೆಗಳಿರುವುದಿಲ್ಲ.

ನಿರಂಶಜೀವರು ಅಖಂಡವಾಗಿ ಸ್ವರೂಪದೇಹದಿಂದ ಏಕೈಕ ರೂಪೋಪಾಸನೆಯನ್ನು ಮಾಡುತ್ತಾ ಮೋದಭರಿತರಾಗಿರುತ್ತಾರೆ. ಇವರು ಅಂಶ ರಹಿತರಾಗಿರುವ ಪ್ರಯುಕ್ತ ಇವರಲ್ಲಿ ನ್ಯೂನಾತಿರಿಕ್ತತೆಯ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಏಕಕಾಲದಲ್ಲಿ ಐಚ್ಛಿತ ರೂಪಗಳನ್ನು ತಾಳಿ ಭಗವದುಪಾಸನೆಯನ್ನು ಮಾಡುತ್ತಾರೆ. ಮೋಕ್ಷದಲ್ಲಿ ಜೀವರು ಹೇಗಿರುತ್ತಾರೆ ಎಂದರೆ ಜತ್ತೆ : ನಿರ್ದುಃಖದಲ್ಲಿ ಸಮರು ಸರ್ವ ಜೀವಿಗಳೆನ್ನು ದುರ್ಧರ್ಷ ವಿಜಯ ವಿಠ್ಠಲ ಗತಿ ಪ್ರದಾತಾ ॥

## ಶ್ರೀಮಧ್ವಾವತಾರ ವರ್ಣನೆ

ಯುದ್ಧದಿ ಸೋತು ವಾ । ಗ್ಯುದ್ಧಕೆ ಹವಣಿಸಿ ।
ಕ್ಷುದ್ರರೆಲ್ಲರು ಪುಟ್ಟಿ । ತಿದ್ದಿಡಲೂ ॥
ಮಧ್ಯಗೇಹಾಖ್ಯರ । ಲ್ಲು ದ್ಭಸುತ ವೇದ ।
ಸಿದ್ಧ ಪುರಷನೆಂದು । ಸಿದ್ಧವ ಮಾಡುತ ॥ ೨೮ ॥

**ಶಬ್ದಾರ್ಥ:** ಯುದ್ಧದಿ ಸೋತು = ಕುರುಕ್ಷೇತ್ರ ಮಹಾ ಯುದ್ಧದಲ್ಲಿ ಹತರಾದ ದುರ್ಯೋಧನಾದಿ ತಮೋಯೋಗ್ಯರು; ವಾಗ್ಯುದ್ಧಕೆ = ವೇದ ಶಾಸ್ತ್ರಗಳ ಮುಖೇನ; ಹವಣಿಸಿ = ಉಪಾಯವನ್ನು ಹುಡುಕಿ; ಕ್ಷುದ್ರರೆಲ್ಲರು = ಅಸುರ ಸ್ವಭಾವ ಉಳ್ಳ ತಾಮಸಿಗಳು; ಪುಟ್ಟಿ = ಪುನಃ ಜನ್ಮ ತಳೆದು; ತಿದ್ದಿಡಲು = ಶಾಸ್ತ್ರಗ್ರಂಥಗಳ ಯಥಾರ್ಥವಾದ ಉಪಾಸನಾ ಕ್ರಮಗಳನ್ನು ವಿರುದ್ಧ ದಿಕ್ಕನಲ್ಲಿ ಅರ್ಥೈಸಿ, ಕುಶಾಸ್ತ್ರಗಳನ್ನು ರಚಿಸಿ ಪ್ರಚಾರ ಮಾಡುತ್ತಿರುವಾಗ; ಮಧ್ಯಗೇಹಾಖ್ಯರಲ್ಲುದ್ಭವಿಸುತ = ಮಧ್ಯಗೇಹ ಭಟ್ಟರೆಂಬುವರಲ್ಲಿ ಅವತರಿಸುತ್ತ; ವೇದ ಸಿದ್ಧಪುರಷನೆಂದು = ವೇದಗಳಲ್ಲಿ ಹೇಳಿರುವಂತೆ ವಾಯು ದೇವನೇ ಈತನು. ಎಂಬುದನ್ನು; ಸಿದ್ಧವ ಮಾಡುತ = ಪ್ರಮಾಣೀಕರಿಸುವುದರ ಮೂಲಕವೇ ವೇದ ಸತ್ಯವೆಂಬುದನ್ನು ತೋರಿಸಿ ಕೊಟ್ಟ ಮಹಿಮಾನ್ವಿತನು ಈ ವಾಯುದೇವರು.

**ವಿಶೇಷಾರ್ಥ:** ಕೃತ ಯುಗದಲ್ಲಿ ಮತ್ತು ತ್ರೇತಾ ಯುಗಗಳಲ್ಲಿ ದೈತ್ಯರು ಮಹಾಕಾಯ, ಕ್ರೂರ ರೂಪ ಕರ್ಮಗಳಿಂದ ಜೀವ ಸಂಕುಲಕ್ಕೆ ಸಾಧನಕ್ಕೆ ಕಂಟಕ ಪ್ರಾಯರಾಗಿದ್ದರು. ಇವರನ್ನು ನಿಗ್ರಹಿಸಲು ಪರಮಾತ್ಮನು ನರಹರಿ, ರಾಮಾದಿ ಅವತಾರಗಳನ್ನು ಎತ್ತಿ ಅವರನ್ನು ಧ್ವಂಸ ಮಾಡಿದನು. ಇದರಿಂದ ಭೀತರಾದ ದೈತ್ಯರು ತಮ್ಮ ವಿಕಾರಮಯವಾದ ದೇಹಗಳನ್ನು ತ್ಯಜಿಸಿ ವರಬಲದಿಂದ ದ್ವಾಪರ ಯುಗದಲ್ಲಿ ಸೌಮ್ಯರೂಪದ ಕ್ರೂರ ಕೃತ್ಯದ ಕ್ಷತ್ರಿಯರಾಗಿ ಹುಟ್ಟಿ ರಾಜ್ಯ ಸೂತ್ರಧಾರಿಗಳಾಗಿ ಯಥಾಪ್ರಕಾರವಾಗಿ ದುಷ್ಟಶಾಸನಗಳಿಂದ ವೈಷ್ಣವರನ್ನು ದ್ವೇಷಿಸ ತೊಡಗಿದ್ದರು. ಶ್ರೀಹರಿ, ವಾಯು, ಗುರು, ಸಚ್ಛಾಸ್ತ್ರ ಸೇವೆಗಳಿಗೆ ಮಾರಕರಾಗಿ ಎಲ್ಲೆಲ್ಲೂ ವೈಷ್ಣವ ದ್ವೇಷವನ್ನು ವ್ಯವಸ್ಥಿತವಾಗಿ ಹರಡಿದರು. ಆಗ ದೇವತೆಗಳ ಇಚ್ಛೆಯಂತೆ ಶ್ರೀ ಹರಿಯು ಕೃಷ್ಣಾವತಾರವನ್ನು ಮಾಡಿದನು. ಶ್ರೀವಾಯುದೇವರು ಭೀಮಸೇನನಾಗಿ ಅವತರಿಸಿ, ಇತರ ದೇವತೆಗಳನ್ನು ಕೀರ್ತಿಭಾಗಿಗಳನ್ನಾಗಿ ಮಾಡಿ, ತಾವು ಕ್ಷತ್ರಿಯ ಕುಲದಲ್ಲಿ ಬಂದು ಯುದ್ಧೋನ್ಮುಖರಾಗಿ ಆ ಸಕಲ ದೈತ್ಯ ಸಂಕುಲವನ್ನು ನಾಶಮಾಡಿ ಧರ್ಮ ಸಂಸ್ಥಾಪನೆಯನ್ನು ಮಾಡಿದರು.

ಏನು ಮಾಡಿದರೇನು? ಜೀವಕ್ಕೆ ಸ್ವರೂಪನಾಶವಂತ ಇಲ್ಲತಾನೇ? ಆ ದೈತ್ಯರೆಲ್ಲರೂ ತಮ್ಮ ಪರಿವಾರದಿಂದ ಕೂಡಿಕೊಂಡು ತಮ್ಮ ಸ್ವರೂಪಸಾಧನೆಯಾದ ಶ್ರೀಹರಿವಾಯುಗಳಿಗೆ ಹೇಗೆ ದ್ರೋಹವನ್ನು ಬಗೆಯ ಬಹುದೆಂಬುದರ ಬಗ್ಗೆ ಚಿಂತನೆಗೆ ಇಳಿದರು. ಅವರು ಮಾಡಿದ ಯೋಚನೆಯು ಹೀಗೆ ಸಾಗಿತ್ತು. ನಾವು ಮೂರು ಯುಗಗಳಲ್ಲಿಯೂ ಉಪಾಯಾಂತರಗಳಿಂದ ವಿಷ್ಣು, ವೈಷ್ಣವರನ್ನು ನಿಗ್ರಹಿಸಲು ಹೆಣಗಾಡಿ ವಿಫಲರಾದೆವು. ಇನ್ನು ಮುಂದೆ ನಾವು ಬಲ ಪ್ರದರ್ಶನ ಮಾರ್ಗವನ್ನು ಬಿಟ್ಟು ಜನರಲ್ಲಿ ಪೂಜ್ಯತೆಯನ್ನು ಗಳಿಸಿಕೊಳ್ಳಬೇಕು. ಈ ಜನರಿಂದ ಈಗ ಆಗುತ್ತಿರುವ ತಂತ್ರಸಾರೋಕ್ತ ಹವನ, ಹೋಮ, ಪೂಜೆ ಇತ್ಯಾದಿಗಳು ನಡೆಯದಂತೆ ಮಾಡಬೇಕು. ಈ ವಿಧವಾದ ಶ್ರೀಹರಿ,

ವಾಯುಗಳ ಅಸ್ತಿತ್ವವನ್ನು ಆ ತತ್ವಗಳ ಮೂಲಕವಾಗಿ ಜರಿದು ತನ್ಮೂಲಕ ಅವರನ್ನು ಇಲ್ಲವಾಗಿಸಬೇಕು. ಅದಕ್ಕಾಗಿ ನಾವು ಈಗ ಬ್ರಾಹ್ಮಣರಾಗಿ ಹುಟ್ಟಿದರೆ ನಮ್ಮನ್ನು ಯಾರೂ ಕೊಲ್ಲುವುದಿಲ್ಲ ಮತ್ತು ನಮ್ಮ ಮಾತಿಗೆ ಬೆಲೆಯೂ ಬರುತ್ತದೆ. "ಬ್ರಾಹ್ಮಣಃ ಸರ್ವ ಜಂತೂನಾಂ । ಗುರು ಮುಖ್ಯಃ ಪ್ರಕೀರ್ತಿತಃ" ಎಂದರೆ ಎಲ್ಲಾ ಜಾತಿಗೂ ಬ್ರಾಹ್ಮನೇ ಗುರುವು ಎಂದಿರುವುದರಿಂದ ನಾವು ಬ್ರಾಹ್ಮಣರಾಗಿ ಹುಟ್ಟಿ ವೇದಗಳನ್ನು ಬಳಸಿಕೊಂಡು ಪೂಜ್ಯಸ್ಥಾನವನ್ನು ಆಕ್ರಮಿಸಿಕೊಂಡು ವೇದಗಳಿಗೆ ವಿರುದ್ಧವಾಗಿ ಅರ್ಥಾಂತರಗಳನ್ನು ಕಲ್ಪಿಸಿಕೊಂಡು ಶ್ರೀಹರಿ, ವಾಯು, ದೇವತಾದಿ ಮುಮುಕ್ಷುಗಳನ್ನು ಜೈಸಿ ಬಿಡೋಣ. ಅವರನ್ನು ಈ ಬಗೆಯಿಂದ ನಿಗ್ರಹಿಸೋಣ ಎಂದು ಬಗೆದು ಕಾರ್ಯೋನ್ಮುಖರಾದರು. ಎಲ್ಲರೂ ಮಹಾರುದ್ರೋಪಾಸನೆಯನ್ನು ಮಾಡಿದರು. "ಪಂಚ ವಕ್ತ್ರಮಹಾ ಬಾಹೋ ಮೋಹ ಶಾಸ್ತ್ರಿಣಿ ಕಾರಯ" ಎಂದು ಹೇಳಿರುವಂತೆ ಶಂಕರನು ಇವರಿಗೆ ಮೋಹಕವನ್ನು ಕವಿಸಿ ತಾನೂ ಒಂದು ಬಗೆಯಲ್ಲಿ ಇವರಲ್ಲಿ ಆವಿಷ್ಟನಾಗಿದ್ದು ಬ್ರಾಹ್ಮಣ ಕುಲದಲ್ಲಿ ಹುಟ್ಟಲು ಇವರಿಗೆ ವರವನ್ನು ನೀಡಿದನು.

"ದೈತ್ಯಾಃ ಕಲಿಮಾಶ್ರಿತ್ಯ । ಜಾಯಂತೇ ಬ್ರಹ್ಮಯೋನಿಷು" ಎಂದಂತೆ ಕಲಿಯುಗದಲ್ಲಿ ಕಲಿಯ ಆಶ್ರಯವನ್ನು ಹೊಂದಿದ ದೈತ್ಯರು ಹುಟ್ಟಿದರು. ತ್ರಿಪುರಾಸುರರೇ ಮೊದಲಾದವರು ಜಿನ, ಬುದ್ಧ ಧರ್ಮಗಳನ್ನು ಕಲ್ಪಿಸಿಕೊಂಡು ಮೊದಲನೆಯದಾಗಿ ನಾಶರಹಿತವಾದ ವೇದಗಳನ್ನೂ, ವೇದ ಧರ್ಮಗಳನ್ನೂ ಕರ್ಮಗಳನ್ನೂ ನಿರಾಕರಣ ಮಾಡಿದರು. ಜಗತ್ತು ಇಂದ್ರಜಾಲದಂತೆ ಮಿಥ್ಯವಾದುದು. ಜೀವ, ಜಗತ್ತು, ಪುಣ್ಯ, ಪಾಪ ಸ್ವರ್ಗ, ನರಕ, ಮೋಕ್ಷ, ದೇವರು ಎಲ್ಲಾ ಸುಳ್ಳು. ಹವನ, ಹೋಮ, ಜಪ, ತಪ, ಕೀರ್ತನೆ, ಭಕ್ತಿ, ಸ್ತೋತ್ರ, ಪೂಜೆ ಇತ್ಯಾದಿಗಳನ್ನೆಲ್ಲಾ ಕಿತ್ತೊಗೆಯಿರಿ. ಭೌತಿಕ ಯೋಗದಿಂದ ಉಂಟಾದ ಈ ದೇಹವೂ ಮಿಥ್ಯೆಯೇ ಇದ್ದಾಗ ಎಥೇಚ್ಛವಾಗಿ ಸುಖ ಪಡುವುದು. "ಋಣಂ ಕೃತ್ವಾ ಘೃತಂ ಪಿಬೇತ್" ಎಂದು ಬೋಧಿಸಿ ವೇದ ಸಮೂಹಗಳನ್ನು ತಿರಸ್ಕರಿಸಿಬಿಟ್ಟರು.

ಇನ್ನೂ ಮುಂದುವರಿದು ಚಾರ್ವಾಕರೂ, ನಾಸ್ತೀಕರೂ, ಸೌರವರೂ, ಗಾಣಪತ್ಯರೂ, ಶಾಕ್ತರು, ಕಾಪಾಲ ಶೈವರೂ ಮೊದಲಾದವರಾಗಿ ದಿತಿಜ ಕುಲವು ವಿಜ್ರಂಭಿಸಿತು. ಈ ಮತ ಪ್ರವರ್ತಕರ ಹಾವಳಿಯು ಮಿತಿ ಮೀರಿತು. ಭೂದೇವಿಯು ನಡುಗಿದಳು. ಇವರನ್ನು ಅನುಸರಿಸದವರನ್ನು ಇವರು ಶಸ್ತ್ರ, ಮಾರಣಹೋಮ, ಕುಕ್ಕುಟ, ಭೈರವ, ಚಾಟು ಮಂತ್ರಗಳಿಂದ ಕೊಲ್ಲುತ್ತಿದ್ದರು.

ಇಂಥಾ ಸನ್ನಿವೇಶದಲ್ಲಿ ವೈಶಾಖ ಭಾನುಮಂಡಲದಲ್ಲಿ ಕಿಂಚಿತ್ ಮೋಡ ಕವಿದಂತೆ ಕುಮಾರಿಲಭಟ್ಟನು ವೈದಿಕದ್ರೋಹಿಗಳನ್ನು ಬಲವಾಗಿ ಎದುರಿಸಿ ವೇದ ಧರ್ಮಗಳನ್ನು ಪುನಃ ಪ್ರತಿಷ್ಠಾಪಿಸಿದನು. ಈತನ ಕಠೋರವಾದ ಪ್ರತಿಜ್ಞೆಯಂತೆ ಅವೈದೀಕರನ್ನೆಲ್ಲಾ ಅಗ್ನಿಕುಂಡಕ್ಕೆ ಅಹುತಿ ಕೊಡಲಾಯಿತು. ಅಳಿದುಳಿದ ಕೆಲವರು ಭೀತರಾಗಿ ದೇಶಾಂತರ, ಖಂಡಾಂತರಗಳಿಗೆ ಪಲಾಯನ ಮಾಡಿ ಅಲ್ಲಿ ತಮ್ಮ ಮತಗಳನ್ನು ಚಲಾಯಿಸಿದರು. ಪೂರ್ವೋತ್ತರ ಖಂಡ ದ್ವೀಪಗಳು ಅವರ ನೆಲೆಯಾದುವು. ಇಷ್ಟಕ್ಕೆ ಇದು ನಿಲ್ಲಲಿಲ್ಲ. ದೈತ್ಯರ ಸಭೆಯು ಪುನಃ ಜರುಗಿತು. ಅಲ್ಲಿನ ವಿಚಾರ ಮಂಥನದಲ್ಲಿ ತ್ರಿಪುರಾ ಸುರರೇ ಮೊದಲಾದವರು ಒಳ್ಳೇ ಕೆಲಸವನ್ನೇ ಮಾಡಿ, ಹರಿ, ವಾಯು ದೇವತೆಗಳಿಗೆ ಸರಿಯಾಗಿಯೇ ಚಳ್ಳೇಹಣ್ಣನ್ನು ತಿನ್ನಿಸಿದ್ದಾರೆ. ಆದರೆ ಅದು ಪ್ರಯೋಜನಕ್ಕೆ ಬರಲಿಲ್ಲ. ಕರ್ಮ ಭೂಮಿಯಾದ ಭರತ ಖಂಡದಲ್ಲಿ ವೇದಕ್ಕೆ ಬಹಳ ಪ್ರಾಶಸ್ತ್ಯವಿದೆ. ಯಾವ ಕಾಲಕ್ಕೂ ವೇದಗಳನ್ನು ಭರತ ಖಂಡದಿಂದ ಕಿತ್ತೊಗೆಯಲು ಯಾರಿಂದಲೂ ಸಾಧ್ಯವಿಲ್ಲ. ಓಗಿರುವಾಗ ಬೌದ್ಧರು ವೇದಗಳಿಗೆ ಕೈಹಾಕಿ ವೇದಗಳನ್ನು ನಿರಾಕರಿಸಿದ್ದೇ ಅವರದು ತಪ್ಪಾಯಿತು. ಅದರ ಬದಲಿಗೆ ಅವರು ತಮ್ಮ ಮತವನ್ನು ವೇದಗಳೇ ಪ್ರತಿಪಾದಿಸುತ್ತವೆ ಎಂದಷ್ಟೇ ಹೇಳಿದರೆ

ಸಾಕಾಗಿತ್ತು. ಆಗ ಅವರ ಯತ್ನವೂ ಸಫಲವಾಗುತ್ತಿತ್ತು. ಈ ಅವನತಿಯೂ ತಪ್ಪುತ್ತಿತ್ತು. ಆಗಲಿ, ಆದದ್ದು ಆಗಿ ಹೋಯಿತು. ಈಗ ನಾವೇ ಆ ಕಾರ್ಯವನ್ನು ಮಾಡೋಣವೆಂದು ತೀರ್ಮಾನಿಸಿದರು ಮತ್ತು ತಮ್ಮ ಈ ಕಾರ್ಯಕ್ಕೆ ಮುಖಂಡನನ್ನಾಗಿ ಮಣಿಮಂತನೆಂಬ ಸರ್ಪರೂಪೀ ಸುರೇತರನನ್ನು ಅಂಗೀಕರಿಸಿದರು. ಇವರ ಮುಖಂಡನಾದ ಮಣಿಮಂತನು ಭರತಖಂಡದಲ್ಲಿ ಜನಿಸುವುದು ಪುರಾಣ ಪ್ರಸಿದ್ಧ ಪ್ರಮಾಣವಾಗಿದೆ ಇದನ್ನು ಗರುಡ ಪುರಾಣದ ಬ್ರಹ್ಮಕಾಂಡದಲ್ಲಿ ಹೀಗೆ ಹೇಳಿರುತ್ತದೆ.

"ಮಣಿಮಾನ್ನಾಮ ದೈತ್ಯೋಽಸ್ತು । ಸಂಕರಾಖ್ಯೋ ಭವಿಷತಿ"
ಸರ್ವೇಷಾಂ ಸಂಕರಂ ಯಸ್ತು । ಕರಿಷ್ಯತಿ ನಸಂಶಯಃ ॥"

ಇದನ್ನೇ ಸುಮಧ್ವವಿಜಯದಲ್ಲಿ

"ಯೋ ಭೂರಿವೈರೋ ಮಣಿಮಾನ್ ಮೃತಃ ಪ್ರಾಗ್ ।
ವಾಗ್ಮೀಬುಭೂಷುಃ ಪರಿತೋಷಿತೇಶಾಃ ॥
ಸಸಂಕರಾಖ್ಯೋಂಘ್ರಿತಲೇಷುಜಜ್ಞೇ ।
ಸ್ವಧಾಪರೇಪ್ಯಾಸುರೀಹಾ ಸುರೇಂದ್ರಾಃ ॥ ೧-೪೭ ॥"

ಎಂಬುದಾಗಿ ಹೇಳಿರುತ್ತದೆ. ಈ ಮಣಿಮಂತನು ದ್ವಾಪರ ಯುಗದಲ್ಲಿ ಭೀಮಸೇನನು ಸೌಗಂಧಿಕಾ ಪುಷ್ಪಗಳನ್ನು ತರುವಾಗ ಭೀಮನಿಗೆ ಅಡ್ಡಗಾಲನ್ನು ಹಾಕಿ ಅಡ್ಡಿಯನ್ನುಂಟುಮಾಡಿದ್ದನು ಮತ್ತು ಭೀಮ ಕೃಷ್ಣರನ್ನು ಯಥೇಚ್ಛವಾಗಿ ನಿಂದಿಸಿ ತಾಮಸ ಗ್ರಂಥಗಳ ಬಲದಿಂದ ವಾಗ್ಯುದ್ಧವನ್ನು ಸಾರಿ, ತರುವಾಯ ವಾದದಲ್ಲಿ ಸೋತು ಮುಷ್ಠಿಮಲ್ಲ ಯುದ್ಧಕ್ಕೆ ಬಂದನು. ಆಗ ಭೀಮಸೇನನು ಅವನನ್ನು ಬಲ ಪ್ರಯೋಗದಿಂದಲೇ ಸಂಹರಿಸಿ ಸೌಗಂಧಿಕಾ ಪುಷ್ಪಗಳನ್ನು ತಂದು ದ್ರೌಪದಿದೇವಿಗೆ ನೀಡಿದನು. ಈ ಪರಿಯಾದ ಶಿಕ್ಷೆಯನ್ನು ಅನುಭವಿಸಿ ಈಗ ಸೇಡನ್ನು ತೀರಿಸಿಕೊಳ್ಳಲಿಕ್ಕಾಗಿ ಈಗ ಬ್ರಾಹ್ಮಣ ಕುಲದಲ್ಲಿ ಜನಿಸಿದನು.

ಈಗ ಬ್ರಾಹ್ಮಣ ಕುಲದಲ್ಲಿ ಜನಿಸಿದ ತರುವಾಯ ರುದ್ರದೇವರ ವರ ಬಲದಿಂದಲೂ, ಆವೇಶದಿಂದಲೂ ಚಿಕ್ಕ ವಯಸ್ಸಿನಲ್ಲೇ ಅಪಾರವಾದ ಸಂಸ್ಕೃತ ಪಾಂಡಿತ್ಯವನ್ನು ಸಂಪಾದಿಸಿಕೊಂಡು, ಯಾವ ನಿಯಮಗಳನ್ನೂ ಪಾಲಿಸದೆ, ಉಪಾಯಾಂತರಗಳಿಂದ ಸನ್ಯಾಸವನ್ನು ಹೊಂದಿ ನೇರವಾಗಿ ದಶೋಪನಿಷತ್ತುಗಳಿಗೆ, ಭಗವದ್ಗೀತ ಮತ್ತು ಬ್ರಹ್ಮಸೂತ್ರಗಳಿಗೆ ತನ್ನದೇ ಆದ, ಸತ್ಪ್ರಮಾಣ ವಿರುದ್ಧವಾದ ವ್ಯಾಖ್ಯಾನಗಳನ್ನು ಬರೆದು ಪ್ರಚಾರ ಮಾಡಿದನು. ವೇದನಿರ್ಣಾಯಕಗಳಾದ ಸೂತ್ರ, ಸೂತ್ರಗಳ ಹೃದಯ ಪ್ರಕಾಶಿಕೆಗಳಾದ ಅಷ್ಟಾದಶ ಪುರಾಣ, ಉಪಪುರಾಣಗಳನ್ನು ಅನುಸರಿಸದೇ ವ್ಯಾಕರಣ ಚಮತ್ಕಾರದಿಂದ ಸೂತ್ರಗಳಿಗೆ ಅರ್ಥಾಂತರಗಳನ್ನು ಕಲ್ಪಿಸಿ ಬಹು ಪ್ರಾಚೀನ ಗ್ರಂಥಬಾಹುಳ್ಯಗಳನ್ನು ಸೃಷ್ಟಿಸಿ ಭಾಷ್ಯಗಳೆಂದು ಹೆಸರಿಸಿ ಗ್ರಂಥಗಳನ್ನು ನಿರ್ಮಾಣ ಮಾಡಿದನು. ಅನತಿ ಕಾಲದಲ್ಲಿಯೇ ವೈದೀಕರನ್ನು ಮೋಹಗೊಳಿಸಲು, ವೈದೀಕರ ಆಗ್ರಹಕ್ಕೆ ತುತ್ತಾಗಿದ್ದ ಬೌದ್ಧ, ಜೈನ ಮತಗಳನ್ನು ನಿರಾಕರಿಸಿದಂತೆ ವರ್ತಿಸುತ್ತಾ ಅವರ ಅಭಿಮಾನವನ್ನು ಯಥೇಚ್ಛವಾಗಿ ಸಂಪಾದಿಸಿದನು. ಈ ಮತವು 'ವೈದಿಕ'ವೆಂಬ ನಾಮ ಫಲಕ ಮಾತ್ರದಿಂದ ವಿಸ್ತಾರ-ಸುವಿಸ್ತಾರವನ್ನು ಹೊಂದಿತು. ಆದರೆ ಇದರ ತತ್ವರ ರಹಸ್ಯಗಳೆಲ್ಲವೂ ಬೌದ್ಧಾ ಭಿನ್ನವೇ

ಹೊರತಾಗಿ ಅನ್ಯಥಾ ಅಲ್ಲವೇ ಅಲ್ಲ. ಆದರೆ ಬೌದ್ಧ ಗ್ರಂಥಗಳನ್ನು ಉಳಿಯಗೊಟ್ಟರೆ ಹೋಲಿಸಿ ನೋಡಿದಾಗ ಈ ನೂತನವಾದ ಮತವು ಪ್ರಚ್ಛನ್ನ ಬೌದ್ಧವೇ ಎಂಬುದು ಬಹಿರಂಗವಾಗುತ್ತದೆಂಬ ಭೀತಿಯಿಂದ ಆ ಗ್ರಂಥಗಳನ್ನು ಅಗ್ನಿಗೆ ಆಹುತಿ ಮಾಡಲಾಯಿತು. ಆದರೆ ಇಲ್ಲಿ ಭಸ್ಮವಾಗಿದ್ದು ಕೇವಲ ಹಾಳೆಗಳೇ ಹೊರತಾಗಿ ಮತವಲ್ಲ. ಅದು ಹೊಸ ಹೆಸರಿನಿಂದ ಮೈದಾಳಿತು. "ಪ್ರಚ್ಛನ್ನ ಬೌದ್ಧೋಯಮತಃ ಪ್ರಸಿದ್ಧಾ" ಈ ಮತದ ಪ್ರಕ್ರಿಯೆಯನ್ನು ಶ್ರೀಸುಮಧ್ವ ವಿಜಯದಲ್ಲಿ ಹೀಗೆ ಹೇಳಿದ್ದಾರೆ.

**"ವಿಶ್ವಂ ಮಿಥ್ಯಾ ವಿಭುರಗುಣವಾನ್ ಆತ್ಮಾನಾಂ ನಾಸ್ತಿ ಭೇದೋ ।**
**ದೈತ್ಯಾ ಇತ್ಥಂ ವ್ಯದಭತಗಿರಾಂ ದಿಕ್ಷು ಭೂಯಃ ಪ್ರಸಿದ್ಧಂ ॥**
**ಆನಂದಾದ್ಯೈರ್ಗುರು ಗುಣಗಣ್ಯೈಃ ಪೂರಿತೋ ವಾಸುದೇವೋ ।**
**ಮಂದಂ ಮಂದಂ ಮನಸಿಚ ಸತಾಂ ಹಂತನೂನಂ ತಿರೋಭೂತ್ ॥೧-೫೫॥**

ಎಂದರೆ ಈ ಮತದ ಪ್ರಕಾರವಾಗಿ ಜಗತ್ತು ಇಂದ್ರಜಾಲದಂತೆ ಮಿಥ್ಯೆಯಾದುದು. ಬೆಳ್ಳಿಯಂತೆ ಕಾಣುವ ಕಪ್ಪೆ ಚಿಪ್ಪು ಹೇಗೆ ಮಿಥ್ಯೆಯೋ ಹಾಗೆಯೇ ನಮ್ಮ ದೃಗ್ದೋಷದಿಂದ ಎಲ್ಲವೂ ಸತ್ಯವಾಗಿ ಕಾಣುತ್ತದೆ. ದೇವರು ದೊಡ್ಡವನಲ್ಲ. ಜೀವನೂ ದೇವರು ಬೇರೆಯಲ್ಲವೇ ಅಲ್ಲ. ಸಕಲ ಗುಣ ಪರಿಪೂರ್ಣನಾದ ವಿಷ್ಣುವು ಜೀವನಿಂದ ಅಭಿನ್ನನೇ. ಜೀವನು ಶೂನ್ಯನು ಎಂದ ಬಳಿಕ ಜಗತ್ತು ಶೂನ್ಯ, ಮಿಥ್ಯ ಎಂದು ಬೇರೆ ಹೇಳಬೇಕೆ? ನೀರಿನಲ್ಲಿ ನೀರನ್ನು ಹಾಕಿದಾಗ ನೀರು ಐಕ್ಯವಾಯಿತಲ್ಲವೇ? ಹಲವು ಪಾತ್ರೆಗಳಲ್ಲಿನ ನೀರಿನಲ್ಲಿ ಕಾಣಿಸುವ ಚಂದ್ರಬಿಂಬಗಳು ಎಲ್ಲಾ ಪಾತ್ರೆಗಳ ನೀರನ್ನು ಒಗ್ಗೂಡಿಸಿದಾಗ ಒಂದೇ ಚಂದ್ರ ಬಿಂಬವಾಗುವುದಲ್ಲವೇ? ನಮ್ಮ ಕಣ್ಣನ್ನು ಬೆರಳಿನಿಂದ ಚುಚ್ಚಿಕೊಂಡಾಗ ಒಂದು ವಸ್ತುವು ಎರಡಾಗಿ ತೋರುತ್ತದೆ. ಇದು ಭ್ರಾಂತಿಯಲ್ಲವೇ? ಬೆರಳನ್ನು ಹಿಂದಕ್ಕೆ ಸರಿಸಿದರೆ ಎರಡೂ ವಸ್ತುಗಳೂ ಒಂದಾಗುತ್ತದೆಯಲ್ಲವೇ? ಇದರಂತೆ ಜೀವ, ಜಡ, ಪರಬ್ರಹ್ಮರು ಅಜ್ಞಾನವಶಾತ್ ಭಿನ್ನ ಭಿನ್ನವಾಗಿ ಕಂಡರೂ ಜ್ಞಾನದಿಂದ ಈ ವೈವಿಧ್ಯತೆಯು ವ್ಯತ್ತಿಯಾಗಿ ಕೇವಲ ಎಲ್ಲವು ಬ್ರಹ್ಮವೇ ಆಗಿ ಬಿಡುತ್ತದೆ. ಬ್ರಹ್ಮಸತ್ಯ ಜಗನ್ಮಿಥ್ಯಾ ಜೀವೋಬ್ರಹ್ಮೈವನಾಪರಂ".ಆದ್ದರಿಂದ ನಮ್ಮ ಯಾವತ್ತೂ ಚೇಷ್ಟೆಗಳು ಕೇವಲ ವ್ಯಾವಹಾರಿಕವಾದವೇ ಹೊರತಾಗಿ ಪಾರಮಾರ್ಥಿಕವಾಗಿ ಅಲ್ಲ. ಹೀಗೆ ಪರಬ್ರಹ್ಮನ ಅಸ್ತಿತ್ವವನ್ನೂ, ಸಾಧನ ಜೀವಿಗಳ ಅಸ್ತಿತ್ವವನ್ನೂ, ಸಾಧನಾನುಕೂಲವಾದ ದೇಹಾದಿ ಜಡ ಜಗತ್ತನ್ನೂ 'ಮಿಥ್ಯೆ' ಎಂದು ಕರೆಯುವುದರ ಮೂಲಕ ಭಗವಂತನನ್ನೂ ಮುಮುಕ್ಷು ಜೀವಿಗಳನ್ನೂ ವಂಚಿಸಲು ಹಂಚಿಕೆಯನ್ನು ಹೂಡಿದರು. ಈ ಮತವನ್ನು ಉಳಿಸಿಕೊಳ್ಳಲಿಕ್ಕಾಗಿ ವೇದದ ಹೆಸರನ್ನು ಬಳಸಿಕೊಂಡರೆ ವಿನಃ ವೇದಧರ್ಮವನ್ನು ಉಳಿಸಲಿಕ್ಕಾಗಿ ಅಲ್ಲ. ಇನ್ನೂ ಇದಕ್ಕಾಗಿಯೇ ಪ್ರಮುಖವಾಗಿ ಇಪ್ಪತ್ತು ಜನರು ಭಾಷ್ಯಕಾರ ಪೀಠವನ್ನು ಆಕ್ರಮಿಸಿ ಬಿಟ್ಟರು. ಅವರ ಪೀಠನಾಮಗಳು ಹೀಗಿವೆ:-

೧. ಭಾರತೀವಿಜಯಶ್ಚೈವ
೨. ಸಚ್ಚಿದಾನಂದ ಏವಚ
೩. ಬ್ರಹ್ಮಘೋಷಂ
೪. ಶತಾನಂಧೋ
೫. ಉದ್ಧತಶ್ಚೈವ ಪಂಚಮಂ

೬. ವಿಜಯೋ

೭. ರುದ್ರಭಟ್ಟಶ್ಚ

೮. ವಾಮನಾಖ್ಯ ತಥಾಽಷ್ಟಮಃ

೯. ಸಯಾದವ ಪ್ರಕಾಶಶ್ಚ ನವಮಂ ಸಂಪ್ರಕೀರ್ತಿತಃ

೧೦. ಬ್ರಹ್ಮದತ್ತಂ

೧೧. ಭಾಸ್ಕರಂಚ

೧೨. ವಿಶಾರದೋ

೧೩. ವೃತ್ತಿಕಾರಕಃ

೧೪. ರಾಮಾನುಜಃ ತತಃ

೧೫. ಭತೃ ಪ್ರಪಂಚೋ

೧೬. ದ್ರವಿಡಃ ತತಃ

೧೭. ತಥಾವಿಜಯ ಭಟ್ಟಶ್ಚ

೧೮. ವಿಷ್ಣು ಕ್ರಾಂತ ತಥೈವಚ

೧೯. ವಾದೀಂದ್ರಶ್ಚ ತಥಾ ಪಶ್ಚಾತ್

೨೦. ತಥಾ ಮಾಧವ ದಾಸಕಃ ತತಃ ಪಶ್ಚಾತ್

೨೧. ಸಂಕರಶ್ಚ ಏಕ ವಿಂಶತಿ ವಾನಃ (ಯುಕ್ತಿ ಮಲ್ಲಿಕಾ)

ಒಂದಲ್ಲ ಒಂದು ರೀತಿಯಲ್ಲಿ ಈ ಎಲ್ಲಾ ಮತ ಪ್ರಕ್ರಿಯೆಗಳೂ ತಮಃ ಪ್ರದಾಯಕಗಳೇ ಹೊರತಾಗಿ ಬೇರೆಯಲ್ಲ. ಇವರೆಲ್ಲರ ಅಭಿಪ್ರಾಯವನ್ನು ಕ್ರೋಢಿಕರಿಸಿ ಶ್ರೀಪುರಂದರದಾಸರು ಹೀಗೆ ಹೇಳಿದ್ದಾರೆ.

"ಒಬ್ಬ ಆಚಾರಿಯವ ದೈವವೇ ಇಲ್ಲವೆಂದ ।
ಒಬ್ಬ ಆಚಾರಿಯವನು ದೈವಕೆಂಟೇ ಗುಣವೆಂದ ।
ಒಬ್ಬ ಆಚಾರಿಯವ ನಿರ್ಗುಣ ನಿರಾಕಾರ ನಿರವಯವನೆಂದ ।
ಮಬ್ಬಿನಲ್ಲಿ ಒಬ್ಬ ಕಡೆಯಲಿ ತಾನೇ ದೈವವೆಂದ ॥
ಒಬ್ಬರೂ ವೇದಾರ್ಥವನರಿಯರು ಅರಿಯರು ।
ಒಬ್ಬ ಮಧ್ವಾಚಾರ್ಯರೇ ಪುರಂದರ ವಿಠಲ ।
ಒಬ್ಬನೇ ದೈವವೆಂದು ತೋರಿಕೊಟ್ಟರಾಗಿ ॥

ವೈದೀಕದಲ್ಲಿ ನಡೆದೇವೆಂದು ತಾವು
ವಾದಿಸಿ ವೈಷ್ಣವಂ ಬಿಟ್ಟುಕೊಟ್ಟರು ಕೆಲರು ।
ಅದೇ ವೈಷ್ಣವ ಮತದಲ್ಲಿ ನಡೆದೇವೆಂದು ।
ವೈದಿಕವಂ ಬಿಟ್ಟುಕೊಟ್ಟರು ಕೆಲರು ।
ವೈದಿಕ ವೈಷ್ಣವ ಒಂದೇ ಎಂದು ಪ್ರತಿಪಾದಿಸಿದ ।
ಮಧ್ವಮುನಿ ಪುರಂದರ ವಿಠಲ ಮೆಚ್ಚೆ ॥ ಸುಳಾದಿ ॥

ಹೀಗೆ ದುರಾತ್ಮರು ಹುಟ್ಟಿ ದುರುದ್ದೇಶದಿಂದ ಕೈಕೊಂಡ ಕೃತ್ಯಗಳು ವೈದಿಕ ಪ್ರಪಂಚವನ್ನು ತಲ್ಲಣಗೊಳಿಸಿದುವು. ಅಪರೋಕ್ಷ ಜ್ಞಾನಕ್ಕೆ ಪ್ರತಿಬಂಧಕವಾದ ಮಿಥ್ಯಾ ಜ್ಞಾನದ ಪರಿಣಾಮವಾಗಿ ಸುಜೀವರು ಅಜ್ಞಾನಾಂಧಕಾರದ ಕಾರಾಗೃಹದಲ್ಲಿ ಬಂಧಿಸಲ್ಪಟ್ಟರು. ಹಲವರು ಬಲಾತ್ಕಾರವಾಗಿಯೂ ಇನ್ನೂ ಕೆಲವರು ಜ್ಞಾನ ದೌರ್ಬಲ್ಯದಿಂದಲೂ ಮತ್ತೂ ಕೆಲವರು ಸಂಶಯಗ್ರಸ್ಥರಾದರೂ ಬಹು ಜನ ನಿಷ್ಠೆಯ ಪ್ರಭಾವದಿಂದಲೂ ನೈಜವಾದ ವೈದೀಕ ಜ್ಞಾನ (ಅಪರೋಕ್ಷ) ದಿಂದ ವಂಚಿತರಾಗಿ ಮಿಥ್ಯಾವಾದವನ್ನು ಅನುಸರಿಸಿದರು. ಇದರಿಂದ ಜ್ಞಾನಾಖ್ಯ ಸೂರ್ಯನು ಅಸ್ತಂಗತನಾಗಿ ಪ್ರಪಂಚವು ಅಜ್ಞಾನಾಂಧಕಾರದಲ್ಲಿ ಮುಳುಗಿ ಹೋಯಿತು.

"ವಿಜ್ಞಾನ ಭಾನುಮತಿ ಕಾಲ ಬಲೇನ ಲೀನೇ ।
ದುರ್ಭಾಷ್ಯ ಸಂತಮಸ ಸಂತತಿತೋ ಜನೇಂಧೇ ॥
ಮಾರ್ಗಾತ್ಸತಾಂ ಸ್ಖಲತಿ ಖಿನ್ನ ಹೃದೋ ಮುಕುಂದಂ ।
ದೇವಾಶ್ಚತುರ್ಮುಖಾಃ ಶರಣಂ ಪ್ರಜಗ್ಮುಃ ॥ ಮ.ವಿ. ೨-೧ ॥"

ಇಂಥಾ ಭಯಂಕರವಾದ ವಿಪತ್ತಿನಿಂದ ತಲ್ಲಣಿಸಿದ ಮುಮುಕ್ಷು ಕುಲವು ಬ್ರಹ್ಮದೇವರನ್ನು ಮುಖ್ಯರನ್ನಾಗಿಟ್ಟುಕೊಂಡು ಶ್ರೀಮನ್ನಾರಾಯಣನಿಗೆ ಶರಣಾಗತರಾಗಿ ತಮ್ಮನ್ನು ಈ ಭವಬಂಧನದಿಂದ ಮುಕ್ತರನ್ನಾಗಿ ಮಾಡಬೇಕೆಂದು ಬೇಡಿಕೊಂಡರು.

ಶ್ರೀಹರಿಯಾದರೂ ತ್ರಿಯುಗನೆನಿಸಿ ಕಲಿಯುಗದಲ್ಲಿ ತಾನು ಸಾಕ್ಷಾದವತಾರವನ್ನು ಮಾಡುವವನಲ್ಲ. ಬ್ರಹ್ಮದೇವರಿಗೆ ಅವತಾರಗಳೇ ಇಲ್ಲ. ಹಾಗಿದ್ದ ಮೇಲೆ ಆಸೂರ್ಯ ಮತಗಳನ್ನು ನಿರಾಕರಿಸಿ ಸದ್ಗ್ರಂಥಗಳನ್ನು ರಚಿಸಿ ಮುಕ್ತಿ ಯೋಗ್ಯರಿಗೆ ನೀಡಲು ಯಾರು ಸಮರ್ಥರು ಎಂಬುದನ್ನು ಅರಿತ ಶ್ರೀಹರಿಯು ಶೀಘ್ರವೇ ವಾಯುದೇವರನ್ನು ತನ್ನಲ್ಲಿಗೆ ಬರಮಾಡಿಕೊಂಡನು.

ಈ ವಾಯುದೇವರಿಗೆ ಕಲಿಯುಗದಲ್ಲಿ ಜ್ಞಾನ ಪ್ರತಿಬಂಧಕವಾದಾಗ ಅದನ್ನು ನಿವಾರಿಸಿ ಯಥಾರ್ಥವಾದ ಜ್ಞಾನವನ್ನು ನೀಡುವ ಯೋಗ್ಯತೆಯು ಇರುವುದರಿಂದಲೇ ವೇದ ವಚನಾನುಸಾರವಾಗಿ ಈತನ ಅವತಾರವು ಆಗಲೇ ಬೇಕಾಗಿದೆ ಎಂದು ತಿಳಿದ ಶ್ರೀಹರಿಯು ಶ್ರೀವಾಯುವನ್ನು ತನ್ನ ಬಳಿಗೆ ಕರೆಸಿಕೊಂಡು ವೇದ ವಚನವು ಸತ್ಯವಾಗಲೆಂದು ಆಜ್ಞಾಪಿಸಿದನು. ಈ ಸಂದರ್ಭದಲ್ಲಿ ವೇದ ವಚನವು ಏನನ್ನು ಹೇಳುತ್ತದೆ? ಎಂದರೆ ಬಳಿತ್ಥಾಸೂಕ್ತವು

ಹೀಗೆ ಹೇಳುತ್ತದೆ:-

"ಮತಿಋತಸ್ಯಧೇನಾ ಅನಯಂತಸುಸ್ರುತಃ ॥ ಮತಿ ಎಂದರೆ ಹನುಮಾ ಜ್ಞಾನಿ (ಅಜ್ಜರಿಗೆ ಸೊಟ್ಟ ಮೂತಿ ಎಂಬರ್ಥ) ಎಂಬುದಾಗಿ ಅವತರಿಸುವನು ಎಂಬುದಾಗಿ ಹೇಳಲಾಗಿದೆ. ಈ ಕಾರ್ಯವು ಜರುಗಿದ ವಿಷಯವನ್ನು ಈ ಪುಸ್ತಕದಲ್ಲಿ ವಿಶದವಾಗಿ ಈಗಾಗಲೇ ವರ್ಣಿಸಿಯಾಗಿದೆ. ಹೀಗೆಯೇ ವರ್ಣಿತವಾದ ಮತ್ತೊಂದು ಅವತಾರವೆಂದರೆ " ಪೃಕ್ಷೋವಪುಃ ಪಿತು ಮಾನ್ನಿತ್ಯ ಆಶಯೇ ದ್ವಿತೀಯಾ ಮಾಸಪ್ತಶಿವಾತು ಮಾತೃಷು" ಎಂದರೆ ಬಹು ಭಕ್ಷಕಾದಿ ಮಹಾ ಬಲ ಪ್ರದರ್ಶಕವಾದ ಭೀಮಾವತಾರ ಮಾಡುವರೆಂದು ಹೇಳಿದೆ. ತರುವಾಯ ಉಳಿದಿರುವುದೇ "ತೃತೀಯಮಸ್ಯ ಋಷಭಸ್ಯದೋಹಸೇ ದಶಪ್ರಮತಿಂ ಜನಯಂತ ಯೋಷಣಃ" ಎಂದರೆ ಮೂರನೇಯದಾಗಿ ದಶಪ್ರಮತಿಗಳೆಂಬ ಹೆಸರಿನಿಂದ ಬ್ರಾಹ್ಮಣ ಸ್ತ್ರೀಯರಲ್ಲಿ ಅವತರಿಸುವರು ಎಂದು ವರ್ಣಿಸಲಾಗಿದೆ. ಈಗ ಇಲ್ಲಿ ಉಳಿದಿರುವುದು ಈ ಮೂರನೇ ಅವತಾರದ ವಿವರಣೆಗಳು.

ಅನಂತ ಕೋಟಿ ದೇವತೆಗಳು ಶ್ರೀಹರಿಯ ಸೇವೆಗೆ ಸಿದ್ಧರಿರುವಾಗಿ ಪರಮಾತ್ಮನು ಈ ವಾಯುದೇವರನ್ನೇ ಏಕೆ ಜ್ಞಾನಾದಿ ಬಲಕಾರ್ಯಗಳಿಗೆ ಪ್ರಧಾನವಾಗಿ ಆರಿಸಿಕೊಂಡನು? ಎಂದರೆ ಇತರ ದೇವತೆಗಳು ಕಲ್ಯಾದಿ ದೈತ್ಯರ ಆವೇಶಗಳಿಗೆ ಆಸ್ಪದರಾದ ಪ್ರಯುಕ್ತ ಆವೇಶ ಸಂದರ್ಭದಲ್ಲಿ ಇವರು ಕರ್ತವ್ಯಪರಾಙ್ಮುರಾಗುವುದು ಖಚಿತ. ಆಗ ಇವರು ತಮ್ಮನ್ನು ತಾವೇ ರಕ್ಷಿಸಿಕೊಳ್ಳಲಾರರು. ಹಾಗಿದ್ದ ಮೇಲೆ ಇತರರನ್ನೇನು ರಕ್ಷಿಸಿಯಾರು? ಆದ್ದರಿಂದ ಸ್ವರೂಪದಿಂದಲೇ ಆ ಖಣಾತ್ಮ ಸಮರಾದ ಕಲ್ಯಾವೇಶ ರಹಿತರಾದ, ಕಲಿ ಭಂಜಕ ಪ್ರಭಂಜನರೆನಿಸಿದ ಈ ವಾಯುದೇವರೇ ಪರಮ ಸಮರ್ಥನೆಂದು ವೇದವು ಘೋಷಿಸಿರುತ್ತದೆ. ಅದು ಸತ್ಯವಾಗಬೇಕಾಗಿರುವುದು. ಶ್ರೀಹರಿಯ ಇಚ್ಛೆಗೆ ಬಂದು ಆತನು ಶ್ರೀವಾಯುದೇವನನ್ನು ಕರೆದು ಭೂತಳದಲ್ಲಿ ಅವತರಿಸಿ ಸಜ್ಜನರನ್ನು ಉದ್ಧರಿಸಿಲು ಅಪ್ಪಣೆಯನ್ನು ಇತ್ತನು. ಇದಕ್ಕೆ ಮುಖ್ಯಕಾರಣ "ಚಿಂತಾಕುಲಂ ವಿವಿಧ ಸಾಧು ಕುಲಂ ಬಭೂವ" ಜಗತ್ತಿನಲ್ಲಿ ಮುಮುಕ್ಷು ಕುಲವು ಜ್ಞಾನ ಪಿಪಾಸೆಯಿಂದ ಬಾಯಾರಿ ದುಃಖತಪ್ತರಾಗಿ ನರಳುತ್ತಿದ್ದುದರಿಂದ ಅವರ ಉದ್ಧಾರಾರ್ಥವಾಗಿ ಈ ಆದೇಶ. ತ್ರಿವಿಧ ಜೀವರ ಸಾಧನೆಯಲ್ಲಿ ವಾಯುದೇವರ ಸಾಧನೆಯು ಈ ವಿಧವಾಗಿ ಸ್ವರೂಪ ಭೂತವಾಗಿಯೇ ಇರುವುದರಿಂದ ಅವರಿಗೆ ಈ ಆದೇಶ.

ಸರ್ವಥಾ ಭಗವತ್ಕಾರ್ಯ ಸಾಧಕರಾದ ವಾಯುದೇವರು ಶ್ರೀಹರಿಯಾಜ್ಞೆಯನ್ನು ಶಿರಸಾವಹಿಸಿ ಭೂತಳದಲ್ಲಿ ಅವತರಿಸಲು ಸಿದ್ಧರಾದರು. ಅನತಿ ಕಾಲದಲ್ಲೇ ಇವರು ಭೂಲೋಕದಲ್ಲಿ ಅವತರಿಸಲಿರುವ ವಿಷಯವನ್ನು ಪ್ರಕಟಿಸಲು ರಜತ ಪೀಠ ಪುರಾಧಿಪತಿಯಾದ ಶ್ರೀಅನಂತಾಸನ ನಾಗಪೀಠಸ್ಥ (ಶ್ರೀಲಕ್ಷ್ಮೀನೃಂಹ) ದೇವನು ಒಂದು ಮಕರ ಸಂಕ್ರಮಣ ಉತ್ಸವ ಸಂದರ್ಭದಲ್ಲಿ ಒಬ್ಬ ವ್ಯಕ್ತಿಯಲ್ಲಿ ಆವೇಶಗೊಂಡು ಗುಡಿಯ ಮುಂಭಾಗದ ಧ್ವಜಸ್ಥಂಭದ ಮೇಲೆ ಹತ್ತಿ ಅಲ್ಲಿ ವಿಚಿತ್ರವಾದ ರೀತಿಯಲ್ಲಿ ನರ್ತನವನ್ನು ಮಾಡಲು ತೊಡಗಿದನು. ಈ ಆವೇಶಭರಿತನಾದ ವ್ಯಕ್ತಿಯು ಸ್ಥಂಭದ ತುದಿಯಲ್ಲಿ ನರ್ತನವನ್ನು ಮಾಡುತ್ತಿದ್ದುದು ಅನೇಕ ಜನರ ಗಮನವನ್ನು ಸೆಳೆಯಿತು. ಬಹು ಜನರು ಭೀಭತ್ಸಮಯವಾದ ಆ ನರ್ತನವನ್ನು ವೀಕ್ಷಿಸುತ್ತಿದ್ದಂತೇ ಆ ಸ್ಥಂಭದ ಮೇಲೆ ನರ್ತಿಸುತ್ತಿದ್ದ ವ್ಯಕ್ತಿಯಲ್ಲಿ ಆವಿಷ್ಟನಾಗಿದ್ದ ಅನಂತೇಶ್ವರ ಸ್ವಾಮಿಯು ಗಟ್ಟಿಯಾಗಿ ಹೀಗೆ ಭವಿಷ್ಯವನ್ನು ನುಡಿದನು.॥ "ಉತ್ಪತ್ಸ್ಯತೇ ಜಗತಿ ವಿಶ್ವಜನೀನವೃತ್ತಿ । ವಿಪ್ರಜ್ಞ ಏವಭಗವಾನಚಿರಾದಿಹೇತಿ ॥"

"ಏ ಜನಗಳಿರಾ ಕೇಳಿ, ಕೇಳಿ. ಇನ್ನೂ ಸ್ವಲ್ಪ ಕಾಲದಲ್ಲೇ ಈ ಬ್ರಹ್ಮಾಂಡವನ್ನು ಶುಚಿಗೊಳಿಸುವ ಮಹಾತ್ಮನು ಅವತರಿಸುವನು. ಅದು ಇದೇ ಕಲಿಯುಗದಲ್ಲಿ, ಭರತ ಖಂಡದಲ್ಲಿ, ಪರಶುರಾಮ, ದುರ್ಗಾದೇವಿಯ ಸನ್ನಿಧಾನದಲ್ಲಿ ಪಾಜಕ ಕ್ಷೇತ್ರದಲ್ಲಿ ಶಿವಳ್ಳಿ ಬ್ರಾಹ್ಮಣರ ಕುಲದಲ್ಲಿ ಮಧ್ಯಗೇಹ ಭಟ್ಟರೆಂಬ ವಿದ್ವಾಂಸರಲ್ಲಿ ಅವತರಿಸುವನು. ಆತನೇ ವಾಯುದೇವರೆಂದು ತಿಳಿಯಿರಿ. ಆ ಕಾಲವು ದೂರವಿಲ್ಲ. ದೂರವಿಲ್ಲ" ಎಂದು ಹೇಳಿ ಸ್ಥಂಭದಿಂದ ಕೆಳಕ್ಕೆ ಹಾರಿದನು. ಆತನು ಆಯಾಸವೇ ಇಲ್ಲದಂತೆ ಪಕ್ಷಿಯಂತೆ ಕೆಳಗಿಳಿದು ಕುಳಿತುದನ್ನು ನೋಡಿದ ಜನರು ಆಶ್ಚರ್ಯಭರಿತರಾದರು. ಮತ್ತು ಹರ್ಷೋದ್ಗಾರವನ್ನು ಮಾಡುತ್ತ ತೆರಳಿದರು.

(ವಿಶೇಷ :- ಪರಮಾತ್ಮನು ಇಷ್ಟಪಟ್ಟುದೇ ಆದರೆ ಯಾವ ದೇವತೆಯಿಂದಲಾದರೂ ಯಾವ ಕಾರ್ಯವನ್ನೂ ಮಾಡಿಸಬಲ್ಲನು. ಹಾಗಿರುವಾಗ ವಾಯುದೇವರೇ ಇಲ್ಲಿ ಯಾಕೆ ಬೇಕಾಗಿತ್ತು? ಎಂಬ ಪ್ರಶ್ನೆಯು ಬರಬಹುದು. ಸತ್ಯಭೂತವಾದ ಜಗತ್ತಿನಲ್ಲಿ ಸ್ವರೂಪ ಯೋಗ್ಯತೆಯಂತೆ ಭಗವಂತನು ಜಗದ್ವ್ಯಾಪಾರವನ್ನು ಮಾಡುತ್ತಾ ನಿರ್ದೋಷಿಯಾಗಿರುತ್ತಾನೆ. ಭಗವಂತನ ಇಚ್ಛೆಗೆ ಸ್ವರೂಪ ಯೋಗ್ಯತೆಯೂ ಕಾರಣವಾಗಿರುತ್ತದೆ. ಇದರಿಂದ ಪರಮಾತ್ಮನಿಗೆ ವೈಷಮ್ಯಾದಿ ದೋಷಗಳು ಇಲ್ಲವೆಂಬುದು ಸಿದ್ಧವಾಗುತ್ತದೆ).

ಧ್ವಜ ಸ್ಥಂಭಾಗ್ರ ನೃತ್ಯಶೀಲಪಟು ವಚನದಂತೆ ಪಾಜಕ ಕ್ಷೇತ್ರದಲ್ಲಿ ಮಧ್ಯಗೇಹಭಟ್ಟರೆಂಬ ಸದ್ಬ್ರಾಹ್ಮಣರೊಬ್ಬರು ತಮ್ಮ ಧರ್ಮಪತ್ನಿಯಾದ ವೇದವತೀದೇವಿಯೊಡನೆ ಪರಮ ಪವಿತ್ರವಾದ ಸಂಸಾರವನ್ನು ಸಾಗಿಸಿ ಕೊಂಡಿದ್ದರು. ಭಟ್ಟರು ವಿದ್ಯಾವಂತರೂ, ಶುದ್ಧ ಮನಸ್ಸಿನವರೂ ವಿಷ್ಣು ಭಕ್ತರೂ, ಜಿತೇಂದ್ರಿಯರೂ, ವಿನಯಶೀಲರೂ, ಭಾರತ, ಭಾಗವತಾದಿ ಪುರಾಣಗಳ ಗೂಢಾರ್ಥವನ್ನು ಬಲ್ಲವರೂ, ಸದಾಚಾರ ಸಂಪನ್ನರೂ ವಿಶೇಷತಃ ಅನಂತೇಶ್ವರನ ಭಕ್ತರೂ ಆಗಿದ್ದರು. ಈ ಮಹನೀಯರು ತ್ರಿನೇತ್ರ ಕದಂಬ ರಾಜನ ಕಾಲದಲ್ಲಿ ಉತ್ತರದ ಹಿಂದೆ ದ್ರೋಣಾಚಾರ್ಯರ ಅಗ್ರಹಾರವಾಗಿದ್ದ ಅಹಿಚ್ಛತ್ರದಿಂದ ಅಶ್ವಮೇಧಯಾಗವನ್ನು ಮಾಡಿಸಲಿಕ್ಕೆ (ಕಶ್ಯಪ ಮಹಾಮುನಿಯಿಂದ ಪ್ರೇರಿತರಾಗಿ) ದಕ್ಷಿಣಾಪಥಕ್ಕೆ ಆಗಮಿಸಿದ ಅರವತ್ತು ಕುಟುಂಬಗಳವರಿಗೆ ಸೇರಿದ, ಪಾಷ್ಟಿಕ (ಅರವತ್ತೊಕ್ಕಲು) ಮನೆತನಕ್ಕೆ ಸೇರಿದವರಲ್ಲಿ ಒಬ್ಬರಾಗಿದ್ದರು. ದಯಾ ದಾಕ್ಷಿಣ್ಯ, ಅಂತಃಕರಣ, ವಿನಯ, ದಾನ, ಧರ್ಮ, ಸುಜ್ಞಾನಾ, ಪಾಂಡಿತ್ಯ, ಪರೋಪಕಾರಾದಿ ಸದ್ಗುಣಗಳು ಇವರ ಪಾಷ್ಟಿಕ ಮನೆತನಕ್ಕೆ ತಕ್ಕಂತೆ ಸಹಜವಾಗಿಯೇ ಇವರಲ್ಲಿ ಇದ್ದುವು.

ನಿತ್ಯವೂ ಪುರಾಣಗಳ ಹೃದಯವನ್ನು ಬಿಚ್ಚಿ ಕಾಣುತ್ತಿದ್ದ ಇವರಿಗೆ ನಿರ್ಗುಣ ಬ್ರಹ್ಮವಾದವು ಸವಿಯಾಗಲಿಲ್ಲ. "ತತ್ವೇ ಸಕಾಲಚಲಿಧೀ। ರತಿ ಸಂಶಯಾಲುಃ" ಎಂಬಂತೆ ಶ್ರೀಹರಿಯ ಗುಣಪೂರ್ಣತ್ವವನ್ನು ನೆನೆದರೂ ಮಿಥ್ಯಾವಾದ ಬಾಹುಳ್ಯದಿಂದ ವಿಚಲಿತರಾಗಿ ಸಂಶಯಗ್ರಸ್ಥರಾಗಿದ್ದರು. ಇವರು ಮುಮುಕ್ಷು ಕುಲತಿಲಕರಾಗಿದ್ದುದರಿಂದ ಅಜ್ಞಾನ ಶಾಸ್ತ್ರಭೀತರಾಗಿ ಈ ಅಂಧಕಾರವನ್ನು ತೊಲಗಿಸಲು ನಮ್ಮಿಂದಂತೂ ಸಾಧ್ಯವೆನಿಸುತ್ತಿಲ್ಲ. ಆದರೆ ಪರಮಾತ್ಮನ ಚಿತ್ತಕ್ಕೆ ಬಂದರೆ ಯಾವುದು ತಾನೇ ಅಸಾಧ್ಯ? ಹಿಂದೆ ರಾಕ್ಷಸ ಭೀತರಾದ ಕಶ್ಯಪ, ಕರ್ದಮ, ಪರಾಶರ, ಪಾಂಡುರಾಜರೇ ಮೊದಲಾದವರು ಭಗವಂತನನ್ನು ಪ್ರಾರ್ಥಿಸಿ ಸತ್ಪುತ್ರರನ್ನು ಪಡೆದು ಅವರ ಮುಖಾಂತರವಾಗಿ ದಾನವ ಕುಲವನ್ನು ಧ್ವಂಸ ಮಾಡಿಸಿದರು. ನಾನೀಗ ಅವರ ಮಾರ್ಗವನ್ನೇ ಅನುಸರಿಸಿದರೆ ಖಂಡಿತವಾಗಿಯೂ ಶ್ರೀಹರಿಯು ನಮ್ಮಲ್ಲಿ ಕೃಪೆದೋರಿ ಸತ್ಸಂತಾನ ಮುಖಾಂತರವಾಗಿ ಈ ಕತ್ತಲೆಯನ್ನು ನಿವಾರಿಸುವನು ಎಂದು ನಂಬಿ ತಮ್ಮ ಕುಲಸ್ವಾಮಿಯಾದ ಅನಂತೇಶ್ವರನನ್ನು ಅನನ್ಯ ಭಕ್ತಿಯಿಂದ ಸೇವೆಯನ್ನು ಮಾಡಲು ಪ್ರಾರಂಭಿಸಿದರು. "ಭಜೇ

ಭುಜಂಗ ಶಯನಂ । ದ್ವಿಷಡಬ್ಧಿ ಕಾಲಂ" ಎಂದಂತೆ ಹನ್ನೆರಡು ವರ್ಷಗಳ ಕಾಲ ಈ ಸೇವೆಯು ನಿರಾತಂಕವಾಗಿಯೂ, ಭಕ್ತಿ ಪುರಸ್ಸರವಾಗಿಯೂ ಸಾಗಿತು. ಕಠಿಣ ಪರಿಶ್ರಮ ವ್ರತಗಳಿಂದ ಭಟ್ಟ ದಂಪತಿಗಳ ತ್ರಿಕರಣಗಳು ಪರಿಶುದ್ಧಗೊಂಡವು. ಶುದ್ಧವೇ ಆಗಿರುವ ಬಂಗಾರಕ್ಕೆ ಪುಟವಿಟ್ಟಂತೆ ಅವರ ವ್ರತಗಳು ಇವರನ್ನು ಅತ್ಯಧಿಕ ಪುನೀತರನ್ನಾಗಿ ಮಾಡಿದುವು. ಸತಿ ಪತಿಗಳಲ್ಲಿ ಲಕ್ಷ್ಮೀನಾರಾಯಣರ ಸನ್ನಿಧಾನವು ಪ್ರಾಪ್ತವಾಯಿತು. ಪರಮಾತ್ಮನ ಪುತ್ರನೇ ವಾಯುದೇವರಲ್ಲವೇ? ನಿಮಿತ್ತ ಮಾತ್ರದಿಂದ ಲೋಕದಂತೆ ಗರ್ಭವತಿಯರಾದ ಭಟ್ಟರ ಪತ್ನಿ ವೇದವತೀ ದೇವಿಯಲ್ಲಿ ಪುತ್ರನಾಗಿ ಬರಲಿಚ್ಛಿಸಿದ ವಾಯುದೇವರು ಶ್ರೀಹರಿಯಾಜ್ಞೆಯಂತೆ ಉಡುಪಿಗೆ ಧಾವಿಸಿ ಅನಂತೇಶ್ವರನಿಗೆ ನಮಸ್ಕರಿಸಿ ಮಧ್ಯಗೇಹಭಟ್ಟರ ಮನೆಗೆ ದಯಮಾಡಿಸಿದರು. ಆಗ್ಗೆ ವೇದವತಿ ದೇವಿಯ ಗರ್ಭದಲ್ಲಿ ಒಂಭತ್ತು ತಿಂಗಳು ಬೆಳೆದಿದ್ದ ಬೇರೆ ಜೀವನನ್ನು ಜನಿಸಿದ ತಕ್ಷಣವೇ ಅಲ್ಲಿಂದ ನಿರ್ಗಮಿಸುವಂತೆ ಮಾಡಿ ಶ್ರೀವಾಯುದೇವರು ಆ ನವಜಾತ ದೇಹದಲ್ಲಿ ಪ್ರವೇಶ ಮಾಡಿ ಭಟ್ಟ ದಂಪತಿಗಳ ಪುತ್ರನೆನಿಸಿ ಅವರನ್ನು ಸಂತೋಷಗೊಳಿಸಿದರು.

ಇಲ್ಲಿ ಶ್ರೀಮಧ್ವಾಚಾರ್ಯರ ಅವತಾರಗಳ ಬಗ್ಗೆ ತಿಳಿಯಬೇಕಾದ ಅಂಶವು ಅನಿವಾರ್ಯವಾಗಿದೆ.

ವಾಯುದೇವರಿಗೆ ಗರ್ಭದುಃಖ ವಿವರ್ಜಿತತ್ವದ ವಿವರಣೆ ಪೂರ್ವಪಕ್ಷ: ೧. ವೃಷಭಾಚಲದಲ್ಲಿ ಅಂಜನಾದೇವಿಯು ಪುತ್ರ ಸಂತಾನಕ್ಕಾಗಿ ವಾಯುದೇವರನ್ನು ಕುರಿತು ತಪಸ್ಸನಾಚರಿಸಿದಳು. ಆಗ ವಾಯುದೇವರು ಮೂಲರೂಪದಿಂದ ಅಂಜನಿಯನ್ನು ಸ್ಪರ್ಶವಾಡಿ ಅಂಶ ಮಾತ್ರದಿಂದ ಹನುಮಂತನಾಗಿ ಪ್ರಾದುರ್ಭವಿಸಿ ಆಂಜನೇಯಾ, ಅಂಜನಾತನಯಾ ಎನಿಸಿದನು. ಆತನು ಆಕೆಯ ಗರ್ಭದಿಂದ ಹುಟ್ಟಿ ಬರಲಿಲ್ಲ. ಯಾಕೆಂದರೆ ವಾಯುದೇವರಿಗೆ ಗರ್ಭಯಾತನೆಯು ಇಲ್ಲ. ಆತನು ಅಂಜನಾದೇವಿಯ ಗರ್ಭದಿಂದ ಹುಟ್ಟಿದ್ದರೆ ಆತನಿಗೆ ಗರ್ಭಯಾತನೆಯು ಆಗುತ್ತಿತ್ತು. ಎಂದು ಹೇಳುವವರಿದ್ದಾರೆ. ಹಾಗೆ ಕುಂತಿ ದೇವಿಯಲ್ಲಿ ಸಹ. ೨. ಹಾಗೆಯೇ ಶ್ರೀಮಧ್ವಾಚಾರ್ಯರೂ ಸಹ ವೇದವತೀ ದೇವಿಯ ಗರ್ಭದಿಂದ ಹುಟ್ಟಿ ಬರಲಿಲ್ಲ. ಬದಲಿಗೆ ತಾಯಿಯ ಗರ್ಭದಲ್ಲಿ ಲಾತವ್ಯರು ಬೆಳೆದರು. ಅವರು ಹುಟ್ಟಿದ ಕೂಡಲೇ ಶ್ರೀವಾಯುದೇವರು ಲಾತವ್ಯರನ್ನು ಆ ದೇಹದಿಂದ ಹೊರ ಕಳುಹಿಸಿ ತಾವು ಆ ದೇಹದಲ್ಲಿ ಪ್ರವೇಶ ಮಾಡಿದರು. ಹೀಗೆ ಶ್ರೀಮಧ್ವರು ಗರ್ಭದುಃಖವನ್ನು ಅನುಭವಿಸಲಿಲ್ಲ ಎಂದು ಹೇಳುತ್ತಾರೆ. ಇದಕ್ಕೆ ಪ್ರಮಾಣ ರೂಪವಾಗಿ –

> "ಅಜ್ಞದೃಷ್ಟ್ಯಾ ಶರೀರಂತು । ಜಾತುವದ್ದೃಶ್ಯತೇಬಹಿಃ ॥
> ದ್ವಿಶೋಢಶ ಲಕ್ಷಣಕಂ । ಶರೀರಂಚ ತದೇವಹಿ ॥
> ಲಾತವ್ಯಶ್ಚ ಋಜುಸ್ತಸ್ಯ । ಕ್ಲುಪ್ತಂ ಪ್ರತಿ ಯುಗೇ ಯುಗೇ ॥
> ವಾಯೋಃಪ್ರವೇಶ ಪರ್ಯಂತಂ। ಅತ್ರಸ್ಥಿತ್ವಾಥ ಗಚ್ಛತಿ ॥
> ಇದಂ ಶರೀರಂ ಸಂಪ್ರಾಪ್ಯ । ಲಾತವ್ಯೋ ವಾಯುತ್ಮಿಯಾತ್ ॥
> ತತಃ ಕಾಲಾಂತರೇಸೋಪಿ । ವಾದಿರಾಜೋ ಭವಿಷ್ಯತಿ ॥ಸ್ಕಾಂದೇ॥

೩. ಈ ಬಗ್ಗೆ ಇನ್ನೊಂದು ಕಥಾನಕವಿದೆ. ಅದೇನೆಂದರೆ ಒಬ್ಬ ದೈತ್ಯನು ತನಗೆ ಋಜುಗಣಸ್ಥರಂತೆ ಮೂವತ್ತೆರಡು ಲಕ್ಷಣಗಳುಳ್ಳ ಶರೀರವು ಬೇಕು ಎಂದು ವರವನ್ನು ಬೇಡಿದ್ದನು. ಆ ನಿಮಿತ್ತ ಅವನಿಗೆ ವೇದವತಿ ದೇವಿಯ ಗರ್ಭದಲ್ಲಿ ಸಂಜಾತತ್ವವು ಪ್ರಾಪ್ತವಾಯಿತು. ಮೂವತ್ತೆರಡು ಲಕ್ಷಣಗಳುಳ್ಳ ಶರೀರವು ಅವನಿಗೆ ಬಂದಿತು.

ಅವನು ಮಾತ್ರ ಗರ್ಭಯಾತನೆಯನ್ನು ಅನುಭವಿಸಿ ಭೂಮಿಗೆ ಬಂದನು. ಕೂಡಲೇ ವಾಯುದೇವರು ಅವನನ್ನು ಆ ಶರೀರದಿಂದ ಹೊರದೂಡಿ ತಾವು ಅಲ್ಲಿ ಪ್ರವೇಶಗೈದು ಮುಂದೆ ತಮ್ಮ ಲೀಲೆಯನ್ನು ತೋರಿದುದು ಅವರಿಗೆ ಗರ್ಭವಾಸವಿಲ್ಲ ಎಂದು ಹೇಳುತ್ತಾರೆ.

೪. ಇನ್ನು ಸುಮಧ್ವವಿಜಯದಲ್ಲಿ ಸರ್ಗ ೨ ಶ್ಲೋಕ ೨೫ ರಲ್ಲಿ

"ಸಂಪೂರ್ಣ ಲಕ್ಷಣ ಚಣಂ ನವರಾಜಮಾನಾ ।
ದ್ವಾರಾಂತರಂ ಪರಮ ಸುಂದರ ಮಂದಿರಂ ತತ್ ॥
ರಾಜೀವ ಸತ್ಪುರ ವರಂ ಭುವನಾಧಿರಾಜೋ ।
ನಿಷ್ಕಾಸಯನಾ ಪರಮ ಸೌಭಗವಾನ್ ವಿವೇಶ ॥ ೨ – ೨೫ ॥"

ಎಂದು ಹೇಳಿರುವಲ್ಲಿ ಹೀಗೆ ನಿರೂಪಿಸಲಾಗಿದೆ. ಅದೇನೆಂದರೆ ಸುಂದರವಾದ ಒಂದು ಗೃಹವನ್ನು ಯಾರೋ ಆವರಿಸಿಕೊಂಡಿದ್ದರೆ ಬಲವಂತನಾದ ರಾಜನು ಅವನನ್ನು ಆ ಮನೆಯಿಂದ ಓಡಿಸಿ ತಾನು ಆ ಮನೆಯನ್ನು ಸಂತೋಷದಿಂದ ಪ್ರವೇಶಿಸುವಂತೆ ವಾಯುದೇವರು ಯಾರೋ ಒಬ್ಬನು (ಶಾತಪ್ಯರೆಂದಾಗಲೀ ದೈತ್ಯನೆಂದಾಗಲೀ ಹೇಳಿಲ್ಲ) ಮಾತೆ ವೇದವತೀ ದೇವಿಯ ಗರ್ಭದಲ್ಲಿ ಬೆಳೆಯುತ್ತಿದ್ದನು. ನವಮಾಸಗಳು ತುಂಬಿದ ಬಳಿಕ ಅವನು ಗರ್ಭದಿಂದ ಹೊರಬಿದ್ದ ತಕ್ಷಣವೇ ವಾಯುದೇವರು ಅವನನ್ನು ದೇಹದಿಂದ ಹೊರಹಾಕಿ ತಾವು ಅಲ್ಲಿ ಪ್ರವೇಶ ಮಾಡಿದರು ಎಂದಷ್ಟೇ ಇಲ್ಲಿ ಹೇಳಲಾಗಿದೆ. ಇಲ್ಲಿಗೆ ಮಾತೆಯಲ್ಲಿ ಬೆಳೆದುದು ೧. ಶಾತಪ್ಯರು, ೨. ದೈತ್ಯನೊಬ್ಬ ೩. ಅನಾಮಧೇಯನೊಬ್ಬ. ೪. ಇನ್ನು ಬಳಿತ್ಥಾಸೂಕ್ತ (ವೇದ) ವಂತೂ ವಾಯುದೇವರು ಮೂರು ಅವತಾರಗಳನ್ನೂ ಸ್ತ್ರೀಯರಲ್ಲೇ ಮಾಡುತ್ತಾರೆಂದು ಹೇಳಿದೆ –

"ಯದಿ ಮುಪಹ್ವರತೇ ಸಾಧತೇ। ಮತಿಃಋತಸ್ಯಧೇನಾ। ಅನಯಂತಸಸೃತಃ ॥ ಪೃಕ್ಷೋ ವಪುಃ ಪಿತುಮಾನ್ನಿತ್ಯ ಆಶಯೇ । ದ್ವಿತೀಯಾ ಮಾಸಪ್ತ ಶಿವಾಸು ಮಾತೃಷುಃ ॥ ತೃತೀಯ ಮಸ್ಯ ಋಷಭಸ್ಯ ದೋಹಸೇ । ದಶಪ್ರಮತಿಂ ಜನಯಂತ ಯೋಷಣಃ ॥" ಇತಿ ॥

ಹೀಗೆ ಪ್ರಮಾಣಗಳು ವೈವಿಧ್ಯಮಯವಾದಾಗ ಸರಿಯಾದ ತಿಳುವಳಿಕೆಗೆ ತೊಡಕಾಗುವುದು ಸಹಜವೇ. ಇಂಥಾ ಸಂದರ್ಭಗಳಲ್ಲಿ ಪ್ರತ್ಯಕ್ಷ ಪ್ರಮಾಣಗಳು ಸರಿಯಾದ ತಿಳುವಳಿಕೆಯನ್ನು ನೀಡುವಲ್ಲಿ ಬಹಳ ಉಪಯುಕ್ತವಾಗಿರುತ್ತವೆ.

ವಸ್ತುತಃ ಋಜುಗಣಸ್ಥರಿಗೆ ಗರ್ಭಯಾತನೆ, ಮರಣ ಸಂಕಟಗಳು ಸುತರಾಂ ಇಲ್ಲವೇ ಇಲ್ಲ. ಪ್ರಮುಖರಾದ ಬ್ರಹ್ಮ, ವಾಯು, ಶಾತಪ್ಯರು ಋಜುಗಣಸ್ಥರೇ. ಹೀಗಿರುವಾಗ ಗರ್ಭಪ್ರವೇಶದಿಂದ ವಾಯುದೇವರಿಗೆ ಗರ್ಭಯಾತನೆಯಾಗುತ್ತದೆಂಬ ಕಾರಣದಿಂದ ಆತನು ಗರ್ಭಪ್ರವೇಶ ಮಾಡಲಿಲ್ಲ. ಬದಲಿಗೆ ಶಾತಪ್ಯರು ಪ್ರವೇಶ ಮಾಡಿದರು ಎಂದರೆ ಶಾತಪ್ಯರು ಗರ್ಭಯಾತನೆಯನ್ನು ಅನುಭವಿಸಿರು ಎಂದು ಹೇಳಿದಂತಾಗುತ್ತದೆ. ಇದು ಶಾಸ್ತ್ರ ಸಮ್ಮತವಲ್ಲ. ಅಷ್ಟೇ ಅಲ್ಲ. ಗರ್ಭಪ್ರವೇಶ ಮಾತ್ರದಿಂದ ಋಜುಗಣಸ್ಥರಿಗೆ ಗರ್ಭಯಾತನೆಯು ಉಂಟೆಂಬ ಅಭಿಪ್ರಾಯವೂ ಮೂಡುತ್ತದೆ. ವಾಯುದೇವರಿಗೆ ಗರ್ಭಯಾತನೆಯ ಭಯವು ಇರುವುದಾದರೆ ಅದು ಋಜುಗಣಸ್ಥರೇ ಆದ ಶಾತಪ್ಯರಿಗೆ ಆಗಲಿಲ್ಲವೇ? ಆಗಿಲ್ಲವೆಂದರೆ ಶ್ರೀವಾಯುದೇವರಿಗೂ ಆಗುತ್ತಿರಲಿಲ್ಲ. ಅಂದ ಮೇಲೆ

ಅವರು ಗರ್ಭ ಸಂಜಾತರೇ ಆಗ ಬಹುದಿತ್ತು. ಗರ್ಭಯಾತನೆಯು ಆಗುತ್ತಿತ್ತೆಂದರೆ ಋಜುಗಣಸ್ಥರಲ್ಲಿ ಹೀಗೆ ಚಿಂತಿಸಿದರೆ ಅದು ಅಸದುಪಾಸನೆಯಾಗುತ್ತದೆ. ಗರ್ಭಯಾತನಾಶಂಕವನ್ನು ಮುಂದಿಟ್ಟುಕೊಂಡು ಅದರ ನಿವಾರಣೋಪಾಯವನ್ನು ಹುಡುಕಿ, ವಾಯುದೇವರು ಪರಕಾಯ ಪ್ರವೇಶವನ್ನು ಮಾಡಿದರೆಂದರೆ ಪ್ರಮಾಣಗಳಿಗೆ ಸಮ್ಮತಿಯಾಗಲಾರದು.

ಇನ್ನು ಎರಡನೇ ಆಖ್ಯಾಯಿಕೆಯಾದ ಅಸುರ ಪ್ರವೇಶವು ಕೂಡಾ ಗರ್ಭಯಾತನೆಯ ಮುಕ್ತಾರ್ಥವಾಗಿ ಹೇಳಿದಂತೆಯೇ ಆಗುತ್ತದೆ.

ವಾಯುದೇವರಲ್ಲಿ ಯಾವ ಕಾಲಕ್ಕೂ, ಯಾವ ಅವಸ್ಥೆಯಲ್ಲೂ ಗರ್ಭ ದುಃಖದ ಶಂಕೆಯನ್ನು ಹೊಂದಬಾರದು. ವಾಯುದೇವರು ಕೇವಲ ತಮ್ಮ ಮೂರು ಅವತಾರಗಳ ಕಾಲದಲ್ಲಿ ಮಾತ್ರ ಗರ್ಭಯಾತನೆಗೆ ಹೆದರಿದ್ದರೆ ಇನ್ನು ನಿರಂತರವಾಗಿ ಸೃಷ್ಟಿಗೆ ಬರುತ್ತಿರುವ ಸಮಸ್ತ ಜೀವರಾಶಿಗಳಲ್ಲಿ ಮುಕ್ತಿಪರಿಯಂತವಾಗಿ ಸ್ವರೂಪ-ದೇಹೇಂದ್ರಿಯಗಳಲ್ಲಿ ವ್ಯಾಪ್ತರಾಗಿ ಸರ್ವಸ್ಥಳಗಳಲ್ಲೂ ಜೀವರ ಜೊತೆಗಾರನಾಗಿ ಇರುವ ವಾಯುದೇವರು, ಮಾತೃಗರ್ಭದಲ್ಲಿ ಭ್ರೂಣನಾಗಿರುವ ಜೀವನಲ್ಲೂ ಅಂತರ್ಯಾಮಿಯಾಗಿ ಜೀವರನ್ನು ಕಾಪಾಡುತ್ತಿರುವಾಗ ವಾಯುದೇವರಿಗೆ ಗರ್ಭದುಃಖದ ಭಯವನ್ನು ಹೇಳಿದರೆ ಹೇಗೆ? ವಾಯುದೇವರಿಗೆ ಗರ್ಭಯಾತನೆ, ಮರಣ ಸಂಕಟಗಳಿಲ್ಲ. ಅದನ್ನು ಜೀವನು ಅನುಭವಿಸುತ್ತಾನೆ. ವಾಯುದೇವರು ಗರ್ಭಸ್ಥ (ಮಾತ್ರವಲ್ಲ ಪುರುಷರೇತಸ್ಸಿನಲ್ಲಿ ಸಹ) ಜೀವರಲ್ಲಿ ಅಂತರ್ಯಾಮಿಯಾಗಿದ್ದರೂ 'ಅನಿಲ', 'ಅಮೃತ' ಸ್ವರೂಪರಾಗಿದ್ದಾರೆ. ನಿರ್ಲಿಪ್ತರಾಗಿದ್ದಾರೆ. 'ದೋಷ ಹೀನಾ ಗುಣಾಧಿಕ'ರಾಗಿದ್ದಾರೆ. ಇವರು ಅನಭಿಮಾನದ ಶರೀರರು. ಮಹಾ ಸುಖ ಪ್ರಾರಬ್ಧ ಭೋಕ್ತರು. ಸರ್ವ ಜೀವರೊಳಗೆ ವ್ಯಾಪ್ತರು. ತದ್ದೋಷ ನಿರ್ಲಿಪ್ತರು. ಸುಖಿಗಳು-ಸುಖ ಪ್ರದಾತರು.

ವಾಯುದೇವರು ಇಲ್ಲದೆ ಭ್ರೂಣವು ಬೆಳೆಯಲಾರದು. ಜಗತ್ಸೃಷ್ಟಿಯು ನಡೆಯಲಾರದು. ಅಸೃಜ್ಯೆಯಿಂದ ಬ್ರಹ್ಮಾಂಡಕ್ಕೆ ಕಾಲಿರಿಸಿದ ಯಾವುದೇ ಜೀವಿ ಇರಲಿ. ಅವನು ಔಷಧಿಗಳ ರೂಪದಿಮದ ಹಿಡಿದು ಆಜನ್ಮ ವೃದ್ಧ ಪರಿಯಂತವಾಗಿ ಆಜೀವನಲ್ಲಿ ವಾಯುವು ಇರುವನು. ಮಾತ್ರವಲ್ಲ ದೇಹವನ್ನುಬಿಟ್ಟು ದೇಹಾಂತರಗಳನ್ನು ಹೊಂದುತ್ತಿದ್ದರೂ ಆ ಜೀವನಲ್ಲಿ ವಾಯುವಿನ ಅಂತರ್ಯಾಮಿತ್ವವು ನಿಲ್ಲುವುದಿಲ್ಲ. "ವಾಯುರನಿಲಮಮೃತಂ ಯಥೇದಂ ಭಸ್ಮಾಂತಂಶರೀರಂ" ಜೀವನು ಅಸೃಜ್ಯಾವಸ್ಥೆಯಲ್ಲಿದ್ದಾಗ ಮತ್ತು ಮುಕ್ತಿಯನ್ನು ಹೊಂದಿದ ಮೇಲೆ ಮಾತ್ರ ವಾಯು ಸಂಪರ್ಕವು ಅವನಿಗೆ ಇರುವುದಿಲ್ಲ. ಸೃಷ್ಟಿಯಲ್ಲಿ ಇವನೇ ಪ್ರಭುವು "ಮುಖ್ಯ ಪ್ರಾಣವಶೇ ಸರ್ವಂ। ಸವಿಷ್ಣೋರ್ವಶಗಃ ಸದಾ" ಇದನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಮುಂದೆ ಸಾಗಿದರೆ ಬಳಿತ್ಥಾಸೂಕ್ತದ ಪ್ರಕಾರವಾಗಿ ಶ್ರೀವಾಯುದೇವರು ಅಂಜನೀದೇವಿಯಲ್ಲಿ ಮತ್ತು ಕುಂತೀದೇವಿಯಲ್ಲಿ ಅವತರಿಸಿರುವುದು ಖಚಿತವಾಗುತ್ತದೆ. ದೈತ್ಯರು ಮಾತ್ರ ಅವರು ಸಾಮಾನ್ಯರಂತೆ ಗರ್ಭ ದುಃಖ ಪೀಡಿತರೆಂದು ಉಪಾಸನೆಯನ್ನು ಮಾಡಲಿ ಎಂದೇ ಅವರು ಹಾಗೆ ಜನಿಸಿರುತ್ತಾರೆ. ಇಲ್ಲಿ ಅನ್ಯದೇಹ ಪ್ರವೇಶವನ್ನು ಹೇಳಿಲ್ಲ.

ಇನ್ನು ಮುಂದೆ ಶ್ರೀಮಧ್ವಾಚಾರ್ಯರ ಅವತಾರ ಪ್ರಸಂಗದಲ್ಲಿ ಮಾತ್ರ ಅನ್ಯದೇಹ ಪ್ರವೇಶ ಪ್ರಸಂಗವನ್ನು ಹೇಳಲಾಗಿರುತ್ತದೆ. ಅದನ್ನು ಪ್ರಮೇಯಕ್ಕೆ ವಿರೋಧವಾಗದ ಹಾಗೆ ತಿಳಿಯಬೇಕು.

ವಾಯುಪಟ್ಟಕ್ಕೆ ಬರುವ ಮುನ್ನ ಲಾತವ್ಯರು ಸ್ತ್ರೀಗರ್ಭದಲ್ಲಿ ಜನಿತರಾಗಿ ಬಂದು ತಮ್ಮ ದೇಹವನ್ನು ವಾಯುದೇವರಿಗೆ ನೀಡುವುದು ಅವರ ಪ್ರಾರಬ್ಧ ರೂಪವಾದ ಲೀಲೆ ಎನಿಸಿರುವುದರಿಂದ ಅವರು ಗರ್ಭದಲ್ಲಿ ಸುಖವಾಗಿಯೂ ಬೆಳೆದು ತರುವಾಯ ತಮ್ಮ ದೇಹವನ್ನು ವಾಯುದೇವರಿಗೆ ಅರ್ಪಿಸಿ ನಿರ್ಗಮಿಸಿದರು. ಆಗ ವಾಯುದೇವರು ಅಲ್ಲಿ ಪ್ರವೇಶಿಸಿ ಶ್ರೀಮಧ್ವರು ಎನಿಸಿದರು ಎಂದು ತಿಳಿಯಬೇಕು. ಇನ್ನು ಮಧ್ವವಿಜಯದ ಪ್ರಸಂಗದಲ್ಲಿ ಬರುವ ದೇಹಿಯನ್ನು ಸ್ಕಾಂದ ಪುರಾಣದ ಆಧಾರದಿಂದ ಲಾತವ್ಯರೆಂದು ಪರಿಗಣಿಸಬಹುದು. ಮುಂದೆ ದೈತ್ಯನ ಶರೀರ ಪ್ರಸಂಗವು ಇಲ್ಲಿ ಹೊಂದಾಣಿಕೆಯಾಗುವುದಿಲ್ಲ.

ಇಲ್ಲಿ ತಿಳಿಯಬೇಕಾದ ಸಾರಾಂಶವೆಂದರೆ ವಾಯುದೇವರು ಗರ್ಭಯಾತನಾಶಂಕಾನಿಮಿತ್ತವಾಗಿ ಮಾತೆ ವೇದವತಿ ದೇವಿಯ ಗರ್ಭವನ್ನು ಪ್ರವೇಶಿಸಲಿಲ್ಲ ಎನ್ನಬಾರದು. ಲಾತವ್ಯರಿಗೆ ಗರ್ಭಪ್ರವೇಶ ಪ್ರಾರಬ್ಧವಿದ್ದಂತೆ ಶ್ರೀವಾಯುದೇವರಿಗೆ ಶ್ರೀಮಧ್ವಾಚಾರ್ಯರ ಅವತಾರ ಕಾಲದಲ್ಲಿ ಲಾತವ್ಯದತ್ತ ಶರೀರದಲ್ಲಿ ಪ್ರವೇಶಿಸಿ ವ್ಯಾಪಾರವನ್ನು ಮಾಡುವ ಪ್ರಾರಬ್ಧನಿಮಿತ್ತ ಅವರು ಹಾಗೆ ಮಾಡಿದರು ಎಂದು ತಿಳಿಯಬೇಕು. ಪ್ರಾರಬ್ಧವೆಂಬುದು ಅಪರೋಕ್ಷ ಜ್ಞಾನಿಗಳ ಮೇಲೆಯೇ ಪರಿಣಾಮವನ್ನು ಬೀರುವುದಿಲ್ಲ ಎಂದ ಮೇಲೆ ಇನ್ನು ಲಾತವ್ಯ, ವಾಯುದೇವರಿಗೆ ಈ ಪ್ರಾರಬ್ಧವು ಏನು ತಾನೇ ಮಾಡೀತು? ಅದೂ ದುಃಖಲೇಶ ರಹಿತವಾದ ಮಹಾಸುಸುಖ ಪ್ರಾರಬ್ಧ! (ಪ್ರಮಾಣ ಶ್ರೀಹರಿಕಥಾಮೃತಸಾರ). ಇದು ಬಳಿತ್ಥಾ ಸೂಕ್ತಕ್ಕೂ, ಸ್ಕಾಂದಪುರಾಣಕ್ಕೂ ಮತ್ತು ಶ್ರೀಮತ್ಸು ಮಧ್ವವಿಜಯಕ್ಕೂ ಸಮೀಚೀನವಾಗಿ ಸಮನ್ವಯವಾಗುತ್ತದೆ. ಸಂಹಿತತ್ರಯ ಸಮ್ಮತವಾಗುತ್ತದೆ. ಪ್ರಭುಸಂಹಿತೆ (ವೇದ), ಮಿತ್ರ ಸಂಹಿತೆ (ಪುರಾಣ), ಕಾಂತಾ ಸಂಹಿತೆ (ಕಾವ್ಯ).

ಈ ರೀತಿಯಾಗಿ ವಾಯುದೇವರು ಭೂಮಿಯಲ್ಲಿ ಅವತರಿಸಿದ ಕ್ಷಣದಲ್ಲಿ, ದಿಗ್ದಶಗಳಲ್ಲಿ ದೇವತೆಗಳು ದುಂದುಭಿಗಳನ್ನು ಬಾರಿಸಿ ಪುಷ್ಪವೃಷ್ಟಿಯನ್ನು ಕರೆದರು. ಆ ಸಮಯದಲ್ಲಿ, ಅನಂತಾಸನ ದೇವರ ಸೇವೆಯಲ್ಲಿ ತೊಡಗಿದ್ದ ಮಧ್ಯಗೇಹಭಟ್ಟರಿಗೆ ಪುತ್ರೋತ್ಸವದ ವಾರ್ತೆಯು ಮುಟ್ಟಿ ಬಹು ಸಂತೋಷ ಪಟ್ಟರು. ಸತ್ಪುತ್ರನನ್ನು ಇತ್ತ ತಮ್ಮ ಕುಲಸ್ವಾಮಿಯನ್ನು ಮನಸಾ ನಮಿಸಿ ಆನಂದದಿಂದ ಜಾತಕರ್ಮಾದಿಗಳನ್ನು ಆಚರಿಸಿದರು. ಹುಟ್ಟಿದ ಮಗನಿಗೆ ಅವರು ವಾಸುದೇವನೆಂದು ನಾಮಕರಣವನ್ನು ಮಾಡಿದರು.

**"ಜ್ಞಾನಾರ್ಥಮೇವ ಯದಭೂತ್ ಅಸುದೇವ ಏಷಃ।**
**ಯದ್ವಾಸುದೇವ ಪದಭಕ್ತಿರತಃ ಸದಾಸೌ ॥"**

ಜ್ಞಾನ ಕಾರ್ಯನಿಮಿತ್ತವಾಗಿ ಅವತರಿಸಿದ ಬಾಲಕನಿಗೆ ಭಟ್ಟರು "ವಾಸುದೇವನೆಂದು ನಾಮಕರಣವನ್ನು ಮಾಡಿದ್ದು ಸಾರ್ಥಕವಾಯಿತೆಂದು ದೇವತೆಗಳೂ ನಲಿದಾಡಿದರು (ವಿದ್ಯಾವಂತರು ಅನಿರುದ್ಧನನ್ನೂ, ಬುದ್ಧಿವಂತರು ಪ್ರದ್ಯುಮ್ನನನ್ನೂ, ಪಂಡಿತರು ಸಂಕರ್ಷಣನನ್ನೂ ಮತ್ತು ಅಪರೋಕ್ಷಿಗಳು ವಾಸುದೇವನನ್ನೂ ಉಪಾಸಿಸುತ್ತಾರೆ). ಈಗ ಅವತರಿಸಿದ ವಾಸುದೇವನು ವಾಣಿ, ಭಾರತಿಯರಿಂದಾರಂಭಿಸಿ ಸಕಲ ಮುಮುಕ್ಷುಗಳಿಗೆ ಅಪರೋಕ್ಷ ಜ್ಞಾನಪ್ರದಾತರಾದ ಪ್ರಯುಕ್ತ ಇವರಿಗೆ ವಾಸುದೇವನೆಂಬ ಹೆಸರು ತಾನಾಗಿಯೇ ಹುಡುಕಿಕೊಂಡು ಬಂದಿತ್ತು. 'ವಾ' ಎಂದರ ಶಾಸ್ತ್ರಗಳು (ವಯನಂ ಜ್ಞಾನಂ) ಅಸುದೇವನೆಂದರೆ ಪ್ರಾಣದೇವರೆಂದು ಅರ್ಥ. ದುರ್ವಾದಿಗಳ ಕೈಯಲ್ಲಿ ಸಿಕ್ಕ ಸೂತ್ರ, ಪುರಾಣಗಳು ಅರ್ಥವಿಹೀನವಾಗಿ ಮೂರ್ಛೆಯನ್ನು ಹೊಂದಿರುವಾಗ ಇವರು ಅವತರಿಸಿ ಶಾಸ್ತ್ರಗಳಿಗೆ ಪುನರ್ಜನ್ಮವನ್ನು

ನೀಡಿದ ಪ್ರಯುಕ್ತ ಈ ಸಂಜಾತ ವಾಯುವಿಗೆ ವಾಸುದೇವನೆಂಬ ನಾಮಕರಣವು ಅನ್ವರ್ಥವಾದುದೆಂದು ದೇವತೆಗಳು ಘೋಷಿಸಿದರು. ದೇವತೆಗಳಾದಿಯಾಗಿ ಸಕಲ ಮುಕ್ತಿಯೋಗ್ಯ ಜೀವರಿಗೆ ಶ್ರೀಹರಿ ರಮಾ ತರುವಾಯ ವಾಯುಪರ ಅರ್ಥೈಸಿಕೊಳ್ಳಲು ವಾಸುದೇವನೆಂಬ ಒಂದು ನಾಮವು ಜಗತ್ತಿಗೆ ಪ್ರಾಪ್ತವಾಯಿತು. "ಲಕ್ಷ್ಮೀ ನಾರಾಯಣಾನಂತರಂ । ಸಕಲ ವೇದ ಪ್ರತಿಪಾದ್ಯಾಯ ನಮಃ" "ಹರಿ ರಮಾ ಪ್ರಸಿದ್ಧಾತಿರಿಕ್ತಾನಂತ ವೇದವೇದ್ಯಾಯನಮಃ" (ವಾಯುಗದ್ಯ).

ಜನಿಸಿದ ಬಾಲಕನಿಗೆ ಪೋಷಣೆಗೆ ಹಾಲಿನ ಕೊರತೆಯಾಯಿತು. ಜಗತ್ತಿನ ಫಲ, ಪುಷ್ಪ, ಧಾನ್ಯಗಳಲ್ಲಿ ರಸರೂಪನಾಗಿ ಸಕಲಜೀವಿಗಳ ಜೀವನಾಧಾರನಾಗಿರುವ ಈ ಬಾಲಕನಿಗೆ ಹಾಲಿನ ಕೊರತೆ! ಕೇವಲ ಮುಕ್ತಿಯೋಗ್ಯನೊಬ್ಬನಿಗೆ ಅನುಗ್ರಹ ಮಾಡಲು ಹಾಗೂ ಲೋಕಶಿಕ್ಷಣಾರ್ಥವಾಗಿ ತನ್ನ ತಂದೆಯ ಮುಖಾಂತವಾಗಿ ಒಂದು ಗೋವನ್ನು ದಾನವಾಗಿ ಪಡೆದು "ದಾನಂ ಧ್ರುವಂ ಫಲತಿ ಪಾತ್ರಾನುಕೂಲಾತ್" ಎಂಬುದನ್ನು ಸಿದ್ಧಪಡಿಸಿದನು. ಈ ಬಾಲಕನು. ಗೋದಾನವನ್ನಿತ್ತ ಈ ಕ್ಷೀರಾಮೃತ ದಾನಿಗೆ ಈ ಬಾಲಕನು ಅವನ ಮುಂದಿನ ಜನ್ಮದಲ್ಲಿ ಜ್ಞಾನಾಮೃತವನ್ನು ಉಣಿಸಿ ಉದ್ಧರಿಸಿದನು.

ಮಧ್ಯಗೇಹಭಟ್ಟರು ತಮ್ಮ ಶಿಶುವನ್ನು ಎತ್ತಿಕೊಂಡು ಉಡುಪಿಗೆ ಬಂದು ಆ ಶಿಶುವನ್ನು ತಮ್ಮ ಕುಲಸ್ವಾಮಿಯಾದ ಅನಂತಾಸನದೇವರ ಅಡಿಗಳಿಗೆ ಅರ್ಪಿಸಿದರು. ಯಶೋದಾದೇವಿಯು ರಕ್ಕಸಾಂತಕನಿಗೆ ರಕ್ಷೆಯನ್ನು ಇಟ್ಟು ಕೊರಳಿಗೆ ತಾಯಿತವನ್ನು ಕಟ್ಟಿದಳಂತೆ! ಹಾಗೆಯೇ ಶ್ರೀಮಧ್ಯಗೇಹಭಟ್ಟರು ಯಾರ ಸ್ಮರಣೆಮಾತ್ರದಿಂದ ಸಕಲ ವಿಪತ್ತುಗಳು ನಾಶವಾಗಿ ಸಕಲ ಶ್ರೇಯಸ್ಸು, ಸೌಖ್ಯಗಳು ಪ್ರಾಪ್ತವಾಗುತ್ತವೋ ಅಂಥಾ ಈ ಬಾಲಕನಿಗೆ ಶ್ರೇಯಸ್ಸಾಗಲೀ. ವಿಪತ್ತುಗಳು ಬರದಿರಲಿ ಎಂದು ದೇವರಲ್ಲಿ ಪ್ರಾರ್ಥಿಸಿದರು.

ಭಟ್ಟರು ಬಾಲಕನನ್ನು ಪಾಜಕ ಕ್ಷೇತ್ರದಿಂದ ಉಡುಪಿಗೆ ಕೊಂಡೊಯ್ದು ಮರಳಿ ಬರುವಾಗ ದಾರಿಯಲ್ಲಿ ಕತ್ತಲಾಗಿತ್ತು. ಮಧ್ಯೆ ಕಾಡಿನಲ್ಲಿ ಭೂತ ಒಂದು ಒಬ್ಬನಲ್ಲಿ ಆವಿಷ್ಟನಾಗಿ ಈ ಸಮಯದಲ್ಲಿ ನೀವು ಇಲ್ಲಿಗೆ ಬಂದಿರುವಿರಿ. ಜಗದೊಡೆಯನಾ ಈ ಬಾಲಕನು ನಿಮ್ಮೊಡನೆ ಇಲ್ಲದಿದ್ದರೆ ನಾನು ನಿಮ್ಮನ್ನೆಲ್ಲಾ ಈಗ ನುಚ್ಚು ನೂರು ಮಾಡುತ್ತಿದ್ದೆ ಎಂದು ಗರ್ಜಿಸಿ ಮಾಯವಾಯಿತು.

> ವಾಯುದೇವರೇ ಹನುಮ, ಭೀಮ, ಮಧ್ವರಾಗಿ ಅವತರಿಸಿದರು ಎಂಬುದಕ್ಕೆ ಪ್ರಮಾಣಗಳು:-
> ರಾಮಾವತಾರೇ ಹನುಮಾನ್ । ರಾಮ ಕಾರ್ಯಾರ್ಥ ಸಾಧಕಃ ॥
> ಸಏವ ಭೀಮಸೇನೋಸ್ತು । ಜಾತೋ ಭೂಮ್ಯಾಂ ಮಹಾ ಬಲಃ ॥
> ಕೃಷ್ಣಾವತಾರೇ ವಿಜ್ಞೇಯೋ । ಮರುದಂಶ ಪ್ರಕೀರ್ತಿತಃ ॥ ಗಾರುಡೇ ॥"
> "ಮಾಘೇತು ರಥಸಪ್ತಮ್ಯಾಂ । ಪ್ರಾಣದೇವೋ ಮಹಾ ಬಲಃ ॥
> ಮಧ್ಯಗೇಹಾಖ್ಯ ಗೇಹೇತು । ಜಾತೇ ಮಂದಗತೇ ರವೌ ॥
> ವಾಸುದೇವೇತಿ ವಿಖ್ಯಾತೋ ಜ್ಞಾನಾದಿ ಗುಣ ಸಂಯುತಃ ॥
> ದ್ವಾತ್ರಿಂಶಲ್ಲಕ್ಷಣೈರ್ಯುಕ್ತೋ । ಗರ್ಭ ದುಃಖ ವಿವರ್ಜಿತಃ ।
> ಸ ಏವಾನಂದ ತೀರ್ಥೇತಿ । ಭುವಿಖ್ಯಾತೋಽಖಿಲೈರ್ಜನೈಃ ॥ ಇತಿವರಾಹೇ ॥

**॥ ಪದ ॥ ಉಂಡನು ಖಂಡುಗ । ಬಂಡೆಯನೆತ್ತಿದ।**
**ಕುಂಡಲಿ ಎನಿಸಿದ । ಭಂಡನ ಸವರೀ ॥**
**ಹಿಂಡೊಳಗೊಂದು ಬಾಲ । ಕೊಂಡು ನರಹರಿಯ ।**
**ಕಂಡು ಬಂದನು ಭಯ। ಗೊಂಡನೆ ಅಲವನು ॥ ೨೯ ॥**

**ಶಬ್ದಾರ್ಥ:** ಉಂಡನು ಖಂಡುಗ = ಭಾರಿ ಪ್ರಮಾಣದ ಆಹಾರವನ್ನು ಸೇವಿಸಿದನು: ಬಂಡೆಯನೆತ್ತಿದ = ಇಪ್ಪತ್ನಾಲ್ಕು ಚದುರ ಅಡಿ, ನಾಲ್ಕು ಅಂಗಲ ದಪ್ಪದ ಬಂಡೆಗಳನ್ನು ಹಪ್ಪಳದಂತೆ ಎತ್ತಿ ತೋರಿಸಿದ: ಕುಂಡಲಿ ಎನಿಸಿದ = ಸರ್ಪರೂಪವನ್ನು ಧರಿಸಿಕೊಂಡು ಬಂದ: ಭಂಡನ ಸವರಿ = ದೈತ್ಯನನ್ನು ಸಂಹಾರ ಮಾಡಿ: ಹಿಂಡೊಳಗೊಂದು = ದನಗಳ ಹಿಂಡಿನಲ್ಲಿ ಇದ್ದ ಒಂದು ಎತ್ತಿನ: ಬಾಲಕೊಂಡು = ಬಾಲವನ್ನು ಹಿಡಿದುಕೊಂಡು: ನರಹರಿಯ ಕಂಡು ಬಂದನು = ಪಾಜಕ ಕ್ಷೇತ್ರದಿಂದ ಉಡುಪಿಯವರೆಗೆ (ಹನ್ನೆರಡು ಮೈಲು) ನಡೆದು ಬಂದು ಅನಂತೇಶ್ವರನನ್ನು ಕಂಡು ಪುನಃ ಮನೆ ಸೇರಿದನು: ಭಯಗೊಂಡನೆ = ಸ್ವಲ್ಪವಾದರೂ ಭಯಪಡಲಿಲ್ಲ ಈ ಆರು ವರುಷ ವಯಸ್ಸಿನ ಬಾಲಕನು: ಅಲವನು = ಲವ = ಸ್ವಲ್ಪ: ಅಲವ = ಅಧಿಕ: ಅಲವನು = ಮಹಾಮಹಿಮನು = ಜ್ಞಾನ ಪರ್ವತ.

**ವಿಶೇಷಾರ್ಥ:–** ಬ್ರಾಹ್ಮಣರಾಗಿ ಹುಟ್ಟಿದರೆ ಪ್ರಾಣ ಭಯವಿಲ್ಲವೆಂದು ಅಸದುಪಾಸಕರು ಹುಟ್ಟಿ ಏನು ಮಾಡಿದರೆಂಬುದನ್ನು ಈ ಹಿಂದೆ ವಿಸ್ತಾರವಾಗಿ ಹೇಳಿಯಾಗಿದೆಯಲ್ಲವೇ? ಆ ದುರ್ಮತ ಹಾಲಾಹಲವನ್ನು ಭಂಜಿಸಲು ಅವತರಿಸಿದ ವಾಯುದೇವರು ಬಾಲ್ಯದಲ್ಲಿ ಲೋಗರಂತೆ ತಾವೂ ಬಾಲಲೀಲೆಗಳನ್ನು ತೋರಿದರು. ವಾಸುದೇವನು ಬಾಲಕನಾಗಿದ್ದಾಗ ಮಾತ್ರ ಬಾಲ ಲೀಲೆಗಳನ್ನು ತೋರಿದನೇ? ಈಗ ತೋರುತ್ತಲಿಲ್ಲವೇ? ಭೂಮಂಡಲದಲ್ಲಿ ಹಿಂದೆ ಹುಟ್ಟಿದ್ದ, ಇಂದು ಹುಟ್ಟಿರುವ, ಮುಂದೆ ಹುಟ್ಟಲಿರುವ ಸಕಲ ಬಾಲ, ಬಾಲಕಿಯರಲ್ಲಿ ಕಾಣುವ ಬಾಲಲೀಲೆಗಳು ವಾಯುದೇವರದೇ ಎಂದು ತಿಳಿಯಬೇಕು. ಹಾಗೆ ತಿಳಿದರೆ ಶ್ರೀಹರಿ, ವಾಯುಗಳು ಪ್ರೀತರಾಗುತ್ತಾರೆ. ಮಕ್ಕಳಿಗೆ ಆಯುಷ್ಯ, ಆರೋಗ್ಯ, ಐಶ್ವರ್ಯಗಳು ಪ್ರಾಪ್ತವಾಗುತ್ತವೆ. ಮಧ್ವರಾಯರ ಲೀಲೆ ನವರತುನದಾಮಾಲೇ ಮಧ್ವರಾಯರ ಕಥಾ ಕೇಳಲೂ ದುರಿತ ಹತ" ಎಂದರು ಶ್ರೀವಿಜಯದಾಸರು. ಶ್ರೀವಿಜಯದಾಸರ ಅನುಗ್ರಹದಿಂದಲೇ ಈ ಗ್ರಂಥವು ಮುಂದುವರಿದಿರುವುದು.

ಒಂದು ದಿನ ಚಿಕ್ಕಮಗುವಿನ ತಾಯಿ ವೇದವತಿದೇವಿಯವರು ಯಾವುದೋ ಅವಸರದ ನಿಮಿತ್ತವಾಗಿ ಪಕ್ಕದ ಮನೆಗೆ ಹೋಗಬೇಕಾಗಿತ್ತು. ದಕ್ಷಿಣ ಕನ್ನಡದ ಪರಿಸರದಲ್ಲಿ ಮನೆಗಳು ಹತ್ತಿರವೆಂದರೂ ಎಷ್ಟು ದೂರವಿರುತ್ತವೆ ಎಂಬುದು ವೇದ್ಯವಾಗಿದೆಯಲ್ಲವೆ? ಅಂತೂ ಈ ತಾಯಿಯು ತಮ್ಮ ಮಗು ವಾಸುದೇವನನ್ನು ತಮ್ಮ ಮಗಳ ವಶಕ್ಕೆ ಕೊಟ್ಟು ಬೇಗನೇ ಬಂದು ಬಿಡುವುದಾಗಿ ಹೇಳಿ ಹೊರಟರು. ಅವರು ಪುನಃ ಬರುವ ವೇಳೆ ಸಾಕಷ್ಟು ತಡವೇ ಆಯಿತು. ಆ ವೇಳೆಗೆ ಬಕ ಭಂಜನನಾದ ಈ ಬಾಲಕನು ಹಸಿವಿನಿಂದ ಅಳಲಾರಂಭಿಸಿದನು. ಎಷ್ಟು ಸಮಾಧಾನ ಪಡಿಸಿದರೂ ಸುಮ್ಮನಾಗಲಿಲ್ಲ. ಆಗ ಬೇರೆ ಉಪಾಯವನ್ನು ಕಾಣದೆ ಅಕ್ಕನು ವಾಸುದೇವನಿಗೆ ದನಗಳಿಗಾಗಿ ಬೇಯಿಸಿಟ್ಟಿದ್ದ ಹುಡಾಣ ಭರ್ತಿಯಾಗಿದ್ದ ಹುರಳಿಯನ್ನು ತಿನ್ನಿಸಿದಳು. ಆಕೆಯು ತಿನ್ನಿಸಿದಂತೆಲ್ಲಾ ಈತನು ತಿಂದನು. ಈತನು ತಿಂದಂತೆಲ್ಲಾ ಆಕೆಯು ತಿನ್ನಿಸಿದಳು. ಕೊನೆಗೆ ಗುಡಾಣವಲ್ಲ! ಗುಡಾಣಗಳು ಬರಿದಾದುವು. ಬಾಲಕನು ಸುಮ್ಮನಾಗಿ ಆಟವಾಡ ತೊಡಗಿದ್ದನು.

ಆ ವೇಳೆಗೆ ತಾಯಿಯು ಮಗುವನ್ನು ಜ್ಞಾಪಿಸಿಕೊಂಡು ಓಡಿ ಬಂದಳು. ಆಕೆಯು ಬಂದ ಕೂಡಲೇ ಮಗುವನ್ನು ಎತ್ತಿಕೊಂಡು ಮಗಳನ್ನು ಕೇಳಿದಳು ವಾಸುದೇವನು ಅತ್ತನೇ ಎಂದು.

ಮಗಳು – ಹೌದಮ್ಮಾ ಬಹಳವಾಗಿ ಅತ್ತನು.

ತಾಯಿ – ನೀನು ಏನು ಮಾಡಿದೆಯೇ?

ಮಗಳು – ನಾನೇನು ಮಾಡಲಿ? ಹಸಿವೆ ಆಗಿರಬೇಕೆಂದು ಸ್ವಲ್ಪ ಹುರುಳಿಯನ್ನು ತಿನ್ನಿಸಿದೆ. ಪುನಃ ಅತ್ತನು. ಪುನಃ ತಿನ್ನಿಸಿದೆ. ಆ ಬೆಂದ ಹುರುಳಿಯನ್ನು ತಿನ್ನಿಸಿದಂತೆಲ್ಲಾ ತಿನ್ನುತ್ತಾ ಸುಮ್ಮನಾಗುತ್ತಿದ್ದನು. ಈಗ ಆ ಗುಡಾಣಗಳೆಲ್ಲಾ ಬರಿದಾಗಿ ಹೋಗಿವೆ. ಅವನೂ ಸುಮ್ಮನಾಗಿದ್ದಾನೆ. ನೀನೇಕೆ ತಡ ಮಾಡಿ ಬಂದೆ ಅಮ್ಮಾ.

ತಾಯಿ – ಅಯ್ಯೋ, ಹೌದೇನೇ. ಈ ಗುಡಾಣಗಳ ಹುರುಳಿಯಷ್ಟನ್ನೂ ಈ ಮಗುವಿಗೆ ತಿನ್ನಿಸಿದೆ ಏನೇ. ಹಾಲು ಕುಡಿಯುವ ಈ ಮಗುವಿನ ಗತಿ ಏನೇ? ದೇವರ ದಯೆ ಸದ್ಯ, ಇವನು ಆಟವಾಡಿಕೊಂಡಿದ್ದಾನಲ್ಲ ಬಿಡು. ನಮ್ಮ ಭಾಗ್ಯ ರೀ, ಆಚಾರ್ಯರೇ ನಿಮ್ಮ ಮಗನು ಗುಡಾಣಗಳ ಹುರುಳಿಯನ್ನು ತಿಂದಿದ್ದಾನೆ. ಈಗ ಏನು ಮಾಡುವದು? ನನಗೆ ಭಯವಾಗುತ್ತಿದೆ.

ಭಟ್ಟರು – ಹೌದೇನೇ, ಬಂಗಾರದಂಥ ಮಗುವನ್ನು ನೀನು ಚೆನ್ನಾಗಿಯೂ ನೋಡಿಕೊಳ್ಳುತ್ತಲಿಲ್ಲ. ಹೋಗಲಿ ಇದನ್ನು ಯಾರ ಮುಂದೆಯೂ ಹೇಳಬೇಡ. ಮಗನಿಗೆ ದೃಷ್ಟಿಯಾದೀತು. ಈಗ ನೀನು ಸ್ವಲ್ಪ ಉಪ್ಪು, ಮೆಣಸಿನ ಕಾಯಿಯನ್ನು ಹಿಡಿಯಲ್ಲಿ ತೆಗೆದುಕೊಂಡು ಮಗುವಿನ ಮುಖದ ಮೇಲೆ ನಿವಾಳಿಸಿ ಒಲೆಗೆ ಹಾಕು. ದೃಷ್ಟಿ ಪರಿಹಾರವಾಗಿ ಮಗು ಸುಖವಾಗಿರಲಿ.

ವಿಸ್ಮಯ ಮಾನಸರಾದ ಪೂಜ್ಯ ಮಧ್ಯಗೇಹ ಭಟ್ಟರು ಮನಸ್ಸಿನಲ್ಲೇ ನೆನೆದರು. "ಸ್ವಾಮಿ, ಅನಂತೇಶ್ವರ ಈ ಬಾಲಕನ ರಕ್ಷಣೆಯ ಭಾರವು ನಿನ್ನದೇ. ಅಷ್ಟು ಹುರಳಿಯನ್ನು ತಿಂದು ಆಟವಾಡುತ್ತಿರುವ ಈ ಬಾಲಕನು ಭೀಮನೇ, ಅಗಸ್ತ ಮುನಿಯೇ?" ಎಂದು ಪುನಃ ಪುನಃ ಮೆಲುಕು ಹಾಕಿದರು. ಮಗುವಿನ ಕ್ಷೇಮಕ್ಕಾಗಿ ಶಾಂತಿ ಸೂಕ್ತ, ಧನ್ವಂತರಿ ಮಂತ್ರಗಳನ್ನು ಜಪಿಸಿದರು. ಈ ಜಪ, ತಪಗಳ ಫಲವು ಸಿಕ್ಕಿದ್ದು ಭಟ್ಟರಿಗೇ. ಅವರಿಗೆ ಆ ಮಂತ್ರಗಳು ಸಿದ್ಧಿಯಾದುವು.

ಅಂಬೆಗಾಲಿನ ಬಾಲಕನು 'ಅಂಬಾ' ಎಂಬ ಎರಡು ಅಕ್ಷರಗಳನ್ನು ನುಡಿಯಲಾರಂಭಿಸಿದನು. ವೇದೋಕ್ತ ವೇದಾನುಕ್ತ ಲಕ್ಷ್ಮೀರಸವನ್ನು ಪಾನವಾನ ಮಾಡುವ ಈ ಬಾಲಕನ ಮುಂದೆ ಮುಖ್ಯವಾಗಾಭಿಮಾನಿಯಾದ ವಾಣಿದೇವಿಯು ನುಡಿಯಲು ಭಯಗ್ರಸ್ಥಳಾಗಿ ಆಕೆಯ ವಾಣಿಗಳೇ ತೊದಲು ನುಡಿಗಳಾದುವೇ ಹೊರತಾಗಿ ಆ ಬಾಲಕನಲ್ಲಿ ತೊದಲೆಲ್ಲಿಂದ ಬರಬೇಕು? ಆ ತೊದಲು ನುಡಿಯು ವಾಣಿಗೇ ಸೇರಿದ್ದು. ಮಾತಾ ಪಿತೃಗಳು ಬಲಕನ ಕಲಭಾಷೆಯನ್ನು ಲಾಲಿಸುತ್ತ, ದ್ವಾತ್ರಿಂಶತಿ ಲಕ್ಷಣ ಯುಕ್ತವಾದ ಮಗುವನ್ನು ನೋಡು ನೋಡುತ್ತಾ ಆನಂದ ಪರವಶರಾಗಿದ್ದರು. (ವೇದಗಳಿಗೆ ಮುಖ್ಯಾಭಿಮಾನಿ ಲಕ್ಷ್ಮೀದೇವಿಯು ಅಮುಖ್ಯಾಭಿಮಾನಿಗಳು ವಾಣಿ, ಭಾರತಿಯರು, ವಾಯುದೇವರು ಲಕ್ಷ್ಮೀರ ಸಪೋಷಿತರಾಗಿ ವೇದಗಳ ಗೂಢವಾದ ಅರ್ಥಗಳನ್ನು ಲಕ್ಷ್ಮೀದೇವಿಯ ಮುಖೇನ ಉಪದೇಶವನ್ನು ಹೊಂದಿ ಭಗವದುಪಾಸನೆಯನ್ನು ಮಾಡುತ್ತಾರೆ. "ವೇದೋಕ್ತ ವೇಧಾನುಕ್ತ ಭಾರತೊಕ್ತಾನಂತ, ಗುಣ್ಯೆ

ಕರ್ಮಭಿಃ ಅನಂತ ರೂಪೋಪಾಸಕಾಯೈ ನಮಃ" "ವೇದೋಕ್ತಾಧಿಕ ವಿಷಯೇಣ । ವೇದ ಸಂವಾದಿನಾ ಮಹಾಜ್ಞಾನೇನ" (ವಾಯುಗದ್ಯ)

ಹೀಗೆ ವೃದ್ಧಿಸುತ್ತಿದ್ದ ಬಾಲಕನು ಬೆಳೆಯಲಾರಂಭಿಸಿದನು. ಕೈಕಾಲುಗಳು ಪುಷ್ಟಿಗೊಂಡವು ಅವನು ನಡೆದು ಪುಟಿದಾಡಲಾರಂಭಿಸಿದನು. (ಅಂದಿಗೆ ಮಾತ್ರವಲ್ಲ, ಇಂದಿಗೂ ಸಕಲ ಬಾಲಕರು ಬೆಳೆದು ಇಂದು ಪುಟಿದಾಡುತ್ತಿದ್ದರೆ ಅದು ಈ ಬಾಲಕನಿಂದಲೇ. ವಾಯು ದೇವರಿಗೆ ಈ ಲೀಲೆಯು ಅವ್ಯಾಹತವಾದುದು. ಬಾಲ್ಯದಲ್ಲಿ ಬಲಹೀನವಾದ ಅಂಗಾಂಗಗಳಲ್ಲಿ ನೆಲೆಸಿರುವ ತತ್ವಾಭಿಮಾನಿ ದೇವತೆಗಳು ಆ ಶರೀರಗಳಲ್ಲಿ ವ್ಯಾಪಾರಗಳನ್ನು ಮಾಡಲು ಸಾಧ್ಯವನ್ನು ಕಾಣದೆ ವಾಯುವನ್ನೇ ಆಶ್ರೈಸಿಕೊಮಡು ಪರಿತಪಿಸುತ್ತಿರುವಾಗ ಈತನೇ ದೇಹಿಗಳ ರಕ್ಷಕನಾಗಿರುತ್ತಾನೆ. ದೇಹ ವೃಕ್ಷದ ತತ್ವಾಭಿಮಾನಿ ಶಾಖೆಗಳಿಗೆ ವಾಯುದೇವರೇ ತಾಯಿಬೇರು).

ಬಾಲಕನು ನಡೆಯ ಕಲಿತುದಷ್ಟೇ ಸರಿ. ಒಂದು ದಿನ ಆ ವಯಸ್ಸಿನಲ್ಲಿ ತಮ್ಮ ಮನೆಯಲ್ಲಿದ್ದ ಒಂದು ವೃಷಭವು ತೃಣಾರ್ಥಿಯಾಗಿ ಕಾಡಿಗೆ ಹೊರಟಿತ್ತು. ಈ ಬಾಲಕನು ಸಹ ಆ ಎತ್ತಿನ ಬಾಲವನ್ನು ಹಿಡಿದುಕೊಂಡು ಅದರ ಜೊತೆಗೆ ತಾನೂ ಕಾಡಿಗೆ ನಡೆದು ಬಿಟ್ಟನು. ಆ ಕಾಲದಲ್ಲಿ ಆ ಕಾಡೇನು ಈಗಿನಂತೆ ಬಂಜರಾಗಿರಲಿಲ್ಲ. "ತರಣ್ಯಂಘ್ರಿಶರಣ್ಯಂತದ್ರಿ ಪಾದಪಂ" ಎಂಬಂತೆ ಸೂರ್ಯ ಕಿರಣಗಳು ಭೂಮಿಯನ್ನು ತಾಕದಷ್ಟು ದಟ್ಟವಾಗಿಯೂ, ಎತ್ತರವಾಗಿಯೂ, ಲತಾ ಕುಂಜಗಳಿಂದ ದುರ್ಗಮವಾಗಿಯೂ, ಕ್ರೂರ ಮೃಗ, ವಿಷಜಂತುಮಯವಾಗಿಯೂ ಗಂಭೀರವಾಗಿತ್ತು. ರೂಢಿ ಮಾರ್ಗವನ್ನೇನಾದರೂ ತಪ್ಪಿಸಿಕೊಂಡರೆ ಆ ಮನುಷ್ಯನು ಕೊನೆಗೆ ಕಾಡುಪಾಲೇ ಅಗುವುದು ನಿಶ್ಚಯವಾಗಿತ್ತು. ಅಂಥಾ ಕಾಡಿನಲ್ಲಿ ಎತ್ತಿನ ಸಂಗಡ ಹೊರಟ ಬಾಲಕನು ಮನೆಯಿಂದ ಕಾಣದಾದನು. ಇತ್ತ ತಂದೆ ತಾಯಿಗಳು ಮಗುವನ್ನು ಹುಡುಕಿ, ಹುಡುಕಿ, ನಿರಾಶರಾದರು. ಚಿಂತಾಕ್ರಾಂತರಾಗಿ ಕುಳಿತಿದ್ದ ಅವರು ತಮ್ಮ ಮಗನು ವೃಷಭನನ್ನು ಹಿಂಬಾಲಿಸಿಕೊಂಡು ಹೋದುದನ್ನು ಗೊಲ್ಲನೊಬ್ಬನ ಮುಖಾಂತರವಾಗಿ ತಿಳಿದು ಅವನು ಸುರಕ್ಷಿತವಾಗಿ ಪುನಃ ತಮ್ಮಲ್ಲಿಗೆ ಬರಲಿ ಎಂದು ದೇವರನ್ನು ಪ್ರಾರ್ಥಿಸುತ್ತಿದ್ದರು. ಆದರೆ ಯಾವ ಭಯವೂ ಇಲ್ಲದ ಬಾಲಕನು ಯಥಾಪ್ರಕಾರವಾಗಿ ಗೋಧೂಳಿ ಸಮಯದಲ್ಲಿ ಮನೆಗೆ ಮರಳಿದಾಗ ಈ ಬಾಲಕನೂ ಅದೇ ವೃಷಭನ ಜೊತೆಯಾಗಿ ಮನೆಗೆ ಬಂದು ಸೇರಿದನು. ಆಗ ಆ ಬಾಲಕನ ವಯಸ್ಸೆಷ್ಟು ಗೊತ್ತಾ? "ಏಕಾಬ್ದಕಂ" ಒಂದು ವರ್ಷದವನು ಮಾತ್ರ! ಅವನನ್ನು ಕಂಡ ಭಟ್ಟ ದಂಪತಿಗಳಿಗೆ ಆದ ಆನಂದವನ್ನು ವರ್ಣಿಸಲಸಾಧ್ಯ. ಬಡವನಿಗೆ ಚಿಂತಾಮಣಿಯು ಸಿಕ್ಕಿದಂತೆ, ಮೋಕ್ಷಾರ್ಥಿಗೆ ವಿಷ್ಣು ಸರ್ವೋತ್ತುಮತ್ವ ಜ್ಞಾನವಾದಂತೆ ಆನಂದವಾಯಿತು. ಇದು ತಮ್ಮ ಕುಲಸ್ವಾಮಿಯ ಅನುಗ್ರಹವೆಂದು ತಿಳಿದು ಆತನಿಗೆ ಪುನಃ ಪುನಃ ನಮಿಸಿದರು.

ಮುಂದೆ ಇದೇ ರೀತಿಯಾದ ಮತ್ತೊಂದು ಪ್ರಸಂಗವು ಪ್ರಾಪ್ತವಾಯಿತು. ಮಧ್ಯಗೇಹ ಭಟ್ಟರು ತಮ್ಮ ಬಂಧುಗಳ ಆಹ್ವಾನದ ಮೇರೆಗೆ ಅವರ ಮನೆಯ ಉತ್ಸವಕ್ಕಾಗಿ ಸತಿ, ಸುತರೊಡನೆ ಹೊರಟರು. ಅಲ್ಲಿ ಅವರು ಸಂಭ್ರಮದಲ್ಲಿ ನಿರತರಾಗಿದ್ದಾಗ ಈ ವಾಸುದೇವನು ಅವರ ಕಣ್ಣು ತಪ್ಪಿಸಿ ಕಾಡಿನೆಡೆಗೆ ನಡೆದನು. ದಾರಿಯಲ್ಲಿ ಪುಟ್ಟ ಬಾಲಕನನ್ನು ಕಂಡು ಆಶ್ಚರ್ಯಭರಿತರಾದ ದಾರಿ ಹೋಕರು "ಎಲಾ, ಪುಟ್ಟಾ, ನೀನು ಯಾರು? ಎಲ್ಲಿಗೆ ಹೊರಟಿರುವೆ? ನಿನಗೆ ಭಯವಾಗುತ್ತಿಲ್ಲವೇ?" ಎಂದು ಕೇಳಿದರೆ ಈ ಬಾಲಕನು ಭಯವೆಂಬ ಶಬ್ದವನ್ನು ಕೇಳಿ ನಕ್ಕು ಮುಂದೆ ನಡೆದನು. ಹೀಗೆ ಸಾಗಿದ ಬಾಲಕನು ಕಡವೂರು ದೇವಸ್ಥಾನದಲ್ಲಿ ಶ್ರೀಹರಿಯನ್ನೂ, ಬನ್ನಂಜೆಯಲ್ಲಿ ರುದ್ರಾಂತರ್ಗತ ಶ್ರೀಹರಿಯನ್ನೂ ತರುವಾಯ ಉಡುಪಿಯಲ್ಲಿ ಅನಂತಾಸನನನ್ನೂ ಕಂಡು ಸಾಷ್ಟಾಂಗ ನಮಸ್ಕಾರಗಳನ್ನು ಹಾಕಿದನು.

ವಾಸುದೇವನ ಈ ಚರ್ಯೆಯನ್ನು ಕಂಡ ಬ್ರಾಹ್ಮಣರು ನಾಚಿಕೊಂಡು ತಾವೂ ಸಹ ದೇವರಿಗೆ ನಮಸ್ಕಾರಗಳನ್ನು ಹಾಕಿ ಈ ಬಾಲಕನು ತಮಗ ಆದರ್ಶಪ್ರಾಯನಾದನೆಂದು ಹಿಗ್ಗಿದರು.

ಇತ್ತ ಮಧ್ಯಗೇಹ ಭಟ್ಟರು ತಮ್ಮ ಮಗನನ್ನು ಕಾಣದೇ ಹುಡುಕುತ್ತಾ, ಹುಡುಕುತ್ತಾ ದಾರಿ ಹೋಕರರನ್ನೆಲ್ಲಾ ಕೇಳುತ್ತಾ ಅವರು ನೀಡಿದ ಸೂಚನೆ ಮತ್ತು ಬಾಲಕನ ಹೆಜ್ಜೆಗುರುತುಗಳನ್ನು ಅನುಸರಿಸಿಕೊಂಡು ಬಂದು ಅಂತೂ ಬಾಲಕನನ್ನು ಕಂಡರು. ತಕ್ಷಣವೇ ಎರಡೂ ಕೈಗಳಿಂದ ಆ ಮಗುವನ್ನು ಎತ್ತಿಕೊಂಡು, "ಅಪ್ಪಾ, ವಾಸೂ, ನೀನು ನಮ್ಮನ್ನು ಬಿಟ್ಟು ಯಾಕೆ ಈ ಕಾಡಿನಲ್ಲಿ ತಿರುಗಿದೆ? ನಿನಗೆ ಭಯವಾಗಲಿಲ್ಲವೇ? ನಿನ್ನ ಜೊತೆಗೆ ಯಾರು ಇದ್ದರು ಎಂತ ನೀನು ಹೀಗೆ ಅಲೆದೆ?" ಎಂದು ಕೇಳಿದರು. ಅದಕ್ಕೆ ಬಾಲಕನು "ಅಪ್ಪಾ, ಸರ್ವಗಂ ಪರಮಾತ್ಮಾನಂ ಸರ್ವಂಚ ಪರಮಾತ್ಮನಿ ॥ ಯಃಪಶ್ಯೇತ್ತಸ್ಯಭಯಾಭಾವಾನಾಂತ್ಮಾನಾಂಗೋಪ್ತು ಮಿಚ್ಛತಿ" ಸರ್ವತ್ರದಲ್ಲಿ ವ್ಯಾಪ್ತನಾದ ನಾರಾಯಣನು ನಮ್ಮೊಡನೆ ಕ್ಷಣಬಿಟ್ಟಗಲದೆ ಇರುತ್ತಿರುವಾಗ ಆಪತ್ತಾಗಲೀ ಭಯವಾಗಲೀ ಎಲ್ಲಿಂದ ಬರುತ್ತದೆ? ಆ ದೇವ ದೇವೇಶನು ನನ್ನೊಡನೇ ಸಂಚರಿಸುತ್ತಿದ್ದನು" ಎಂದು ಹೇಳಿದನು. ಈ ಮಾತನ್ನು ಕೇಳಿಸಿಕೊಂಡ ಬಂಧುವರ್ಗದವರೆಲ್ಲಾ ಆಶ್ಚರ್ಯಭರಿತರಾಗಿ ಮಗುವನ್ನೂ ಭಟ್ಟರನ್ನೂ ಬಹುವಾಗಿ ಹೊಗಳಿ ಸನ್ಮಾನಿಸಿ ಬೀಳ್ಕೊಟ್ಟರು. ವಾಸುದೇವನು ಪಾಜಕ ಕ್ಷೇತ್ರದಲ್ಲಿ ಹತ್ತಿರದ ದುರ್ಗಾದೇವಿಯಿಂದ ಪೋಷಿಸಲ್ಪಡುತ್ತಿದ್ದನು.

ಒಮ್ಮೆ ವಾಸುದೇವನು ಆಡುತ್ತಾ ಆಡುತ್ತಾ ಬಹು ಎತ್ತರವಾದ ದುರ್ಗಾಬೆಟ್ಟವನ್ನು ಹತ್ತಿದನು. ಮಗನನ್ನು ಕಾಣದ ತಾಯಿಯು ಹುಡುಕುತ್ತಾ ಹುಡುಕುತ್ತಾ ಬೆಟ್ಟದ ತುದಿಯಲ್ಲಿ ಇರುವ ವಾಸು ದೇವನನ್ನು ಕಂಡು ಗಾಬರಿಯಾಗಿ ಎಲ್ಲಿ ಜಾರಿ ಬೀಳುವನೋ ಎಂದು ಹೆದರಿ "ಅಪ್ಪಾ ವಾಸುದೇವಾ, ನೀನು ಮೇಲಕ್ಕೆ ಹೇಗೆ ಹತ್ತಿದೆ? ನಿಧಾನವಾಗಿ ಇಳಿದು ಬಾ ಎಂದು ಕೂಗಿದಳು. ಆಗ ಅಮ್ಮನ ಧ್ವನಿಯನ್ನು ಕೇಳಿದ ವಾಸುದೇವನು ತಕ್ಷಣವೇ ಬೆಟ್ಟದ ತುದಿಯಿಂದ ಥಟ್ಟನೇ ಹಾರಿ ಬಂದು ತಾಯಿಯ ಮುಂದೆ ನಿಂತನು. ಗಾಬರಿಗೊಂಡ ತಾಯಿಯು ಮಗನ ಕಾಲಿಗೇನಾದರೂ ಬಾಧೆಯಾಯಿತೇ ಎಂದು ನೋಡಿದರೆ ಬಾಲಕನ ಪಾದಾಘಾತಕ್ಕೆ ಬಂಡೆಯೇ ಕೆಸರಿನಂತಾಗಿ ಅಲ್ಲಿ ಬಾಲಕನ ಪುಟ್ಟ ಹೆಜ್ಜೆಗಳು ಮೂಡಿದ್ದುವು. ಅವು ಇಂದಿಗೂ ಪ್ರತ್ಯಕ್ಷ ಪ್ರಮಾಣವಾಗಿ ಪಾಜಕ ಕ್ಷೇತ್ರದಲ್ಲಿ ವಿರಾಜಮಾನವಾಗಿವೆ. (ಅಲ್ಲಿ ಶ್ರೀವಾದಿರಾಜರು ಶ್ರೀ ಮಧ್ವಾಚಾರ್ಯರ ಪ್ರತಿಮೆಯನ್ನು ಪ್ರತಿಷ್ಠಾಪಿಸಿರುತ್ತಾರೆ). ಈ ಮಹಿಮೆಯು ಹಿಂದೆ ಭೀಮಸೇನನಾಗಿದ್ದಾಗ ಕುಂತಿದೇವಿಯ ಕೈಯಿಂದ ಜಾರಿ ಬಿದ್ದು ಪರ್ವತವನ್ನೇ ನುಚ್ಚು ಮಾಡಿ ಶತಶೃಂಗ ಪರ್ವತವನ್ನು ಸೃಷ್ಟಿಸಿದುದನ್ನು ಜ್ಞಾಪಕಕ್ಕೆ ತರುತ್ತದೆ. ಪ್ರಳಯಕಾಲದಲ್ಲಿ ಬ್ರಹ್ಮಾಂಡವನ್ನು ಪುಡಿ ಮಾಡಿ ಪರಮಾತ್ಮನ ಅಂಗಳಕ್ಕೆ ರಂಗೋಲಿಯನ್ನು ಹಾಕುವ ಈ ಮುದ್ದು ಕೂಸಿಗೆ ಇವು ದೊಡ್ಡ ಕಾರ್ಯಗಳೇ? ಎನ್ನುತ್ತಾರೆ ಶ್ರೀವಿಜಯದಾಸರು.

ಆಟದ ಮಗು, ಪಾಠಕ್ಕೆ ಇನ್ನೂ ಸಿದ್ಧನಾಗಿಲ್ಲ. ಇಂಥವನಿಗೆ ಕೆಲಸ ಹಚ್ಚಿದರೆ ಹೇಗೆ? ಭಟ್ಟರು ನಿತ್ಯವೂ ಅನಂತೇಶ್ವರನ ಪಾದಗಳಲ್ಲಿ ಮನಸ್ಸನ್ನಿಟ್ಟವರಾಗಿ ಉಡುಪಿಗೆ ಹೋಗಿ ಬರುತ್ತಿದ್ದರು. ಆಚಾರ್ಯರು ಬರುವ ಹೊತ್ತಿಗೆ ವೇದವತಿದೇವಿಯು ಆಚಾರ್ಯರ ಪೂಜೆಗಳಿಗೆ ಮಡಿ ನೀರು, ನೈವೇದ್ಯಗಳಿಗೆ ಅಣಿ ಮಾಡಿಟ್ಟಿರುತ್ತಿದ್ದರು.

ಒಂದು ಸಲ ತಾಯಿಯು ಮನೆಯಿಂದ ಹೊರಗೆ ಹೋಗುವಾಗ ಆರು ವರುಷದ ಮಗನನ್ನು ಕರೆದು "ವಾಸೂ, ನಾನು ಈಗ ಬರುತ್ತೇನೆ. ಈ ನೆಲಗುಂಡಿಗಳಲ್ಲಿ ಹಾಲು, ಮೊಸರುಗಳನ್ನು ಇಟ್ಟಿದ್ದೇನೆ. ಬೆಕ್ಕು ಬಂದು

ಮೂಸೀತು. ಸ್ವಲ್ಪ ನೋಡಿಕೊಳ್ಳಪ್ಪಾ. ಬೇಗನೆ ಬಂದು ಬಿಡುತ್ತೇನೆ ಎಂದು ಹೇಳಿ ಹೊರಟು ಹೋದರು. ವಾಸುದೇವನು ಆಲೋಚಿಸಿದನು "ನಾನು ಈಗ ಆಟವಾಡಬೇಕು. ಅಮ್ಮನ ಹಾಲೂ, ಮೊಸರು ಸುರಕ್ಷಿತವಾಗಿರಬೇಕು. ಏನು ಮಾಡಲಿ? ಸರಿ." ಎಂದವನೇ ತಕ್ಷಣದಲ್ಲಿ ಸುಮಾರು ಇಪ್ಪತ್ತು ಚದರ ಅಡಿ, ನಾಲ್ಕಂಗುಲ ದಪ್ಪದ ಎರಡು ಚಪ್ಪಡಿಗಳನ್ನು ತಂದು ಆ ನೆಲ ಗುಂಡಿಗಳ ಮೇಲೆ ಮುಚ್ಚಿ "ಬೆಕ್ಕಾದರೂ ಬರಲಿ, ಅಮ್ಮನಾದರೂ ಬರಲಿ, ಅಪ್ಪನಾದರೂ ಬರಲಿ, ಇಪ್ಪತ್ತಳಾದರೂ ಬರಲಿ" ಎಂದು ಗುನುಗುತ್ತಾ ಚಪ್ಪಾಳೆಯನ್ನು ತಟ್ಟುತ್ತಾ ಆಟಕ್ಕೆ ಹೊರಟು ಬಿಟ್ಟನು. ತರುವಾಯ ಅಮ್ಮ ಬಂದಳು. ಅಪ್ಪನೂ ಬಂದನು. ಪೂಜೆ ಆಯಿತು. ನೈವೇದ್ಯಕ್ಕೆ ಹಾಲು, ಮೊಸರು ಬೇಕಾಗಿತ್ತು. ತಾಯಿ ಅವುಗಳಿಗಾಗಿ ಹುಡುಕಾಡಿದಳು. ಅವು ಕಾಣಲಿಲ್ಲ. ಭಾರೀ ಗಾತ್ರದ ಬಂಡೆಗಳು ಅಲ್ಲಿ ಕಂಡವು. ವಿಸ್ಮಯಳಾಗಿ ತಾಯಿಯು ವಾಸುದೇವನನ್ನು ಕರೆದು "ಎಲ್ಲಪ್ಪಾ ಹಾಲು, ಮೊಸರು" ಎಂದು ಕೇಳಿದಳು. ಅದಕ್ಕೆ ವಾಸುದೇವನು "ಅಮ್ಮಾ ಅವು ಎಲ್ಲೂ ಹೋಗಿಲ್ಲ. ಅಲ್ಲೇ ಇವೆ. ಬೆಕ್ಕುಗಳು ತಿನ್ನಬಾರದು ಅಂತ ಆ ಬಂಡೆಗಳನ್ನು ತಂದು ಮುಚ್ಚಿದ್ದೇನೆ. ಬಂಡೆಗಳನ್ನು ಎತ್ತಿ ತೆಗೆದುಕೋ ಅಮ್ಮ" ಎಂದು ಮುದ್ದಾಗಿ ಹೇಳಿದನು. ಅದನ್ನು ಕೇಳಿದ ತಾಯಿಗೆ ಹೇಗಾಗಿರಬೇಡ! ಭಯಾ, ಆನಂದ, ಆಶ್ಚರ್ಯಗಳೊಡನೆ ಆಕೆಯು ಈ ವಿಚಿತ್ರಲೀಲೆಯನ್ನು ಪತಿದೇವರಿಗೆ ತಿಳಿಸಿದಳು. ಆಚಾರ್ಯರಿಗೆ ತಾನೇ ಇದಕ್ಕಿಂತ ಹೆಚ್ಚಿಗೆ ಇನ್ನೇನಾದೀತು? ಅವರೂ ವಾಸುದೇವನನ್ನು ಕರೆದು 'ಎಲಾ ಬಂಗಾರು, ಏನಪ್ಪಾ ನಿನ್ನ ಲೀಲೆ, ಯಾರೋ ಇವನ್ನು ಇಲ್ಲಿ ಎತ್ತಿ ಇಟ್ಟವರು. ಈ ಬಂಡೆಗಳು ಇಲ್ಲಿಗೆ ಹೇಗೆ ಬಂದವು?' ಎಂದು ಕೇಳಿದರು. ಆಗ ವಾಸುದೇವನು , "ಅಪ್ಪಾ, ಅಮ್ಮಾ, ನಾನು ಆಟಕ್ಕೆ ಹೋಗಬೇಕಾಗಿತ್ತು. ಅಮ್ಮಾ, ನೀನು ಬೆಕ್ಕು ಮೂಸದಂತೆ ಹಾಲು ಮೊಸರುಗಳನ್ನು ನೋಡಿಕೋ ಎಂದೆಯಲ್ಲಾ ಅದಕ್ಕೇ ನಾನೇ ಈ ಚಪ್ಪಡಿಗಳನ್ನು ತಂದು ಇಲ್ಲಿ ಮುಚ್ಚಿಟ್ಟು ಆಟಕ್ಕೆ ಹೋದೆ" ಎಂದು ಹೇಳಿದನು. ತರುವಾಯ ಈ ಬಂಡೆಗಳನ್ನು ಎತ್ತುವವರಾರು? ಎಂದು ಗೊಣಗುತ್ತಿದ್ದಾಗ ವಾಸುದೇವನು "ಯಾರು ಯಾಕೆ ಬೇಕು? ಇವನ್ನು ನಾನೇ ಮುಚ್ಚಿಟ್ಟಿದ್ದೇನೆ ಈಗ ನಾನೇ ತೆಗೆಯುತ್ತೇನೆ ನೋಡಿ" ಎಂದು ಹೇಳುತ್ತಾ ಆ ಬಂಡೆಗಳನ್ನು ಹಪ್ಪಳಗಳನ್ನು ಎತ್ತುವಷ್ಟೇ ಅನಾಯಾಸವಾಗಿ ಎತ್ತಿ ಬೇರೆಡೆ ಇರಿಸಿದನು. ಈ ಬಾಲಕನ ಭುಜ ಬಲವನ್ನು ಕಣ್ಣಾರೆ ಕಂಡ ಭಟ್ಟರು ಇವನು ಭೀಮನೇ ಸರಿ ಎಂದು ಮೂಗಿನ ಮೇಲೆ ಬೆರಳಿಟ್ಟರು. (ಇಂದಿಗೂ ಆ ಬಂಡೆಗಳು ಪ್ರತ್ಯಕ್ಷ ಪ್ರಮಾಣವಾಗಿ ಪಾಜಕ ಕ್ಷೇತ್ರದಲ್ಲಿ ಇವೆ).

ತ್ರೇತಾಯುಗದಲ್ಲಿ ಸಂಜೀವನ ಪರ್ವತವನ್ನೇ ಕ್ಷಣಾರ್ಧದಲ್ಲಿ ಎಡಗೈಯಿಂದ ತಂದಿರಿಸಿದ, ಬ್ರಹ್ಮಾಂಡವನ್ನೇ ಆಣೇ ಕಲ್ಲಿನಂತೆ ಅಂಗುಷ್ಠದಿಂದ ಚಿಮ್ಮುವ ಈ ಲೀಲಾವತಾರಿಗೆ ಈ ಬಂಡೆಗಳನ್ನು ಎತ್ತಿದ್ದುದಕೆ ಭಲೇ, ಭಲೇ ಎಂದರೆ ಅದೇ ಅವಮಾನ! ಬ್ರಹ್ಮಾಂಡವನ್ನು ಸಾಸಿವೆ ಕಾಳಿನಂತೆ ಹೊತ್ತಿರುವ ಶೇಷವತಾರಿಯಾದ ಲಕ್ಷ್ಮಣನು ರಣರಂಗದಲ್ಲಿ ಮೂಲಾವತಾರವನ್ನು ಸ್ಮರಿಸಿಕೊಂಡು ಮೂರ್ಛೆ ಹೋಗಿದ್ದಾಗ ಆತನನ್ನು ಕೊಂಡೊಯ್ಯಲು ರಾವಣನೂ, ಅವನ ಪರಿವಾರವೂ ಸತತವಾಗಿ ಯತ್ನಿಸಿದರೂ ಆ ಶರೀರವನ್ನು ಅಲುಗಾಡಿಸಲೂ ಸಹ ಅಸಮರ್ಥರಾಗಿದ್ದಾಗ ಯಾವ ಹನುಮಂತನು ಆ ಶರೀರವನ್ನು ತನ್ನ ಕಿರಿಬೆರಳಿಂದ ತಂದು ಶ್ರೀರಾಮನ ತೊಡೆಗಳ ಮೇಲೆ ಮಲಗಿಸಿದನೋ ಆ ಹನುಮಾಽ ಭಿನ್ನನಾದ ಈ ಬಾಲಕನಿಗೆ ಆ ಬಂಡೆಗಳು ಹಪ್ಪಳಗಳೋ, ತರಗೆಲೆಗಳೋ! ಪಾಪ! ಭಟ್ಟರು "ಇದನ್ನು ಯಾರಿಗೂ ಹೇಳಬೇಡಾ, ಮಗನಿಗೆ ದೃಷ್ಟಿಯಾದೀತು. ಈಗ ನೀನು ಈ ಬಾಲಕನಿಗೆ ಉಪ್ಪು, ಮೆಣಸಿನಕಾಯಿನ್ನು ನಿವಾಳಿಸಿ ಒಲೆಗೆ ಹಾಕು" ಎಂದು ಸತೀಮಣಿಗೆ ಹೇಳಿದರಂತೆ.

ಜ್ಞಾನಿಗಳನ್ನು ಕಂಡರೆ ತಮೋ ಯೋಗ್ಯರಿಗೆ ಎಲ್ಲಿಲ್ಲ ಸಂಕಟ ಹೊಟ್ಟೆ ಉರಿ ಪಾಪ! ಅವರು ತಾನೇ ಏನು ಮಾಡಿಯಾರು? ಸ್ವರೂಪವೇ ಅಂಥಾದ್ದಿರುತ್ತದೆ.

ಭಟ್ಟರು ವಾಸಿಸುತ್ತಿದ್ದ ಸ್ಥಳವೇ ಕಾಡು. ಅದರಲ್ಲಿಯೂ ಒಬ್ಬೊಂಟಿಗಳು. ಬಾಲಕ ವಾಸುದೇವನು ಆಟಪಾಟವಾಡಲು ಇನ್ನೆಲ್ಲಿಗೆ ತಾನೇ ಹೋಗಬೇಕು? ತಾನು ತಾನಾಗಿಯೇ ಕಾಡಿನಲ್ಲಿ ಆಗಾಗ ಅಲ್ಲಲ್ಲಿ ಓಡಾಡುತ್ತಿದ್ದನು. ಈತನ ಅವತಾರ ನಿಮಿತ್ತವನ್ನು ತಿಳಿದಿದ್ದ ಜನ್ಮಾಂತರ ಶತ್ರು ಮಣಿಮಂತನು ಈ ಬಾಲಕನನ್ನು ಮುಗಿಸಬೇಕೆಂದು ತನ್ನ ಮೂಲರೂಪವನ್ನು ಧರಿಸಿಕೊಂಡು ಬಂದನು. ಮಾರುದ್ದದ ಕರಾಳ ಸರ್ಪ ತನ್ನ ಕ್ರೂರವಾದ ವಿಷ ದಂಷ್ಟ್ರಗಳಿಂದ ಪೂತ್ಕರಿಸುತ್ತ ವಾಸುದೇವನ ಮೇಲೆ ತನ್ನ ಮುಖವನ್ನು ಅಪ್ಪಳಿಸಿದನು. ವಜ್ರ ಶರೀರಿಯಾದ ವಾಸುದೇವನಿಗೆ ಆ ದಂಷ್ಟ್ರಗಳು ನಾಟಲಿಲ್ಲ. ಬದಲಿಗೆ ಆ ವಾಸುದೇವನು ಗರುಡ ಶಿರ ಮಂಡಿತವಾದ ತನ್ನ ಉಂಗುಟ ಸ್ಪರ್ಶ ಮಾತ್ರದಿಂದಲೇ ಆ ದುಷ್ಟನ ಹೆಡೆಯನ್ನು ಗಂಡು ಕ್ರಿಯೆ ಮಾಡಿ ಸಂಹರಿಸಿ ಬಿಟ್ಟನು. ಆ ಸ್ಥಳವು ಇಂದಿರೂ ಸ್ಮಾರಕವಾಗಿ ಉಳಿದಿದೆ. ನಾಗಲೋಕೇಶ ಪೂಜಿತ ಪಾದ ಪದ್ಮಭೂಷಿತನಾದ ಈ ವಾಸುದೇವನಿಗೆ ಈ ಛದ್ಮಕ್ರಿಮಿಯಿಂದ ಎಂದಿಗಾದರೂ ವಿಪತ್ತು ಬರುವುದು ಉಂಟೇ? ವಾಸುದೇವನ ಈ ಮಹಿಮೆಯನ್ನು ಸ್ಮರಿಸಿದವರಿಗೆ ವಿಪತ್ತು ಅಜ್ಞಾನಗಳು ನಾಶವಾಗಿ ಜ್ಞಾನ, ಇಷ್ಟಾರ್ಥಗಳು ಸಿದ್ಧಿಸುತ್ತವೆ.

॥ ಪದ ॥ ನೆನಸಿದ ಕ್ಷಣದಲಿ । ಋಣ ತ್ರಯವಳಿವುದು ।
ಜನಕನ ಋಣಕೆ ತಿಂ। ತ್ರಿಣೆಯು ಬೇಕಾಯಿತೇ ॥
ಜನನಿಯ ಸ್ನಾನಕೆ । ಬಾಣ ಗದಾದಿಗಳ ।
ಮನೆಯ ಮುಂದಿರಿಸಿದ । ಒಣಕಾಷ್ಟ ಚಿಗುರಿಸಿ ॥ ೩೦ ॥

**ಶಬ್ದಾರ್ಥ:** ನೆನಸಿದ ಕ್ಷಣದಲಿ = ಸ್ಮರಣೆ ಮಾತ್ರದಿಂದ; ಋಣ ತ್ರಯ = ಮೂರುವಿಧವಾದ ಋಣಗಳು, ದೇವಋಣ, ಋಷಿಋಣ, ಪಿತೃಋಣ; ಅಳಿವುದು = ನಿವಾರಣೆಯಾಗುತ್ತವೆ. ಜನಕನ = ತಂದೆಯ; ಋಣಕೆ = ಸಾಲಕ್ಕೆ; ತಿಂತ್ರಿಣೆಯು = ಹುಣಸೇ ಬೀಜ; ಬೇಕಾಯಿತೆ? = ಅವಶ್ಯಕತೆ ಇರಲಿಲ್ಲ; ಜನನಿಯ = ತಾಯಿಯ ಸ್ನಾನಕ್ಕೆ; ಬಾಣ ಗದಾದಿಗಳ = ಬಾಣತೀರ್ಥ, ಗದಾತೀರ್ಥ, ಪರಶುತೀರ್ಥ ಮತ್ತು ಖಡ್ಗ ತೀರ್ಥಗಳನ್ನು; ಮನೆಯ ಮುಂದಿರಿಸಿದ; ಒಂದೇ ತೀರ್ಥದಲ್ಲಿ ಸನ್ನಿಧೀಕರಿಸಿದನು; ಒಣ ಕಾಷ್ಟ ಚಿಗುರಿಸಿ = ಒಂದೇ ತೀರ್ಥದಲ್ಲಿ ಎಲ್ಲಾ ತೀರ್ಥಗಳ ಸಂಗ್ರಹವಿದೆ ಎಂಬುದನ್ನು ತೋರಲು ಒಂದು ಒಣಗಿದ ಕಾಷ್ಟಕ್ಕೆ ಈ ನೀರನ್ನು ಸುರಿದು ಅದನ್ನು ಚಿಗುರಿಸಿದರು.

**ವಿಶೇಷಾರ್ಥ:–** ವಾಸುದೇವನ ಮಹಿಮೆಗಳನ್ನು ವರ್ಣಿಸಲು ವಾಸುಕಿ, ವಾಸವಾದಿಗಳಿಗೂ ಸಾಕಲ್ಯೇನ ಸಾಧ್ಯವಿಲ್ಲವೆಂದ ಮೇಲೆ ಇನ್ನು ಇತರರ ಪಾಡೇನು? ಒಮ್ಮೆ ಮಧ್ಯಗೇಹ ಭಟ್ಟರು ತಮ್ಮ ಅನುಕೂಲಕ್ಕಾಗಿ ಒಂದು ಎತ್ತನ್ನು ಕ್ರಯಕ್ಕೆ ಪಡೆದುಕೊಂಡರು. ಎತ್ತಿನ ಯಜಮಾನನು ಆ ಪಶುವಿನ ಮೌಲ್ಯವನ್ನು ಮುಂದೊಂದು ದಿನ ಕೊಡಬಹುದೆಂದು ಹೇಳಿ ಹೊರಟು ಹೋದನು. ಕೆಲವು ದಿನಗಳಾದ ನಂತರ ಆ ಪಶುವಿನ ಒಡೆಯನು ಬಂದು ವಿಕ್ರಯದ ಹಣವನ್ನು ನೀಡಬೇಕೆಂದು ಭಟ್ಟರನ್ನು ಕೇಳಿದನು. ಆಗ ಭಟ್ಟರ ಕೈಯಲ್ಲಿ ಹಣವಿರಲಿಲ್ಲ. ಭಟ್ಟರು ಪಶುವಿನ ಯಜಮಾನನಿಗೆ ಹೀಗೆ ಹೇಳಿದರು, ಮುಂದೊಂದು ದಿನ ನಿನ್ನ ಹಣವನ್ನು ಕೊಡುತ್ತೇನೆಂದು. ಆದರೆ ಪಶುವಿನ ಒಡೆಯನು ಆ ದನದ ವಿಕ್ರೀತ ಹಣವನ್ನು ಪೂರ್ತಿಯಾಗಿ ಇಂದೇ ನೀಡಬೇಕು ಇಲ್ಲವೇ ಆ ಹಣವು ಸಂದಾಯವಾಗುವವರೆಗೆ ನಾನೂ ಉಣ್ಣುವುದಿಲ್ಲ. ನೀವೂ ಉಣ್ಣಬಾರದು ಎಂದು ಹೇಳುತ್ತ ಹಟ ಹಿಡಿದು ಕುಳಿತನು. ಪಾಪ! ಭಟ್ಟರು ಸುಮ್ಮನೇ ಕುಳಿತು ಬಿಟ್ಟರು. "ರೋದ್ಧೃಷನೋಸ್ತಿ ಧನಿಕೋ ವೃಷ ವಿಕ್ರಯಿತಿ" ಆಗ ಆಟವಾಡಿ ಬಂದ ವಾಸುದೇವನು ಸುಮ್ಮನೇ ಕುಳಿತಿರುವ ಭಟ್ಟರನ್ನು ಕುರಿತು "ಅಪ್ಪಾ ಊಟಕ್ಕೆ ಹೊತ್ತಾಯಿತು ಬಾಪ್ಪಾ" ಎಂದು ಕರೆದನು. ಆದರೆ ಭಟ್ಟರು ಋಣಮುಕ್ತರಾಗದೆ ಉಣುವಂತಿಲ್ಲವೆಂಬುದನ್ನು ಬಾಲಕನಿಗೆ ಮೃದುವಾಗಿ ಹೇಳಿದರು. ಆಗ ವ್ಯವಹಾರಗಳನ್ನು ಅರಿಯುವಷ್ಟು ವಯಸ್ಸಿಲ್ಲದವನಾಗಿದ್ದರೂ ವಾಸುದೇವನು ಶೀಘ್ರ ಶೀಘ್ರವಾಗಿ ಓಡಿ ಹುಣಸೇ ಬೀಜಗಳನ್ನು ತಂದು ಆ ವೃಷಭೇಶ್ವರನ ಕೈಗೆ ನೀಡಿದನು. ಅಷ್ಟು ಮಾತ್ರದಿಂದ ಆ ಪಶುವಿನ ಒಡೆಯನು ಸಂತೃಪ್ತ ಮಾನಸನಾಗಿ ಅಲ್ಲಿಂದ ನಿರ್ಗಮಿಸಿದನು. ಕೆಲವು ಕಾಲಾನಂತರದಲ್ಲಿ ಭಟ್ಟರು ಹಣವನ್ನು ಸಂಗ್ರಹಿಸಿಕೊಂಡು ಬಂದು ಕೊಡಲು ಹೋದರೆ ಆ ಸಾಲಗಾರನು ತನಗೆ ಭಟ್ಟ ಬಾಲಕನಿಂದ ಆ ಹಣವು ಅಂದೇ ಸಂದಾಯವಾಗಿ ಬಿಟ್ಟಿದೆ. ಪುನಃ ಅದನ್ನು ಕೊಡುವ ಅವಶ್ಯಕತೆ ಇಲ್ಲವೆಂದು ಹೇಳಿ ಹಣವನ್ನು ಸ್ವೀಕರಿಸಲಿಲ್ಲ. ಈ ಬಾಲಕನು ಆ ಮನುಷ್ಯನಿಗೆ ಕೇವಲ ಅರ್ಥವನ್ನು ಮಾತ್ರ ನೀಡಲಿಲ್ಲ. ಬದಲಿಗೆ ಹುಣಸೇ ಬೀಜಗಳನ್ನು ನಿಮಿತ್ತ ಮಾಡಿಕೊಂಡು ಅವನಿಗೆ ಚತುರವಿಧವಾದ ಪುರುಷಾರ್ಥವನ್ನೇ ನೀಡಿ ಬಿಟ್ಟಿದ್ದನು. ಸೃಷ್ಟಿಯಲ್ಲಿನ ತ್ರಿವಿಧ ಜೀವಾಂತಃ ಪ್ರೇರಕರಾದ ಈ ಅಣುವಾಯುವಿಗೆ ಆ ಪಶುವಿನ ಕ್ರಯಿಗೆ ತೃಪ್ತಿಯನ್ನು ಪ್ರೇರಿಸಿದುದು ಆಶ್ಚರ್ಯವೇ? ಇದು ಇಂದ್ರಜಾಲದಂತೆ

ಮಂಕು ಕವಿಸಿ ಕಳಿಸಿದ ಕೃತ್ರಿಮವಲ್ಲ. ಸಮಿಚೀನವಾಗಿ ಉದ್ಧರಿಸಿಡ ಸ್ಪಷ್ಟವಾದ ವರದಾನವಾಗಿತ್ತು.

ಜಗತ್ತಿನಲ್ಲಿ ಇರುವುದು ಮೂರು ಋಣಗಳು. ಈ ಮೂರು ಋಣಗಳಿಗಿಂತ ಬಹು ಕೆಟ್ಟದಾದುದು ನಾಲ್ಕನೆಯದು ಅದು ಸಾಲ ಋಣ ಅದಕ್ಕೆ ಶ್ರೀವಿಜಯದಾಸರು ಹೇಳುತ್ತಾರೆ.

**"ಋಷಿಗಳ ಋಣ ಪೂರ್ವಾಶ್ರಮದಲ್ಲಿ ಪರಿಹಾರ ।**
**ದಶರಣ ಋಣಮೇಧಾದಿಗಳಾ ಮಾಡೀ ॥**
**ಅಸುಸಂಬಂಧಿಗಳ ಋಣ ಗೃಹಸ್ಥಾಶ್ರಮದಲ್ಲಿ ।**
**ಪುಶಿಯಲ್ಲ ಪೋಗುವದೇ ಸಿದ್ಧಾ ॥**
**ವಸುಧೆಯೊಳಗೆ ಒಂದು ಕಾಸು ಕೊಟ್ಟನ ಋಣ ।**
**ವಸುಧೆಯಲ್ಲಾ ತಿರುಗಿದರು ಪೋಗದು ॥**
**ಪಶುಪಾಲವಿಧೇಯಾತ್ಮಾ ವಿಜಯವಿಠ್ಠಲರಂಗಾ ।**
**ಬಸಿರೊಳಗಿದು ಪೋಗಾಲಿಸದೇ ಬಿಡದೂ ॥ ಋಣ ಮೋಚನ ಸುಳಾದಿ ॥"**

ಜಗತ್ತಿನಲ್ಲಿ ೧. ಋಷಿ ಋಣ, ೨. ದೇವ ಋಣ, ೩. ಪಿತೃಋಣ ಎಂಬ ಈ ಮೂರು ಋಣಗಳನ್ನು ಋಣ ತ್ರಯಗಳೆಂದು ಕರೆಯುತ್ತಾರೆ. ಮನುಷ್ಯನಾದವನು ಈ ಋಣ ತ್ರಯಗಳಿಂದ ಮುಕ್ತನಾಗಲೇ ಬೇಕು. ಇವು ಸ್ವಾಭಾವಿಕವಾದ, ಪ್ರಾರಬ್ಧ ರೂಪವಾದ ಋಣಗಳು. ಆದರೆ ನಾಲ್ಕನೇಯದಾದ ಇನ್ನೊಂದು ಋಣವು ಇದೆ. ಅದೇ ಸಾಲದ ಋಣ. ಇದು ಸ್ವಾಭಾವಿಕವಾದುದಲ್ಲ; ಕೃತಕವಾದುದು. ಈ ಋಣ ಚತುಷ್ಟಯಗಳನ್ನು ನಿವಾರಿಸಿಕೊಳ್ಳದಿದ್ದರೆ ಸೂತಕದವನು ಮಾಡುವ ಕರ್ಮಗಳಂತೆ ಎಲ್ಲವೂ ನಿಷ್ಫಲವಾಗುತ್ತವೆ. ಈ ಋಣಗಳ ಪರಿಹಾರವು ಹೇಗೆಂಬುದನ್ನು ಶ್ರೀವಿಜಯದಾಸರು ತಮ್ಮ ಸುಳಾದಿಯಲ್ಲಿ ಹೇಳಿದ ಸಾರಾಂಶವು ಹೀಗಿದೆ –

೧. ಋಷಿಗಳ ಋಣವು ಪರಿಹಾರವಾಗ ಬೇಕಾದರೆ ಸಕಾಲಕ್ಕೆ ಉಪನೀತನಾಗಿ ಅಗ್ನಿಕಾರ್ಯ, ವೇದಾಧ್ಯಯನ, ಪಾಠ ಪ್ರವಚನಗಳನ್ನು ಆ ಜನ್ಮ ಪರಿಯಂತವಾಗಿ ಮಾಡಬೇಕು. (ಶಕ್ತಿ ಬಂದಾಗಿನಿಂದ ಅದು ಇರುವವರೆಗೆ ಜನ್ಮವು ಲೆಕ್ಕಕ್ಕೆ ಉಂಟು)

೨. ದೇವ ಋಣವು ಯಜ್ಞ, ಯಾಗ, ಹವನ, ಹೋಮ ಕೊನೆಗೆ ವೈಶ್ವ ದೇವವನ್ನಾದರೂ ಮಾಡಿದರೆ ಸಾಕು ಅದು ಪರಿಹಾರವಾಗುತ್ತದೆ.

೩. ಪಿತೃ ಋಣವು ವಿವಾಹವನ್ನು ಮಾಡಿಕೊಂಡು ಸತ್ಸಂತಾನದಿಂದ ಯುಕ್ತನಾಗಿ, ಬಂಧು, ಬಳಗ, ಗುರು, ಹಿರಿಯರು, ಅತಿಥಿ, ಅಭ್ಯಾಗತರ ಸುಶ್ರೂಷೆಯನ್ನು ಮಾಡುತ್ತ ಅಧಿಕಾರಿಯಾದವನು ಪಿತೃಕಾರ್ಯ ತತ್ಪರನಾಗಿ ತೀರ್ಥಯಾತ್ರೆಗಳಿಂದ ಧನ್ಯನಾದರೆ ಪಿತೃ ಋಣವು ಮುಕ್ತವಾಗುತ್ತದೆ.

೪. ಸಾಲದ ಋಣವು ಸಾಲವನ್ನು ತೀರಿಸಿದರೆ ಪರಿಹಾರವಾಗುತ್ತದೆ. ಇದರಷ್ಟು ಕೆಟ್ಟದು ಮೇಲಿನವುಗಳಲ್ಲ. ಒಂದು ಚಿಕ್ಕ ಸಾಲವಾದರೂ ಸರಿ ಅದು ಕಿಡಿಯಂತಿದ್ದು ಪರಿಣಾಮವನ್ನು ಪ್ರಳಯಾಗ್ನಿಗೆ ಸಮಾನವಾಗಿ ಮಾಡುತ್ತದೆ. ಗರ್ಭಾಂತರಗಳಿಗೆ ನೂಕುತ್ತದೆ. ಈ ಋಣ ಪರಿಹಾರವಾಗುವವರೆಗೆ ಋಣಸ್ತನು ಮಾಡು ಮಾಡುವ ಪುಣ್ಯ ಕರ್ಮಗಳು, ಪೂಜಾ, ತೀರ್ಥಯಾತ್ರೆಯ ಎಲ್ಲಾ ಫಲಗಳು ಬಡ್ಡಿರೂಪದಲ್ಲಿ ಋಣತೆತ್ತವನ ಪಾಲಾಗುತ್ತವೆ. ಋಣದ ಸೂತಕವು ಚತುರ ವರ್ಣ, ಆಶ್ರಮದವರನ್ನೂ ಬಿಡುವುದಿಲ್ಲ. (ಯತಿಗಳಿಗೆ ಬಂಧು ಸೂತಕವಿಲ್ಲ. ಆದರೆ ಸಾಲವಿದ್ದರೆ ಬಿಡುವುದಿಲ್ಲ) ಅದಕ್ಕಾಗಿಯೇ ಶ್ರೀವಿಜಯದಾಸರು "ಸಾಲ ಮಾಡಲಿ ಬೇಡ । ಸಾಲದೆನ್ನಲಿ ಬೇಡಾ । ನಾಳಿಗೇ ಹ್ಯಾಂಗೆಂಬ ಚಿಂತೆ ಬೇಡಾ" ಎಂದು ಹೇಳಿರುತ್ತಾರೆ. ಶ್ರೀಕೃಷ್ಣ ಪರಮಾತ್ಮನು ತನ್ನ ಸಂದೇಶದಲ್ಲಿ "ದುರ್ಭಿಕ್ಷೇಚಾನ್ನದಾತಾರಂ । ಸುಭಿಕ್ಷೇಚ ಹಿರಣ್ಯದಂ ॥ ಚತುರೋಹಂ ನಮಸ್ಯಾಮಿ । ರಣಧೀರೇ ಋಣೇ ಶುಚಿಂ ॥" ಎಂದು ಹೇಳಿರುತ್ತಾರೆ. ಇದರ ಅರ್ಥವೇನೆಂದರೆ ಬರಗಾಲದಲ್ಲಿ ಅನ್ನದಾನವನ್ನೂ, ಸುಭಿಕ್ಷ ಕಾಲದಲ್ಲಿ ಬಂಗಾರ ದಾನವನ್ನೂ, ಸದಾ ಕಾಲವೂ ನನ್ನ ಸ್ಮರಣಪೂರ್ವಕವಾಗಿ ನನಗೆ ನಮಿಸುವವರನ್ನೂ, ರಣರಂಗದಲ್ಲಿ ಧೀರರಾದವರನ್ನೂ, ಕೊನೆಯಲ್ಲಿ ಋಣ ಮುಕ್ತರಾದವರನ್ನೂ ನಾನು ಇಷ್ಟ ಪಡುತ್ತೇನೆ ಎಂದು ಹೇಳಿರುತ್ತಾರೆ. (ಒಬ್ಬನ ಹತ್ತಿರ ಸಾಲ ಮಾಡಿದರೆ ಒಬ್ಬನಿಗೇ ಋಣ ಪುತ್ರನಾಗುತ್ತಾನೆ. ಇದೇ ಮಹಾಭಾರವಾದುದು. ಇನ್ನು ಬ್ಯಾಂಕಿನಲ್ಲಿ ಸಾಲ ಮಾಡಿದರೆ ಬ್ಯಾಂಕಿನ ಲಕ್ಷಾಂತರ ಸದಸ್ಯರುಗಳಿಗೆ ಋಣ ಪುತ್ರನಾಗಬೇಕಾಗುತ್ತದೆ. ಬ್ಯಾಂಕಿನ ವ್ಯವಹಾರದಿಂದ ಲಕ್ಷಾಂತರ ಕುಟುಂಬಗಳು ಬಡ್ಡಿ ಗಳಿಕೆಯಿಂದಲೂ, ವೇತನ ರೂಪದಿಂದಲೂ ಬದುಕುತ್ತಿರುತ್ತಾರೆ. ಅಲ್ಲಿ ಸಾಲ ಮಾಡಿದರೆ ತಪ್ಪಿಲ್ಲವಾದರೂ ಸಾಲವನ್ನು ತೀರಿಸದಿದ್ದರೆ ಅವರಿಗಾಗುವ ಅಧೋಗತಿಯನ್ನು ವರ್ಣಿಸಲು ಅಸದಳ.

ನಾವು ಒಮ್ಮೆ ತಿರುಪತಿಗೆ ಹೋಗಿದ್ದೆವು. ಅಲ್ಲಿ ಶ್ರೀನಿವಾಸದೇವರು ತನ್ನ ಮದುವೆಗಾಗಿ ಮಾಡಿದ ಸಾಲ ಪತ್ರದ ತಾಮ್ರದ ಪಟವು ಶ್ರೀಭೂವರಾಹ ದೇವರ ಸನ್ನಿಧಾನದಲ್ಲಿ ಇದೆಯಲ್ಲವೇ? ಕೇಳಿದರೆ ಅದನ್ನು ತೋರಿಸುತ್ತಾರೆ. ಅದನ್ನು ನೋಡಿದರೆ ನಮ್ಮ ಸಾಲಗಳು ತೀರುತ್ತದೆ ಎಂದು ಹೇಳುತ್ತಾರೆ. ಸರಿ. ನಮ್ಮ ಮಿತ್ರರು ಆ ಪಟವನ್ನು ಕಣ್ಣಿಗೊತ್ತಿಕೊಂಡು ಬೇಗನೇ ನಮ್ಮ ಸಾಲಗಳು ತೀರುವಂತಾಗಲೀ ಸ್ವಾಮಿಎಂದು ಬೇಡಿಕೊಂಡರು. ನಾನೇನು ಮಾಡಿದೆನೆಂದರೆ ಅದನ್ನು ಕಣ್ಣಿಗೊತ್ತಿಕೊಂಡು "ಸ್ವಾಮಿ, ನಾನು ಕೊಟ್ಟ ಬಡ್ಡಿರಹಿತವಾದ ಸಾಲಗಳು ಬೇಗನೇ ಮರಳಿ ಬಂದು ನನ್ನ ಕೈ ಸೇರುವಂತಾಗಲಿ: ಎಂದು ಬೇಡಿಕೊಂಡೆನು. ಹೇಗಿವೆ ಕಲಿಯುಗದ ವ್ಯಾಪಾರಗಳು.

ಮುಖ್ಯಪ್ರಾಣದೇವರ ಮಹಿಮೆಯನ್ನು ಯಾವ ಶಬ್ದಗಳಿಂದ ಬರೆಯಬಹುದು? ಆತನ ಸ್ಮರಣೆ ಮಾಡಿದರೆ ಸಾಕು ಜನಗಳಿಗೆ ಋಣಗಳು ಪರಿಹಾರವಾಗುವ ಅನುಕೂಲಗಳು ಪುಂಖಾನು ಪುಂಖವಾಗಿ ಒದಗಿ ಬರುತ್ತವೆ. ಇಂಥಾ ಅವತಾರ ಭೇದ ವರ್ಜಿತನಾದ ಈ ಬಾಲಕನು ಹುಣಸೇ ಬೀಜವನ್ನು ಎಣಿಸಿ ಋಣಮುಕ್ತನನ್ನಾಗಿ ಮಾಡಬೇಕಾಗಿತ್ತೇ? ಎತ್ತಿನ ಧಣಿಗೆ ಅನುಗ್ರಹ ಮಾಡಬೇಕಾಗಿತ್ತು, ಮಾಡಿದನು. ಅಸುರರು ಭಟ್ಟರು ಹಣವನ್ನು ಕೊಡಬೇಕಾಗಿತ್ತು. ಕೊಡಲಿಲ್ಲ. ಬರೀ ಹುಣಸೇ ಬೀಜದಿಂದ ತೃಪ್ತಿ ಮಾಡಿ ಕಳುಹಿಸಿದರು ಎಂದು ಭಾವಿಸಿರಬಹುದು. ಅವರು ಹಾಗೆಯೇ ಭಾವಿಸಲಿ.

ಶ್ರೀಮದನಂತನಾಥನ ಸೇವೆಯನ್ನು ಮಾಡಿಕೊಂಡು ಪಾಜಕ ಕ್ಷೇತ್ರಕ್ಕೆ ಹಿಂದಿರುಗುವ ವೇಳೆಗೆ ಪತ್ನಿ ವೇದವತಿ ದೇವಿಯು ಸುಮಾರು ಒಂದೊಂದು ಮೈಲಿ ದೂರದಲ್ಲಿದ್ದ ಬಾಣ, ಗದಾ, ಪರಶು, ಖಡ್ಗ ತೀರ್ಥಗಳಲ್ಲಿ ಸ್ನಾನ ಮಾಡಿಕೊಂಡು ಮಡಿಯಿಂದ ಅಗ್ರ್ಯೋದಕವನ್ನು ತಂದು ಪೂಜೆ ನೈವೇದ್ಯಗಳಿಗೆ ಅಣಿ ಮಾಡಿಕೊಡುತ್ತಿದ್ದರು. ತಾಯಿಯ ಈ ಪರಿಯಾದ ಕಷ್ಟವನ್ನು ನೋಡಿ ವಾಸುದೇವನು ತಾಯಿಯ ಹತ್ತಿರ ಬಂದು "ಅಮ್ಮಾ, ಇಂದಿನಿಂದ ನೀನು ಆ ಮೂರು ತೀರ್ಥಗಳಿಗೆ ಹೋಗಿ ಸ್ನಾನವನ್ನು ಮಾಡಿಕೊಂಡು ಬರಬೇಡ. ಇಕೋ, ಈ ಪರಶುತೀರ್ಥ ಒಂದರಲ್ಲಿ ಸ್ನಾನಮಾಡಿದರೆ ಸಾಕು. ಉಳಿದ ಮೂರು ತೀರ್ಥಾಭಿಮಾನಿ ದೇವತೆಗಳು ಇನ್ನು ಇಲ್ಲೇ ಇರುತ್ತಾರೆ. ಇಲ್ಲಿ ಮಿಂದರೆ ಎಲ್ಲಾ ತೀರ್ಥಗಳಲ್ಲಿಯೂ ಮಿಂದಂತೆ ಆಗುತ್ತದೆ" ಎಂದು ಹೇಳಿದನು. ಅದಕ್ಕೆ ತಾಯಿಯು ಒಡಂಬಡಲಿಲ್ಲ ಸಂಶಯಗ್ರಸ್ಥಳಾದಳು. ಆಗ ವಾಸುದೇವನು ತಾಯಿಯ ಸಂಶಯ ಪರಿಹಾರಾರ್ಥವಾಗಿ ಒಂದು ಪಣವನ್ನು ನಿಯೋಜಿಸಿ ಹೀಗೆ ಹೇಳಿದನು. "ಅಮ್ಮಾ, ಇಲ್ಲಿ ನೋಡು. ಇದು ಒಣಗಿದ ಮರದ ತುಂಡು. ಇದಕ್ಕೆ ನೀನು ಈ ಪರಶು ತೀರ್ಥದ ನೀರನ್ನು ಸುರಿ ಇದು ಬೇರು ಬಿಟ್ಟು ಚಿಗುರಿದರೆ ಇದರಲ್ಲಿ ನಾಲ್ಕು ತೀರ್ಥಗಳ ಸನ್ನಿಧಾನವು ಇದೆ ಎಂದು ತಿಳಿ. ಇಲ್ಲವಾದರೆ ನಿನ್ನ ಇಷ್ಟದಂತೆ ನಾಲ್ಕು ತೀರ್ಥಗಳಿಗೆ ಹೋಗಿ ಬಾ" ಎಂದು ಹೇಳಿದನು.

ತರುವಾಯ ವಾಸುದೇವನು ಆ ಶುಷ್ಕ ಕಾಷ್ಠವನ್ನು ಒಂದೆಡೆನೆಟ್ಟು ಅದಕ್ಕೆ ಒಂದು ಕೊಡ ನೀರನ್ನು ಹೊಯ್ದನು. ಮರುದಿನ ತಾಯಿ ಬಂದು ನೋಡುತ್ತಾಳೆ, ಆ ಕಾಷ್ಠವು ಕಾಷ್ಠವೇ ಅಲ್ಲ. ಅದು ಚಿಗುರಿ ವೃಕ್ಷವೇ ಆಗಿತ್ತು! ಇದನ್ನು ಕಂಡ ತಾಯಿಯು ಅಂದಿನಿಂದ ಆ ತೀರ್ಥ ಒಂದರಲ್ಲಿ ಸ್ನಾನ ಮಾಡಿ ಶ್ರಮವನ್ನು ದೂರ ಮಾಡಿಕೊಂಡಳು. ಇಂದಿಗೂ ಆ ವೃಕ್ಷವು ಒಂದು ಬುಡವನ್ನು ಕಳೆದು ಕೊಂಡರೆ ಮತ್ತೊಂದು ಬುಡದಿಂದ ಚಿಗುರೊಡೆಯುತ್ತಾ ಉಳಿದು ಕೊಂಡು ಬಂದಿರುವುದನ್ನು ನಾವು ಪಾಜಕ ಕ್ಷೇತ್ರದಲ್ಲಿ ಪ್ರತ್ಯಕ್ಷವಾಗಿ ಕಾಣಬಹುದು. ಜೀವರನ್ನು ಎಲ್ಲಿ ಬೇಕಾದರೂ ಸ್ಥಾಪಿಸ ಬಲ್ಲ ವಾಯುಕುಮಾರನಿಗೆ ಈ ಒಣಕಾಷ್ಠದಲ್ಲಿ ಒಂದು ಜೀವನನ್ನು ಸ್ಥಾಪಿಸಿದುದು ಅಚ್ಚರಿಯೇ? ಆತನಿಲ್ಲದಿದ್ದರೆ ಜೀವಂತ ವೃಕ್ಷವೂ ಒಣಗಿ ಹೋಗುವುದು. ಬ್ರಹ್ಮದೇವರು ಸಹ ಒಣಗುವರು.

॥ ಪದ ॥ ವಾಣೀಶ ಪದವಿಗೆ । ಮಾಣದೇ ಬರುವಂಥ ।
ಮಾಣವನಿವನಿಗೆ । ಪಾಣಿನಿ ಏಕೋ ॥
ಗೇಣರವಿಗೆ ಬಹು । ಜಾಣತನವ ತೋರಿ ।
ಓಣಿಯೊಳಗೆ ದಂಡ । ಪಾಣಿಯಾಗುತಲೀ ॥ ೩೧ ॥

**ಶಬ್ದಾರ್ಥ:** ವಾಣಿಶ = ಬ್ರಹ್ಮ; ಮಾಣದೆ = ತಪ್ಪದೆ, ನಿಶ್ಚಯವಾಗಿ ಬರುವಂಥ, ಮಾಣವ = ಬ್ರಹ್ಮಚಾರಿ; ಪಾಣಿನಿ = ವ್ಯಾಕರಣ ಗ್ರಂಥಗಳು; ಯಾಕೋ = ಯಾಕೆ ಬೇಕು, ಅವಶ್ಯಕತೆ ಇಲ್ಲ; ಗೇಣರವಿಗೆ = ಕೌಪೀನಕ್ಕಾಗಿ, ಅರ್ಥಾತ್ ಯತಿ ಆಶ್ರಮವನ್ನು ಪಡೆಯಲು; ಜಾಣತನವ ತೋರಿ = ಯುಕ್ತಿಯಿಂದ ಸಾಧಿಸಿ; ಓಣಿಯೊಳಗೆ = ಜಗತ್ತಿನಲ್ಲಿ; ದಂಡಪಾಣಿಯಾಗುತಲಿ = ಸನ್ಯಾಸಾಶ್ರಮವನ್ನು ಪಡೆದುಕೊಂಡು.

**ವಿಶೇಷಾರ್ಥ:** "ಸಕಲ ಶಬ್ದ ಮಯೀಚ ಸರಸ್ವತೀ । ಸತತ ಮಾನಮತಿ ಸ್ವಯಮೇವತಂ" ಎಂದಂತೆ ಯಾವ ಸಕಲ ಶಬ್ದಗಳಿಗೂ ಅಭಿಮಾನಿಯಾದ ಸರಸ್ವತಿಯು ಯಾವ ಬ್ರಹ್ಮದೇವರಿಗೆ ಪತ್ನಿಯಾಗಿ ಪ್ರತಿ ಕ್ಷಣವು ಆತನ ಅಡಿದಾವರೆಗಳಿಗೆ ನಮಿಸುತ್ತಿರುವಳೋ ಅಂಥಾ ಬ್ರಹ್ಮಪದವಿಗೆ ಬರುತ್ತಿರುವ ಅಥವಾ ಬ್ರಹ್ಮಶಬ್ದದಿಂದ ವಾಚ್ಯನೂ ಆಗಿರುವ ಈ ಬಾಲಕನಿಗೆ ಮಧ್ಯಗೇಹಭಟ್ಟರು ಅಕ್ಷರಾಭ್ಯಾಸವನ್ನು ಮಾಡಿಸಿದರು, ಮತ್ತು ತಾವೇ ಬಾಲ್ಯವಿದ್ಯಾಭ್ಯಾಸವನ್ನು ಹೇಳಲು ಪ್ರಾರಂಭಿಸಿದರು.

ಸರಸ್ವತಿಯು ಬ್ರಹ್ಮದೇವರ ಮಗಳು. ಆದರೆ, ಆತನು ಆಕೆಯನ್ನೇ ವಿವಾಹವಾದನು. ಇದು ಬ್ರಹ್ಮದೇವರ ಕಳಂಕ ಎಂದು ಕೆಲವರು ಹೇಳುತ್ತಾರೆ. ಬ್ರಹ್ಮನಿಗಾದರೂ ವಾಣೀಪತಿ ಎಂದೇ ವಿಶೇಷಣವಿದೆ. ಆದರೆ ಇಲ್ಲಿ ಉಪಾಸನಾ ಕ್ರಮದಿಂದ ತಿಳಿಯಬೇಕಾದುದೇನೆಂದರೆ ಮೊದಲು ಸೃಷ್ಟಿಯಲ್ಲಿ ಬ್ರಹ್ಮನ ಬಾಯಿಂದ ವೇದಾಕ್ಷರಗಳು ಹೊರಟವು. ಆ ಅಕ್ಷರಾಭಿಮಾನಿಯು ಸರಸ್ವತಿಯೇ ಆಗಿದ್ದಾಳೆ. ಆದ್ದರಿಂದ ಆಕೆಯು ವಿಧಿವದನ ಸಂಜಾತೆ-ಪುತ್ರಿ ಎನಿಸಿದಳು. ಬ್ರಹ್ಮದೇವರಿಗೆ ಶಬ್ದಗಳ ಮೇಲೆ ಪ್ರಭುತ್ವವಿರುವುದರಿಂದ ಆತನು ವಾಣಿ ಪತಿ ಎನಿಸಿದನು. ಬ್ರಹ್ಮದೇವರ ಮುಖದಿಂದ ಹೊರಟ ಸಕಲ ಶಬ್ದಗಳಿಗೂ ಬ್ರಹ್ಮನೇ ನಿಯಾಮಕನೆಂದು ತಿಳಿದು ಉದ್ಧಾರವಾಗಬೇಕು. "ಬಾಯಿಗೆ ಬ್ರಹ್ಮನ ರಕ್ಷೆ! ಬೆನ್ನಿಗೆ ಭೀಮನ ರಕ್ಷೆ" ಎನ್ನುತ್ತಾರೆ ಹಿರಿಯರು)

ಬಾಲಕನಿಗೆ ಇಂದು ಹೇಳಿದ ಅಕ್ಷರವನ್ನು ನಾಳೆ ಹೇಳಿಕೊಡುವ ಅವಶ್ಯಕತೆ ಇರಲಿಲ್ಲ. ಪಾಠದಲ್ಲೂ ಅಷ್ಟೇ ಬಾಲಕನ ತೈಲಬುದ್ಧಿಗೆ ಭಟ್ಟರು ಮೆಚ್ಚಿ ಮಗನಿಗೆ ದೃಷ್ಟಿಯಾದೀತೆಂದು ಭಯಗ್ರಸ್ಥರಾಗಿದ್ದರು. ಒಂದು ಸಲ "ಘೃತಪಲ್ಲಿ (ಸಂಸ್ಕೃತ), ನೇಯಂಪಲ್ಲಿ (ತೆಲುಗು), ತುಪ್ಪದಹಳ್ಳಿ (ಕನ್ನಡ) ಎಂಬ ಊರಲ್ಲಿ ಬಂಧುಗಳು ನೆರೆದಿದ್ದಾಗ ವಾಸುದೇವನ ಪಾಠ ಪ್ರಸಂಗವನ್ನು ಕಂಡು ಜನರು ನಿಬ್ಬೆರಗಾದರು. ಅವರಲ್ಲಿ "ಧೌತಪಟೋದ್ಭವ" ಎಂದರೆ 'ಮಡಿವಂತ'ರೆಂಬ ವಂಶದ ಶಿವಶರ್ಮನು ಹೇಳುತ್ತಿದ್ದ ಪುರಾಣವು ವಾಸುದೇವನಿಗೆ ಸರಿಕಾಣಲಿಲ್ಲ. ಬಾಲಕನಾದರೂ ಆತನ ತಪ್ಪುಗಳನ್ನು ತೋರಿಸಲಾಗಿ ಜನರು ನೀನೇ ಸರಿಯಾದ ಪಾಠವನ್ನು ಹೇಳು ಎಂದಾಗ ಜನರು ವಿಮರ್ಶಾತ್ಮಕವಾಗಿ ಮೆಚ್ಚುವ ರೀತಿಯಲ್ಲಿ ವಾಸುದೇವನು ಪುರಾಣವನ್ನು ಹೇಳಿದನು. ಆತನ ಪುರಾಣ ಕೌಶಲ್ಯತೆಯನ್ನು ಕಂಡು ಮಧ್ಯಗೇಹ ಭಟ್ಟರು ಮೆಚ್ಚಿದರು. ಒಮ್ಮೆ ಭಟ್ಟರೇ ಪುರಾಣವನ್ನು ಹೇಳುವಾಗ 'ಲಿಕುಚ' ಶಬ್ದಾರ್ಥವನ್ನು ಹೇಳಲು ತಿಳಿಯದೆ ಪುರಾಣವನ್ನು ಮುಂದುವರೆಸಿದರು. ಆಗ ಈ ಬಾಲಕನೇ ಲಿಕುಚ ಶಬ್ದಕ್ಕೆ 'ಹೆಬ್ಬಲಸು' ಎಂದು ಅರ್ಥವನ್ನು ಹೇಳಿ ಸಂತೈಸಿದನು.

ಹೀಗೆ ವಾಸುದೇವನು ಬಾಲ್ಯದಲ್ಲಿಯೇ ತನ್ನ ಅದ್ಭುತವಾದ ಬುದ್ಧಿ ಸಾಮರ್ಥ್ಯವನ್ನು ಪ್ರಕಟಿಸುತ್ತಿದ್ದನು. ಈ ಬಾಲಕನು ಗರ್ಭಾಷ್ಟಮವನ್ನು ತಲುಪಿದನು.. ಆಗ ಆತನಿಗೆ ಶ್ರೀ ಮಧ್ಯಗೇಹ ಭಟ್ಟರು ಸಕಾಲಕ್ಕೆ ಉಪನಯನವನ್ನು ಮಾಡಲು ಉದ್ಯುಕ್ತರಾದರು. ಶಾಸ್ತ್ರಾನುಸಾರವಾಗಿ ವೇದಾಧ್ಯಯನಕ್ಕೆ ಉಪನಯನವು ಅವಶ್ಯಕವಾಗಿದೆಯಲ್ಲವೇ? ಆದರೆ ಈ ವಸುದೇವನ ವಿಷಯದಲ್ಲಿ ಲಕ್ಷ್ಮೀದೇವಿಯಾದಿಯಾಗಿ ವಾಣಿ, ಶರ್ವಾಣಿ, ಇಂದ್ರಾಣಿಯೇ ಮೊದಲಾದ ಸಕಲ ವರ್ಣಾಭಿಮಾನಿ ದೇವತೆಗಳು ಈತನ ವದನಾರವಿಂದದಲ್ಲಿ ನರ್ತನ ಮಾಡಲು ಉತ್ಸುಕರಾಗಿದ್ದರು. ಭಟ್ಟರು ಬಂಧು ಬಾಂಧವರನ್ನು ಸೇರಿಸಿ ಸುಮುಹೂರ್ತದಲ್ಲಿ ವಾಸು ದೇವನ ಉಪನಯನವನ್ನು ವಿಜೃಂಭಣೆಯಿಂದ ಮಾಡಿದರು. ಅವರು ಮಾಡಿದ ಸಕಲ ಸಾಂಪ್ರದಾಯ ಧರ್ಮಗಳು ಲೋಕರೀತ್ಯ ಶಾಸ್ತ್ರ ಮರ್ಯಾದಾನುಸಾರವಾಗಿಯೂ ದೇವತೆಗಳಿಗೆ ವಿಡಂಬನಾರ್ಥವಾಗಿಯೂ, ಭಗವತ್ಪ್ರೀತಿಗಾಗಿಯೂ, ಅಸುರ ಮೋಹನಾರ್ಥವಾಗಿಯೂ ವಿಜೃಂಭಿಸಿದುವು. ಯಾಕೆಂದರೆ ಶ್ರೀಲಕ್ಷ್ಮೀ ನಾರಾಯಣರ ಹೊರತಾಗಿ ಉಳಿದ ಎಲ್ಲಾ ಧರ್ಮ ಕರ್ಮಾಭಿಮಾನಿ ದೇವತೆಗಳು ಈ ವಾಸುದೇವನ ವಶವರ್ತಿಗಳಾಗಿರುವವರೇ ಆಗಿದ್ದಾರೆ.

ವಾಸುದೇವನು ಆಟ, ಪಾಟಗಳಲ್ಲಿ ಎಲ್ಲರಿಗಿಂತ ಮುಂದೆಯೇ. ಎಲ್ಲರಲ್ಲಿ ನಿಂತು ಆಡಿಸುತ್ತಿದ್ದವನೂ ಈತನೇ. ಅವರ ಯೋಗ್ಯತೆಗೆ ತಕ್ಕಷ್ಟು ಬುದ್ಧಿ ಶಕ್ತಿಗಳನ್ನು ತನ್ನ ಸಹಪಾಠಿಗಳಲ್ಲಿ ತುಂಬಿದ್ದನು ಅಷ್ಟೇ. ಆತನ ಲೀಲೆಯು ಅಂದಿಗೆ ಮಾತ್ರ ಸೀಮಿತವಾಗಿತ್ತು ಎಂದು ತಿಳಿಯಬಾರದು. ಇಂದಿಗೂ, ಮುಂದೆಯೂ ನಡೆಯುವ ಎಲ್ಲಾ ಜೀವರಾಶಿಗಳ ಚೇಷ್ಟೆಗಳು ಆತನದೇ ಆಗಿದೆ.

"ಗುರು ಧರ್ಮಂ ಸಮಾಚರೇತ್" ಎಂಬಂತೆ ವಾಸುದೇವನು ತೋಟಂತಿಲ್ಲಾಯ ಎಂಬುವರಲ್ಲಿ ವೇದಾಧ್ಯಯನಕ್ಕೆ ಹೋದರು. ಅಲ್ಲಿನ ಆ ಗುರುಗಳು ಸಾಂಪ್ರದಾಯಿಕವಾಗಿ ಅಧ್ಯಯನವನ್ನು ಮಾಡಿಸುತ್ತಿಲ್ಲವೆಂದು ವಾಸುದೇವನು ಹೇಳಿದಾಗ ಗುರುಗಳು ವ್ಯಂಗ್ಯವಾಗಿ ನೀನು ವೇದ ಪಾರಂಗತ. ಸರಿ. ನೀನು ಎಲ್ಲಾ ವೇದಗಳನ್ನು ಹೇಳು ಎಂದಾಗ ವಾಸುದೇವನು ಶ್ರೀಹರಿಯು ಮೆಚ್ಚುವಂತೆ ವೇದವನ್ನು ಹೇಳಿದುದನ್ನು ಕೇಳಿ ಆಶ್ಚರ್ಯಾನಂದದಿಂದ ವಾಸುದೇವನನ್ನು ಹೊಗಳಿದರು. ತರುವಾಯ ಗುರು ಪುತ್ರನು ವಾಸುದೇವನ ಮಿತ್ರನಾಗಿದ್ದನು. ಆದರೆ ಆತನು ಭಯಂಕರವಾದ ಶಿರವ್ಯಾಧಿಯಿಂದ ನರಳುತ್ತಿದ್ದನು. ಇದನ್ನು ಕಂಡ ವಾಸುದೇವನು ಕನಿಕರದಿಂದ ಆ ಗುರು ಪುತ್ರನ ಕಿವಿಯಲ್ಲಿ ಗಟ್ಟಿಯಾಗಿ ಒಮ್ಮೆ ಊದಿದನು ಅಷ್ಟೇ. ಆ ತಕ್ಷಣದಲ್ಲೇ ಆ ಮಿತ್ರನ ಶಿರೋವ್ಯಾಧಿಯು ಮಾಯವಾಗಿ ಜನ್ಮ ಪರಿಯಂತವಾಗಿ ಅದು ತಿರುಗಿ ನೋಡಲಿಲ್ಲ. ವಾಸುದೇವನು ಐತರೇಯೋಪನಿಷತ್ತನ್ನು ವಿವರಿಸುವಲ್ಲಿ ತನ್ನ ಗುರುಗಳಿಗೇ ವಿಷ್ಣು ಭಕ್ತಿಯನ್ನು ಹುಟ್ಟಿಸುವುದರ ಮೂಲಕವಾಗಿ ಅವರಿಗೆ ಗುರು ದಕ್ಷಿಣೆಯನ್ನು ನೀಡಿದನು.

ತರುವಾಯ ಮನೆಗೆ ಬಂದ ವಾಸುದೇವನು ಹೀಗೆ ಚಿಂತಿಸಿದನು. "ವಿಷ್ಣು ದ್ವೇಷಿಗಳನ್ನು ಸದೆ ಬಡಿಯಬೇಕು. ಹಾಗೆ ಮಾಡದಿದ್ದರೆ ದೋಷವು ಬರುತ್ತದೆ. ಈ ಹಿಂಸೆಯು ಸಮಯೋಚಿತವಾಗಿಲ್ಲ. ಆ ಕಾರ್ಯಕ್ಕಾಗಿ ದುರ್ಗೆಯು ಅವತರಿಸುವಳು. ಈಗ ನಾನು ಸನ್ಯಾಸಿಯಾದರೆ ದೋಷ ಮುಕ್ತನಾಗುತ್ತೇನೆ" ಎಂದು ಮನದಲ್ಲಿ ಶ್ರೀಹರಿಯನ್ನು ಧ್ಯಾನಿಸಲಾರಂಭಿಸಿದನು. ವ್ಯಾಪ್ತೋಪಾಸಕನಾದ ವಾಸುದೇವನು (ವಾಯು) ಸರ್ವಜೀವ, ಜಡಗಳಿಗೆ ಬಾಹ್ಯದಲ್ಲಿ ನಮಸ್ಕಾರಗಳನ್ನು ಮಾಡುತ್ತಾ ಅಂತರಂಗದಲ್ಲಿ ತದ್ರೂಪ, ತನ್ನಾಮ, ತದಧಿಷ್ಠಾನ, ತದಂತರ್ಯಾಮಿ, ತದ್ಭಿನ್ನನಾದ ಶ್ರೀಹರಿಗೇ ನಮಸ್ಕರಿಸುತ್ತಿದ್ದನು. ಆ ಇತರ, ದೇವ, ಮಾನವರು ಹೀಗೆ ನಮಸ್ಕಾರಗಳನ್ನು ಮಾಡುವಂತಿಲ್ಲ ಯಾಕೆಂದರೆ ಇವರೆಲ್ಲಾ ಕೇವಲ ವಿಶ್ವೋಪಾಸಕರು. ವ್ಯಾಪ್ತೋಪಾಸಕರಲ್ಲ. ಋಜುಗಣಸ್ಥರು ಮಾತ್ರ ವ್ಯಾಪ್ತೋಪಾಸಕರು. ಇವರು

ಉಚ್ಚ ನೀಚಾಧಿಷ್ಠಾನಗಳಲ್ಲಿ ಅಂತರ್ಯಾಮಿಯಾದ ಶ್ರೀಹರಿಗೆ ನಮಸ್ಕರಿಸಬಹುದು. ಬೇರೆಯವರು "ನೀಚಾಧಿಷ್ಠಾನದಿ ಹರಿಯಾ ಪೂಜಿಸದಿರು। ಯೋಚಿಸು ವಿಜಯ ವಿಠ್ಠಲ ಅಧಿಕನೆಂದು" ಎಂದು ಶ್ರೀವಿಜಯದಾಸರು ಹೇಳಿದ್ದಾರೆ.

ಅದನ್ನೇ ಶ್ರೀಗೋಪಾಲದಾಸರು "ಶರ್ವಪಿತ ಪ್ರೀಯ ಶ್ರೀಗೋಪಾಲವಿಠ್ಠಲಗೆ । ಉರ್ವಧಿಷ್ಠಾನದಲ್ಲಿ ಭಜಿಸೋ ಮನುಜಾ॥" ಎಂದು ಹೇಳಿದರು.

ಇನ್ನು ಉಚ್ಚಾಧಿಷ್ಠಾನ, ನೀಚಾಧಿಷ್ಠಾನ ಎಂದರೇನು? ಎಂದರೆ ಪರಮಾತ್ಮನು "ಅಣುರೇಣು ತೃಣಕಾಷ್ಠ, ಜೀವ, ಜಡ, ಜಂಗಮ, ಸ್ಥಾವರ, ಪಶುಪಕ್ಷಿ, ಕ್ರಿಮಿ, ಕೀಟ, ತರು, ಲತಾ, ಗುಲ್ಮ, ಭೂ, ಗಗನ, ಜಲ, ದಿವಾ, ನಿಶಾಚರಾದಿ ಸಕಲದಲ್ಲಿ ಪಂಚಭೂತ, ತನ್ಮಾತ್ರಾದಿಗಳಲ್ಲಿ ವ್ಯಾಪಿಸಿಕೊಂಡಿರುತ್ತಾನೆ. ಅದರಲ್ಲಿ ದೇವರು ಇದ್ದರೂ, (ವಿನಾ ಋಜುಗಣಸ್ಥರು), ನೀಚರಲ್ಲಿ ದೇವರಿದ್ದಾನೆ ಎಂದು ತಿಳಿದು ಉತ್ತಮರು ನಮಸ್ಕಾರಾದಿಗಳನ್ನು ಮಾಡಬಾರದು. ಉದಾಹರಣೆಗೆ ಮನೆಯ ಯಜಮಾನನು ಸತಿ, ಸುತರಲ್ಲಿ ದೇವರಿರುವನೆಂದು ಅವರಿಗೆ ನಮಸ್ಕಾರಗಳನ್ನು ಮಾಡಬಾರದು. ಬ್ರಾಹ್ಮಣನು ನೀಚ ವರ್ಣದವರಿಗೆ ಹಾಗೂ ಆಶ್ರಮಜೇಷ್ಠರು ಕನಿಯರಿಗೆ, ಶ್ವಾನ, ಸೂಕರಾದಿಗಳಿಗೆ ನಮಸ್ಕಾರಗಳನ್ನು ಮಾಡಬಾರದು. ದೇವತೆಗಳು ತಮಗಿಂತ ಕೆಳಗಿನವರಿಗೆ ನಮಸ್ಕಾರಗಳನ್ನು ಮಾಡುವುದಿಲ್ಲ ಕೆಲವೊಮ್ಮೆ ತಾತ್ಕಾಲಿಕವಾಗಿ ವಿಭೂತಿ ಪರಕಾಲದಲ್ಲಿ ಸ್ತಾವರರ ಉದ್ಧಾರಾರ್ಥವಾಗಿ, ಅವರನ್ನು ಕೀರ್ತಿವಂತರನ್ನಾಗಿ ಮಾಡಲು ಒಂದು ನಿಮಿತ್ತದಿಂದ ಶ್ಲಾಘನೆ, ವಂದನಾದಿಗಳನ್ನು ಮಾಡುತ್ತಾರೆಯೇ ವಿನಃ ಸ್ವಾಭಾವಿಕವಾಗಿ ಅಲ್ಲ. ಮನುಷ್ಯರು ಉಂಡು ಶ್ವಾನ, ಸೂಕರಾದಿಗಳಿಗೆ ಹಾಕಬೇಕು. ವಿಪರೀತವಾಗಿ ಅಲ್ಲ ಗೋಗ್ರಾಸವನ್ನು ಇತ್ತು ಬ್ರಾಹ್ಮಣನು ಉಣಬೇಕು. ಜ್ಞಾನ ವೃದ್ಧ, ವಯೋವೃದ್ಧರನ್ನು ಗುರುತಿಸಿ ಸಮಯೋಚಿತವಾಗಿ ನಮನಾದಿಗಳನ್ನು ಮಾಡಬೇಕು. ಉಚ್ಚಾಧಿಷ್ಠಾನವೆಂದರೆ ಹಲವು ಬಗೆಯಲ್ಲಿ ಶ್ರೇಷ್ಠರಾದವರಿಗೆ ಕನಿಯರು ನಮಸ್ಕರಿಸಬೇಕು. ಆದರೆ ವಾಯುದೇವರು ವ್ಯಾಪ್ತೋಪಾಸಕರಾದುದರಿಂದ ಅವರಿಗೆ ಈ ನಿಯಮವು ಅನ್ವಯವಾಗುವುದಿಲ್ಲ. ವ್ಯಾಪ್ತೋಪಾಸನೆ ಎಂದರೆ ನಾನು ಸಕ್ಕರೆಯನ್ನು ತಿಂದರೆ ಅದರ ರುಚಿಯು ನನಗೆ ಆಗುವುದು ವಾಯುದೇವರ ಮುಖಾಂತರವಾಗಿ ಇದರಂತೆ ನಮ್ಮ ಸರ್ವೇಂದ್ರಿಯ ಭೋಗಸಂತೃಪ್ತಿಯು ನಮ್ಮ ಅನುಭವಕ್ಕೆ ಬರುವುದು ವಾಯುದೇವರಿಂದ. ಆದರೆ ವಾಯು, ಬ್ರಹ್ಮರಿಗೆ ಇತರ ಯಾರಿಂದಲೂ ಪ್ರಯೋಜನವಿಲ್ಲ. ಶ್ರೀಹರಿಯಿಂದ ಅವರಿಗೆ ಎಲ್ಲವೂ ಪ್ರಾಪ್ತಿ. ಅದಕ್ಕಾಗಿ ಅವರು ನೀಚೋಚ್ಚಾಧಿಷ್ಠಾನಗತ ಭಗವಂತನಿಗೆ ನಮಸ್ಕರಿಸಲು ಅಧಿಕಾರವಿದೆ. ಇತರರಿಗೆ ಅದು ಸಾಧ್ಯವಿಲ್ಲ. ಇತರ ದೇವತೆ, ಸಾಧಕರು ಕೇವಲ ವಿಶ್ವೋಪಾಸಕರು. ವಿಶ್ವೋಪಾಸಕರೆಂದರೆ ಜೀವ ಜಡಗಳಲ್ಲಿನ ಹರಿ ಚೇಷ್ಟೆಗಳನ್ನು ಚಿಂತಿಸುವವರೇ ಹೊರತಾಗಿ ಪ್ರೇರಕರಲ್ಲ. ಇವರು ಸಕ್ಕರೆಯನ್ನು ತಿಂದರು ಅವರ ಬಾಯಿಯು ಸಿಹಿಯಾಯಿತು ಎಂದು ಹೇಳಬಹುದೇ ವಿನಃ ಸಿಹಿಭೋಗಪ್ರದರಲ್ಲ. ತಮಗಿಂತ ಮೇಲಿನವರಿಗೆ ಪ್ರೇರಕರಲ್ಲ. ಪ್ರೇರ್ಯರು. ಆದ್ದರಿಂದ ಇವರನ್ನು ವಿಶ್ವೋಪಾಸಕರೆನ್ನುತ್ತಾರೆ. ಬ್ರಹ್ಮಾಂಡ ಪ್ರೇರಕರಾದ ಪ್ರಯುಕ್ತ ಋಜುಗಣಸ್ಥರು ವ್ಯಾಪ್ತೋಪಾಸಕರು. ಇವರಿಗೆ ನೀಚೋಚ್ಚಾಧಿಷ್ಠಾನ ನಿಯಮವು ಅನ್ವಯವಾಗುವುದಿಲ್ಲ.

ವಾಸುದೇವನ ಈ ಬಗೆಯಾದ ವಿಚಿತ್ರ ಕರ್ಮಗಳನ್ನು ನೋಡಿ ಮಾತಾ, ಪಿತೃ, ಬಂಧುಗಳು ವಿಸ್ಮಿತರಾದರು. ಅವರ ಪ್ರಶ್ನೆಗಳಿಗೆ ನನಗೆ ಸರ್ವತ್ರದಲ್ಲಿಯೂ ಶ್ರೀಹರಿಯೇ ಕಾಣುತ್ತಿದ್ದಾನೆ. ಆತನಿಗೆ ನಮಸ್ಕರಿಸುತ್ತಿರುತ್ತೇನೆ ಎಂದು ಉತ್ತರವನ್ನು ನೀಡುತ್ತಿದ್ದನು.

ವಾಸುದೇವನು ತಾನು ಸನ್ಯಾಸಾಶ್ರಮವನ್ನು ಪಡೆದು ದುರ್ಮತ ಜೀಮೂತ ಝಂಝಾ ಮಾರುನಾಗಬೇಕೆಂದು ಧೃಡನಿಶ್ಚಯವನ್ನು ಮಾಡಿಕೊಂಡು ಮನೆಯಿಂದ ಹೊರಟನು. ಆಗಿನ ಕಾಲದಲ್ಲಿ ಜಿತೇಂದ್ರಿಯರೂ, ವೈರಾಗ್ಯಶಾಲಿಗಳೂ, ಪರಿಶುದ್ಧಾಂತರಾತ್ಮರೂ, ಶ್ರೀನಾರಾಯಣನಲ್ಲಿ ಅನನ್ಯ ಭಕ್ತಿ ಭರಿತರೂ ಆಗಿದ್ದ ಶ್ರೀಅಚ್ಯುತ ಪ್ರೇಕ್ಷಚಾರ್ಯರೆಂಬ ಸನ್ಯಾಸಿಗಳು ವಿರಾಜಮಾನರಾಗಿದ್ದರು. ಅವರು ಕಾಲಕ್ಕನುಗುಣವಾಗಿ ಮಾಯಾವಾದ ಮತ ಪ್ರಕ್ರಿಯೆಗಳನ್ನೇ ಪಾಠ ಹೇಳುತ್ತಿದ್ದರು. ವಿರೋಧಾಭಾಸಗಳು ಅವರನ್ನು ಕಾಡದೆ ಬಿಡಲಿಲ್ಲ. ಆದರೇನು? ಬಹುಜನ ನಿಷ್ಠೆಯಿಂದ ಬಂಧಿಸಲ್ಪಟ್ಟಿದ್ದರು. ಮುಕ್ತಿಯೋಗ್ಯರಾದ ಇವರಿಗೆ ಲಭಿಸಿದ್ದ ಒಂದು ಭಾಗ್ಯವೆಂದರೆ ಹಂಸನಾಮಕ ಪರಮಾತ್ಮನಿಂದ ಉಪದೇಶಿಸಲ್ಪಟ್ಟಿದ್ದ ಪ್ರಣವ ಮಂತ್ರ (ಓಂಕಾರ)ವು ಅವಿಚ್ಛಿನ್ನವಾಗಿ ಇವರಿಗೆ ತಲುಪಿತ್ತು. ವಿಷ್ಣುರಹಸ್ಯ, ಪದ್ಮಪುರಾಣ, ನರಸಿಂಹಪುರಾಣಗಳಲ್ಲಿ ವಿಧಿಸಲಾಗಿರುವ ಊರ್ಧ್ವಪುಂಡ್ರ, ದ್ವಾದಶನಾಮಗಳ ಸಾಂಪ್ರದಾಯಗಳನ್ನು ಇವರು ರಹಸ್ಯವಾಗಿ ಪಾಲಿಸಿಕೊಂಡು ಬಂದಿದ್ದರು. ಇವರು ಸಾಗಿ ಬಂದ ಸತ್ಸಾಂಪ್ರದಾಯದಲ್ಲಿ ಹೇಗೆ ವಿರಾಜಮಾನರಾಗಿದ್ದರೆಂಬುದನ್ನು ಶ್ರೀಪುರಂದರದಾಸರು ಹೀಗೆ ವರ್ಣಿಸಿರುತ್ತಾರೆ.

ಉಗಾಭೋಗ

**ಶ್ರೀಪತಿಯ ನಾಭಿ ಕಮಲದಿ ಅಜ ಜನಿಸಿದನು ನಾಭಿ ।**
**ಕೂಪಸಂಭವನ ಮಾನಸ ಪುತ್ರರೇ ಸನಕಾದಿಗಳು ॥**
**ಈ ಪರಿಯ ಸನಕಾದಿಗಳ ಶಿಷ್ಯರೇ ದೂರ್ವಾಸರು ।**
**ತಾಪಸೋತ್ತಮ ದೂರ್ವಾಸರ ಶಿಷ್ಯರೇ ಪರತೀರ್ಥರು ॥**
**ಈ ಪರತೀರ್ಥರ ಶಿಷ್ಯರೇ ಸತ್ಯೆ ಪ್ರಜ್ಞರು ಸ ।**
**ತ್ಯ ಪ್ರಜ್ಞರ ಶಿಷ್ಯರೇ ಪ್ರಾಜ್ಞತೀರ್ಥರು ಇವರ ॥**
**ಸುಪ್ರಸಿದ್ಧ ಶಿಷ್ಯರೇ ಅಚ್ಯುತಪ್ರೇಕ್ಷಾಚಾರ್ಯರು ಅಚ್ಯು ।**
**ತ ಪ್ರೇಕ್ಷಾಚಾರ್ಯರ ಕರ ಸಂಜಾತರೇ ಮಹಾ ಭಾಷ್ಯಕಾರರು ॥**
**ಆ ಪ್ರೌಢ ಭಾಷ್ಯಕಾರರೇ ಗುರು ಮುಖ್ಯ ಪ್ರಾಣರು ಗುರುಮು ।**
**ಖ್ಯ ಪ್ರಾಣ ಪತಿ ನಮ್ಮ ಪುರಂದರ ವಿಠ್ಠಲನ ದಾಸರಿಗೆ ನಮೋ ನಮೋಃ ॥೧ ॥**

ಈ ಶ್ರೀಅಚ್ಯುತ ಪ್ರೇಕ್ಷಾಚಾರ್ಯರು ವಿಮರ್ಶಿಸಲ್ಪಟ್ಟ ಶ್ರೀಮನ್ನಾರಾಯಣ ಪರಾತ್ಪರತೆಯನ್ನು ತಮ್ಮ ಗುರುಗಳಿಂದ ವ್ಯವಸ್ಥಿತವಾಗಿ ಉಪದೇಶಿಸಲ್ಪಟ್ಟವರಾಗಿದ್ದರು. ಇವರು ಸಾಮಾನ್ಯರಲ್ಲ. ದ್ವಾಪರಯುಗದಲ್ಲಿ ದ್ರೌಪದಾದೇವಿಯು ನಿತ್ಯವೂ ನೀಡುತ್ತಿದ್ದ ಭಿಕ್ಷಾನ್ನದಿಂದಲೇ ಪೋಷಿತರಾಗಿದ್ದರು. ಈಗ ಭೀಮಾ ಭಿನ್ನ ವಾಸುದೇವನಿಗೆ ಗುರು ಎನಿಸಿಕೊಂಡ ಸೌಭಾಗ್ಯವನ್ನು ಪಡೆದಿದ್ದರು. ಗುರು ಉಪದೇಶದಿಂದ ವೃದ್ಧಿಗೊಂಡ ಪರಿಶುದ್ಧವಾದ ಜ್ಞಾನಿಯಾಗಿದ್ದ ಇವರು ಕುಶಾಸ್ತ್ರವನ್ನು ಪಾಠಮಾಡುತ್ತಿರುವಾಗ ಮನಸ್ಸಿನಲ್ಲಿ ನೋಯುತ್ತಿದ್ದರು. ಇವರು ಉಡುಪಿಯಲ್ಲಿ ಶ್ರೀಅನಂತೇಶ್ವರನ ಸನ್ನಿಧಾನದಲ್ಲಿ ಸದುಪಾಸನಾತತ್ಪರರಾಗಿ ಇರುತ್ತಿರುವಾಗ ತನಗೆ ಸನ್ಯಾಸವನ್ನು ನೀಡಲು ಇವರೇ ಯೋಗ್ಯರೆಂದು ತಿಳಿದು ವಾಸುದೇವನು ಇವರ ಬಳಿಗೆ ಧಾವಿಸಿದನು.

ಶ್ರೀವಾಸುದೇವನು ಅಚ್ಯುತಪ್ರೇಕ್ಷಾಚಾರ್ಯರಲ್ಲಿ ಬಂದು ಸನ್ಯಾಸವನ್ನು ಸ್ವೀಕರಿಸಲಿರುವನು ಎಂಬ ವಾರ್ತೆಯನ್ನು ಕೇಳಿ ಮಧ್ಯಗೇಹ ಭಟ್ಟರು ಮತ್ತು ವೇದವತಿ ದೇವಿಯು ಸಹ ಗಾಬರಿಯಾಗಿ ಉಡುಪಿಗೆ ಓಡಿ ಬಂದು ವಾಸುದೇವನನ್ನೂ ಮತ್ತು ಅಚ್ಯುತಪ್ರೇಕ್ಷರನ್ನೂ ಕಂಡು ಬಹುಪರಿಯಾಗಿ ಸನ್ಯಾಸ ಪ್ರಸಕ್ತಿಯನ್ನು ಕೈಬಿಡಬೇಕೆಂದು ಬೇಡಿಕೊಂಡರು ಮತ್ತು ಭಟ್ಟರು ವಾಸುದೇವನಿಗೆ ಹೇಳಿದರು. "ಹಿಂದೆ ಹುಟ್ಟಿದ್ದ ಗಂಡು ಮಕ್ಕಳು ಅಸು ನೀಗಿದವು. ಈಗ ವೃದ್ಧರಾದ ನಮಗೆ ನೀನೇ ರಕ್ಷಕ. ಸನ್ಯಾಸಿಯಾಗಬೇಡ" ಎಂದು ಅಂಗಲಾಚಿದರು. ದುಂಬಾಲ ಬಿದ್ದರು. ಆಗ್ರಹಮಾಡಿದರು. ಕೊನೆಗೆ ನಮಸ್ಕಾರವನ್ನು ಮಾಡಿಬಿಟ್ಟರು. ಆಗ ವಾಸುದೇವನು ನಗುತ್ತ "ಅಪ್ಪ ನೀನು ನನಗೆ ನಮಸ್ಕಾರವನ್ನು ಮಾಡಿದ್ದರಿಂದ ಸನ್ಯಾಸಕ್ಕೆ ಅಪ್ಪಣೆಯನ್ನು ಕೊಟ್ಟಂತೇ ಆಯಿತು" ಎಂದಾಗ ಭಟ್ಟರು ನಾನಂತೂ ನಿನಗೆ ಸನ್ಯಾಸಕ್ಕೆ ಅಪ್ಪಣೆಯನ್ನು ನೀಡುವುದಿಲ್ಲ. ಬೇಕಾದರೆ ನಿನ್ನ ತಾಯಿಯು ಒಪ್ಪಿದರೆ ನಿನ್ನಿಷ್ಟದಂತೆ ಮಾಡು" ಎಂದು ಜಾರಿಕೊಂಡರು. ಆಗ ವಾಸುದೇವನು ತಾಯಿಯ ಬಳಿಗೆ ಬಂದು "ನೀನು ನನಗೆ ಸನ್ಯಾಸಕ್ಕೆ ಅನುಮತಿಯನ್ನು ನೀಡದಿದ್ದರೆ ನಾನು ದೇಶಾಂತರಕ್ಕೆ ಹೊರಟು ಹೋಗುತ್ತೇನೆ. ಆಗ ನೀನು ನನ್ನನು ನೋಡಲು ಆಗುವುದಿಲ್ಲ. ಸನ್ಯಾಸಕ್ಕೆ ಅಪ್ಪಣೆಯನ್ನು ನೀಡಿದರೆ ನಾನು ನಿನ್ನ ಎದುರಿಗೇ ಇರುತ್ತೇನೆ ಎಂದು ಹೇಳಿದನು. ಆಗ ತಾಯಿಯು ನಿರ್ವಾವಿಲ್ಲದೆ "ನಿನ್ನ ಇಷ್ಟವಪ್ಪ" ಎಂದು ಸುಮ್ಮನಾದಳು. ಕೆಲವು ಕಾಲಾನಂತರದಲ್ಲಿ ಭಟ್ಟ ದಂಪತಿಗಳಿಗೆ ಪುತ್ರನು ಜನಿಸಲಾಗಿ ವಾಸುದೇವನು ಅವರಿಗೆ ನನ್ನ ಈ ತಮ್ಮನೇ ನಿಮ್ಮ ರಕ್ಷಕನಾಗುವನು" ಎಂದು ಹೇಳಿ ಮನೆಯಿಂದ ಹೊರಟನು.

ಮನೆಯಿಂದ ಹೊರಹೊರಟ ವಾಸುದೇವನು ಅಚ್ಯುತಪ್ರೇಕ್ಷಾಚಾರ್ಯರ ಹತ್ತಿರ ಬಂದು ಅವರ ಸಹವಾಸದಲ್ಲಿ ಕೆಲವು ದಿನ ಇದ್ದು ಅವರ ಮನಸ್ಸನ್ನು ಗೆದ್ದನು. ದುರ್ಮತಗಳಿಗೆ ವಿನಾಶಕಾರಿ ಎಂಬಂತೆ ಕಾಣುತ್ತಿದ್ದ ಕೆಂಪು ವಸ್ತ್ರ (ಕಾಷಾಯಾಂಬರ)ವನ್ನು ಧರಿಸುವುದರ ಮೂಲಕ ಸತ್ಸಾಂಪ್ರದಾಯ ಬದ್ಧವಾಗಿ ಅಚ್ಯುಪ್ರೇಕ್ಷಾಚಾರ್ಯರಿಂದ ಸನ್ಯಾಸವನ್ನು ಸ್ವೀಕರಿಸಿದನು. ದೇವತೆಗಳು ಹರ್ಷೋದ್ಗಾರವನ್ನು ಮಾಡುತ್ತ ದುಂದುಭಿಗಳನ್ನು ಮೊಳಗಿಸುತ್ತ ಪುಷ್ಪವೃಷ್ಟಿಯನ್ನು ಗರೆಯುತ್ತಿರುವಾಗ ಅಚ್ಯುತಪ್ರೇಕ್ಷರು ವಾಸುದೇವನಿಗೆ 'ಓಂಕಾರ ಪ್ರಣವ' ಮಂತ್ರೋಪದೇಶವನ್ನು ಮಾಡುವುದರ ಮೂಲಕವಾಗಿ ಆತನಿಗೆ 'ಪೂರ್ಣಪ್ರಜ್ಞ' ಎಂಬ ಅನ್ವರ್ಥಕವಾದ ನಾಮಾಂಕಿತದಿಂದ ಸನ್ಯಾಸ ದೀಕ್ಷೆಯನ್ನು ನೀಡಿದರು. ತರುವಾಯ ಈ ಪೂರ್ಣಪ್ರಜ್ಞರು ತಮ್ಮ ವಿಶಿಷ್ಟವಾದ ಗುಣಧರ್ಮ ಕರ್ಮಗಳಿಂದ ಪೂರ್ಣಬೋಧ, ಅಲವ ಬೋಧ, ಆನಂದತೀರ್ಥಾಚಾರ್ಯ, ಸುಖತೀರ್ಥ, ದಶಪ್ರಯತಿ, ಸರ್ವಜ್ಞಾಚಾರ್ಯ, ಮೋದತೀರ್ಥರು ಮತ್ತು ಎಲ್ಲಕ್ಕೂ ಮಿಗಿಲಾಗಿ ವೇದ ಸಿದ್ಧವಾದ 'ಶ್ರೀಮಧ್ವಾಚಾರ್ಯ' ರೆಂಬ ನಾಮಗಳನ್ನು ಹೊಂದಿದರು.

ವಿನಯ, ಜ್ಞಾನ, ಶೀಲಸಂಪನ್ನರಾದ ಪೂರ್ಣಪ್ರಜ್ಞರು ಗುರುಧರ್ಮವನ್ನು ಅನುಸರಿಸಿ ಅಚ್ಯುತಪ್ರೇಕ್ಷರಿಗೆ ವಂದಿಸುತ್ತಾ ಅವರ ಸುಶ್ರೂಷೆಯನ್ನು ಮಾಡುತ್ತಾ ಅವರ ಮನಸ್ಸನ್ನು ಸಂತೋಷಗೊಳಿಸಿದರು. ಗುರುಗಳು ಶಿಷ್ಯರ ಸುಶ್ರೂಷೆಗಿಂತ ಅವರ ಜ್ಞಾನಕ್ಕೆ ಮಾರುಹೋಗಿದ್ದರು. ಮಿಥ್ಯಾವಾದದಲ್ಲಿ ಆಸಕ್ತಿಯನ್ನು ಕಳೆದುಕೊಂಡಿದ್ದ ಗುರುಗಳಿಗೆ ಈ ಶಿಷ್ಯಶಾರ್ದೂಲನಿಂದ ಯಥಾರ್ಥವಾದ ಜ್ಞಾನವು ಲಭಿಸಲಾರಂಭಿಸಿತು. ಎಷ್ಟೋಬಾರಿ ಭಾರಿ ಚರ್ಚೆಗೆ ಇಳಿಯುತ್ತಿದ್ದ ಶ್ರೀ ಅಚ್ಯುತಪ್ರೇಕ್ಷರು ಶ್ರೀಮಧ್ವಾಚಾರ್ಯರ ಉತ್ತರಗಳಿಂದ ಸಮಾಧಾನಗೊಳ್ಳುತ್ತಿದ್ದರು. ಒಳಗೊಳಗೇ ಓಗ್ಗಿ ನಲಿಯುತ್ತಿದ್ದರು. "ಇಷ್ಟಸಿದ್ಧಿ" ಎಂಬ ಗ್ರಂಥದ ಪಾಠ ಸಮಯದಲ್ಲಿ ಮಧ್ವಾಚಾರ್ಯರು ಆ ಗ್ರಂಥದ ಮಂಗಳ

ಶ್ಲೋಕದಲ್ಲೆ ಮೂವತ್ತೆರಡು ದೋಷಗಳನ್ನು ತೋರಿಸಿ ಆ ದೋಷಗಳಿಂದ ಗ್ರಂಥವು ಮುಕ್ತವಾಗಿಲ್ಲ ಎಂಬುದನ್ನು ನಿಶ್ಚಯ ಮಾಡಿ ತೋರಿಸಿದರು. ಶ್ರೀಮಧ್ವಾಚಾರ್ಯರ ನೇಮ ನಿಷ್ಟೆಗಳನ್ನು ಕಂಡು ಗುರುಗಳೂ ಅವರನ್ನು ಅನುಸರಿಸಿದರು. ಬರುಬರುತ್ತ ಶ್ರೀ ಅಚ್ಯುತಪ್ರೇಕ್ಷಾಚಾರ್ಯರಿಗೆ ಶ್ರೀಮಧ್ವಾಚಾರ್ಯರ ಬಗ್ಗೆ ಅಗಾಧವಾದ ಪ್ರೇಮವು ಉಂಟಾಗಿ ಅವರು ಶ್ರೀಮಧ್ವಾಚಾರ್ಯರನ್ನು ಬಿಟ್ಟಿರಲಾರದಾದರು. ಇಂತಿರುವಾಗ ಒಮ್ಮೆ ಅನಂತೇಶ್ವರನು ಒಬ್ಬ ಮನುಷ್ಯನಲ್ಲಿ ಆವಿಷ್ಟನಾಗಿ ಬಂದು ಅಚ್ಯುತಪ್ರೇಕ್ಷಾಚಾರ್ಯರಿಗೆ ಶ್ರೀಮಧ್ವಾಚಾರ್ಯರ ಹಸ್ತವನ್ನು ನೀಡಿ ಈ ಶಿಷ್ಯನಿಂದ ನಿನ್ನ ಎಲ್ಲಾ ಮೋಕ್ಷಾನ್ವೇಷಣ ಕನಸುಗಳು ನನಸಾಗುತ್ತವೆ ಎಂದು ನಿರಾವೇಶಯುತನಾದನು. ಶ್ರೀಅಚ್ಯುತಪ್ರೇಕ್ಷಾಚಾರ್ಯರು ಶ್ರೀಮಧ್ವಾಚಾರ್ಯರಿಂದ ಬಹುಪರಿಯಾದ ಗ್ರಂಥ ರಹಸ್ಯ, ತಾತ್ಪರ್ಯ, ಉಪಾಸನಾಕ್ರಮಗಳನ್ನು ಅರಿತುದಲ್ಲದೆ ಶುದ್ಧಭಾಗವತ ಗ್ರಂಥವನ್ನು ಶ್ರವಣ ಮಾಡಿದರು.

ಒಮ್ಮೆ ಶ್ರೀಮಧ್ವಾಚಾರ್ಯರು ಕಾಶಿಯಲ್ಲಿ ಗಂಗಾಸ್ನಾನವನ್ನು ಮಾಡ ಬಯಸಿದರು ಮತ್ತು ಗುರುಗಳ ಅಪ್ಪಣೆಯನ್ನು ಕೇಳಿದರು ಆದರೆ ಇವರ ಅಗಲಿಕೆಯನ್ನು ಸಹಿಸಲಾಗದ ಅಚ್ಯುತಪ್ರೇಕ್ಷರು ಅದಕ್ಕೆ ಅನುಮತಿಯನ್ನು ನೀಡಲಿಲ್ಲ. ಆಗ ಶ್ರೀಮಧ್ವರು ಶ್ರೀಅನಂತೇಶ್ವರನಿಗೆ ಮೊರೆ ಇಡಲಾಗಿ ಅನಂತೇಶ್ವರನು ಒಬ್ಬನಲ್ಲಿ ಆವಿಷ್ಟನಾಗಿ "ಹೇ ಪೂರ್ಣಪ್ರಜ್ಞ, ನೀನು ಈಗ ಕಾಶಿಗೆ ಹೋಗಬೇಡ. ಗಂಗೆಯೇ ಉಡುಪಿಗೆ ಬರುತ್ತಾಳೆ. ಅಲ್ಲಿ ಸ್ನಾನ ಮಾಡು" ಎಂದು ಹೇಳಿದನು. ಅದರಂತೆಯೇ ಗಂಗೆಯು ಉಡುಪಿಯಲ್ಲಿ ಪ್ರತ್ಯಕ್ಷಳಾದಳು. ಅಲ್ಲಿ ಎಲ್ಲರೂ ಸ್ನಾನ ಮಾಡಿದರು. ಇಂದಿಗೂ ಉಡುಪಿಗೆ ಗಂಗೆಯು ಹನ್ನೆರಡು ವರ್ಷಗಳಿಗೊಮ್ಮೆ ಬರುತ್ತಾಳೆ. ಈಗ ಅದೇ ಮಧ್ವಸರೋವರವಾಗಿದೆ. ಹೀಗೆ ಶ್ರೀಅಚ್ಯುತಪ್ರೇಕ್ಷಾಚಾರ್ಯರನ್ನೊಳಗೊಂಡು ಸರ್ವರನ್ನೂ ಸಂತೋಷಗೊಳಿಸಿದ ಶ್ರೀಪೂರ್ಣಪ್ರಜ್ಞರನ್ನು ಅಚ್ಯುತಪ್ರೇಕ್ಷಾಚಾರ್ಯರು ಆನಂದತೀರ್ಥರೆಂದು ಕರೆದರು.

ಶ್ರೀಮಧ್ವಾಚಾರ್ಯರು ಉಡುಪಿಯಲ್ಲಿ ಇರುವಾಗ ವಾಸುದೇವ ಪಂಡಿತರೆಂಬುವರು ತರ್ಕಶಾಸ್ತ್ರದ ವಿಷಯದಲ್ಲಿ ವಾದಕ್ಕೆ ಬಂದರು. ಅವರಂತೆ ಬಂದ ಹಲವಾರು ವಿದ್ವಾಂಸರನ್ನು ಶ್ರೀಪೂರ್ಣಪ್ರಜ್ಞರು ವಾದದಲ್ಲಿ ಜಯಿಸಿದರು. ಇಲ್ಲಿ ವಾದದಲ್ಲಿ ಜಯಿಸಿದರು ಎಂಬುದಕ್ಕಿಂತ ಯಥಾರ್ಥವಾದ ಉಪಾಸನಾ ಜ್ಞಾನವನ್ನು ಅವರಿಗೆ ನೀಡಿದರು ಎಂಬುದು ಸರಿಯಾಗಿ ತೋಭಿಸುತ್ತದೆ. ಅಗ ಶ್ರೀ ಗುರು ಅಚ್ಯುತಪ್ರೇಕ್ಷಾಚಾರ್ಯರು ಶ್ರೀಆನಂದತೀರ್ಥರನ್ನು ವೇದಾಂತಸಾಮ್ರಾಜ್ಯದ ಸಿಂಹಾಸನದ ಮೇಲೆ ಕೂಡಿಸಿ ಶಂಖಾಭಿಷೇಕವನ್ನು ಮಾಡಿ ಪಟ್ಟವನ್ನು ಕಟ್ಟಿದರು.

ಶ್ರೀಮದಾನಂದ ತೀರ್ಥರು ಪಟ್ಟಾಭಿಷಿಕ್ತರಾದ ಮೇಲೆ ವಾದಿಸಿಂಹನೆಂಬ ವೈಶೇಷಿಕನನ್ನೂ ಬುದ್ಧಿಸಾಗರನೆಂಬ ಬೌದ್ಧ ಪಂಡಿತರನ್ನೂ ವಾದಾವಹದಲ್ಲಿ ಜೈಸಿ 'ಅನುಮಾನತೀರ್ಥ' ರೆಂಬ ಬಿರುದನ್ನು ಪಡೆದರು.

॥ ಪದ ॥ ಮಾಯಿಗಳೆಂಬ ಗೋ । ಮಾಯಿ ಸಮೂಹವು ।
ಬಾಯಿ ಮುಚ್ಚಿತು ಮಧ್ವ । ರಾಯನು ಗರ್ಜಿಸೇ ॥
ನ್ಯಾಯವಿವರಣಾದಿ । ಸಾಯಕದಿಂದಲಿ ।
ಹೇಯ ಭಾಷ್ಯಂಗಳ । ಹೊಯ್ಯುತ ಶ್ರೀಘ್ರದಿ ॥ ೩೨ ॥

**ಅರ್ಥ:** ಮಾಯಿಗಳು = ಇದ್ದದ್ದನ್ನು ತಿರುಚಿ, ಇಲ್ಲದ್ದನ್ನು ಚಮತ್ಕಾರ ಮಾಡಿ ಜನರನ್ನು ವಂಚಿಸುವವರು (ಇಲ್ಲಿ ಶಾಸ್ತ್ರಾರ್ಥ ವಿಚಾರ ವಂಚಕರು); ಗೋಮಾಯಿ ಸಮೂಹ = ನರಿಗಳ ಗುಂಪು; ಬಾಯಿ ಮುಚ್ಚಿತು = ಕುಶಾಸ್ತ್ರಾಃ ಲಾಪವನ್ನು ಕೈಬಿಟ್ಟರು; ನಿರುತ್ತರರಾದರು; ಮಧ್ವರಾಯನು ಗರ್ಜಿಸೆ = ಮಧ್ವಾಚಾರ್ಯರ ವಾದವನ್ನು ಆಲಿಸಿ (ಸಜ್ಜನರು ಆನಂದಿಸಿದರು); ನಾಯವಿವರಣಾದಿ = ಇದೇ ವಿಧವಾದ ೩೨ ಗ್ರಂಥಗಳೆಂಬ; ಸಾಯಕದಿಂದಲಿ = ಸಚ್ಛಾಸ್ತ್ರಶಸ್ತ್ರ – ಶರದಿಂದ; ಹೇಯ್ಯಭಾಷ್ಯಂಗಳ = ಪೂರ್ವೋಕ್ತ ೨೧ ಭಾಷ್ಯಂಗಳನ್ನು; ಹೊಯ್ಯುತ = ಖಂಡಿಸುತ್ತ ನಿರಾಕರಿಸುತ್ತ; ಶ್ರೀಘ್ರದಿ = ಸ್ವಲ್ಪ ಕಾಲದಲ್ಲಿಯೇ;

**ವಿಶೇಷಾರ್ಥ:** ಶ್ರೀಮಧ್ವಾಚಾರ್ಯರು ಪ್ರಾರಂಭದ ದಿನಗಳಲ್ಲಿ ಬರೀ ಪರಮತಗಳನ್ನು ಪ್ರವಚನಗಳ ಮೂಲಕವಾಗಿ ಖಂಡಿಸುತ್ತಾ ಬಂದರು. ಆಗ ಬಹು ಜನ ವಿದ್ವಾಂಸರು ಶ್ರೀಮಧ್ವರನ್ನು ಕುರಿತು ನೀವು ಅನ್ಯಮತ ಭಾಷ್ಯಗಳನ್ನು ಮುಂದಿಟ್ಟುಕೊಂಡು ಅವನ್ನೇ ಪಾಠಗಳಲ್ಲಿ ಖಂಡಿಸುತ್ತ ಹೊರಟಿರುವಿರಿ. ಹಾಗಾದರೆ ನಾವು ಮಾಡಬೇಕಾದುದೇನು? ಶಂಕರಾಚಾರ್ಯರಂತೆ ನೀವೂ ಭಾಷ್ಯಗಳನ್ನು ರಚಿಸಿಕೊಟ್ಟರೆ ನೋಡಬಹುದು ಎಂದರು. ಆಗ ಅವರ ಮಾತುಗಳಿಗೆ ಗಟ್ಟಿಯಾಗಿ ನಕ್ಕು ಮುಂದೆ ಅವರ ಅಭಿಲಾಷೆಯು ನೆರವೇರಲಿರುವುದೆಂಬುದನ್ನು ಸೂಚಿಸಿದರು.

ಶ್ರೀಮಧ್ವಾಚಾರ್ಯರನ್ನು ಕೆಲವರು ತತ್ವಗಳನ್ನು ತಿಳಿದು ಕೊಳ್ಳಲಿಕ್ಕಾಗಿಯೂ, ಕೆಲವರು ಅವರನ್ನು ಸೋಲಿಸಲಿಕ್ಕಾಗಿಯೂ ಅವರಲ್ಲಿಗೆ ಬರಲಾರಂಭಿಸಿದರು. ಮೊದಮೊದಲು ಬೇಸರವನ್ನು ಪಟ್ಟು ಕೊಂಡಿದ್ದ ಮಧ್ಯಗೇಹ ಭಟ್ಟರೂ ಸಹ ಇವರನ್ನು ಕಂಡು ಹರ್ಷಭರಿತರಾದರು. ಪರಿಪರಿಯಾಗಿ ಶ್ರೀಮಧ್ವರೊಡನೆ ವಾದ ಮಾಡುತ್ತ ಪ್ರತಿಕ್ಷಣದಲ್ಲೂ ಪೂರ್ವ ಭಾಷ್ಯಗಳಲ್ಲಿನ ದೋಷಗಳನ್ನು ಮನವರಿಕೆ ಮಾಡಿ ಕೊಳ್ಳುತ್ತಿದ್ದ ಗುರು ಶ್ರೀಅಚ್ಯುತಪ್ರೇಕ್ಷಾಚಾರ್ಯರು ಶ್ರೀಮಧ್ವರನ್ನು ಕುರಿತು "ಹಾಗಾದರೆ ನೀವೇ ಏಕೆ ಒಂದು ಭಾಷ್ಯವನ್ನು ಬರೆಯಬಾರದು?" ಎಂದು ಕೇಳಿದರು. ಇದರಿಂದ ಅಚ್ಯುತಪ್ರೇಕ್ಷಾಚಾರ್ಯರಿಗೆ ಅದ್ವೈತ ಭಾಷ್ಯದಲ್ಲಿ ದ್ವೇಷವಿರಲಿಲ್ಲ ಎಂಬುದಾಗಿ ತಿಳಿಯುತ್ತದೆ. ಆದರೆ ಆ ಭಾಷ್ಯವು ತಾನಾಗಿಯೇ ವೈಫಲ್ಯವನ್ನು ಹೊಂದಿರುವುದನ್ನು ತಿಳಿದು ಹೊಸ ಭಾಷ್ಯಕ್ಕೆ ಆಗ್ರಹಿಸಿದರು ಮತ್ತು ಲಕುಚಕುಲ ಸಂಜಾತರಾದ ಯತಿವರರೊಬ್ಬರು ಸಹ ಉತ್ತಮವಾದ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಲು ಪ್ರಾರ್ಥಿಸಿದರು. ಆಗ ಶ್ರೀಮಧ್ವರು ಪರಮಾತ್ಮನ ಪ್ರೀತಿಗಾಗಿಯೂ, ಸಜ್ಜನರ ಉದ್ಧಾರಾರ್ಥವಾಗಿಯೂ ಬ್ರಹ್ಮಸೂತ್ರಗಳಿಗೆ ಉತ್ಕೃಷ್ಟವಾದ ಭಾಷ್ಯವನ್ನು ರಚಿಸಿದರು.

ಅದ್ವೈತ ಭಾಷ್ಯವೇನೂ ಸಾಮಾನ್ಯವಾದುದಲ್ಲ. ಪೂರ್ವ ಮಾಧ್ವಭಾಷ್ಯಗಳ ಸಮಸ್ತ ಪ್ರಕ್ರಿಯೆಗಳ ಸಾರಭೂತವಾದುದೇ ಅದ್ವೈತ ಮತ. ಅದ್ವೈತ ಭಾಷ್ಯವನ್ನು ಒಂದು ತಿಳಿದರೆ ಎಲ್ಲಾ ಭಾಷ್ಯಗಳನ್ನು ತಿಳಿದಂತೆಯೇ. ಆ ಭಾಷ್ಯವು ಅಷ್ಟು ಪ್ರಬಲವಾಗಿರುವುದರಿಂದಲೇ ಶ್ರೀಮಧ್ವಾಚಾರ್ಯರು ವಿಶೇಷವಾಗಿ ಅದ್ವೈತಗ್ರಂಥದ ಕಡೆಗೆ ಹೆಚ್ಚು

ಮಹತ್ವವನ್ನು ಕೊಟ್ಟು ಪೂರ್ವಪಕ್ಷದ ಪ್ರಬಲವಾದ ಸ್ಥಾನವನ್ನು ಅದಕ್ಕೆ ನೀಡಿದರು. (ಶ್ರೀಮಧ್ವಾಚಾರ್ಯರು ವಿಶೇಷವಾಗಿ ಪ್ರಸ್ಥಾನ ತ್ರಯಗಳಾದ ಬ್ರಹ್ಮಸೂತ್ರ, ಭಗವದ್ಗೀತಾ ಮತ್ತು ಉಪನಿಷತ್ತುಗಳಿಗೆ ಭಾಷ್ಯವನ್ನು ರಚಿಸಿದರು. ಉಪನಿಷದ್ಭಾಷ್ಯಗಳಲ್ಲಿ ದೋಷ ಪೂರಿತವಾದ ಕೇವಲ ಹತ್ತು ಉಪನಿಷತ್ತುಗಳಿಗೆ ಮಾತ್ರ ಭಾಷ್ಯವನ್ನು ರಚಿಸಿದರು. ಉಳಿದ ಭಾಷ್ಯಗಳಲ್ಲಿ ಯಾವ ವಿರೋಧವನ್ನೂ ಕಾಣದ ಶ್ರೀಮಧ್ವರು ಅವುಗಳನ್ನು ಹಾಗೆಯೇ ಉಳಿಯಗೊಟ್ಟು ತಮ್ಮ ನಿರ್ಮತ್ಸರವಾದ ಗುಣವನ್ನು ಅಭಿವ್ಯಕ್ತಗೊಳಿಸಿರುವರು.

ಶ್ರೀಮಧ್ವರ ಗ್ರಂಥಗಳ ವೈಶಿಷ್ಟ್ಯವೇನೆಂದರೆ ಅವರು ತಮ್ಮ ಸ್ವಂತದ ಯಾವುದೇ ಒಂದು ಮಾತನ್ನೂ ಆಡದೆ ಶ್ರೀವೇದವ್ಯಾಸರು ಸಕಾರಣವಾಗಿ ರಚಿಸಿದ ಷಟ್ಕತ್ರಯ ಪುರಾಣ, ಉಪಪುರಾಣ (೧೮+೧೮)ಗಳಲ್ಲಿ ಹೇಳಿದ ವಾಕ್ಯಗಳನ್ನು ಉಧೃತಿಸಿ "ಬಹವಃ ಪುರುಷಃ । ಪುರುಷಃ ಪ್ರವರೋ ಹರಿರಿತ್ಯವದಃ ಸ್ವಯಮೇವ ಹರಿಃ " ಎಂದರೆ ನಾವು ಬರೆ ಭಾಷೆಗಳಲ್ಲಿ ಯಾವ ಪರಮ ಪುರುಷನಾದ ಹರಿಯು ವೇದವ್ಯಾಸ ರೂಪದಿಂದ ಪುರಾಣಗಳಲ್ಲಿ ಏನನ್ನು ಹೇಳಿರುವನೋ ಅದನ್ನೇ ನಾವು ಹೇಳುತ್ತಿದ್ದೇವೆ. ಮೋಕ್ಷವನ್ನು ನೀಡುವವನು ಅವನೇ ತಾನೆ?" ಎಂದು ಕೇಳಿರುತ್ತಾರೆ. ಎಲ್ಲಾ ಭಾಷ್ಯಕಾರರೂ ತಾವು ವೇದವ್ಯಾಸರ ಅಭಿಮತದವರೆಂದು ಹೇಳಿಕೊಂಡಿದ್ದರೂ ಶ್ರೀಮಧ್ವರನ್ನು ಬಿಟ್ಟು ಉಳಿದ ಯಾರೂ ಶ್ರೀವ್ಯಾಸರನ್ನು ಪುರಾಣಗಳ ದೃಷ್ಟಿಯಿಂದ ಮರ್ಯಾದೆಯಾಗಿ ಕಂಡಿಲ್ಲ. ಪುರಾಣಗಳು ಯಥಾರ್ಥವಾಗಿ ವೇದ ಹೃದಯವನ್ನು ಬಿಚ್ಚಿಡುತ್ತಿವೆ. ಆದರೆ ಸ್ವರೂಪ ಕಾರಣದಿಂದ ಈ ಪುರಾಣಗಳು ಅವರಿಗೆ ಪಥ್ಯೆಯಾಗದೆ ಕೈಬಿಟ್ಟು ಕೇವಲ 'ವೈದಿಕ' ವೆಂಬ ಘೋಷಣೆಯೊಂದಿಗೆ ಸಾಗಿದರು. ಆದರೆ ವೇದವೇ ಹೇಳುತ್ತದೆ ಯಾರು ಪುರಾಣಗಳನ್ನು ಸರಿಯಾಗಿ ತಿಳಿದುಕೊಂಡು ಗೌರವಿಸುತ್ತಾರೋ ಅವರೇ ಆಚಾರ್ಯಪಟ್ಟಕ್ಕೆ ಅರ್ಹರು ಎಂದು ಇಲ್ಲಿ ಆಚಾರ್ಯರ ಲಕ್ಷಣಗಳನ್ನು ತಿಳಿಸುವ ಶ್ರೀಮದ್ವಯೋಪನಿಷತ್ತಿನ ಈ ಭಾಗವನ್ನು ನೋಡಿರಿ:-

**"ಆಚಾರ್ಯಃ ಜ್ಞಾನ ಸಂಪನ್ನೋ। ವಿಷ್ಣು ಭಕ್ತೋ ವಿಮತ್ಸರಃ ॥**
**ಮಂತ್ರಜ್ಞೋ ಮಂತ್ರ ಭಕ್ತಿಶ್ಚ । ಸದಾ ಮಂತ್ರಾಶ್ರಯಃ ಶುಚಿಃ ॥**
**ಗುರುಭಕ್ತಿ ಸಮಾಯುಕ್ತೋ । ಪುರಾಣಜ್ಞೋ ವಿಶೇಷತಃ ॥"**

ಶ್ರೀ ಮಧ್ವರು ಈ ವೇದೋಕ್ತಿಯಂತೆ ವಿಷ್ಣುಭಕ್ತರಾಗಿಯೂ ಪುರಾಣ ಪಾರಂಗತರಾಗಿಯೂ, ನಿರ್ಮತ್ಸರರಾಗಿಯೂ, ಗುರುಭಕ್ತಿಪರಾಯಣರಾಗಿಯೂ ಇದ್ದು ಆಚಾರ್ಯ ಪದವಿಗೆ ಅರ್ಹರಾಗಿದ್ದರು. ಅದಕ್ಕೆ ಕೆಳಗಿನ ಈ ಉದಾಹರಣೆಗಳನ್ನು ಗಮನಿಸಿರಿ:-

"ಶೃಣಾತಮಲ ಸತ್ಯವಚಃ ಪರಮಂ । ಶಪಥೇರಿತ ಮುಚ್ಛ್ರತ ಬಾಹು ಯುಗಂ ॥" ನಹರೇಃ ಪರಮೋ । ನಹರೇಃ ಸದೃಶಃ । ಪರಮಃ ಸತು ಸರ್ವ ಚಿದಾತ್ಮಗಣಾತ್ ॥ ಹರಿ ರೇವ ಪರೋ । ಹರಿರೇವ ಗುರೋ । ಹರಿ ರೇವ ಜಗತ್ಪಿತೃ ಮಾತೃ ಗತಿಃ॥"

ಹೀಗೆ ಹೇಳುವುದರ ಮೂಲಕ ಅವರು ವಿಷ್ಣು ಭಕ್ತರಾಗಿ ಕಂಗೊಳಿಸಿದ್ದಾರೆ.

ಶ್ರೀಮಧ್ವರು ತಾವು ಭಾಷ್ಯವನ್ನು ಬರೆದರೂ ಯಾವ ಮತೀಯ ಗ್ರಂಥಗಳನ್ನೂ ನಾಶಪಡಿಸಲಿಲ್ಲ. ಅವುಗಳನ್ನು ಉಳಿಯಗೊಟ್ಟು ಅವುಗಳಿಗೂ ತಮ್ಮ ಗ್ರಂಥಗಳಿಗೂ ಇರುವ ವ್ಯತ್ಯಾಸವನ್ನು ಕಂಡುಕೊಳ್ಳಲು ಅವಕಾಶವನ್ನು

॥ ಪದ ॥ ಮಾಯಿಗಳೆಂಬ ಗೋ । ಮಾಯಿ ಸಮೂಹವು ।
ಬಾಯಿ ಮುಚ್ಚಿತು ಮಧ್ವ । ರಾಯನು ಗರ್ಜಿಸೇ ॥
ನ್ಯಾಯವಿವರಣಾದಿ । ಸಾಯಕದಿಂದಲಿ ।
ಹೇಯ ಭಾಷ್ಯಂಗಳ । ಹೊಯ್ಯುತ ಶ್ರೀಘ್ರದಿ ॥ ೩೨ ॥

**ಅರ್ಥ:** ಮಾಯಿಗಳು = ಇದ್ದದ್ದನ್ನು ತಿರುಚಿ, ಇಲ್ಲದ್ದನ್ನು ಚಮತ್ಕಾರ ಮಾಡಿ ಜನರನ್ನು ವಂಚಿಸುವವರು (ಇಲ್ಲಿ ಶಾಸ್ತ್ರಾರ್ಥ ವಿಚಾರ ವಂಚಕರು); ಗೋಮಾಯಿ ಸಮೂಹ = ನರಿಗಳ ಗುಂಪು; ಬಾಯಿ ಮುಚ್ಚಿತು = ಕು ಶಾಸ್ತ್ರಾಲಾಪವನ್ನು ಕೈಬಿಟ್ಟರು; ನಿರುತ್ತರರಾದರು; ಮಧ್ವರಾಯನು ಗರ್ಜಿಸೆ = ಮಧ್ವಾಚಾರ್ಯರ ವಾದವನ್ನು ಆಲಿಸಿ (ಸಜ್ಜನರು ಆನಂದಿಸಿದರು); ನಾಯವಿವರಣಾದಿ = ಇದೇ ವಿಧವಾದ ೩೨ ಗ್ರಂಥಗಳೆಂಬ; ಸಾಯಕದಿಂದಲಿ = ಸಚ್ಛಾಸ್ತ್ರಶಸ್ತ್ರ – ಶರದಿಂದ; ಹೇಯ್ಯಭಾಷ್ಯಂಗಳ = ಪೂರ್ವೋಕ್ತ ೨೧ ಭಾಷ್ಯಂಗಳನ್ನು; ಹೊಯ್ಯುತ = ಖಂಡಿಸುತ್ತ ನಿರಾಕರಿಸುತ್ತ; ಶ್ರೀಘ್ರದಿ = ಸ್ವಲ್ಪ ಕಾಲದಲ್ಲಿಯೇ;

**ವಿಶೇಷಾರ್ಥ:** ಶ್ರೀಮಧ್ವಾಚಾರ್ಯರು ಪ್ರಾರಂಭದ ದಿನಗಳಲ್ಲಿ ಬರೀ ಪರಮತಗಳನ್ನು ಪ್ರವಚನಗಳ ಮೂಲಕವಾಗಿ ಖಂಡಿಸುತ್ತಾ ಬಂದರು. ಆಗ ಬಹು ಜನ ವಿದ್ವಾಂಸರು ಶ್ರೀಮಧ್ವರನ್ನು ಕುರಿತು ನೀವು ಅನ್ಯಮತ ಭಾಷ್ಯಗಳನ್ನು ಮುಂದಿಟ್ಟುಕೊಂಡು ಅವನ್ನೇ ಪಾಠಗಳಲ್ಲಿ ಖಂಡಿಸುತ್ತ ಹೊರಟಿರುವಿರಿ. ಹಾಗಾದರೆ ನಾವು ಮಾಡಬೇಕಾದುದೇನು? ಶಂಕರಾಚಾರ್ಯರಂತೆ ನೀವೂ ಭಾಷ್ಯಗಳನ್ನು ರಚಿಸಿಕೊಟ್ಟರೆ ನೋಡಬಹುದು ಎಂದರು. ಆಗ ಅವರ ಮಾತುಗಳಿಗೆ ಗಟ್ಟಿಯಾಗಿ ನಕ್ಕು ಮುಂದೆ ಅವರ ಅಭಿಲಾಷೆಯು ನೆರವೇರಲಿರುವುದೆಂಬುದನ್ನು ಸೂಚಿಸಿದರು.

ಶ್ರೀಮಧ್ವಾಚಾರ್ಯರನ್ನು ಕೆಲವರು ತತ್ವಗಳನ್ನು ತಿಳಿದು ಕೊಳ್ಳಲಿಕ್ಕಾಗಿಯೂ, ಕೆಲವರು ಅವರನ್ನು ಸೋಲಿಸಲಿಕ್ಕಾಗಿಯೂ ಅವರಲ್ಲಿಗೆ ಬರಲಾರಂಭಿಸಿದರು. ಮೊದಮೊದಲು ಬೇಸರವನ್ನು ಪಟ್ಟು ಕೊಂಡಿದ್ದ ಮಧ್ಯಗೇಹ ಭಟ್ಟರೂ ಸಹ ಇವರನ್ನು ಕಂಡು ಹರ್ಷಭರಿತರಾದರು. ಪರಿಪರಿಯಾಗಿ ಶ್ರೀಮಧ್ವರೊಡನೆ ವಾದ ಮಾಡುತ್ತ ಪ್ರತಿಕ್ಷಣದಲ್ಲೂ ಪೂರ್ವ ಭಾಷ್ಯಗಳಲ್ಲಿನ ದೋಷಗಳನ್ನು ಮನವರಿಕೆ ಮಾಡಿ ಕೊಳ್ಳುತ್ತಿದ್ದ ಗುರು ಶ್ರೀಅಚ್ಯುತಪ್ರೇಕ್ಷಾಚಾರ್ಯರು ಶ್ರೀಮಧ್ವರನ್ನು ಕುರಿತು "ಹಾಗಾದರೆ ನೀವೇ ಏಕೆ ಒಂದು ಭಾಷ್ಯವನ್ನು ಬರೆಯಬಾರದು?" ಎಂದು ಕೇಳಿದರು. ಇದರಿಂದ ಅಚ್ಯುತಪ್ರೇಕ್ಷಾಚಾರ್ಯರಿಗೆ ಅದ್ವೈತ ಭಾಷ್ಯದಲ್ಲಿ ದ್ವೇಷವಿರಲಿಲ್ಲ ಎಂಬುದಾಗಿ ತಿಳಿಯುತ್ತದೆ. ಆದರೆ ಆ ಭಾಷ್ಯವು ತಾನಾಗಿಯೇ ವೈಫಲ್ಯವನ್ನು ಹೊಂದಿರುವುದನ್ನು ತಿಳಿದು ಹೊಸ ಭಾಷ್ಯಕ್ಕೆ ಆಗ್ರಹಿಸಿದರು ಮತ್ತು ಲಕುಚಕುಲ ಸಂಜಾತರಾದ ಯತಿವರರೊಬ್ಬರು ಸಹ ಉತ್ತಮವಾದ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಲು ಪ್ರಾರ್ಥಿಸಿದರು. ಆಗ ಶ್ರೀಮಧ್ವರು ಪರಮಾತ್ಮನ ಪ್ರೀತಿಗಾಗಿಯೂ, ಸಜ್ಜನರ ಉದ್ಧಾರಾರ್ಥವಾಗಿಯೂ ಬ್ರಹ್ಮಸೂತ್ರಗಳಿಗೆ ಉತ್ಕೃಷ್ಟವಾದ ಭಾಷ್ಯವನ್ನು ರಚಿಸಿದರು.

ಅದ್ವೈತ ಭಾಷ್ಯವೇನೂ ಸಾಮಾನ್ಯವಾದುದಲ್ಲ. ಪೂರ್ವ ಮಾಧ್ವಭಾಷ್ಯಗಳ ಸಮಸ್ತ ಪ್ರಕ್ರಿಯೆಗಳ ಸಾರಭೂತವಾದುದೇ ಅದ್ವೈತ ಮತ. ಅದ್ವೈತ ಭಾಷ್ಯವನ್ನು ಒಂದು ತಿಳಿದರೆ ಎಲ್ಲಾ ಭಾಷ್ಯಗಳನ್ನು ತಿಳಿದಂತೆಯೇ. ಆ ಭಾಷ್ಯವು ಅಷ್ಟು ಪ್ರಬಲವಾಗಿರುವುದರಿಂದಲೇ ಶ್ರೀಮಧ್ವಾಚಾರ್ಯರು ವಿಶೇಷವಾಗಿ ಅದ್ವೈತಗ್ರಂಥದ ಕಡೆಗೆ ಹೆಚ್ಚು

ಮಹತ್ವವನ್ನು ಕೊಟ್ಟು ಪೂರ್ವಪಕ್ಷದ ಪ್ರಬಲವಾದ ಸ್ಥಾನವನ್ನು ಅದಕ್ಕೆ ನೀಡಿದರು. (ಶ್ರೀಮಧ್ವಾಚಾರ್ಯರು ವಿಶೇಷವಾಗಿ ಪ್ರಸ್ಥಾನ ತ್ರಯಗಳಾದ ಬ್ರಹ್ಮಸೂತ್ರ, ಭಗವದ್ಗೀತಾ ಮತ್ತು ಉಪನಿಷತ್ತುಗಳಿಗೆ ಭಾಷ್ಯವನ್ನು ರಚಿಸಿದರು. ಉಪನಿಷದ್ಭಾಷ್ಯಗಳಲ್ಲಿ ದೋಷ ಪೂರಿತವಾದ ಕೇವಲ ಹತ್ತು ಉಪನಿಷತ್ತುಗಳಿಗೆ ಮಾತ್ರ ಭಾಷ್ಯವನ್ನು ರಚಿಸಿದರು. ಉಳಿದ ಭಾಷ್ಯಗಳಲ್ಲಿ ಯಾವ ವಿರೋಧವನ್ನೂ ಕಾಣದ ಶ್ರೀಮದ್ವರು ಅವುಗಳನ್ನು ಹಾಗೆಯೇ ಉಳಿಯಗೊಟ್ಟು ತಮ್ಮ ನಿರ್ಮತ್ಸರವಾದ ಗುಣವನ್ನು ಅಭಿವ್ಯಕ್ತಗೊಳಿಸಿರುವರು.

ಶ್ರೀಮದ್ವರ ಗ್ರಂಥಗಳ ವೈಶಿಷ್ಟ್ಯವೇನೆಂದರೆ ಅವರು ತಮ್ಮ ಸ್ವಂತದ ಯಾವುದೇ ಒಂದು ಮಾತನ್ನೂ ಆಡದೆ ಶ್ರೀವೇದವ್ಯಾಸರು ಸಕಾರಣವಾಗಿ ರಚಿಸಿದ ಷಟ್ಕತ್ರಯ ಪುರಾಣ, ಉಪಪುರಾಣ (೧೮+೧೮)ಗಳಲ್ಲಿ ಹೇಳಿದ ವಾಕ್ಯಗಳನ್ನು ಉಧೃತಿಸಿ "ಬಹವಃ ಪುರುಷಃ । ಪುರುಷಃ ಪ್ರವರೋ ಹರಿರಿತ್ಯವದಃ ಸ್ವಯಮೇವ ಹರಿಃ " ಎಂದರೆ ನಾವು ಬರೆ ಭಾಷೆಗಳಲ್ಲಿ ಯಾವ ಪರಮ ಪುರುಷನಾದ ಹರಿಯು ವೇದವ್ಯಾಸ ರೂಪದಿಂದ ಪುರಾಣಗಳಲ್ಲಿ ಏನನ್ನು ಹೇಳಿರುವನೋ ಅದನ್ನೇ ನಾವು ಹೇಳುತ್ತಿದ್ದೇವೆ. ಮೋಕ್ಷವನ್ನು ನೀಡುವವನು ಅವನೇ ತಾನೆ?" ಎಂದು ಕೇಳಿರುತ್ತಾರೆ. ಎಲ್ಲಾ ಭಾಷ್ಯಕಾರರೂ ತಾವು ವೇದವ್ಯಾಸರ ಅಭಿಮತದವರೆಂದು ಹೇಳಿಕೊಂಡಿದ್ದರೂ ಶ್ರೀಮದ್ವರನ್ನು ಬಿಟ್ಟು ಉಳಿದ ಯಾರೂ ಶ್ರೀವ್ಯಾಸರನ್ನು ಪುರಾಣಗಳ ದೃಷ್ಟಿಯಿಂದ ಮರ್ಯಾದೆಯಾಗಿ ಕಂಡಿಲ್ಲ. ಪುರಾಣಗಳು ಯಥಾರ್ಥವಾಗಿ ವೇದ ಹೃದಯವನ್ನು ಬಿಚ್ಚಿಡುತ್ತಿವೆ. ಆದರೆ ಸ್ವರೂಪ ಕಾರಣದಿಂದ ಈ ಪುರಾಣಗಳು ಅವರಿಗೆ ಪಥ್ಯೆಯಾಗದೆ ಕೈಬಿಟ್ಟು ಕೇವಲ 'ವೈದಿಕ' ವೆಂಬ ಘೋಷಣೆಯೊಂದಿಗೆ ಸಾಗಿದರು. ಆದರೆ ವೇದವೇ ಹೇಳುತ್ತದೆ ಯಾರು ಪುರಾಣಗಳನ್ನು ಸರಿಯಾಗಿ ತಿಳಿದುಕೊಂಡು ಗೌರವಿಸುತ್ತಾರೋ ಅವರೇ ಆಚಾರ್ಯಪಟ್ಟಕ್ಕೆ ಅರ್ಹರು ಎಂದು ಇಲ್ಲಿ ಆಚಾರ್ಯರ ಲಕ್ಷಣಗಳನ್ನು ತಿಳಿಸುವ ಶ್ರೀಮದ್ವಯೋಪನಿಷತ್ತಿನ ಈ ಭಾಗವನ್ನು ನೋಡಿರಿ:-

> **"ಆಚಾರ್ಯಃ ಜ್ಞಾನ ಸಂಪನ್ನೋ। ವಿಷ್ಣು ಭಕ್ತೋ ವಿಮತ್ಸರಃ ॥**
> **ಮಂತ್ರಜ್ಞೋ ಮಂತ್ರ ಭಕ್ತಿಶ್ಚ । ಸದಾ ಮಂತ್ರಾಶ್ರಯಃ ಶುಚಿಃ ॥**
> **ಗುರುಭಕ್ತಿ ಸಮಾಯುಕ್ತೋ । ಪುರಾಣಜ್ಞೋ ವಿಶೇಷತಃ ॥"**

ಶ್ರೀ ಮಧ್ವರು ಈ ವೇದೋಕ್ತಿಯಂತೆ ವಿಷ್ಣುಭಕ್ತರಾಗಿಯೂ ಪುರಾಣ ಪಾರಂಗತರಾಗಿಯೂ, ನಿರ್ಮತ್ಸರರಾಗಿಯೂ, ಗುರುಭಕ್ತಿಪರಾಯಣರಾಗಿಯೂ ಇದ್ದು ಆಚಾರ್ಯ ಪದವಿಗೆ ಅರ್ಹರಾಗಿದ್ದರು. ಅದಕ್ಕೆ ಕೆಳಗಿನ ಈ ಉದಾಹರಣೆಗಳನ್ನು ಗಮನಿಸಿರಿ:-

"ಶೃಣಾತಮಲ ಸತ್ಯವಚಃ ಪರಮಂ । ಶಪಥೇರಿತ ಮುಚ್ಛ್ರತ ಬಾಹು ಯುಗಂ ॥" ನಹರೇಃ ಪರಮೋ । ನಹರೇಃ ಸದೃಶಃ । ಪರಮಃ ಸತು ಸರ್ವ ಚಿದಾತ್ಮಗಣಾತ್ ॥ ಹರಿ ರೇವ ಪರೋ । ಹರಿರೇವ ಗುರೋ । ಹರಿ ರೇವ ಜಗತ್ಪಿತೃ ಮಾತೃ ಗತಿಃ॥"

ಹೀಗೆ ಹೇಳುವುದರ ಮೂಲಕ ಅವರು ವಿಷ್ಣು ಭಕ್ತರಾಗಿ ಕಂಗೊಳಿಸಿದ್ದಾರೆ.

ಶ್ರೀಮದ್ವರು ತಾವು ಭಾಷ್ಯವನ್ನು ಬರೆದರೂ ಯಾವ ಮತೀಯ ಗ್ರಂಥಗಳನ್ನೂ ನಾಶಪಡಿಸಲಿಲ್ಲ. ಅವುಗಳನ್ನು ಉಳಿಯಗೊಟ್ಟು ಅವುಗಳಿಗೂ ತಮ್ಮ ಗ್ರಂಥಗಳಿಗೂ ಇರುವ ವ್ಯತ್ಯಾಸವನ್ನು ಕಂಡುಕೊಳ್ಳಲು ಅವಕಾಶವನ್ನು

ಮಾಡಿಕೊಟ್ಟಿದ್ದಾರೆ. ಇದರಿಂದ ಇವರು ನಿರ್ಮತ್ಸರಿಗಳೆಂದು ತಾನಾಗಿಯೇ ತಿಳಿಯುತ್ತದೆ. ಆದರೆ ಅದ್ವೈತ ಭಾಷ್ಯವು ಸೃಷ್ಟಿಯಾದ ಮೇಲೆ ಬೌದ್ಧಗ್ರಂಥಗಳನ್ನು ಸುಟ್ಟು ಬಿಟ್ಟರೆಂಬ ಪ್ರತೀತಿಯು ಅದ್ವೈತಾನುಯಾಯಿಗಳಲ್ಲಿ ಈಗಲೂ ಪ್ರಚಲಿತವಾಗಿದೆ. ಹಾಗೆ ಅವರು ಬೌದ್ಧಗ್ರಂಥಗಳನ್ನು ಸುಟ್ಟುದುದರಿಂದ ಮಾತ್ಸರ್ಯ ಕಳಂಕಕ್ಕೊಳಗಾದರೆಂಬ ಅಪಕೀರ್ತಿಗೆ ಒಳಗಾದರು. ಹೇಗೆಂದರೆ ಅದ್ವೈತ, ಬೌದ್ಧಮತಗಳು ಶಿರೋನಾಮೆಯಿಂದ ಮಾತ್ರ ಭಿನ್ನವಾದುವುಗಳೇ ಹೊರತಾಗಿ ತತ್ವಗಳಿಂದ ಬೇರೆಯಲ್ಲವೇ ಅಲ್ಲ. ಬೌದ್ಧಗ್ರಂಥಗಳನ್ನು ಉಳಿಯಗೊಟ್ಟರೆ ಪರಸ್ಪರ ಅದ್ವೈತ–ಬೌದ್ಧಗಳೆರಡೂ ಒಂದೇ ಎಂಬುದು ಹೋಲಿಸಿ ನೋಡಿದಾಗ ಈ ಅಭಿಪ್ರಾಯವು ರಟ್ಟಾಗುತ್ತದೆ ಎಂಬ ಉದ್ದೇಶದಿಂದ ಬೌದ್ಧಗ್ರಂಥಗಳನ್ನು ಅವರು ಸುಟ್ಟು ಬಿಟ್ಟರು ಎಂಬ ಆರೋಪದಿಂದ ಮುಕ್ತವಾಗಲು ಅದ್ವೈತಕ್ಕೆ ಸಾಧ್ಯವಿಲ್ಲ.

ಇನ್ನು ಗುರು ಭಕ್ತಿಯಲ್ಲಿ ಶ್ರೀಮಧ್ವರು ಬೆಳಗಿದ ಗುಣವೆಂದರೆ ಅವರು ತಮ್ಮ ಅನಿಮಿತ್ತ ಗುರುವಾದ ಶ್ರೀ ವೇದವ್ಯಾಸರಲ್ಲಿಗೆ ಹೋಗಿ ಗೀತಾಭಾಷ್ಯವನ್ನು ಮುಂದಿರಿಸಿದಾಗ ಶ್ರೀವೇದವ್ಯಾಸರು ಆ ಗ್ರಂಥದ ಮಂಗಳಾಚರಣ ಶ್ಲೋಕದಲ್ಲಿ ಬರೆದ "ಗೀತಾರ್ಥಂ ವಕ್ಷ್ಯಾಮಿ ಶಕ್ತಿತಃ" ಎಂದು ಬರೆದ್ದುದನ್ನು ನೋಡಿ "ಹೇ ಮಧ್ವರೇ, ನೀವು ಈ ಭಾಷ್ಯವನ್ನು ನಿಮ್ಮ ಶಕ್ತಿಯನ್ನು ಅನುಸರಿಸಿ ಬರೆದಿಲ್ಲ. ಬರೆದಿರುವುದು ಸ್ವಲ್ಪವೇ. ಆದ್ದರಿಮದ "ಶಕ್ತಿತಃ" ಎಂಬಲ್ಲಿ "ಲೇಶತಃ" ಎಂದು ತಿದ್ದಿ ಬರೆಯಿರಿ ಎಂದು ಹೇಳಿದಾಗ ಶ್ರೀಮಧ್ವರು ಹಾಗೆಯೇ ತಿದ್ದಿಕೊಂಡರು. ಲೇಶ ಮಾತ್ರವಾದರೂ ಈ ಭಾಷ್ಯವು ಗರುಡ, ಶೇಷ, ರುದ್ರಾದಿಗಳಿಂದಾರಂಭಿಸಿ ಸಕಲ ಮುಕ್ತಿಯೋಗ್ಯರಿಗೆ ಸಾಧನಕ್ಕೆ ತಕ್ಕಷ್ಟು ಗ್ರಾಸ ಉಳ್ಳದ್ದಾಗಿದೆ ಎಂಬುದು ಗ್ರಾಹ್ಯ. ಇದು ಶ್ರೀಮಧ್ವರ ಗುರುಭಕ್ತಿಗೆ ಸಾಕ್ಷಿಯಾಗಿದೆ.

ಇದೇ ರೀತಿಯಾಗಿ ಅದ್ವೈತ ಪೂಜ್ಯರಾದ ಶಂಕರಾಚಾರ್ಯರು ಕಾಶಿಯಲ್ಲಿ ಶ್ರೀವೇದವ್ಯಾಸರನ್ನು ಸಂಧಿಸಿದಾಗ ತಮ್ಮ ಭಾಷ್ಯವನ್ನು ಅವರಿಗೆ ತೋರಿಸಿದರಂತೆ. ಆಗ ಶ್ರೀವೇದವ್ಯಾಸರು ತದ್ಭಾಷ್ಯ ಭಿನ್ನವಾದ ತಮ್ಮ ಅಭಿಪ್ರಾಯವನ್ನು ಸೂಚಿಸಿದಾಗ ಶ್ರೀಶಂಕರಾಚಾರ್ಯರು ಶ್ರೀವ್ಯಾಸಾತ್ ಪರಮರು ಎಂದು ಹೇಳುವವರಾಗಿದ್ದಾರೆ. "ವ್ಯಾಸೋ ನಾರಾಯಣೋ ಹರಿಃ" ಎಂದು ಸಕಲ ಶಾಸ್ತ್ರಗಳು ಹೇಳುತ್ತಿರುವಾಗ ಶ್ರೀಹರಿಯೇ ನಾನು, ಆತನಿಗಿಂತ ಮಿಗಿಲು ಅಥವಾ ಆತನಿಗೆ ಸರಿಸಮಾನನು ನಾನು ಎಂದು ಹೇಳುವವರು ಅದ್ಹೇಗೆ ವಿಷ್ಣು ಭಕ್ತರಾಗುತ್ತಾರೆ? ವೇದೋಕ್ತಿಯಂತೆ ವಿಷ್ಣು ಭಕ್ತರಲ್ಲದವರು ಅದ್ಹೇಗೆ "ಆಚಾರ್ಯ"ರಾಗುತ್ತಾರೆ? ಶ್ರೀಮಧ್ವಾಚಾರ್ಯರು ತಮ್ಮ ಯಾವುದೇ ಗ್ರಂಥವಿರಲಿ. ಅದಕ್ಕೆ ಆದಿಮ ಅಂತಿಮ ಶ್ಲೋಕಗಳಲ್ಲಿ ಶ್ರೀಲಕ್ಷ್ಮೀನಾರಾಯಣರನ್ನು ವಿವಿಧ ರೀತಿಯಲ್ಲಿ ಸ್ಮರಿಸುತ್ತಾ ಮಂಗಳಾಚರಣವನ್ನು ಮಾಡಿ ಪಾಠಕರಿಗೆ ಮಂಗಳವನ್ನು ಉಂಟು ಮಾಡಿರುತ್ತಾರೆ. ಈ ಸಾಂಪ್ರದಾಯವು ಅನ್ಯರಲ್ಲಿ ಕಾಣಲು ಸಾಧ್ಯವಾಗುವುದಿಲ್ಲ.

ಇನ್ನು "ಪುರಾಣಜ್ಞೋ ವಿಶೇಷತಃ" ಎಂಬ ವಾಕ್ಯಕ್ಕೆ ಬೆಲೆ ಇತ್ತವರೇ ಶ್ರೀಮಧ್ವಾಚಾರ್ಯರು. ಅವರು ಬರೆದ ಗ್ರಂಥಗಳಲ್ಲಿ ಅವತಾರಿಕೆಗಳಲ್ಲಿ ಮಾತ್ರ ಶ್ರೀಮಧ್ವರ ಸ್ವಂತ ವಾಕ್ಯಗಳನ್ನು ಕಾಣುತ್ತೇವೆಯೇ ವಿನಃ ಉಳಿದ ವಿಷಯ ಸಮರ್ಥನೆಗಳೆಲ್ಲಾ ಸೂತ್ರಕಾರರ ವಚನದಿಂದಲೇ ಶೋಭಿಸುತ್ತಿವೆ. ಶ್ರೀಮಧ್ವರು ಏನೇ ವಾಕ್ಯವನ್ನು ಉಧೃತಿಸಿರಲಿ, ಆ ಗ್ರಂಥದ ಉಲ್ಲೇಖವನ್ನು ತಮ್ಮ ಭಾಷ್ಯದ ಅಂತಿಮದಲ್ಲಿ ಸೂಚಿಸಿರುತ್ತಾರೆ. ಉದಾ: "ಇತಿ ಭಾಗವತೇ", "ವರಾಹೇ", "ಪಾದ್ಮೆ", "ಸ್ಕಾಂದೇ", "ಇತಿ ಬ್ರಹ್ಮಾಂಡೇ" ಇತ್ಯಾದಿ, ಇತ್ಯಾದಿಯಾಗಿ.

ಶ್ರೀಮಧ್ವಾಚಾರ್ಯರು ಒಂದೇ ಶ್ಲೋಕದ "ಅಂಬರ ಗಂಗಾ ಚುಂಬಿತ ಪಾದ" ಎಂಬ ಗ್ರಂಥವನ್ನಾರಂಭಿಸಿ ಬೃಹದ್ಭಾಷ್ಯಪರಿಯಂತವಾಗಿ ಮೂಲ ಮೂವತ್ತೇಳು ಗ್ರಂಥಗಳನ್ನು ರಚಿಸಿ ಅವುಗಳಲ್ಲಿ ಕೇವಲ ಸಂಶಯ ಪರಿಹಾರಾರ್ಥವಾಗಿ ಮೂರು ಮಾತ್ರ ಖಂಡನ ಗ್ರಂಥಗಳನ್ನೂ ಉಳಿದವುಗಳನ್ನು ಸದುಪಾಸನಾರ್ಥವಾಗಿಯೂ ರಚಿಸಿ ಕೊಟ್ಟಿರುತ್ತಾರೆ. ಆ ಗ್ರಂಥಗಳು ಯಾವುವು ಎಂದರೆ ವೇಣುಪಲ್ಲಿ (ಶ್ರೀಬಿದರಹಳ್ಳಿ) ಶ್ರೀನಿವಾಸ ತೀರ್ಥರು ತಮ್ಮ ವಾಯುಗದ್ಯದಲ್ಲಿ ಹೀಗೆ ಹೇಳಿರುತ್ತಾರೆ.

ಪ್ರಮಾಣಲಕ್ಷಣ, ಕಥಾಲಕ್ಷಣ, ಮಾಯವಾದ ಖಂಡನ, ಪ್ರಪಂಚ ಮಿಥ್ಯತ್ವನುಮಾನ ಖಂಡನ, ಉಪಾಧಿ ಖಂಡನ, ತತ್ವಸಂಖ್ಯಾನ, ತತ್ವದ್ಯೋತ, ತತ್ವ ನಿರ್ಣಯ, ವಿಷ್ಣು ತತ್ವನಿರ್ಣಯ, ತತ್ವವಿವೇಕ, ದಶೋಪ ನಿಷದ್ಭಾಷ್ಯ, ಶ್ರೀಮದ್ಭಾಗವತ ತಾತ್ಪರ್ಯ, ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ, ಸದಾಚಾರಸ್ಮೃತಿ, ಕೃಷ್ಣಾಮೃತ ಮಹಾರ್ಣವ, ಜಯಂತಿ ಕಲ್ಪ, ಯತಿ ಪ್ರಣವ ಕಲ್ಪ, ದ್ವಾದಶ ಸ್ತೋತ್ರ, ಯಮಕ ಭಾರತ, ಶ್ರೀಬ್ರಹ್ಮಸೂತ್ರ ಭಾಷ್ಯ, ಅಣುಭಾಷ್ಯ, ಅನುವ್ಯಾಖ್ಯಾನ, ನ್ಯಾಯ ವಿವರಣ, ತಂತ್ರಸಾರ, ಗೀತಾಭಾಷ್ಯ, ಗೀತಾತಾತ್ಪರ್ಯ, ಋಗಾಷ್ಯ ಷಟ್ಪ್ರಶ್ನ, ಈಶಾವಾಸ್ಯ, ಅಥರ್ವಣ, ಮಾಂಡೂಕ್ಯೋಪನಿಷದ್ಭಾಷ್ಯ, ತಲವಕಾರ, ಐತರೇಯ, ತೈತರೀಯ, ಛಾಂದೋಗ್ಯ, ಬೃಹದಾರಣ್ಯಕ, ನಖಸ್ತುತಿ, ಅಂಬರಗಂಗಾಷ್ಟಕ ಎಂದು ಇನ್ನು ಮಧ್ವಮತಾಂಬುಧಿ ಸೋಮರೆನಿಸಿದ ಶ್ರೀ ಚಂದ್ರಿಕಾಚಾರ್ಯರು (ಶ್ರೀವ್ಯಾಸರಾಯರು) ಈ ಮೂವತ್ತೇಳು ಗ್ರಂಥಗಳ ಹೆಸರನ್ನು ತಿಳಿಸುತ್ತ "ಗ್ರಂಥ ಮಾಲಿಕಾ ಸ್ತೋತ್ರ"ವೆಂಬ ಗ್ರಂಥವನ್ನೂ ರಚಿಸಿ ಕೊಟ್ಟಿರುತ್ತಾರೆ. ಅದರಲ್ಲೂ ಈ ಮೂವತ್ತೇಳು ಗ್ರಂಥಗಳ ಹೆಸರುಗಳು ಉಲ್ಲೇಖಿಸಲ್ಪಟ್ಟಿವೆ.

ಇನ್ನು "ಮಂತ್ರಜ್ಞೋ ಮಂತ್ರ ಭಕ್ತಿಷ್ಠ । ಸದಾ ಮಂತ್ರಾಶ್ರಯಃ ಶುಚಿಃ" ಎಂಬುದಕ್ಕೆ ಶ್ರೀಮಧ್ವಾಚಾರ್ಯರು ತಮ್ಮ ಈ ಅವತಾರ ಕಾಲದಲ್ಲಿ ಏಳು ನೂರು ಕೋಟಿ ಮಹಾ ಮಂತ್ರ ಸಿದ್ಧಿಯನ್ನು ಮಾತ್ರ ಅಭಿವ್ಯಕ್ತ ಪಡಿಸಿದರು. ಇನ್ನೂ ಅಧಿಕ ಮಂತ್ರಜ್ಞತ್ವವು ಅವರ ಸ್ವರೂಪ ಚಿಂತನೆಯಲ್ಲಿ ಅಡಗಿದ್ದುವು. ಇವರು ಸ್ವಯಂ ಮಂತ್ರ ಪ್ರತಿಪಾದ್ಯರೇ ಆಗಿರುವರು ಆಶ್ಚರ್ಯವಿಲ್ಲ. ಇದಕ್ಕೆ ನಿದರ್ಶನವೆಂದರೆ ತುಂಬಿದ ಸಭೆಯಲ್ಲಿ ಇವರು ವಿಷ್ಣು ಸಹಸ್ರನಾಮಕ್ಕೆ ಒಂದೊಂದಕ್ಕೂ ನೂರು ಅರ್ಥಗಳಿವೆ ಎಂದು ಹೇಳಿದಾಗ ಕೆಲವರು ನೂರು ಅರ್ಥವನ್ನು ಹೇಳಿರಿ ಎಂದಾಗ ತಕ್ಷಣವೇ ಹೇಳಿದರು ಇವರು 'ಆಚಾರ್ಯ' ರಲ್ಲದೆ ಮತ್ತೇನು?

ಶ್ರೀಮಧ್ವಾಚಾರ್ಯರು ಸಾರಿದ ವೇದೋಕ್ತ ಮತ ಪ್ರಕ್ರಿಯೆಗಳನ್ನು ಶ್ರೀವ್ಯಾಸರಾಯರು ಒಂದೇ ಶ್ಲೋಕದಲ್ಲಿ ಹೀಗೆ ವಿವರಿಸಿರುತ್ತಾರೆ.

"ಶ್ರೀಮನ್ಮಧ್ವಮತೇ ಹರಿಃ ಪರತರಃ । ಸತ್ಯಂ ಜಗತ್ತತ್ವತೋ ॥
ಭಿನ್ನಾ ಜೀವಗಣಾಃ ಹರೇರನುಚರಾಃ । ನೀಚೋಚ್ಚ ಭಾವಂಗತಾಃ ॥
ಮುಕ್ತಿರ್ನೈಜ ಸುಖಾನುಭೂತಿರಮಲಾ । ಭಕ್ತಿಶ್ಚ ತತ್ಸಾಧನಂ ॥
ಅಕ್ಷ್ಯಾದಿ ತ್ರಿತಯಃ ಪ್ರಮಾಣಮುಖಿಲಾ । ಮ್ನಾಯೈಕ ವೇದ್ಯೋ ಹರಿಃ ॥"

ಇದರ ಅರ್ಥವೇನೆಂದರೆ ಶ್ರೀಹರಿಯು ಸರ್ವೋತ್ತುಮನು, ಜಗನ್ನಿಯಾಮಕನು ಜೀವರು-ಜೀವರು, ಜಡ-ಜಡಗಳು, ಜೀವ-ಜಡಗಳು, ಜೀವ-ಬ್ರಹ್ಮ, ಬ್ರಹ್ಮ-ಜಡಗಳು ಅತ್ಯಂತ ಭಿನ್ನವದುವುಗಳು ಮತ್ತು ಯೋಗ್ಯತಾ ತಾರತಮ್ಯಗಳಿಂದ ಕೂಡಿದವರು. ಶ್ರೀಹರಿಯ ಅಧೀನದಲ್ಲಿ ಇದ್ದು ಆತನನ್ನೇ ಆಶ್ರೈಸಿಕೊಂಡಿರುವವರು. ಸ್ವರ್ಗ, ನರಕ, ಮೋಕ್ಷ, ತಮಸ್ಸುಗಳು ನೈಜವಾಗಿಯೇ ಇರುವುವು. ಸಾಧನಕ್ಕೆ ತಕ್ಕಂತೆ ಫಲವು ಉಂಟು.

ಶಾಸ್ತ್ರ ಜನ್ಯ ನಿರ್ಮಲವಾದ ಜ್ಞಾನ, ಭಕ್ತಿಗಳಿಗೆ ಮೋಕ್ಷವಾಗುತ್ತದೆ. ಮಿಥ್ಯಾಜ್ಞಾನಕ್ಕೆ ತಮಸ್ಸಾಗುತ್ತದೆ. "ಪ್ರತ್ಯಕ್ಷ, ಆಗಮ, ಅನುಮಾನಗಳೆಂಬ ಮೂರು ವಿಧ ಪ್ರಮಾಣಗಳಿಂದ ಪರಬ್ರಹ್ಮನನ್ನು ಅರಿತರೇನೇ ಮೋಕ್ಷವು ಪ್ರಾಪ್ತಿ" ಎಂದು.

ಬಹುಪರಿಯಾದ ಸುಜನರು ಶ್ರೀಮಧ್ವಾಚಾರ್ಯರ ಪ್ರಮಾಣ ಬದ್ಧವಾದ ಈ ತತ್ವಗಳಿಗೆ ಮನಸೋತು ಅವರ ತತ್ವಗಳನ್ನು ಅಂಗೀಕರಿಸಿ ಅವರ ಶಿಷ್ಯರಾದರು. ಅದ್ವೈತ ವ್ಯಾಕುಲೇಲೋಕೇ ಮಧ್ವಾಖ್ಯೋ ಬ್ರಾಹ್ಮಣೋತ್ತಮಃ ॥ ವಿಷ್ಣು ಭಕ್ತ್ಯಾದಿ ಸಂಪೂರ್ಣಾಃ । ದ್ವೈತ ಶಾಸ್ತ್ರ ಪ್ರವರ್ತಕಃ (ಬ್ರ.ನಾಡಿ. ಜ್ಯೋ. ಶಾಸ್ತ್ರ)

ಯತಿ ಧರ್ಮದಂತೆ ಜ್ಞಾನ ಪ್ರಸಾರಕ್ಕಾಗಿಯೂ, ತೀರ್ಥಂ ಕುರ್ವಂತಿ ತೀರ್ಥಾನಿ" ಎಂಬಂತೆಯೂ ತೀರ್ಥ, ಕ್ಷೇತ್ರಗಳನ್ನು ಪವಿತ್ರೀಕರಿಸಲೋಸುಗವಾಗಿಯೂ ಶ್ರೀ ಮಧ್ವಾಚಾರ್ಯರು ಸಂಚಾರವನ್ನು ಕೈಕೊಂಡರು.

ಹೀಗೆ ಸಂಚರಿಸುತ್ತಿರುವಾಗ ಇವರು ದಕ್ಷಿಣ ದೇಶದ ವಿಷ್ಣು ಮಂಗಲ ಎಂಬ ಊರಲ್ಲಿ ಭಿಕ್ಷೆಯನ್ನು ಸ್ವೀಕರಿಸಿದರು. ಭಿಕ್ಷೆಯನ್ನಿತ್ತ ಶ್ರೀಮಂತನು ಭೋಜನೋತ್ತರದಲ್ಲಿ ಆಚಾರ್ಯರಿಗೆ ಇನ್ನೂರಕ್ಕೂ ಹೆಚ್ಚು ಬಾಳೇಹಣ್ಣುಗಳನ್ನು ನೀಡಿದನು. ಶ್ರೀಮಧ್ವಾಚಾರ್ಯರು ಅನಾಯಾಸವಾಗಿ ಅಷ್ಟೂ ಹಣ್ಣುಗಳನ್ನು ತಿಂದು ನಿರ್ವಿಕಾರವಾಗಿ ಕುಳಿತುದನ್ನು ಕಂಡು ಆಶ್ಚರ್ಯಭರಿತರಾದ ಶ್ರೀಅಚ್ಯುತ ಪ್ರೇಕ್ಷ ತೀರ್ಥರು ಆಚಾರ್ಯರನ್ನು ಗುಟ್ಟಾಗಿ ಪ್ರಶ್ನಿಸಿದರು. ಇದು ಹೇಗೆ ಸಾಧ್ಯವಾಯಿತೆಂದು ಅದಕ್ಕೆ ಆಚಾರ್ಯರ ಉತ್ತರವೇನೆಂದರೆ ಉಂಡರಗಿಸಿಕೊಳ್ಳುವವನು ನಾನಲ್ಲ. ಬ್ರಹ್ಮಾಂಡೋದರನಾದ ಆ ವೈಶ್ವಾನರ ರೂಪಿ ಶ್ರೀಹರಿಯು ನನ್ನ ಜಠರದಲ್ಲಿ "ಅಂಗುಷ್ಟ ಮಾಂತ್ರಂ ಜಠರೇ ಪ್ರತಿಷ್ಠಿತಂ । ಜಾಜ್ವಲ್ಯಮಾನಂ ಮಮ ಜಾತವೇದಸಂ ॥ ನಿತ್ಯಂ ಹಿತಂ ವಿಶ್ವದಹಂಚವಿತ್ತತಂ । ವಿಶ್ವೇಶಚೇತಾ । ಇತಿ ಸೋಬ್ರವೀತ್ತದಾ॥"

ಎಂದರೆ ಜೀವರಲ್ಲಿ ಇರುವ ವೈಶ್ವಾನರ ರೂಪಿ ಶ್ರೀಹರಿಯೇ ಉಂಡುದನ್ನು ಅರಗಿಸುವವನು. ಅವನೇ ಹೇಳಿದ್ದಾನೆ ಅಹಂವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಂ ॥ ಪ್ರಾಣಾಪಾನ ಸಮಾಯುಕ್ತಂ ಪಚಾಮ್ಯನ್ನಂ ಚತುರ್ವಿಧಂ" ಎಂದು ಆ ವೈಶ್ವಾನರನು ಇತರ ಜೀವರಲ್ಲಿ ಕುದುರೆ ಬಾಲದ ಕೂದಲನ್ನು ಉದ್ದವಾಗಿ ಸೀಳಿ ಸಾವಿರ ಭಾಗಮಾಡಿದರೆ ಎಷ್ಟು ನವಿರಾಗಿರ ಬಲ್ಲದೋ ಅಷ್ಟೇ ಗಾತ್ರದಿಂದ ಇರುತ್ತಾನೆ. ಅಷ್ಟು ಮಾತ್ರದಿಂದಲೇ ಜೀವರು ಹಸಿವೆಯನ್ನು ತಡೆಯಲಾರದೆ ಮೂರು ಹೊತ್ತು ತಿನ್ನುತ್ತಾರೆ. ಹೀಗಿರುವಾಗ ನನ್ನ ಜಠರದಲ್ಲಿ ಆ ಸ್ವಾಮಿಯು ಅತ್ಯಧಿಕವಾದ ಪ್ರಕಾಶಮಾನನಾಗಿ ನನ್ನ ಹೆಬ್ಬೆರಳಿನ ಗಾತ್ರದಲ್ಲಿ ಇರುವಾಗ ಇನ್ನು ಈ ಬಾಳೇಹಣ್ಣಿನ ರಾಶಿಯು ಯಾವಾಲೆಕ್ಕ? ಎಂದು ಪ್ರಶ್ನಿಸಿದರು.

ಮುಂದೆ ಶ್ರೀಮಧ್ವಾಚಾರ್ಯರು ಕೇರಳದಲ್ಲಿ ಪಯಸ್ವಿನಿ ನದಿ ಸ್ನಾನ, ದುರ್ಗಾ ದರ್ಶನಗಳ ತರುವಾಯ ಅನಂತಶಯನನ ದರ್ಶನವನ್ನು ಮಾಡಿದರು. ತರುವಾಯ ಮತ್ಸರ ಭರಿತನಾದ ಮಣಿ ಮಂತನು ಜನ್ಮಾಂತರದಿಂದ ಇವರೆದುರಿಗೆ ಬಂದು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆಯದೆ ಪೂರ್ವಭಾಷ್ಯಗಳ ಸಹಾಯವಿಲ್ಲದೆ ಸ್ವೇಚ್ಛೆಯಾಗಿ ಹೇಳುವುದು ಸರಿಯಿಲ್ಲವೆಂದು ವಾದಿಸಿದನು. ಅಗ ಶ್ರೀಮಧ್ವರು ಈಗ ನಾನು ಹೇಳುತ್ತಿರುವುದನ್ನು ಸಾಧ್ಯವಾದರೆ ಖಂಡಿಸು. ಮುಂದೆ ನಮ್ಮ ಭಾಷ್ಯವೂ ಬರುವುದು ಎಂದು ಹೇಳಿದರು.

ಶ್ರೀಮಧ್ವಾಚಾರ್ಯರನ್ನು ಕಂಡ ಲಕ್ಷಣಜ್ಞನೊಬ್ಬನು ಇವರು ಋಜುಗಳಂತೆ ಮಹಾಪುರುಷರು ಎಂದು ಹೇಳಿದನು. ಅದಕ್ಕೆ "ಕ್ಷೀಣ ಕಟಿಯ ಆಚಾರ್ಯರು ಸಲಕ್ಷಣರಲ್ಲ. ಸ್ಥೂಲ ಕಟಿಯೇ ಸಲಕ್ಷಣ" ವೆಂದು ಪ್ರತಿವಾದಿಗಳು ಹೇಳಿದರು. ಅದಕ್ಕೇ ಸ್ಥೂಲ ಕಟಿಯು ಅಸುರ ಭೂಷಿತವಾದ ದುರ್ಲಕ್ಷವೆಂಬುದನ್ನು ಶ್ರೀಮಧ್ವರು ಸಪ್ರಮಾಣ ಪೂರ್ವಕವಾಗಿ ವಿವರಿಸಿದರು. ಅದನ್ನು ಸಜ್ಜನ ವೃಂದವು ಆನಂದದಿಂದ ಅಂಗೀಕರಿಸಿತು. ತರುವಾಯ ಶ್ರೀಮಧ್ವರ ಮೇಲಿನ ಅಸೂಯೆಯಿಂದ ಸನ್ಯಾಸಿ ವೇಷದಿಂದ ಮುಂದೆ ಬಂದ ಮಣಿಮಂತನು ಶ್ರೀಮಧ್ವರ ದಂಡವನ್ನು ಮುರಿಯುವೆನೆಂದು ಪ್ರತಿಜ್ಞೆ ಮಾಡಿದನು. ಆಗ ಶ್ರೀಮಧ್ವಾಚಾರ್ಯರು ಸ್ವತಃ ತಮ್ಮ ದಂಡವನ್ನು ಆ ಸನ್ಯಾಸಿಯ ಕೈಗೆ ಇತ್ತು ಮುರಿ ಎಂದ ಹೇಳಿದರು. ಆದರೆ ಆ ಸನ್ಯಾಸಿಯ ಕೈಯಿಂದ ಆ ದಂಡವನ್ನು ಮುರಿಯಲು ಸಾಧ್ಯವಾಗಲಿಲ್ಲ ನಾಚಿಕೆಯಿಂದ ಅಲ್ಲಿಂದ ನಿರ್ಗಮಿಸಿದನು.

ಶ್ರೀಮಧ್ವಾಚಾರ್ಯರು ರಾಮೇಶ್ವರದಲ್ಲಿ ಚಾತುರ್ಮಾಸವನ್ನು ಕಳೆದು ಶ್ರೀರಂಗಕ್ಕೆ ಬಂದರು. ಅಲ್ಲಿನ ದೇವರ ದರ್ಶನವನ್ನು ಮಾಡಿಕೊಂಡು ಉತ್ತರ ದೇಶದ ಕಡೆಗೆ ವಾಲಿದರು. ವೇದ ಮಂತ್ರಾರ್ಥ ವಿವರಣೆ ಕಾಲದಲ್ಲಿ ಚರ್ಚೆಗಾಸ್ಪದವಾಗಿದ್ದ 'ಅಪಾಲ' ಎಂಬ ಶಬ್ದಕ್ಕೆ ಕುಷ್ಟರೋಗಿ ಎಂದು ಹೇಳಿದುದನ್ನು ಸಪ್ರಮಾಣಪೂರ್ವಕವಾಗಿ ಖಂಡಿಸಿ ಶ್ರೀಮಧ್ವಾಚಾರ್ಯರು ಆ ಶಬ್ದಕ್ಕೆ ಸುಂದರಸ್ತ್ರೀ ಎಂದು ಅರ್ಥೈಸಿಕೊಟ್ಟರು. ಮುಂದೆ ಸಾಗುವ ವೇಳೆಗೆ ಶ್ರೀಮಧ್ವರು ಗೀತಾಭಾಷ್ಯವನ್ನು ರಚಿಸಿ ಅದನ್ನು ಗುರುಗಳಿಗೂ, ಗುರುಮಿತ್ರರಾಗಿದ್ದ ಲಿಕುಚವಂಶೀಯ ಯತಿಗಳಿಗೂ ಅನ್ನು ನೀಡಿ ಗುರುಗಳ ಆಜ್ಞೆಯನ್ನು ಪಡೆದು ಮುಂದೆ ಸಾಗಿದರು.

ಗಂಗಾನದಿಯನ್ನು ದಾಟಿದ ಆಚಾರ್ಯರು ಬದರಿಯಲ್ಲಿ ಶ್ರೀನಾರಾಯಣನಿಗೆ ಗೀತಾಭಾಷ್ಯವನ್ನು ಸಮರ್ಪಿಸಿದರು. ಮುಂದೆ ವೇದವ್ಯಾಸರ ದರ್ಶನಕ್ಕಾಗಿ ಶಿಷ್ಯರನ್ನು ನಾರಾಯಣಾಶ್ರಮದಲ್ಲಿಯೇ ಬಿಟ್ಟು ಉನ್ನತ ಹಿಮಾಲಯ ಮಾರ್ಗಗಾಮಿಗಳಾದರು. ಆದರೆ ಅವರನ್ನು ಬಿಟ್ಟಿರಲಾಗದ ಸತ್ಯತೀರ್ಥರೆಂಬುವರು ಅವರನ್ನು ಹಿಂಬಾಲಿಸಿದರು. ಸ್ವಲ್ಪ ದೂರ ಹೋದನಂತರ ಶ್ರೀಮಧ್ವಾಚಾರ್ಯರು ಹಿಂದಿರುಗಿ ನೋಡಿ ಸತ್ಯತೀರ್ಥರಿಗೆ ಹಿಂದಿರುಗಿ ಹೋಗುವಂತೆ ಸಂದೇಶವನ್ನು ನೀಡಿ ಮುಂದೆ ಸಾಗಿದರು. ಆಚಾರ್ಯರ ವಾಯುವೇಗ, ಬೃಹತ್ಶಿಖರ ಲಂಘನವನ್ನು ಕಣ್ಣಾರೆ ಕಂಡ ಸತ್ಯತೀರ್ಥರು ಆಶ್ಚರ್ಯಚಕಿತರಾಗಿ ಶ್ರೀಮಧ್ವಾಚಾರ್ಯರು ವಾಯುದೇವರೇ ಹೊರತಾಗಿ ಬೇರೆಯಲ್ಲವೆಂದು ತಿಳಿದರು. ಗಿರಿ, ವನಗಳಿಂದ ದುರ್ಗಮವಾಗಿದ್ದ ಪರ್ವತಗಳಿಂದ ಪುನಃ ಮರಳಿ ಬರುವುದು ಕಷ್ಟವೆನಿಸಿದ್ದರೂ ಶ್ರೀಸತ್ಯತೀರ್ಥರು ಶ್ರೀಆಚಾರ್ಯರ ಅನುಗ್ರಹದಿಂದ ಬೇಗನೇ ಸಿಬಿರವನ್ನು ಸೇರಿಕೊಂಡು ತಮ್ಮ ಅನುಭವವನ್ನು ಎಲ್ಲರಿಗೂ ವಿವರಿಸಿದರು.

ಶ್ರೀಮಧ್ವಾಚಾರ್ಯರು ಬದರಿಕಾಶ್ರಮದಲ್ಲಿ ಅನೇಕ ಋಷಿಕುಲೋತ್ತುಂಸರಿಂದ ಸೇವ್ಯ ಮಾನನಾಗಿದ್ದ ಶ್ರೀಮದ್ವೇದವ್ಯಾಸ ದೇವರನ್ನು ಕಂಡು ಸಾಷ್ಟಾಂಗ ಪ್ರಣಾಮವನ್ನು ಮಾಡಿದರು. ಮೂವತ್ತೆರಡು ಲಕ್ಷಣ ಯುಕ್ತರಾದ ಆಚಾರ್ಯರನ್ನು ಕಂಡು ದೇವ, ಮುನಿಗಳು ಆಶ್ಚರ್ಯಾನಂದ ಭರಿತರಾದರು. ಶ್ರೀವ್ಯಾಸರಿಂದ ಕೂಡಿಕೊಂಡು ನಾರಾಯಣನನ್ನು ದರ್ಶನಗೈದ ಆಚಾರ್ಯರು ಯದ್ಯಪಿ ನಾರಾಯಣ ವ್ಯಾಸರಿಗೆ ಅಭೇದವಿದ್ದರೂ ಕಾರ್ಯನಿಮಿತ್ತವಾಗಿ ನಾರಾಯಣನಿಗೂ ವಂದಿಸಿ ಆತನಲ್ಲಿ ದಶಾವತಾರ ವ್ಯೂಹವನ್ನು, ಚತುರ ವಿಂಶತಿ, ವರ್ಣ, ಸಹಸ್ರ, ಅಜಿತಾದಿ ಅನಂತ ವ್ಯೂಗಳನ್ನೂ, ಕಪಿಲ, ದತ್ತ, ಧನ್ವಂತ್ರಿ, ಮಹಿದಾಸ, ಹಂಸ, ಹಯಗ್ರೀವ, ಮೋಹಿನಿ, ಋಷಭ, ಶಿಂಶುಮಾರ ಇತ್ಯಾದಿ ರೂಪಗಳನ್ನು ಚಿಂತಿಸಿದರು. ಅಲ್ಲಿಂದ ಕದಲಲು ಇಷ್ಟವಿಲ್ಲದೆ ಶ್ರೀವ್ಯಾಸರಿದ್ದಲ್ಲಿಗೆ ಬಂದು ಮನವಿಯನ್ನು ಸಲ್ಲಿಸಿದರು. "ಕಲಿ ಕಾಲದಲ್ಲಿ ದುರ್ಜನರೇ ತುಂಬಿರುವಾಗ ನನ್ನ ತತ್ವಕ್ಕೆ ಬೆಲೆಕೊಡುವವರಾರು? ನಾನು ಇಲ್ಲೇ ಇದ್ದು ಬಿಡುತ್ತೇನೆ" ಎಂದು ಶ್ರೀಮಧ್ವಾಚಾರ್ಯರೇ ಹೀಗೆ ಮಿಡುಕಿದರೆಂದ ಮೇಲೆ ಹೆಚ್ಚಿಗೆ ಹೇಳುವುದೇನಿದೆ? ಜಲ ಬಲ, ಧನ ಬಲ, ಸ್ಥಾನ ಬಲಗಳಿಂದ ಅರ್ಥ ಕಾಮಿ, ಕೀರ್ತಿಕಾಮಿ, ಪ್ರತಿಷ್ಠಾ ಕಾಮಿಗಳಾದವರ ಮಧ್ಯದಲ್ಲಿ ಸಾತ್ವಿಕರಿಗೆ ಮನ್ನಣೆಯು ಸಿಕ್ಕುವುದಾದರೂ ಹೇಗೆ? ಅಭಿಮಾನಿಗಳನ್ನುಗಿಟ್ಟಿಸಿಕೊಂಡರೆ ಸಾಕು. ಪುರುಷಾರ್ಥವನ್ನು ಸಾಧಿಸಿದಂತೆಯೇ. ಆದರೂ ಶ್ರೀವೇದವ್ಯಾಸರು, ಇರುವ ಮುಷ್ಟಿ ಪ್ರಮಾಣದ ಸಾತ್ವಿಕರು ಕೆಡಬಾರದೆಂದು ಅವರ ಉದ್ಧಾರಾರ್ಥವಾಗಿ ತತ್ವ ಪ್ರಚಾರವು ಸಾಗಲೆಂದು ಹೇಳಿ ಶುಭವನ್ನು ಹಾರೈಸಿ ಬೀಳ್ಕೊಟ್ಟರು.

ಬದರಿಯಿಂದ ಹಿಂದಿರುಗಿದ ಶ್ರೀಮಧ್ವಾಚಾರ್ಯರು ಅನಂತಮಠದಲ್ಲಿ ತಮ್ಮ ಪರಿವಾರವನ್ನು ಸೇರಿದರು. ಆಗ ಅಲ್ಲಿ ಎಲ್ಲರಿಗೂ ಪರಮಾನಂದವಾಯಿತು. ಅನಂತ ಮಠದಲ್ಲೇ ಶ್ರೀಮಧ್ವರು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದರು. ಮುಂದೆ ಆಚಾರ್ಯರು ಗೋದಾವರಿ ತೀರಕ್ಕೆ ಬಂದರು. ಅಲ್ಲಿ ಬಹು ಜನ ಘನ ವಿದ್ವಾಂಸರಿದ್ದರು. ಅವರ ಮಧ್ಯದಲ್ಲಿ ಶೋಭನ ಭಟ್ಟರೆಂಬುವರು ಶಿರೋರತ್ನ ಪ್ರಾಯವಾಗಿದ್ದರು. ಇವರು ಶ್ರೀಮಧ್ವಾಚಾರ್ಯರೊಡನೆ ವಾದವನ್ನು ಮಾಡಿ ಅವರ ಸಿದ್ಧಾಂತವನ್ನು ಮನಸಾ ಮಾಡಿ ಅವರ ಶಿಷ್ಯರಾದರು. ಅವರು ಸ್ವತಃ ಶ್ರೀಮಧ್ವಾಚಾರ್ಯರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಶ್ರೀಪದ್ಮನಾಭತೀರ್ಥರೆಂಬುದಾಗಿ ನಾಮಕರಣವನ್ನು ಹೊಂದಿ ಶ್ರೀಮಧ್ವರ ಗ್ರಂಥಗಳನ್ನೇ ಪ್ರವಚನ ಮಾಡಲು ಪ್ರಾರಂಭಿಸಿದರು. ಮೋಕ್ಷಕ್ಕೆ ಇವರ ಸಿದ್ಧಾಂತವೇ ತಾರಕವೆಂದು ಘೋಷಿಸಿದರು. ಶಿಷ್ಯರಿಂದೊಡಗೂಡಿ ಉಡುಪಿಗೆ ಮರಳಿದ ಶ್ರೀಮಧ್ವಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯವನ್ನು ಗುರು ಅಚ್ಯುತಪ್ರೇಕ್ಷರಿಗೆ ನೀಡಿದರು ಮತ್ತು ಕಲಿಯಾವೇಶವನ್ನು ತೊಡೆದು ಹಾಕಿ ಅವರಿಗೆ ತಮ್ಮ ಭಾಷ್ಯದಲ್ಲಿ ಅಭಿರುಚಿ ಹುಟ್ಟುವಂತೆ ಮಾಡಿ ಅನುಗ್ರಹಿಸಿದರು. ಊರ್ಧ್ವಪುಂಢ್ರ, ಪಂಚ ಮುದ್ರೆ, ತಪ್ತ ಮುದ್ರೆಗಳ ಸಾಂಪ್ರದಾಯವನ್ನು ವಿಷ್ಣು ರಹಸ್ಯದಿಂದ ಪ್ರತಿಪಾದಿಸಿ ಈ ದೀಕ್ಷೆಯನ್ನು ಶಿಷ್ಯ ಜನರಿಗೆ ಇತ್ತು ಜ್ಞಾನ, ಸಾಧನಾಧಿಕಾರಿಗಳನ್ನಾಗಿ ಮಾಡಿದರು. "ಸಚ್ಛಾಸ್ತ್ರ ಶಸ್ತ್ರೇಣ ಕಲಿಂ ನಿಹತ್ಯ" ಎಂದಂತೆ ತಮ್ಮ ವಾಣಿಯಿಂದ ಕಲಿ ಮಲವನ್ನು ಉಚ್ಚಾಟಿಸಿದರು.

॥ ಪದ ॥ ಈಶ್ವರನಿಂದಲಿ । ಭೂಸುರರನು ಬಿಡಿಸಿ ।
ಓಷಧಿಗಳ ಮಂತ್ರ । ಘೋಷದಿಂ ಫಲಿಸಿ ॥
ಭಾಷ್ಯಗಳೆಂಬ ಪಾರಿ । ತೋಷಕಗಳನೊಯ್ದು ।
ವ್ಯಾಪಂರಿಗರ್ಪಿಸಿ । ತೋಷವ ಗೊಳಿಸುತ ॥ ೩೩ ॥

**ಅರ್ಥ:** ಈಶ್ವರನಿಂದಲಿ = ಈಶ್ವರನೆಂಬ ಹೆಸರಿದ್ದ ಒಬ್ಬ ರಾಜನು; ಭೂಸರರನು ಬಿಡಿಸಿ = ಬ್ರಾಹ್ಮಣರನ್ನು ಕೆಲಸಕ್ಕೆ ನಿರ್ಬಂಧಿಸಿದ್ದುದನ್ನು ತಪ್ಪಿಸಿ; ಓಷಧಿಗಳ = ಬೀಜಗಳನ್ನು; ಮಂತ್ರ ಘೋಷದಿಂ ಫಲಿಸಿ = ಮಂತ್ರೋಚ್ಚಾರಣೆಯಿಂದ ಆಗಲೇ ಮೊಳೆತು, ಬಲಿತು ಫಲವನ್ನು ನೀಡುವಂತೆ ಮಾಡಿ; ಭಾಷ್ಯಗಳೆಂಬ = ತಾವು ಬರೆದ ಗ್ರಂಥಗಳನ್ನು ಪಾರಿತೋಷಕ = ಕಾಣಿಕೆಗಳನ್ನು; ಒಯ್ದು = ತೆಗೆದುಕೊಂಡು ಹೋಗಿ; ವ್ಯಾಸರಿಗರ್ಪಿಸಿ = ವೇದವ್ಯಾಸರಿಗಿತ್ತು; ತೋಷವಗೊಳಿಸುತ = ಆನಂದವನ್ನುಂಟುಮಾಡಿದರು.

**ವಿಶೇಷಾರ್ಥ:** ಒಮ್ಮೆ ಉಡುಪಿಯಲ್ಲಿ ಬಹು ಜನ ಸಜ್ಜನರು ಶ್ರೀಮಧ್ವಾಚಾರ್ಯರ ಜೊತೆಗೆ ಬದರಿಗೆ ಹೋಗಿ ಬಂದಿದ್ದ ಜನರನ್ನು ಕುರಿತು ಹೀಗೆ ಕೇಳಿದರು. ನೀವು ಆಚಾರ್ಯರೊಡನೆ ಯಾತ್ರೆಯನ್ನು ಮಾಡಿದಾಗ ಯಾವ ಯಾವ ಘಟನೆಗಳು ನಡೆದುವು ಹೇಳಿರಿ ಎಂದು ಅದನ್ನು ಕೇಳುವುದೇ ಭಾಗ್ಯವೆಂದರು. ಆಗ ಅವರ ಸಂಗಡಿಗರು ಹೇಳುತ್ತಾರೆ.

ಸಂಚಾರ ಮಾರ್ಗದಲ್ಲಿ ಒಂದು ದೇಶದಲ್ಲಿ ಈಶ್ವರನೆಂಬುವ ರಾಜನು ಕೆರೆಯನ್ನು ಕಟ್ಟಿಸಲು ನೆಲವನ್ನು ಅಗೆಯುವುದಕ್ಕೆ ಜನರನ್ನು ಒತ್ತಾಯಿಸುತ್ತಿದ್ದನು. ಹಾಗೆ ನಾವೆಲ್ಲರೂ ಅವನ ಕೈಗೆ ಸಿಕ್ಕೆವು. ಆಗ ಅವನು ಹೇಳಿದ ಕೆಲಸವು ನಮ್ಮಿಂದ ಆಗುತ್ತಿರಲಿಲ್ಲ. ಆದರೆ ರಾಜಾಜ್ಞೆ ಮಾಡುವುದೇನು ಎಂದು ನಾವು ಚಿಂತಾಕುಲರಾಗಿರುವಾಗ ಆಚಾರ್ಯರು ಆ ರಾಜನಿಗೆ ಆ ಕೆಲಸವನ್ನು ಹೇಗೆ ಮಾಡಬೇಕೆಂಬುದನ್ನು ನೀನು ಮಾಡಿ ತೋರಿಸು ಎಂದರು. ಆಗ ಆ ರಾಜನು ತಾನು ಅಗೆಯಲು ಪ್ರಾರಂಭಿಸಿದವನು ಆ ಕೆಲಸವನ್ನು ಆತನು ನಿಲ್ಲಿಸಲೇ ಇಲ್ಲ. ಇದು ಶ್ರೀಮಧ್ವಾಚಾರ್ಯರು ಅವರಿಗೆ ಹಾಗೆ ಪ್ರೇರಿಸಿದ್ದರು. ಜಗತ್ಪ್ರೇರಕರಿಗೆ ಇದು ದೊಡ್ಡದೆ? ನಾವೆಲ್ಲಿಂದ ಪಾರಾಗಿ ಬಂದೆವೆಂದರು.

ಹೀಗೆಯೇ ವೇದ ಬಾಹಿರನಾದ ಪಾಖಂಡಿ ರಾಜನೊಬ್ಬನು ವೇದಗಳನ್ನು ದೂಷಿಸುತ್ತಾ ವಿದ್ವಾಂಸರನ್ನು ಅವಮಾನಿಸುತ್ತಿದ್ದನು. ವೇದಗಳನ್ನು ಉಚ್ಚರಿಸಿದರೆ ಬಿತ್ತಿದ ಬೀಜಗಳು ಆಗಲೇ ಫಲವನ್ನು ಕೊಡುತ್ತವೆ ಎಂದಿದೆ. ಹಾಗಾದರೆ ಅದನ್ನು ಮಾಡಿ ತೋರಿಸಲಿ ಎನ್ನುತ್ತಿದ್ದನು.

"ಯಾಓಷಧೀಃ ಪೂರ್ವಜಾತೋದೇವೇಭ್ಯಃ ಸ್ತ್ರೀಯಗಂ ಪುರಾ" ಎಂಬುದೇ ಆ ಮಂತ್ರವಾಗಿತ್ತು. ಆಗ ಶ್ರೀಮಧ್ವಾಚಾರ್ಯರು ಆ ಮಂತ್ರವನ್ನು ಉಚ್ಚರಿಸುವುದರ ಮೂಲಕ ಆಗಲೇ ತಮ್ಮ ಕೈಯಿಂದ ಬಿತ್ತಿದ ಭತ್ತವನ್ನು ಸಫಲ ಸಸ್ಯವನ್ನಾಗಿ ಮಾಡಿ ತೋರಿಸಿದರು. ವೇದ ಸುಳ್ಳಲ್ಲ. ಸಿದ್ಧಿ ಬೇಕು ಎಂದರು. ಬದರಿಯನ್ನು ಮುಟ್ಟಿದ ಮೇಲೆ ಅಲ್ಲಿ ಶ್ರೀವೇದವ್ಯಾಸರಿಗೆ ಆದಿಮವಾಗಿ ಗೀತಾಭಾಷ್ಯವನ್ನು ಅರ್ಪಿಸಿದರು. ಅದಕ್ಕೂ ಮುಂಚಿತವಾಗಿ ನಡೆದ ಘಟನೆಗಳನ್ನು ಕೇಳಿರಿ ಹೇಳುತ್ತೇವೆ ಏನೆಂದರೆ

॥ ಪದ ॥ ಘನ ಭವ ಸಾಗರ।ವನು ದಾಟಿಸುವಗೆ ।
ಜಾಹ್ನವಿ ತೀರವು । ಕನಲಿಸಿತೇ ॥
ಸನಕಾದಿಗಳ ಹೃ। ದ್ವನರುಹ ಮಿತ್ರಗೆ ।
ವನಜನಾಭಾದ್ಯರು । ಮಣಿದುದಚ್ಚರಿಯೇ ॥ ೩೪ ॥

**ಶಬ್ದಾರ್ಥ:** ಘನಭವ ಸಾಗರ = ಅಪಾರವಾಗಿ ತೆರೆಗಳಂತೆ ಬರುತ್ತಿರುವ ಜನನ – ಮರಣಗಳೆಂಬ ಸಂಸಾರ ಸಾಗರವನ್ನು; ದಾಟಿಸುವಗೆ = ಪಾರು ಮಾಡಬಲ್ಲ ಅಪರೋಕ್ಷ ಜ್ಞಾನವನ್ನು ನೀಡಬಲ್ಲ; (ವಾಯುದೇವನಿಗೆ); ಜಾಹ್ನವಿ ತೀರವು ಕನಲಿಸಿತೇ = ಗಂಗಾನದಿಯನ್ನು ದಾಟುವುದು ಮತ್ತು ತುರಷ್ಕರ ಉಪಟಳವನ್ನು ಎದುರಿಸುವುದು; ಕನಲಿಸಿತೇ = ತೊಂದರೆಯನ್ನು ಉಂಟು ಮಾಡಲಿಲ್ಲ; ಸನಕಾದಿಗಳ = ಸನಕ, ಸನಂದ, ಸನತ್ಕುಮಾರ ಮತ್ತು ಸನತ್ಸುಜಾತರೆಂಬ ವೈರಾಗ್ಯ ನಿಧಿಗಳ; ಹೃದ್ವನರುಹ = ಹೃದಯ ಕಮಲಗಳಿಗೆ; ಮಿತ್ರಗೆ = ಸೂರ್ಯನಿಗೆ; ವನಜನಾಭಾದ್ಯರು = ಪದ್ಮನಾಭತೀರ್ಥರೇ ಮೊದಲಾದವರು; ಮಣಿದುದು = ಶಿಷ್ಯರಾದುದು; ಅಚ್ಚರಿಯೇ = ಆಶ್ಚರ್ಯವಲ್ಲ.

**ವಿಶೇಷಾರ್ಥ:** ನಾವು ಬದರಿಗೆ ಹೋಗಬೇಕಾದರೆ ಮೊದಲು ಗಂಗಾನದಿಯನ್ನು ದಾಟಬೇಕಿತ್ತು. ನದಿಯನ್ನು ದಾಟಿಸಲು ನಾವಿಕರಿರಲಿಲ್ಲ. ಆಗ ಶ್ರೀಮಧ್ವಾಚಾರ್ಯರೇ ನೂರಾರು ಜನ ಶಿಷ್ಯರಿಗೆ ಹೀಗೆ ಹೇಳಿದರು. ಒಬ್ಬರು ತಮ್ಮ ಸೊಂಟವನ್ನು ಹಿಡಿದುಕೊಳ್ಳುವುದು. ಮತ್ತೊಬ್ಬರು ಅವನ ಸೊಂಟವನ್ನು ಹಿಡಿದುಕೊಳ್ಳುವುದು. ಹೀಗೆ ಒಬ್ಬರನ್ನೊಬ್ಬರು ಹಿಡಿದುಕೊಳ್ಳಿರಿ. ನಾನು ಎಲ್ಲರನ್ನೂ ನದಿಯಿಂದ ಪಾರು ಮಾಡುತ್ತೇನೆಂದರು. ನಾವು ಹಾಗೆಯೇ ಮಾಡಿದೆವು. ಶ್ರೀಮಧ್ವಾಚಾರ್ಯರು ಸುಲಭವಾಗಿ ಎಲ್ಲರನ್ನೂ ಗಂಗಾ ಪ್ರವಾಹದಲ್ಲಿ ಕಾಪಾಡಿ ದಡ ಸೇರಿಸಿದರು. ಇದೇನು ಸಾಮಾನ್ಯವೇ? ನಿಂತ ನೀರಿನ ಕೊಳದಲ್ಲಿ ಬಿದ್ದ ಒಬ್ಬನನ್ನು ರಕ್ಷಿಸುವುದೇ ಪ್ರಾಣಾಂತಿಕ ಅಪಾಯವಾಗಿರುವಾಗ, ಅದೂ ಗಂಗಾಪ್ರವಾಹದಲ್ಲಿ ನೂರಾರು ಜನರನ್ನು ಸೊಂಟಕ್ಕೆ ಕಟ್ಟಿಕೊಂಡು ರಕ್ಷಿಸಿದ್ದು ಶ್ರೀಮಧ್ವರಿಗಲ್ಲದೆ ಮತ್ಯಾರಿಗೆ ತಾನೇ ಸಾಧ್ಯವಾದೀತು? ಆದರೆ ಬ್ರಹ್ಮಾಂಡದಲ್ಲಿನ ಆ ಬ್ರಹ್ಮ ಸ್ಥಂಭ ಪರಿಯಂತವಾದ ಜೀವರಾಶಿಗಳನ್ನು ವಿರಜಾನದಿಯಿಂದ ಮೋಕ್ಷಕ್ಕೆ ಕಳಿಸುವ ಈ ವಾಯು ಮೂಲನಿಗೆ ಇದೇನು ಕಷ್ಟವೇ? ಎನ್ನುತ್ತವೆ. ಸ್ಮೃತಿ, ಶೃತಿಗಳು ಎರಾರ ಅವತಾರ ನಿಮಿತ್ತದಿಂದ ಸನಕ ಸನಂದಾದಿಗಳ ಸದ್ಗುರು ಪರಂಪರೆಯು ಪುನೀತವಾಯಿತೋ ಅಂಥಾ ಮಹನೀಯರಾದ ಶ್ರೀಮಧ್ವಾಚಾರ್ಯರ ಪರಂಪರೆಯಲ್ಲಿ ಗರುಡಾವೇಶ ಉಳ್ಳ ಶ್ರೀ ಮಾಧವ ತೀರ್ಥರೂ, ಶೇಷಾಂಶ ಸಂಭೂತರಾದ ಶ್ರೀ ಪದ್ಮನಾಭ ತೀರ್ಥರೂ, ಕಾಮಾಂಶರೆಂದು ಪರಿಗಣಿತರಾದ ಶ್ರೀ ನರಹರಿತೀರ್ಥರೂ, ರುದ್ರಾಂಶ ಸಂಭೂತರಾದ ಶ್ರೀ ಅಕ್ಷೋಭ್ಯತೀರ್ಥರೂ ಇನ್ನೂ ಅನೇಕ ಜನರೂ ಶಿಷ್ಯರಾದುದು ಆಶ್ಚರ್ಯವೇನಲ್ಲ.

ಶ್ರೀಮಧ್ವಾಚಾರ್ಯರು ಗಂಗಾನದಿಯನ್ನು ದಾಟಿಸಿದುದಷ್ಟೇ ಅಲ್ಲ. ಉತ್ತರ ತಟದಲ್ಲಿ ಕಾವಲಿದ್ದ ಯವನ ಸೈನಿಕರನ್ನೊಳಗೊಂಡು ಅವರ ದೊರೆಯಾಗಿದ್ದ ಬಾಲ್ಬನ್‌ನೊಡನೆ ಸಂಭಾಷಣೆಯನ್ನು ನಡೆಸಿ ಗೌರವಾದರದಿಂದ ಬೀಳ್ಕೊಂಡು ಸಾಗಿದ್ದು ಸಾಮಾನ್ಯರಿಗೆ ದುರ್ಗಮವಾದುದೇ ಆಗಿತ್ತು. ಶ್ರೀಮಧ್ವಾಚಾರ್ಯರು ಸನ್ಯಾಸಿಗಳಾದುದರಿಂದಲೂ ಮತ್ತು ದುರ್ಬಲರು ಆ ಪತ್ಕಾಲದಲ್ಲಿ ಹೇಗೆ ನಡೆದು ಕೊಳ್ಳಬೇಕೆಂಬುದನ್ನು ತೋರಿಸಲೂ ತುರಷ್ಕರ ಮೇಲೆ

ಬಲಪ್ರಯೋಗಿಸದೆ ಉಪಾಯಾಂತರದಿಂದ ಅವರಿಂದ ಅರ್ಧ ರಾಜ್ಯವನ್ನು ಪಡೆದರು. "ರಾಜ್ಯಾರ್ಧಂ ಸಪದಿ ಸಮರ್ಪಯಾಂಬಭೂವ"

ಬದರಿಯಲ್ಲಿ ಮಧ್ವಾಚಾರ್ಯರು ಶ್ರೀವೇದವ್ಯಾಸರನ್ನು ಸಂಧಿಸಿದಾಗ ಅವರಿಗೆ ಶ್ರೀವ್ಯಾಸರು ತಮ್ಮ ಸನ್ನಿಧಾನವನ್ನು ಇರಿಸಿ ಎಂಟು ಸೈಕತ ಮುಷ್ಟಿಗಳನ್ನು ಇತ್ತು ಅನುಗ್ರಹಿಸಿದರು. ಅವುಗಳೇ ವ್ಯಾಸಮುಷ್ಟಿಗಳು.

ಬದರಿಯ ದಾರಿಯಲ್ಲಿ ದೈತ್ಯನೊಬ್ಬನು ಹುಲಿ ರೂಪವನ್ನು ತಾಳಿ ಸತ್ಯತೀರ್ಥರನ್ನು ತಾಕಿದನು. ಕೂಡಲೇ ಶ್ರೀಮಧ್ವಾಚಾರ್ಯರು ಅವನನ್ನು ನೊಣಗಳನ್ನು ಝಾಡಿಸುವಂತೆ ಝಾಡಿಸಿ ಓಡಿಸಿಬಿಟ್ಟರು.

॥ ಪದ ॥ ಬಲ ತೋರಿಸಿದರೆ । ನೆಲ ಕಚ್ಚುವರೆಂದು ।
ಕುಳಿತಲ್ಲೆ ರೋಮವ । ಕೀಳಲು ಹೇಳೀ ॥
ಸುಲಿಯ ಬಂದವರಿಗೆ । ಶಿಲೆಯಂತೆ ತೋರುತ ।
ಶಿಲೆಯನು ಎಡಗೈಲಿ । ಕಳಶದಿ ಸ್ಥಾಪಿಸಿ ॥ ೩೫ ॥

**ಅರ್ಥ:** ಬಲತೋರಿಸಿದರೆ = ಮಲ್ಲಯುದ್ಧ ಮಾಡಿದರೆ; ನೆಲ ಕಚ್ಚುವರು = ಮೃತಿ ಹೊಂದುವರು; ರೋಮವ = ಮೈಮೇಲಿನ ಒಂದು ಕೂದಲನ್ನು; ಕೀಳಲು = ಕಿತ್ತಲು; ಹೇಳಿ = ಸ್ಪರ್ಧೆ ಕೊಟ್ಟು; ಸುಲಿಯ ಬಂದವರಿಗೆ = ಕಳ್ಳರಿಗೆ; ಶಿಲೆಯಂತೆ = ಕಲ್ಲು ಕಂಬಗಳಂತೆ; ತೋರಿ = ಕಂಡು; ಶಿಲೆಯನ್ನು = ದೊಡ್ಡಬಂಡೆಯನ್ನು; ಕಳಸದಿ ಸ್ಥಾಪಿಸಿ = ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಕಳಸ ಎಂಬ ಹಳ್ಳಿಯಲ್ಲಿ ನದಿಗೆ ಅಡ್ಡವಾಗಿ ಸೇತುವೆಯಂತೆ ಇಟ್ಟು

**ವಿಶೇಷಾರ್ಥ:** ಶ್ರೀಮಧ್ವಾಚಾರ್ಯರನ್ನು ಹಲವು ಬಗೆಯಲ್ಲಿ ಪರೀಕ್ಷಿಸಿದ ನಾನಾ ಪರಿಯ ಜನರು ಅವರಿಗೆ ಸೋತು ಶರಣಾಗತರಾಗಿ ಉದ್ಧಾರವಾದರು. ಕೆಲವರು ಶಿಷ್ಯರೇ ಆಚಾರ್ಯರೊಡನೆ ಕುಸ್ತಿ ಹಿಡಿಯಲು ಬಯಸಿದರು. ಆಗ ಆಚಾರ್ಯರು ಏಕ ಕಾಲದಲ್ಲಿಯೇ ಅವರನ್ನೆಲ್ಲಾ ಬೀಳಿಸಿ ಅವರ ಮೇಲೆ ತಮ್ಮ ಕೈಯನ್ನು ಇರಿಸಿ ಮೇಲೇಳಲು ಹೇಳಿದರು. ಆಗ ಆ ಶಿಷ್ಯರು ಮೇಲೆ ಏಳುವುದಿರಲಿ, ಅಲುಗಾಡಲೂ ಸಾಧ್ಯವಾಗಲಿಲ್ಲ. ಮೈಮೇಲೆ ಪರ್ವತವೇ ಇರುವಂಥ ಅನುಭವ ಅವರಿಗೆ ಅವರೆಲ್ಲಾ, ಆಚಾರ್ಯರ ಶಕ್ತಿಗೆ ಬೆರಗಾಗಿ ಪ್ರಾರ್ಥನೆಗಳನ್ನು ಮಾಡಿದರು.

ಗಂಡವಾಟನೇ ಮೊದಲಾದ ಮಲ್ಲರು ಶ್ರೀಮಧ್ವಾಚಾರ್ಯರಲ್ಲಿ ತಮ್ಮ ಬಲ ಪ್ರದರ್ಶನಕ್ಕೆ ಬಂದರು. ಆಗ ಆಚಾರ್ಯರು ಅವರಿಗೆ ನನ್ನ ಬಲವನ್ನು ತೋರುವುದಿಲ್ಲ. ನಿಮ್ಮ ಬಲವನ್ನು ನೀವು ತೋರಿಸಿದರೆ ಸಾಕು ಎಂದು ಹೇಳುತ್ತ ಅವರಿಗೆ ತಮ್ಮ ಮೈಮೇಲಿನ ಒಂದು ರೋಮವನ್ನಾದರೂ ಕೀಳಲು ಹೇಳಿದರು. ಆಗ ಆದೇನು ಮಹಾ ಎಂದ ಜಟ್ಟಿಗಳು ಒಂದು ರೋಮವನ್ನು ಕೀಳಲಾಗದೆ ನಾಚಿಕೆಯಿಂದ ತಲೆಯನ್ನು ತಗ್ಗಿಸಿದರು. ಮಗದೊಬ್ಬ ಜಟ್ಟಿಯು ಆಚಾರ್ಯರ ಕತ್ತನ್ನು ಹಿಚಕಲು ಯತ್ನಿಸಿದನು. ಆಗ ಆಚಾರ್ಯರು ಉಚ್ಚರಿಸುತ್ತಿದ್ದ ಮಂತ್ರಗಳ ಸ್ವರವನ್ನೂ ಅವನಿಂದ ತಗ್ಗಿಸಲಾಗಲಿಲ್ಲ ಎಂದ ಮೇಲೆ ಆಚಾರ್ಯರ ಬಲದ ಮುಂದೆ ಇವನದು ಸ್ಪರ್ಧೆಯೇ? ಮೂಗಿನ ಮೇಲೆ ಮುಷ್ಟಿ ಪ್ರಹಾರ ಮಾಡಿದ ಜಟ್ಟಿಯೊಬ್ಬನು ಮೋಟು ಕಲ್ಲಿಗೆ ಗುದ್ದಿದ ಅನುಭವದಿಂದ ವಿಲವಿಲನೆ ಒದ್ದಾಡಿದನು. ಆಚಾರ್ಯರ ಕಣ್ಣಲ್ಲಿ ನೀರು ಬಂತೆ? ಮೂಗಿನಲ್ಲಿ ರಕ್ತವು ಬಂದಿತೇ? ಮುಖವು ಕೆಂಪಾಯಿತೆ? ಅಥವಾ ಧ್ವನಿಯಾದರೂ ಕುಂಠಿತವಾಯಿತೇ? ಏನೂ ಇಲ್ಲ. ಏನೆಲ್ಲಾ ಆದದ್ದು ಆ ಜಟ್ಟಿಗಳಿಗೇ.

ಶ್ರೀಮಧ್ವಾಚಾರ್ಯರು ತಮ್ಮ ಶಿಷ್ಯರೊಡನೆ ಸಂಚಾರದಲ್ಲಿರುವಾಗ ಕಳ್ಳರ ಹಿಂಡು ಇವರನ್ನು ಮುತ್ತಿಗೆ ಹಾಕಿತು. ಆಗ ಆಚಾರ್ಯರು ಒಂದು ವಸ್ತ್ರದ ಗಂಟನ್ನು ಆ ಕಳ್ಳರ ಕಡೆಗೆ ಎಸೆದರು. ಆಗ ಆ ಕಳ್ಳರು ಆ ಗಂಟು ತನಗೆ ಸೇರಿದ್ದು, ತನಗೆ ಸೇರಿದ್ದು ಎಂದು ಪರಸ್ಪರ ಹೊಡೆದಾಡಿ ನಿರಸ್ತರಾದರು. ಮತ್ತೊಮ್ಮೆ ಇದೇ ರೀತಿಯಾಗಿ ರಾತ್ರಿ ಕಳ್ಳರ ಗುಂಪು ಶ್ರೀಮಧ್ವಾಚಾರ್ಯರನ್ನು ದೋಚಲು ಮುಂದೆ ಬಂದಿತು. ಆಗ ಆಚಾರ್ಯರೂ ಮತ್ತು ಅವರ ಶಿಷ್ಯ ಪರಿವಾರದವರೂ ಆ ಕಳ್ಳರ ಕಣ್ಣಿಗೆ ಮರ, ಗಿಡ, ಕಲ್ಲು ಕಂಬಗಳಂತೆ ತೋರಿದರು. ಇದೇ ರೀತಿಯಾಗಿ ಶ್ರೀಮಧ್ವಾಚಾರ್ಯರ ಮತ್ತು ಕಳ್ಳರ ಕಣ್ಣ ಮುಚ್ಚಾಟವು ಬೆಳಗಿನ ಜಾವದವರೆಗೆ ಸಾಗಿತು. ಕಳ್ಳರು ಸೋತು ಸುಣ್ಣವಾಗಿ

ಪಲಾಯನ ಮಾಡಿಬಿಟ್ಟರು. ಮತ್ತೊಮ್ಮೆ ಶ್ರೀಮಧ್ವರು ಶತ ಸಂಖ್ಯಾಕ ಕಳ್ಳರ ಹಿಂಡನ್ನು ತಮ್ಮ ಒಬ್ಬನೇ ಶಿಷ್ಯನ ಕೈಯಿಂದ ಪರಾಭವಗೊಳಿಸಿ ಓಡಿಸಿದರು. ಶ್ರೀಮಧ್ವರು ಸಾತ್ವಿಕವಾದ ಅಹಿಂಸೆಯಿಂದಲೇ ಇಂಥಾ ಕಾರ್ಯಸಾಧನೆಯನ್ನು ಮಾಡಿದರು.

ಶ್ರೀಮಧ್ವಾಚಾರ್ಯರು ಸಂಚಾರತ್ವೇನ ಚಿಕ್ಕಮಗಳೂರು ಜಿಲ್ಲೆಯ ಕಳಸ ಎಂಬ ಹಳ್ಳಿಗೆ ಬಂದರು. ಅದು ತುಂಗಾನದಿಯ ದಂಡೆಯಲ್ಲಿ ಇದೆ. ಮಳೆಗಾಲದಲ್ಲಿ ಪ್ರವಾಹ ನಿಮಿತ್ತವಾಗಿ ಆ ಹಳ್ಳಿಯು ಜಲಾವೃತವಾಗಿ ವಾರಗಟ್ಟಲೆ ದ್ವೀಪವಾಗಿ ಪರಿಣಮಿಸುತ್ತಿತ್ತು. ಆ ಕಾಲದಲ್ಲಿ ಹೊರ ಸಂಪರ್ಕವು ಕಡಿದು ಹೋಗಿ ಜನರು ಪರಿತಪಿಸುತ್ತಿದ್ದರು. ಆಚಾರ್ಯರು ಅಲ್ಲಿಗೆ ಹೋಗಿದ್ದಾಗ ಅವರು ಈ ಅನುಭವವನ್ನು ಕಂಡರು. ಜನರೊಡನೆ ನದೀ ತೀರಕ್ಕೆ ಬಂದು ಸ್ಥಳವನ್ನು ಪರಿಶೀಲಿಸಿದರು. ಆಗ ಅವರಿಗೆ ಒಂದು ಆಯಕಟ್ಟಿನ ಸ್ಥಳವು ಗೋಚರಿಸಿತು. ಅದಕ್ಕೆ ಅನುಕೂಲಕರವಾದ ಒಂದು ಭಾರೀ ಗಾತ್ರ, ಉದ್ದ, ಅಗಲವಾದ ಬಂಡೆಯು ಅವರಿಗೆ ಕಾಣಿಸಿತು. ತಕ್ಷಣವೇ ಆಚಾರ್ಯರು ಊರಿನ ಜನರನ್ನು ಕುರಿತು ಇಲ್ಲಿ ಜಾಗವಿದೆ ಅಲ್ಲಿ ಬಂಡೆಯಿದೆ. ಇದನ್ನು ಎತ್ತಿ ತಂದು ಇಲ್ಲಿಟ್ಟರೆ ನಿಮಗೆ ಒಳ್ಳೇ ಸೇತುವೆಯಂತಾಗಿ ಎಂಥಾ ಪ್ರವಾಹ ಬಂದರೂ ನಿಮ್ಮ ದೈನಂದಿನ ವ್ಯವಹಾರಕ್ಕೆ ಅಡ್ಡಿಯಾಗಲಾರದು. ಹಾಗೆ ಮಾಡಿರಿ ಎಂದು ಹೇಳಿದರು. ಆದರೆ ಆ ಬಂಡೆಯೇನು ಸಾಮಾನ್ಯವಾದುದೇ? ಪರ್ವತದ ಮರಿ ಅದಕ್ಕೆ ಜನರು "ಅಬ್ಬಾ ಇದೇನು ಸ್ವಾಮೀ, ಹೀಗೆ ಹೇಳುತ್ತಿರುವಿರಿ. ಇದನ್ನು ಅಲುಗಾಡಿಸಲಾದರೂ ಸಾಧ್ಯವೇ? ಇನ್ನು ಇದನ್ನು ಯಾರು ಎತ್ತಿ ಇಡಬಲ್ಲರು? ಆ ಹನುಮಂತನೋ ಅಥವಾ ಭೀಮನೋ ಬಂದರೆ ಮಾತ್ರ ಸಾಧ್ಯವಾದೀತೇನೋ" ಎಂದರು. ಆಗ ಮಧ್ವಾಚಾರ್ಯರು ತಮ್ಮ ಅವತಾರಗಳನ್ನು ಸ್ಮರಣೆಗೆ ತಂದುಕೊಂಡುದರಿಂದ ಆ ಜನರ ಮೇಲೆ ಕನಿಕರಪಟ್ಟು ತಮ್ಮ ಒಂದೇ ಎಡಗೈ ಮಾತ್ರದಿಂದ ಆ ಬಂಡೆಯನ್ನು ಎತ್ತಿ ತಂದು ಅದನ್ನು ಆಯಕಟ್ಟಿನ ಸ್ಥಳದಲ್ಲಿ ಸೇತುವೆಯಂತೆ ಅನಾಯಾಸವಾಗಿ ಇಟ್ಟು ಬಿಟ್ಟರು. ಆಗ ಜನರಿಗಾದ ಆನಂದ, ಆಶ್ಚರ್ಯ ಅಷ್ಟಿಷ್ಟಲ್ಲ. ಚಪ್ಪಾಳೆ ತಟ್ಟಿ, ಕುಣಿದು ಕುಪ್ಪಳಿಸಿದರು. ಕಳಸದಲ್ಲಿ ಆ ಕಲ್ಲನ್ನು ಇಂದಿಗೂ ಕಾಣಬಹುದಾಗಿದೆ. ಆ ಕಲ್ಲಿನ ಮೇಲೆ "ಶ್ರೀಮಧ್ವಾಚಾರ್ಯೈಃ ಏಕ ಹಸ್ತೇನ ಆನೀಯ ಸ್ಥಾಪಿತ ಶಿಲಾ" ಎಂಬ ಕೆತ್ತನೆಯನ್ನು ಕೆತ್ತಲಾಗಿದೆ.

ಆಚಾರ್ಯರು ಕುರುಕ್ಷೇತ್ರಕ್ಕೆ ಹೋಗಿದ್ದಾಗ ಅಲ್ಲಿ ತಾವು ಭೀಮನಾಗಿದ್ದಾಗ ಹುದುಗಿಸಿಟ್ಟಿದ್ದ ಗದೆಯನ್ನು ತೆಗೆದು ತೋರಿಸಿ ಮತ್ತೆ ಅಲ್ಲೇ ಅದನ್ನು ಸ್ಥಾಪಿಸಿದರು. ಆ ಕುರುಕ್ಷೇತ್ರದಲ್ಲಿ ಭಾವಿ ಮಾರೀಚ ಪದವಿಗಾಗಿ ತಪಸ್ಸನ್ನು ಮಾಡುತ್ತಿದ್ದ ಭಂಗಿ ಸಾಧುವನ್ನೂ ತೋರಿಸಿದರು. ಹೃಷೀಕೇಶ ಕ್ಷೇತ್ರದಲ್ಲಿ ಶಿವಶಂಕರನು ಬ್ರಾಹ್ಮಣ ರೂಪದಿಂದ ಬಂದು ಆಚಾರ್ಯರಿಗೆ ಭಿಕ್ಷೆಯನ್ನು ನೀಡಿದನು. ಮುಂದೆ ಇಕ್ಷುಪಾದ ಕ್ಷೇತ್ರದಲ್ಲಿ ಒಂದು ಸಾವಿರ ಮತ್ತು ಗೋವೆಗೆ ಬಂದಾಗ ಅಲ್ಲಿ ನಾಲ್ಕು ಸಾವಿರ ಬಾಳೇ ಹಣ್ಣುಗಳನ್ನು ಮೂವತ್ತು ತಂಬಿಗೆ ಹಾಲನ್ನೂ ಕುಡಿದು ಜನರಿಗೆ ಆಶ್ಚರ್ಯವನ್ನುಂಟು ಮಾಡಿದರು. ಆದರೆ ಇದು ಆಶ್ಚರ್ಯವೇ? ಶ್ರೀಮಧ್ವಾಚಾರ್ಯರು ಅದೃಶ್ಯರಾಗಿ ಗೋವೆಯಿಂದ ನಿರ್ಗಮಿಸಿದರು. ಅವರು ಪಶುಪ ಎಂಬ ಊರಲ್ಲಿ ತಮ್ಮ ಸಂಗೀತಯುಕ್ತವಾದ ಹಾಡಿನಿಂದ ಬರಡು ಗಿಡಗಳು ಚಿಗುರಿ ಫಲ ಬಿಡುವಂತೆ ಮಾಡಿದರು.

ಶ್ರೀಮಧ್ವಾಚಾರ್ಯರು ಚೋಳ ದೇಶದಲ್ಲಿ ಸಂಚಾರ ಮಾಡುತ್ತಿರುವಾಗ ಪದ್ಮತೀರ್ಥ, ಪುಂಡರೀಕಪುರಿ ಎಂಬುವರು ಆಚಾರ್ಯರೊಡನೆ ವಾದಿಸಿ ಸೋತು ಮುಂದೆ ದಾರಿ ಕಾಣದೆ ಆಚಾರ್ಯರ ತತ್ವಪ್ರಚಾರಕ್ಕೆ ಅಡಚಣೆಯನ್ನುಂಟು ಮಾಡುವ ತಂತ್ರಗಳನ್ನು ಬಳಸಿದರು. ಶ್ರೀಮಧ್ವರು ರಚಿಸಿದ್ದ ಗ್ರಂಥಗಳನ್ನು ಅವರ ವಿಶ್ವಾಸಕ್ಕೆ

ಪಾತ್ರರಾಗಿದ್ದ ಲಿಕುಚ ವಂಶೀಯರಾಗಿದ್ದ ಶಂಕರಾಚಾರ್ಯರೆಂಬುವರಲ್ಲಿ ಇರಿಸಿದ್ದರು. ಆದರೆ ಪದ್ಮತೀರ್ಥ ಪಂಡಿತನು ಆ ಗ್ರಂಥಗಳನ್ನು ಅಪಹರಿಸಿಬಿಟ್ಟನು. ತರುವಾಯ ಕೊಡಿಪಾಡಿ ಎಂಬ ಊರಲ್ಲಿ ಆ ಗ್ರಂಥಗಳನ್ನು ಬಿಟ್ಟು ಪಲಾಯನ ಮಾಡಿ ಬಿಟ್ಟಿದ್ದನು. ಆಗ ಶ್ರೀಮಧ್ವರು ಆ ಗ್ರಂಥಗಳನ್ನು ಜಯಸಿಂಹ ರಾಜನ ಮುಖಾಂತರವಾಗಿ ತರಿಸಿ ಸ್ವೀಕರಿಸಿದರು.

ಮುಂದೆ ವಿಷ್ಣು ಮಂಗಲದಲ್ಲಿ ಬಿಡಾರ ಮಾಡಿದ್ದ ಶ್ರೀಮಧ್ವರು ಅಲ್ಲಿ ಹೃಷೀಕೇಶ ತೀರ್ಥರಿಂದ ಭಾಗವತವನ್ನು ಹೇಳಿಸಿ ತಾವೂ ಅದರ ಅನುವಾದವನ್ನು ಮಾಡಿದರು. ಆಚಾರ್ಯರು ಆ ಕ್ಷೇತ್ರದಲ್ಲಿ ಇರುವಾಗ ಪ್ರಬಲವಾದ ಪಂಡಿತ ಮನೆತನವಾದ ಲಾಕುಚವಂಶದ ಶ್ರೀ ಸುಬ್ರಹ್ಮಣ್ಯ ಶಾಸ್ತ್ರಿಗಳ ಧರ್ಮಪತ್ನಿ ಶ್ರೀಕೃಷ್ಣ ಭಕ್ತಳಾಗಿದ್ದ ಆಕೆಯಲ್ಲಿ ಶಂಕರ ನಾರಾಯಣ ದೇವರ ವರಪ್ರಸಾದದಿಂದ ಹುಟ್ಟಿದ ಪುತ್ರ ರತ್ನ 'ತ್ರಿವಿಕ್ರಮ' ನೆಂಬ ವಂಶ ಭೂಷರು ಶ್ರೀಮಧ್ವಾಚಾರ್ಯರನ್ನು ಸಂಧಿಸಿದರು. ಸಮಸ್ತ ನಿರಸ್ತವಾದಿಗಳ ಮಧ್ಯದಲ್ಲಿ ಘನ ಪಂಡಿತರಾಗಿ ಇವರೊಬ್ಬರೇ ಮಾಯಾವಾದಿಗಳಿಗೆ ಆಶಾಕಿರಣರಾಗಿದ್ದರು. ಅನುವಂಶೀಯವಾಗಿಯೇ ಗುಪ್ತವಾಗಿ ಸತ್ಸಾಧನಾ ತತ್ಪರರಾಗಿದ್ದ ಇವರು ಜನನಿಷ್ಠೆಯಲ್ಲಿ ಘನತರವಾದ ಶಾಂಕರಾಗಮ ವಿದ್ವಾಂಸರೆನಿಸಿದ್ದರು.

ಬಹು ಜನರ ಪ್ರೇರಣೆಯಂತೆ ಇವರು ಶ್ರೀಮಧ್ವರಾಯರಲ್ಲಿಗೆ ಬಂದು ವಾದಾಭಿಲಾಷಿಗಳಾದರು. ಶ್ರೀಮಧ್ವರಾದರೋ ಇಂಥವರನ್ನೇ ಬಯಸುತ್ತಿದ್ದರು. ಹದಿನೈದು ದಿನಗಳವರೆಗೆ ನಡದ ವಾದವಿವಾದದಲ್ಲಿ ಶ್ರೀ ಮಧ್ವರು ಇವರಿಗೆ ಶ್ರೀವೇದವ್ಯಾಸರ ಹೃದಯಸ್ಥವನ್ನು ಬಿಚ್ಚಿ ತೋರಿಸಿದರು. ಮಾತ್ರವಲ್ಲ. ತಾವು ಅವತಾರ ತ್ರಯೋಪೇತರೆಂಬುದನ್ನು ತಮ್ಮ ಪೂಜಾಕಾಲದಲ್ಲಿ ತೋರಿಸಿದರು. ಹೀಗೆ ಆಚಾರ್ಯರನ್ನು ಕಂಡ ಪಂಡಿತೋತ್ತುಮ ಕವಿಕುಲತಿಲಕ ತ್ರಿವಿಕ್ರಮ ಪಂಡಿತಾಚಾರ್ಯರು ಆನಂದಪುಳಕಿತರಾಗಿ ಶ್ರೀಮಧ್ವಾಚಾರ್ಯರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಮಾಡುತ್ತಾ "ಶ್ರೀಮದ್ವಿ ಷಂಘ್ರಿ_ನಿಷ್ಠಾ । ಅತಿ ಗುಣ ಗುರುತಮ । ಶ್ರೀಮದಾನಂದ ತೀರ್ಥಾ . . . . ." ಎಂಬ ನಲವತ್ತೊಂದು ಶ್ಲೋಕಗಳ ಇಷ್ಟಾರ್ಥಪ್ರದವಾದ ಮಂತ್ರ ಸದೃಶವಾದ ವಾಯುಸ್ತುತಿಯನ್ನು ರಚಿಸಿ ಸ್ತುತಿ ಮಾಡಿದರು ಮತ್ತು ಶ್ರೀಹರಿಗೆ ಕೈಮುಗಿದು

"ಬ್ರಹ್ಮಾಂತಾ ಗುರವ ಸಾಕ್ಷಾತ್ । ಇಷ್ಟಂ ದೈವಂ ಶ್ರಿಯಃ ಪತಿಃ ॥
ಆಚಾರ್ಯಃ ಶ್ರೀಮದಾಚಾರ್ಯಾ । ಸಂತುಮೇ ಜನ್ಮ ಜನ್ಮನಿ ।"

ಎಂದು ಬೇಡಿದರು. ಇವರ ತಂದೆಗಳಾದ ಸುಬ್ರಹ್ಮಣ್ಯ ಶಾಸ್ತ್ರಿಗಳು ಬುದ್ಧಿವಂತನಾದ ಮಗನಿಗೆ ಸದ್ವಾನಾನ್ವೇಷಣೆಗೆ ಕಳಕಳಿಯಿಂದ ಹೇಳಿದುದನ್ನು ಮರೆಯದ ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು ಶ್ರೀಮಧ್ವಾಚಾರ್ಯರ ಸಮಾಗಮದಿಂದ ತಂದೆಗಳ ಅಭಿಲಾಷೆಯನ್ನು ಪೂರೈಸಿದರು. ಇವರು ತಮ್ಮ ನೂರೊಂದು ಕುಲವನ್ನು ಮಾತ್ರವಲ್ಲ. ಇಡೀ ವೈಷ್ಣವ ಕುಲ ಸಂಜಾತರನ್ನೂ ತಮ್ಮ ಆದರ್ಶಮಯವಾದ ಜೀವನದ ಮೂಲಕವಾಗಿ ಉದ್ಧರಿಸಿದರು. ಇವರ ಸುಪುತ್ರರಾದ ಶ್ರೀಮನ್ನಾರಾಯಣ ಪಂಡಿತಾಚಾರ್ಯರು ಸುಮಧ್ವವಿಜಯ ಗ್ರಂಥವನ್ನು ಬರೆದು ಆಚಾರ್ಯರ ಮಹಿಮೆಗಳನ್ನು ತಿಳಿಸುವುದರ ಮೂಲಕವಾಗಿ ಸಕಲ ಸುಜೀವಗಳನ್ನು ಇಂದಿಗೂ ಭಾಗ್ಯವಂತರನ್ನಾಗಿ ಮಾಡುತ್ತಿದ್ದಾರೆ.

ಶ್ರೀಮಧ್ವಾನಂದ ತೀರ್ಥಾಭಗವತ್ಪಾದಾಚಾರ್ಯರು ಕಾಲ ಕ್ರಮದಲ್ಲಿ ತಮ್ಮ ಪೂರ್ವಾಶ್ರಮದ ತಮ್ಮನಿಗೆ ಯತ್ಯಾಶ್ರಮವನ್ನು ನೀಡಿ 'ವಿಷ್ಣು ತೀರ್ಥ'ರೆಂದು ಶ್ರೀವಿಷ್ಣು ಪ್ರೀತಿಕರವಾದ ನಾಮವನ್ನು ಪ್ರದಾನ ಮಾಡಿದರು.

ಶ್ರೀಮಧ್ವಾಚಾರ್ಯರು ಕೊಕ್ಕಡ ಎಂಬ ಗ್ರಾಮದಲ್ಲಿ ವಾಸ್ತವ್ಯ ಮಾಡಿದ್ದಾಗ ಸಾಧುವಾದ ಒಬ್ಬ ಬಡ ಬ್ರಾಹ್ಮಣನ ದಾರಿದ್ರ್ಯನಿವಾರಣಾರ್ಥವಾಗಿ "ಶ್ರೀಕೃಷ್ಣಾಮೃತ ಮಹಾರ್ಣವ" ವೆಂಬ ಗ್ರಂಥವನ್ನು ರಚನೆ ಮಾಡಿಕೊಟ್ಟು ಅವನನ್ನು ಉದ್ಧರಿಸಿದರು.

॥ ಪದ ॥ ಹುಡುಗನ ಹೆಗಲೇರಿ । ಗುಡಿಸುತ್ತ ತಿರುಗಿದ ।
ಕಡಲುಲಿ ಭಂಗಿಸಿ । ಗುಡುಗಿದ ವೇದವ ॥
ಕಡುಗತ್ತಲೆಯಲಿ । ಅಡಿ ನಖ ತೇಜದಿ ।
ನಡೆಸಿದ ಪಾಠವ । ಬೆಡಗೆನಿಸಲು ಜಗದಿ ॥ ೩೬ ॥

**ಅರ್ಥ:** ಕಡಲುಲಿ = ಸಮುದ್ರ ಘೋಷ:

**ವಿಶೇಷಾರ್ಥ:** ಶ್ರೀಮಧ್ವಾಚಾರ್ಯರು ವಿನೋದ ಶೀಲರು "ವೇದಶಾಸ್ತ್ರ ವಿನೋದೇನಾ । ಪ್ರೀಣಯನ್ ಪುರುಷೋತ್ತಮ" ಎಂದು ಹೇಳುತ್ತಿದ್ದರು. ಶಾಸ್ತ್ರಗಳನ್ನು ಅಧ್ಯಯನ ಮಾಡಿದ ಮಾತ್ರಕ್ಕೆ ಯಾವಾಗಲೂ ಹರಳೆಣ್ಣೆಯನ್ನು ಕುಡಿದಂಥ ಮುಖವನ್ನೇನೂ ಹೊಂದಬೇಕಾಗಿಲ್ಲ ಎಂಬುದು ಆಚಾರ್ಯರ ಅಭಿಮತ.

ಶ್ರೀಮಧ್ವಾಚಾರ್ಯರು ಬಹು ಜನ ಶಿಷ್ಯರಿಗೆ ಪಾಠವನ್ನು ಹೇಳುತ್ತಿದ್ದರು. ಅವರು ಆಗಾಗ ವಿದ್ಯಾರ್ಥಿಗಳೊಡನೆ ಹಲವು ಬಗೆ ಆಟಗಳನ್ನು ಆಡುತ್ತಿದ್ದರು. ಆಚಾರ್ಯರು ಒಮ್ಮೊಮ್ಮೆ ಕೆಲವರನ್ನು ಗೆಲ್ಲುತ್ತಿದ್ದರು. ಕೆಲವರಿಗೆ ಸೋಲುತ್ತಲೂ ಇದ್ದರು. ಸೋತ ವಿದ್ಯಾರ್ಥಿಗಳನ್ನು ಗೆದ್ದ ವಿದ್ಯಾರ್ಥಿಗಳು ಪರಿಹಾಸ್ಯ ಮಾಡುತ್ತಿದ್ದರು. ಆಗ ಆಚಾರ್ಯರ ವಿನೋದವು ಹೇಗಿರುತ್ತಿತ್ತೆಂದರೆ ಅವರು ಗೆದ್ದವನನ್ನು ಹತ್ತಿರ ಕರೆದು ಹೇಳುತ್ತಿದ್ದರು. ಅವನು ಆಚಾರ್ಯರನ್ನು ಎತ್ತಬೇಕು ಎಂದು ಆಗ ಬಲಶಾಲಿಯಾದ ವಿದ್ಯಾರ್ಥಿಗಳು ಬಂದು ಓಹೋ, ಅದೇನು, ಮಹಾ, ನಾನು ಎತ್ತುತ್ತೇನೆ" ಎಂದು ಮುಂದೆ ಒಂದು ಕೈ ಹಾಕಿದರೆ ಆಚಾರ್ಯರು ಕದಲುತ್ತಿದ್ದರೆ ಹೇಳಿ. ಆಗ ವಿದ್ಯಾರ್ಥಿಗಳು "ಅಬ್ಬಾ, ಇದೇನು? ಆಚಾರ್ಯರು ಬೆಟ್ಟದ ಮರಿ" ಎನ್ನುತ್ತಿದ್ದರು. ಆಗ ಆಚಾರ್ಯರು "ಎಲಾ, ನಾನಲ್ಲಿ ಭಾರವಾಗಿದ್ದೇನೋ? ನೋಡು, ಆ ನಾಣಿ (ಹುಡುಗನೊಬ್ಬ) ಯನ್ನು ಕರೆ. ಅವನು ನನ್ನನ್ನು ಎತ್ತಿ ಬಿಡುತ್ತಾನೆ. ಬೇಕಾದರೆ ಪರೀಕ್ಷಿಸಿರಿ" ಎಂದು ಹೇಳುತ್ತಲೇ ಎಲ್ಲರಿಗಿಂತಲೂ ದುರ್ಬಲನಾಗಿ ಕಾಣುತ್ತಿದ್ದ ಆ ಬಾಲಕನನ್ನು ಕಂಡು ಎಲ್ಲರೂ ನಕ್ಕು ಪರಿಹಾಸ್ಯ ಮಾಡಿದರು. ಆದರೆ ಆಚಾರ್ಯರು ಅವನ ಬೆನ್ನನ್ನು ಚಪ್ಪರಿಸಿ ಹೊತ್ತುಕೋ ಎಂದು ಹೇಳುತ್ತಾ ಬಾಲಕನ ಭುಜದ ಮೇಲೆ ಕುಳಿತರು. ಎಲ್ಲರಿಗೂ ಆಶ್ಚರ್ಯವೋ ಆಶ್ಚರ್ಯ. ಆ ಬಾಲಕನು ಆಚಾರ್ಯರನ್ನು ಹೊತ್ತು ಕೊಂಡು ಅನಾಯಾಸವಾಗಿ ಅನಂತೇಶ್ವರ ದೇವಾಲಯವನ್ನು ಮೂರು ಸುತ್ತು ಪ್ರದಕ್ಷಿಣೆ ಮಾಡಿದನು. ಶ್ರೀಮಧ್ವಾಚಾರ್ಯರು ಅಣಿಮಾದಿ ಅಷ್ಟಸಿದ್ಧಿಯಿಂದ ಈ ತೆರನಾದ ಅನೇಕ ಮಹಿಮೆಗಳನ್ನು ಪ್ರಕಟಿಸಿದ್ದಾರೆ.

ಒಮ್ಮೆ ಆಚಾರ್ಯರು ಕಡಲ ತೀರಕ್ಕೆ ಸ್ನಾನಕ್ಕೆ ಹೋಗಿದ್ದಾಗ ಮಂತ್ರೋಚ್ಚಾರಣೆಯನ್ನು ಮಾಡುತ್ತಿದ್ದರು. ಆಗ ಸಮುದ್ರತೆರೆಗಳ ಘೋಷಣೆಯು ಬಲವಾಗಿದ್ದು ಆಚಾರ್ಯರ ವಾಣಿಯು ಕೇಳಿಸುತ್ತಿರಲಿಲ್ಲ. ಆಗ ಶಿಷ್ಯರ ಪ್ರಾರ್ಥನೆಯನ್ನು ಲಾಲಿಸಿದ ಅವರು ಸಮುದ್ರ ಘೋಷವನ್ನು ಮೀರಿಸುವ ಸ್ವರ, ಸಸ್ವರ ಪೂರ್ವಕವಾಗಿ ವೇದ ಘೋಷವನ್ನು ಮಾಡಿದರು. ಆಗ ಶಿಷ್ಯ ಸಮುದಾಯವು ಆನಂದಭರಿತವಾಯಿತು. ಸಮುದ್ರದ ಘೋಷಣೆಯು ವಾಯುದತ್ತ ಲೇಶ ಮಾತ್ರ ಘೋಷಾಂಶವೆಂದು ದೇವತೆಗಳು ತಿಳಿದರು. ಶ್ರೀಮಧ್ವಾಚಾರ್ಯರ ಲೇಶ ಘೋಷವೇ ಸಮುದ್ರ ಘೋಷವನ್ನು ಓಂಗಿಸಿತು.

ಒಮ್ಮೆ ಶ್ರೀಮಧ್ವಾಚಾರ್ಯರು ರಾತ್ರಿ ಸಮಯದಲ್ಲಿ ಪಾಠವನ್ನು ಹೇಳುತ್ತಿರುವಾಗ ದೀಪವು ಶಾಂತವಾಯಿತು. ಆಗ ಶಿಷ್ಯರು ಚಿಂತಾಕುಲಿತರಾದರು. ತಕ್ಷಣವೇ ಶ್ರೀಮಧ್ವರು ತಮ್ಮ ಅಂಗುಷ್ಠದ ಉಗುರಿನಿಂದಲೇ ದೇದೀಪ್ಯಮಾನವಾದ ಪ್ರಕಾಶವನ್ನು ಬೀರಿ ಸಿದ್ಧಾಂತ ಪಾಠವನ್ನು ಮುಂದುವರಿಸಿದರು. ಅಸ್ಮದಾದಿಗಳಿಗೆ ಇದು ಆಶ್ಚರ್ಯಕರವಾದರೂ ಯಾವ ಭಾಗಣ ಶೇಷ್ಠರಾದ ಸೂರ್ಯ, ಚಂದ್ರ, ಅಗ್ನಿಗಳು ಯಾರ ಅನುಗ್ರಹದಿಂದ ತಮ್ಮ ತೇಜಸ್ಸುಗಳನ್ನು ಹೊಂದಿರುವರೋ, ಈ ತೇಜೋರಾಶಿಗಳು ಯಾವ ರುದ್ರನ ಏಕದೇಶಾಂಗಗಳೆನಿಸಿ ನೇತ್ರ ತ್ರಯರೆನಿಸಿರುವರೋ ಅಂಥಾ ರುದ್ರದೇವರು ಯಾವ ಆಚಾರ್ಯರ ಕೃಪಾಕಟಾಕ್ಷ ವೀಕ್ಷಣೆಗಾಗಿ ಕಾತರಿಸುತ್ತಿರುವರೋ ಅಂಥಾ ಶ್ರೀಮಧ್ವಚಾರ್ಯರಿಗೆ ಇದೇನು ಆಶ್ಚರ್ಯಕರವಾಗಿ ಇರಲಿಲ್ಲ. ಇದು ವೇದವಾಣಿಯೇ ಆಗಿದೆ.

॥ ಪದ ॥ ಊರ್ಧ್ವ ಪುಂಡ್ರ ಪಂಚ । ಮುದ್ರೆ ಏಕಾದಶಿ ।
ಕಾದಾಯುಧ ವಿಧಿ । ಭೇದಗಳ ॥
ತಾ ದಯದಿಂದಲಿ । ಸಾಧು ಜನಕೆ ತೋರಿ ।
ಮಾಧವನರ್ಚಿಸಿ । ಬದರಿಗೆ ಪೋಗುತ ॥ ೩೭ ॥

**ಅರ್ಥ:** ಊರ್ಧ್ವಪುಂಡ್ರ = ದ್ವಾದಶನಾಮಗಳು; ಪಂಚಮುದ್ರೆ = ಚಕ್ರ, ಶಂಖ, ಗದ, ಪದ್ಮ, ನಾರಾಯಣಮುದ್ರೆ; ಏಕಾದಶಿ ಎಂಬ ವ್ರತಸಹಿತವಾಗಿ;; ಕಾದಾಯುಧ ವಿಧಿ = ತಪ್ತಮುದ್ರೇ ಸುದರ್ಶನ ಹೋಮ ಮುಖಾಂತರ ಚಕ್ರ, ಶಂಖ ಮುದ್ರೆಗಳನ್ನು ಕಾಯಿಸಿ ಭುಜಗಳ ಮೇಲೆ ಧರಿಸುವ ದೀಕ್ಷಾ ಬದ್ಧವಾದ ಆಚರಣೆ; ಭೇದಗಳ = ಪಂಚ ಭೇದ, ತಾರತಮ್ಯ, ಜಗತ್ಸತ್ಯತ್ವ, ಹರಿ ಸರ್ವೋತ್ತುಮತ್ವ, ವಾಯು ಜೀವೋತ್ತುಮತ್ವ ಉಪಾಸನಾ ಕ್ರಮಗಳನ್ನು; ತಾ = ಶ್ರೀಮಧ್ವರು; ದಯದಿಂದ = ಅಂತಃಕರಣದಿಂದ; ತೋರಿ = ಬೋಧಿಸಿ; ಸಾಧು ಜನಕೆ = ಮುಕ್ತಿಯೋಗ್ಯರಿಗೆ; ಮಾಧವನರ್ಚಿಸಿ = ಶ್ರೀಕೃಷ್ಣನನ್ನು ಉಡುಪಿಯಲ್ಲಿ ಪ್ರತಿಷ್ಠಿಸಿ; ಬದರಿಗೆ ಪೋಗುತ = ಬದರಿಕಾಶ್ರಮದಲ್ಲಿ ಶ್ರೀವೇದವ್ಯಾಸರ ಸನ್ನಿಧಾನಕ್ಕೆ ತೆರಳಿ (ಒಂದು ಅಂಶದಿಂದ ಉಡುಪಿಯಲ್ಲಿ ಇದ್ದು)ದರು.

**ವಿಶೇಷಾರ್ಥ:** ಶ್ರೀಮಧ್ವಾಚಾರ್ಯರು ಅಸೂರ್ಯವೂ, ಉಗ್ರವೂ, ಅಸದುಪಾಸಕಗಳೂ ಆದ ತಿರ್ಯಕ್ಪುಂಡ್ರ, ರುದ್ರಾಕ್ಷ, ಭಸ್ಮ ವಿಲೇಪನ, ಕ್ಷುದ್ರ ದೇವತೋಪಾಸನ, ಹರಿ, ವಾಯು, ದೇವತಾದಿಗಳನ್ನು ಪೃಥಕ್, ಪೃಥಕ್ ಚಿಂತನೆಯಿಂದ ಅರ್ಚಿಸುವುದು ಇತ್ಯಾದಿಯಾದ ಮೋಹಕ ಆಚರಣೆಗಳನ್ನು ಸುಭದ್ರವಾದ ಶಾಸ್ತ್ರಾಧಾರಗಳಿಂದ ಖಂಡಿಸಿ ಸದಾಚಾರಗಳನ್ನು ಪುನಃ ಸ್ಥಾಪಿಸಿದರು.

"ತಿರ್ಯಕ್ಪುಂಡ್ರಂ ನಕುರ್ವೀತ ಸಂಪ್ರಾಪ್ರೇಮರಣೇಪಿವಾ" ಭಸ್ಮವನ್ನು ಧರಿಸದಿದ್ದರೆ ಮರಣದಂಡನೆಯನ್ನು ವಿಧಿಸುತ್ತೇವೆ ಎಂದರೂ ಸರಿ. ಅದನ್ನು ಮುಕ್ತಿಯೋಗ್ಯರು ಅನುಸರಿಸಬಾರದು ಎನ್ನುತ್ತದೆ ಸಿದ್ಧಾಂತ. ಹಾಗಿದ್ದರೆ ಶಂಕರನೂ ಅನೇಕ ಋಷಿಗಳೂ ಯಾಕೆ ಭಸ್ಮವನ್ನು ಧರಿಸಿದರು ಎಂದರೆ ಶ್ರೀವಿಜಯದಾಸರು ಹೇಳುತ್ತಾರೆ:-

"ಭಸುಮವ ಋಷಿಗಳು ರಚಿಸಿದರೆಂದಿಯಾ । ಅಸುರರ ಮೋಹಕ ಲೇಪಿಸಿದರು । ಪುಶಿಯ ತೋರಿದರು ಡಂಬಕವ ಮಾಡಿ।ದಶಶಿರ ಬಾಣ ಜರಾಸಂಧ ಮಿಕ್ಕ ತಾಮಸರೇನಾದರು । ಪಶುಜ್ಞಾನಿ ಮಜನೆ । ಹಸಿದು ಸೇವಿಸಿದರೆ ವಿಷ ಪ್ರೀತಿಯಾಗೋದೇ ॥

"ಕೈಲಾಸಾಧಿಪತಿ ತನ್ನ ಊಳಿಗದವರೀಗೆ । ಕೀಳು ಭೂತ ಪ್ರೇತ ಅಶುಚಿ ಇದ್ದವರಿಗೆ । ಶ್ರೀಲೋಲನ ಊರ್ಧ್ವಪುಂಡ್ರ ಸಲ್ಲಿದು ಎಂದು । ಹೇಳಿದನು. ಭಸುಮವ ಧರಿಸಿ ಸುಡಗಾಡಲಿ । ಕಾಲವ ಕಳೆದು ಪೆಣವ ಭಕ್ಷಿಸಿ ಎಂದು ವಾಲಗವಿತ್ತು ತಾ ಹರುಷದಿಂದ । ಕಾಲ ನಾಮಕ ವಿಜಯವಿಠ್ಠಲನ್ನ ಪಾದಾಂಬುಜ । ಮೌಳಿಯಲ್ಲಿಟ್ಟು ಧನ್ಯನನಿಸಿಕೊಂಡ ॥ ೪೧ ॥

"ಊರ್ಧ್ವಪುಂಡ್ರ ಮೃಜಂ ಸೌಮ್ಯಂ । ಲಲಾಟೇ ಯದ್ಯಸ್ಯತೆ । ಸಚಂಡಾಲೋಽಪಿ ಶುದ್ಧಾತ್ಮಾ ಪೂಜ್ಯಯೇವ ನಸಂಶಯಃ ॥ ಯಜ್ಞೋ ದಾನ ತಪೋ ಹೋಮ । ಸ್ವಾಧ್ಯಾಯಃ ಪಿತೃ ತರ್ಪಣಂ ॥ ವ್ಯರ್ಥಂಭವತಿ ತತ್ಸರ್ವಂ ।

ಊರ್ಧ್ವ ಪುಂಡ್ರಂ ವಿನಾ ಕೃತಂ ॥" ಎಂದು ನೃಸಿಂಹ ಪುರಾಣವು ಹೇಳುತ್ತದೆ.

ಗೋಪೀಚಂದನಧಾರಣೆಯನ್ನು ವರಾಹೋಪನಿಷತ್ತು ವಿಧಿಸಿರುತ್ತದೆ ಹಾಗೂ ಪದ್ಮಪುರಾಣ, ನೃಸಿಂಹಪುರಾಣ, ಭಾಗವತ, ವಿಷ್ಣುರಹಸ್ಯಾದಿ ಗ್ರಂಥಗಳಲ್ಲೂ ವಿಸ್ತಾರವಾಗಿ ಹೇಳಲಾಗಿದೆ. ನಾಮಗಳಿಗೆ ಕೇಶವಾದಿ ಮಂತ್ರಗಳನ್ನೂ ಆಕಾರಗಳನ್ನೂ, ಹೆಚ್ಚುವ ಸ್ಥಳಗಳನ್ನೂ ವಿಶದವಾಗಿ ಕ್ರಮಬದ್ಧವಾಗಿ ಅಲ್ಲಿ ವಿಧಿಸಿರುತ್ತಾರೆ. ಗೋಪೀಚಂದನವನ್ನು ಧರಿಸದವನು ಯಾತಕ್ಕೂ ಸಲ್ಲ. "ಮಧ್ವ ಮತವ ಪೊಂದದವನ ಜನ್ಮ ವ್ಯಾತಕೆ? ಊರ್ಧ್ವ ಪುಂಡ್ರ ತಿದ್ದದವನ ಕರ್ಮವ್ಯಾತಕೆ" ಎಂದರು ಶ್ರೀವಿಜಯದಾಸರು.

ಪಂಚಮುದ್ರೆಗಳಾದ ಚಕ್ರ, ಶಂಖ, ಗದಾ, ಪದ್ಮ ಮತ್ತು ನಾರಾಯಣ ಮುದ್ರೆಗಳನ್ನು ಕ್ರಮವರಿತು ಧರಿಸಬೇಕು. ಇದು ದೀಕ್ಷಾಬದ್ಧವಾದುದು. "ಅಂಕಿತಂ ಶಂಖ ಚಕ್ರಾದ್ಯೈ । ರ್ವಿಷ್ಣುದೀಕ್ಷಾನ್ವಿತಂ ನರಂ ॥" ಎನ್ನುತ್ತದೆ, ವಿಷ್ಣುರಹಸ್ಯ. ಅಲ್ಲಿ ಕ್ರಮವಾಗಿ ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ, ವಾಸುದೇವ, ನಾರಾಯಣ ರೂಪಗಳಿಂದ ಶ್ರೀಹರಿಯು ನೆಲಸಿರುತ್ತಾನೆ. ಇನ್ನು ತಪ್ತ ಮುದ್ರಾಧಾರಣೆಯು ವಿಷ್ಣು ರಹಸ್ಯದಲ್ಲಿ ಹೇಳಿರುತ್ತದೆ.

> **"ತಪ್ತ ಚಕ್ರಂ ಭುಜೇಯಸ್ಯ । ವಿಪ್ರಾದೇರ್ಯಸ್ಯ ಕಸ್ಯವಾ।**
> **ವಿಷ್ಣುರೇವಹಿ ಸಾಮೂರ್ತೀ । ರ್ನಾಮಮನ್ಯೇತ ಕರ್ಹಿಚಿತ್ ॥ ೭-೫೭)**

ಊರ್ಧ್ವ ಪುಂಡ್ರ, ಮುದ್ರಾ ತಪ್ತಮುದ್ರಾಂಕಿತರಲ್ಲದವರು ಏನು ಮಾಡಿದರೂ ಅವರ ಕರ್ಮಗಳು ವ್ಯರ್ಥ ಎನ್ನುತ್ತಾರೆ ಶ್ರೀವಿಜಯದಾಸರು. ಯಾರೇ ಪಂಡಿತರಿರಲಿ, ಸನ್ಯಾಸಿ ಇರಲಿ, ಸಂತ, ಜೋಗಿ ಇರಲಿ. ಅತನು ತಪ್ತ ಮುದ್ರೆಯನ್ನು ಧರಿಸಿಲ್ಲವಾದರೆ ನಿಷ್ಪ್ರಯೋಜಕನೆಂದು ಶಾಸ್ತ್ರಾಧಾರವಾಗಿ ಶ್ರೀವಿಜಯದಾಸರು ಹೀಗೆ ಹೇಳಿರುತ್ತಾರೆ.

"ತಪುತ ಮುದ್ರೆಗಳಿಲ್ಲ ದಂಥ ಮಾನವ ನಿನ್ನ । ಅಪರೋಕ್ಷಿಕರಿಸಿ ಪ್ರತ್ಯಕ್ಷ ಕಾಣತಲಿರೆ । ಉಪಚಾರವನು ಮಾಡೆ ಜನ್ಮ ಜನ್ಮಾಂತರಕೆ ನಾನು । ತಪಸಿಯಾದರು ಆಗುವೆ ನಮಿಸೆನೊ ನಮಿಸೆನೋ । ಅಪವರ್ಗವಾಗಲಿ, ಸ್ವರ್ಗವಾಗಲಿ ಯಮನು । ಕುಪಿತದಲಿ ಒಯ್ದು । ತಪಿಸಿದರಾದರು । ತಪುತ ಮುದ್ರಾ ಹೀನ ನಿನ್ನ ನೋಡಿದರೇನು । ಕಪಿಯ ಕಯ್ಯಲಿ ಮಣಿ ಮಾಲೆ ಸಿಕ್ಕಿದಂತೆ । ಕೃಪಣವತ್ಸಲ ನಮ್ಮ ವಿಜಯವಿಠ್ಠಲರೇಯ । ಕೃಪೆ ಮಾಡಿದರೆ ಲೇಸು ಮಾಡದಿದ್ದರೆ ಲೇಸು".

ಊರ್ಧ್ವಪುಂಡ್ರ, ತಪ್ತ ಮುದ್ರ, ಶ್ರೀಹರಿಯ ಅಂತರ್ಯಾಮಿತ್ವ, ವಾಯು ಸನ್ನಿಧಾನ ಚಿಂತನೆ, ತುಲಸೀರ್ಮಣಿ, ಶ್ರೀಹರಿ ನಾಮೋಚ್ಚಾರಣೆ, ಸದ್ವೈಷ್ಣವ ಮೈತ್ರಿ ಇತ್ಯಾದಿ ಸಾತ್ವಿಕ ಧರ್ಮಗಳಿಂದಲೇ ಶ್ರೀಹರಿಯು ಪ್ರೀತನಾಗುವನು ಎಂಬ ಸತ್ತತ್ವಗಳನ್ನು ಶ್ರೀಮಧ್ವಾಚಾರ್ಯರು ಪ್ರತಿಪಾದಿಸಿದರು. ಪಂಚಭೇದ, ತಾರತಮ್ಯ ಜ್ಞಾನವೇ ನಿಜವಾದ ಜ್ಞಾನ. ವೀರವೈಷ್ಣವನಾದವನು ಏಕಾದಶಿ ವ್ರತವನ್ನು ತಪ್ಪದೇ ಮಾಡಬೇಕು. ಸಕಲ ಪಾಪ ಪ್ರಾಯಶ್ಚಿತ್ತ ರೂಪವಾದ ಏಕಾದಶಿಯನ್ನು ಮಾಡಿದರೆ ಪಾಪ ಮುಕ್ತನಾಗುತ್ತಾನೆ. ತಪ್ಪಿದರೆ ಸಕಲ ಪಾಪಭಾಗಿಯಾಗುತ್ತಾನೆ. ಯಾಕೆಂದರೆ "ಯಾನಿ ಕಾನಿಜ ಪಾಪಾನಿ । ಬ್ರಹ್ಮಂಡಂತರ್ಗತಾನಿಚ ॥ ಅನ್ನಮಾಶ್ರಿತ್ಯ ತಿಷ್ಠಂತಿ । ಸಂಪ್ರಾಪ್ತೇ ಹರಿವಾಸರೇ ॥"

ಅಂದರೆ ಏಕಾದಶಿಯು ಬಂದರೆ ಸಕಲ ಪಾಪಾಭಿಮಾಗಿ ದೈತ್ಯರು ತಿಂಡಿ, ತಿನಿಸು, ಅನ್ನ ಪಾನಗಳಲ್ಲಿ ಆವಿಷ್ಠರಾಗಿರುತ್ತಾರೆ. ಅವರು ಅಂದು ಏನೇ ಭಕ್ಷಿಸಿದರೂ ಅದರ ಮುಖಾಂತರವಾಗಿ ಭಕ್ಷಕರ ದೇಹ, ಮನಸ್ಸುಗಳಲ್ಲಿ ಪ್ರವೇಶಿಸಿ ಪಾಪಕರ್ಮಗಳಿಗೆ ಪ್ರೇರಕರಾಗುತ್ತಾರೆ. ಅಂದು ನಿಖರವಾಗಿ ಶಾಲಗ್ರಾಮ, ತೀರ್ಥ, ಊರ್ಧ್ವಪುಂಡ್ರ, ತುಲಸಿ ನಿರ್ಮಾಲ್ಯಗಳಿಂದ ಭೂಷಿತನಾಗಿ ಉಪವಾಸ ಜಾಗರಣೆ, ಸಕಾಲಕ್ಕೆ ದ್ವಾದಶಿ ಪಾರಣೆಗಳನ್ನು ಮಾಡಿದರೆ ದೇವತೆಗಳಂತೆ ದೇಹದಲ್ಲಿ ವ್ಯಾಪಿಸಿಕೊಂಡಿರುವ ಸಕಲ ಪ್ರತಿಸ್ಪರ್ಧಿ ದೈತ್ಯರು ನಾಶವಾಗುತ್ತಾರೆ. ಇದು ಮುಕ್ತಿಗೆ ಸಾಧಕವೆಂದು ಶ್ರೀಮಧ್ವರು ಸಾರಿದರು.

ಶ್ರೀಮಧ್ವಾಚಾರ್ಯರ ಸಿದ್ಧಾಂತಗಳನ್ನು ಪ್ರತಿಪಾದಿಸಲಿಕ್ಕೆ ಟೀಕೆ, ಟಿಪ್ಪಣಿಗಳು ಇವುಗಳಿಗೆ ಬೆನ್ನಲು ಬಾಗಿ ವ್ಯಾಸಪ್ರಣೀತ ಮೂಲ ಗ್ರಂಥಗಳೂ ಉಪಲಬ್ದಗಳಾಗಿ ಸೂರ್ಯಪ್ರಕಾಶವನ್ನು ಹೊಂದಿರುತ್ತವೆ. ದೇವಾಂಶ ಸಂಭೂತರಾದ ಅಪರೋಕ್ಷ ಜ್ಞಾನಿಗಳು ಶ್ರೀಮಧ್ವಸಿದ್ಧಾಂತವನ್ನು ಅನುಮೋದಿಸಿ ಭಗವತ್ಕೃಪೆಗೆ ಪಾತ್ರರಾಗಿದ್ದಾರೆ. ಅಸಂಖ್ಯಾತ ಹರಿದಾಸರು ಒಕ್ಕೊರಲಿನಿಂದ ಶ್ರೀಮಧ್ವರನ್ನು ಕೊಂಡಾಡಿ ಲಕ್ಷಗಟ್ಟಲೆ ದೇವರ ನಾಮಗಳನ್ನು ರಚಿಸಿ ಅವರ ಸಿದ್ಧಾಂತವನ್ನು ಎತ್ತಿ ಹಿಡಿದಿದ್ದಾರೆ. ಮೋಕ್ಷದಲ್ಲಿ ನಂಬಿಕೆ, ತಮಸ್ಸಿನ ಭೀತಿ ಇದ್ದರೆ ಅವರಿಗೆ ಆಸರೆಯಾಗಿ ಇರುವುದು ಒಂದೇ ಒಂದು ಮತ ಅದು "ಮಧ್ವ ಸಿದ್ಧಾಂತ"

"ಮಧ್ವ ಮತವೇ ಮತವು। ಸಕಲ ಶೃತಿ ಸಮ್ಮತವು" ಎಂದರು ಶ್ರೀವಿಜಯದಾಸರು ಮತ್ತು "ಮಧ್ವರಾಯರ ಸ್ಮರಣೆ । ಕುಲಕೋಟಿ ಉದ್ಧರಣೆ" ಎಂದರು

ಶ್ರೀಮಧ್ವಾಚಾರ್ಯರು ಸಮುದ್ರ ಸ್ನಾನಕ್ಕೆ ತೆರಳಿದ್ದರು ಆಗ ಬಿರುಗಾಳಿಯು ಬೀಸುತ್ತಿತ್ತು. ದೂರದಲ್ಲಿ ಒಂದು ಹಡಗು ಈ ಬಿರುಗಾಳಿಗೆ ಸಿಕ್ಕಿ ತಳ ಕಾಣುವುದರಲ್ಲಿತ್ತು. ಅಗ ಬಹಳ ಭಯವಿಹ್ವಲನಾಗಿದ್ದ ಪ್ರಧಾನ ನಾವಿಕನು ಶಿಷ್ಯ ಪರಿವಾರದೊಂದಿಗೆ ಸ್ನಾನಕ್ಕೆ ಬಂದಿದ್ದ ಆಚಾರ್ಯರನ್ನು ಕಂಡು ಕೈ ಮುಗಿದು ಪ್ರಾಣಭಿಕ್ಷೆಯನ್ನು ಬೇಡಿದನು. ದಯಾಮಯರಾದ ಶ್ರೀಮಧ್ವಾಚಾರ್ಯರು ತಮ್ಮ ಕೈಶಾಟಿ (ವಸ್ತ್ರ)ಯನ್ನು ಎತ್ತಿ ಹಿಡಿದು ಬಿರುಗಾಳಿಯನ್ನು ಶಾಂತಗೊಳಿಸಿದರು. ಮಾತ್ರವಲ್ಲ, ಆ ಹಡಗು ಮತ್ತು ನಾವಿಕರ ದಂಡು ಸುರಕ್ಷಿತವಾಗಿ ಸರಕಿನೊಡನೆ ತಾನಾಗಿಯೇ ದಡವನ್ನು ಸೇರುವಂತೆ ಮಾಡಿದರು. ಪ್ರಾಣ, ಪರಿವಾರ, ಸರಕಿನೊಡನೆ ಸಮುದ್ರ ತೀರವನ್ನು ಸೇರಿದ ನಾವಿಕನು ಬಹಳ ಭಕ್ತಿಸಂಪನ್ನನಾಗಿ ಬಂದು ಆಚಾರ್ಯರ ಚರಣ ಕಮಲಗಳಿಗೆ ಎರಗಿ ತನ್ನ ಅಂದಿನ ನಾವಭರಿತ ಸಮಗ್ರ ಐಶ್ವರ್ಯವೆಲ್ಲವೂ ನಿಮ್ಮದೇ ಸ್ವಾಮಿ ಎಂದು ಆಚಾರ್ಯರಿಗೆ ಅವನ್ನು ಸ್ವೀಕರಿಸಲು ಬೇಡಿದನು. ಆದರೆ ಶ್ರೀಮಧ್ವಾಚಾರ್ಯರು ಆ ನಾವಿಕನ ಐಶ್ವರ್ಯದ ಕಡೆಗೆ ನೋಡದೆ ಅದನ್ನು ಅವನಿಗೇ ನೀಡಿದರು. ಆಗ ನಾವಿಕನು ದುಂಬಾಲು ಬಿದ್ದು ಶ್ರೀಗಳ ಪಾದಗಳಿಗೆ ಎರಗಿ ಏನನ್ನಾದರೂ ಸ್ವೀಕರಿಸಿ ತನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಬೇಡಿಕೊಂಡನು. ಆಗ ಶ್ರೀಮಧ್ವಾಚಾರ್ಯರು ಹಡಗಿನ ಸಮತೋಲನಕ್ಕಾಗಿ ಅದರಲ್ಲಿ ಹೇರಿದ್ದ ಎರಡು ದೊಡ್ಡಗಾತ್ರದ ಗೋಪೀಚಂದನದ ಹೆಂಟೆಗಳನ್ನು ಮಾತ್ರ ಸ್ವೀಕರಿಸಿದರು. ಆ ಹಡಗು ಪಶ್ಚಿಮ ತೀರದ ದ್ವಾರಕಾದಿಂದಲೇ ಬಂದಿತ್ತು. ಆ ಹೆಂಟೆಗಳಲ್ಲಿ ಏನಿತ್ತು ಎಂಬುದು ಶ್ರೀಮಧ್ವಾಚಾರ್ಯರಿಗೆ ಮಾತ್ರ ಗೊತ್ತಿತ್ತು. ಆಚಾರ್ಯರು ಆರಿಸಿಕೊಂಡ ವಸ್ತುವು ನಾವಿಕನನ್ನು ಆಶ್ಚರ್ಯಗೊಳಿಸಿತು. ಅಂತೂ ಆ ಗೋಪೀಚಂದನದ ಉಂಡೆಗಳನ್ನು ಸ್ವೀಕರಿಸಿದ ಆಚಾರ್ಯರು ಅವುಗಳನ್ನು ಉಡುಪಿಗೆ ಸಾಗಿಸುವಾಗ ಸಮುದ್ರತೀರದಲ್ಲೇ ವಡಭಾಂಡೇಶ್ವರ ಎಂಬಲ್ಲಿ ಒಂದು ಉಂಡೆಯು

ಕಳಚಿಕೊಂಡಿತು. ಅದರ ಮಧ್ಯದಲ್ಲಿ ಇದ್ದ ಬಲರಾಮ ಮೂರ್ತಿಯನ್ನು ಕಂಡು ಎಲ್ಲರೂ ಚಕಿತರಾದರು. ಶ್ರೀಮಧ್ವರು ಆ ಬಲರಾಮ ಮೂರ್ತಿಯನ್ನು ಅಲ್ಲೇ ಪ್ರತಿಷ್ಠಾಪಿಸಿದರು. ಇಂದಿಗೂ ಆ ಮೂರ್ತಿಯನ್ನು ವಡಭಾಂಡೇಶ್ವರದಲ್ಲಿ ಕಾಣಬಹುದು.

ಮುಂದೆ ಉಳಿದ ಇನ್ನೊಂದು ಉಂಡೆಯನ್ನು ಸುರಕ್ಷಿತವಾಗಿ ಉಡುಪಿಗೆ ತೆಗೆದುಕೊಂಡು ಬಂದರು. ಅದನ್ನು ಶ್ರೀಮಧ್ವ ಸರೋವರದಲ್ಲಿ ಬಿಚ್ಚಿ ನೋಡಿದಾಗ ಅದರಲ್ಲಿ ಶ್ರೀಕಡಗೋಲನೇಣನ್ನು ಪಿಡಿದ ಶ್ರೀಕೃಷ್ಣನ ಮೂರ್ತಿಯು ಕಂಗೊಳಿಸಿತು. ಅದನ್ನು ಕಂಡ ಜನರು ಜಯ ಜಯಕಾರವನ್ನು ಮಾಡಿದರು. ಶ್ರೀಮಧ್ವರು ಆ ಮೂರ್ತಿಯನ್ನು ಶ್ರೀಮಧ್ವ ಸರೋವರದಲ್ಲಿ ಚೆನ್ನಾಗಿ ತೊಳೆದರು. ಆಚಾರ್ಯರ ಸ್ಪರ್ಶ ಮಾತ್ರದಿಂದಲೇ ಭಗವತ್ಸನ್ನಿಧಾನವು ಅಲ್ಲಿ ಉಂಟಾಯಿತು. ಮೊದಲು ಗೋಪೀಚಂದನದ ಸಹಿತವಾಗಿದ್ದ ವಿಗ್ರಹವನ್ನು ಒಬ್ಬನೇ ಹೊತ್ತನಾದರೂ ಆಚಾರ್ಯರ ಸ್ಪರ್ಶವಾದ ಮೇಲೆ ಗೋಪೀಚಂದನ ರಹಿತವಾದ ಆ ಕೃಷ್ಣ ಮೂರ್ತಿಯನ್ನು ಹತ್ತು ಜನರಿಂದಲೂ ಕದಲಿಸಲಿಕ್ಕಾಗಲಿಲ್ಲ. ಆಗ ಆಚಾರ್ಯರು ತಾವೊಬ್ಬರೇ ಅದನ್ನು ಹೆಗಲೇರಿಸಿ ತಂದು ಶ್ರೀಮಧ್ವ ಸರೋವರದ ದಡದ ಮೇಲೆ ಪ್ರತಿಷ್ಠೆ ಮಾಡಿದರು. ಅದನ್ನು ನಾವು ಇಂದಿಗೂ ಕಾಣುತ್ತಿದ್ದೇವಲ್ಲವೇ? ಹೌದು, ಕಾಣುತ್ತಿದ್ದೇವೆ. ಹಾಗಾದರೆ ಆ ಕೃಷ್ಣ ವಿಗ್ರಹದ ಹಿನ್ನೆಲೆ ಏನು? ಎಂದರೆ ಶ್ರೀವಿಜಯದಾಸರು ಹೇಳುತ್ತಾರೆ:-

ಧ್ರುವತಾಳ ಅಣಿ ಮೂರುತಿ ಪರಮಾಣು ಮೂರುತಿ ಇದೆ ।
ಘನ ಮೂರುತಿ ಮಹಾ ಘನ ಮೂರುತೀ ॥
ತೃಣಕಾಷ್ಟ ಮೊದಲಾದ ಪರಿಪೂರ್ಣ ಮೂರುತಿ ।
ಗುಣತ್ರಯಾತ್ಮಕವಾದ ಜ್ಞಾನ ಮೂರ್ತೀ ।
ಮನುಜೋತ್ತಮರವಿಡಿದು ವನಜಭವಾದ್ಯರ ।
ಮನಕೆ ಪೊಳೆವ ಚಿನುಮಯ ಮೂರುತೀ ।
ದನುಜ ಕುಲಕೆದಲ್ಲಣನಾದ ಮೂರುತಿ ।
ರಣದಿ ಪ್ರಾರ್ಥನ ತನುವ ಕಾಯ್ದಾ ಮೂರ್ತೀ॥

ಕ್ಷಣವಗಲದಲೆ ಜೀವನ ಕೂಡ ಇರುತಿಪ್ಪ ।
ಅನಿರುದ್ಧ ಮೂರುತಿ । ಅಚ್ಯುತ ಜನನಿ ಗೋಪಿಯ ಮುಂದೆ ಮೊಸರ ಕಡೆಯುವಾಗ ।
ಕುಣಿ ಕುಣಿದಾ ಮೂರ್ತಿ । ಕಣ್ಮಣಿ ಮೂರುತೀ ॥
ಮುನಿ ಮಧ್ವಕಾಯಗೆ ಒಲಿದಂಥಾ ಮೂರುತಿ ।
ನೇಣು ಕಡಗೋಲನ್ನ ಪಿಡಿದಾ ಮೂರ್ತೀ ಮೂರುತೀ ॥
ಏಣಾಂಕಪುರ ವಾಸ ಶ್ರೀ ವಿಜಯವಿಠ್ಠಲರೇಯಾ ।
ಕೃಷ್ಣಯ್ಯನಾ ಮೂರ್ತಿ ಕಮನೀಯ ಮೂರ್ತಿ ॥ ೧ ॥

ಮಟ್ಟತಾಳ:

ದ್ವಾರಾವತಿ ಎತ್ತ ಪಡುವಲ ದಿಕ್ಕತ್ತೆ । ವಾರಿಧಿನಿಧಿ ಎತ್ತ ಗೋಪೀಚಂದನವೆತ್ತ ॥
ಮಾರಾಟದ ಹಡಗು ಪೋಗಿ ಬರುವದೆತ್ತ । ಭಾರತಿ ಪತಿಯಾದ ಶ್ರೀಮಧ್ವ ಮುನಿ
ಈ ರೀತಿಯಾದಂಥ ಸಂಗತಿ ಅದು ಎತ್ತ । ತೋರಿದೆಯೋ ದೇವ ಮಹಾ ವಿಚಿತ್ರವ
॥ ಎತ್ತ ॥ ಆರು ಬಲ್ಲರೊ ನಿನ್ನ ಉಡುಪಿಯ ಶ್ರೀಕೃಷ್ಣ । ಜಾರ ಚೋರ ನಮ್ಮ
ಶ್ರೀವಿಜಯವಿಠ್ಠಲರೇಯ ॥ ೨ ॥

ತ್ರಿಪುಟತಾಳ:

ಅಂದು ದೇವಕಿ ದೇವಿ ದ್ವಾರಕ ಪುರದಲ್ಲಿ । ಒಂದು ದಿವಸ ನಿನ್ನ ಮಾಯಾ ಮುಸುಕೀ॥
ಕಂದ ನೀನಾಗಿ ಗೋಕುಲದಲ್ಲಿ ಗೋಪಿಯ । ಮುಂದೆ ಬಾಲಕನಾಗಿ ತೋರೀದಾಟಾ ॥
ಒಂದಾದರೆ ನೋಡಿದಣೆಯಲಿಲ್ಲವೋ ಮನಸು । ಎಂದೆನೆ ಜನನಿಯ ಮಾತಾ ಕೇಳೀ ॥
ನಂದನನಾಗಿ ತೋರುವೆನೆಂದು ನೆನೆದು ಗೋ । ವಿಂದನು ಗೋಪಳ್ಳಿಯಲಿ ನೆಲಸೀ ॥
ಒಂದೊಂದ ತೋರುತ್ತ ಬರಲದರೊಳಗಿದೆ । ಚಂದವಾದ ರೂಪ ಮನಕೆ ಪೊಳೆಯೇ॥
ನಿಂದಿರ ಪೇಳಿ ಮಗನ ನೋಡಿ ಮುದ್ದಾಡೀ । ತಂದೆ ಈ ರೂಪದಲ್ಲಿ ಭೂಮಿಯೊಳಗೇ ॥
ಕುಂದದರ್ಚನೆಗೊಂಡು ಕೀರ್ತಿ ಮರೆಯುವದೆಂದು । ಮಂದಾಹಾಸದಿ ಪೇಳೆ ಅದ ಕೈ
ಕೊಂಡೂ ॥
ಒಂದು ಕೈಯಲಿ ಕಡಗೋಲ ಪಿಡಿದು ಮ ತ್ತೊಂದು ಕಯ್ಯಲಿ ನೇಣ ಧರಿಸಿ ಬಾಲಾ ।
ನಂದದಿ ಇರಲಿತ್ತ ಭೈಷ್ಮೀ ವಿಶ್ವಕರ್ಮ । ನಿಂದಲಿ ಅದರಂತೆ ರಚಿಸ ಪೇಳೇ ॥
ನಂದದಿಂದಲಿ ತನ್ನ ಮೂಗುತ್ತಿಯನು ಇಟ್ಟು । ಸುಂದರ ವಿಗ್ರಹನೊಡನಾಡುತ್ತಾ ।
ಇಂದಿರೆ ಇರಲಿತ್ತ ಕಲಿಯುಗ ಬರೆ ಗೋಪಿ । ಚಂದನದೊಳು ನಿನ್ನ ಅಡಗಿಸಿಡಲು ॥
ಸಿಂಧುವಿನೊಳಗೊಬ್ಬ ಹಡಗಿನ ಒಳಗಿಟ್ಟು । ತಂದಿರೆ ತವಕದಿಂದಲಿ ಅಲ್ಲಿಂದ ।
ನಂದ ತೀರ್ಥರಿಗೊಲಿದು ಬಂದ ಉಡುಪಿಯ ಕೃಷ್ಣ । ಕಂದರ್ಪ ಪಿತನಮ್ಮ
ವಿಜಯವಿಠ್ಠಲರೇಯಾ ॥ ೩ ॥

ಅಟತಾಳ:

ಈ ಉಡುಪಿನ ಯಾತ್ರೆ ವೈಕುಂಠದಾಯಾತ್ರೆ । ಆವಮನು ಜಮಾಡೆ ಹೀನ ದುರಿತವನ।
ದಾವನ ಪಾವನ ಮಾಡುವ ಶೀಘ್ರದಿ । ಯಾವತ್ತು ಜನುಮದನೋವ ಕಳೆದು ತನ್ನ।
ಸೇವಕರೊಳಗಿಟ್ಟು ಅಪವರ್ಗವನೀವ । ದೇವನ ಕರುಣಕ್ಕೆ ಎಣೆಗಾಣೆ ಎಣೆಗಾಣೆ ।

ದೇವಕಿನಂದನ ಕೃಷ್ಣ ಮೂರುತಿಕರು ।ಣಾವನಧಿ ತಮ್ಮ ಶಿರಿವಿಜಯವಿಠ್ಠಲರೇಯಾ ।
ಜೀವೋತ್ತುಮಾ ಮಧ್ವ ಮುನಿಮನೆದೈವ ॥ ೪ ॥

ಆದಿತಾಳ:

ಇದೆ ಜನ್ಮಸಾರ್ಥಕ । ಇದೆ ಸರ್ವಕಾರ್ಯಸಿದ್ಧಿ । ಇದೆ ಇದೆ ಕುಲಕೋಟಿ ಉದ್ಧಾರ ನಿರ್ಧಾರ ।
ಇದಕಿಂತ ಅಧಿಕಿಲ್ಲ । ಇದಕೆ ಸಮಾನವಿಲ್ಲ । ಇದೆ ಮುಖ್ಯಯಾತ್ರೆ ಎನ್ನಿ ಇದೆ ಯದುಪನ ದಿವ್ಯ ।
ಪದಗಳನೊಮ್ಮೆ ನೋಡೆ । ಪದವಿಗೆ ಸೋಪಾನ । ಮುದದಿಂದ ಸಿದ್ದವಕ್ಕು
ಸದಮಲಾನಂದ ಮುನಿ । ಹೃದಯದಿ ನೆಲಸಿಪ್ಪ । ಮುದ್ದು ಕೃಷ್ಣನ ಸಿರಿ । ವಿಧಿ
ಭವಾರ್ಚಿತ ನಮ್ಮ ವಿಜಯವಿಠ್ಠಲ ಪಡು॥
ಉದಧಿಯಲಿ ಕದಲಿದಲಿಪ್ಪ । ಇದೇ ದ್ವಾರಕಿ ಎಂದೂ ॥ ೫ ॥
ಜತ್ತೆ ಮಧ್ವ ಸರೋವರ ಸ್ನಾನ । ಮುದ್ದು ಶ್ರೀಕೃಷ್ಣನಾ ಧ್ಯಾನ ।
ಶುದ್ಧವಾಗೀ ಮಾಡೇ ಶ್ರೀ। ವಿಜಯವಿಠ್ಠಲ ಕಾವಾ ॥ ೬ ॥

ಇಂತು ಪ್ರಾಪ್ತವಾದ ಈ ಶ್ರೀಕೃಷ್ಣನಿಗೆ ದ್ವಾಪರ ಯುಗದಲ್ಲಿ ಅಷ್ಟ ಮಹಿಳೆಯರ ಸಹಿತವಾಗಿ ಷೋಡಶ ಸಹಸ್ರ ಗೋಪಿಕಾ ಸ್ತ್ರೀಯರು ಶ್ರೀಕೃಷ್ಣನ ವಿಗ್ರಹಕ್ಕೆ ನಿತ್ಯವೂ ದೇವಮಾನ ಗಾತ್ರದ ಗಂಧದ ಉಂಡೆಗಳಿಂದ ಅರ್ಚಿಸುತ್ತಿರುವಾಗ ಆ ವಿಗ್ರಹವು ಆ ಗಂಧದ ರಾಶಿಯಲ್ಲಿ ಅಡಗಿತ್ತು. ಅದು ಕಾಲಾಂತರದಲ್ಲಿ ಭೂಗತವಾಗಿ ಸೀತೋಷ್ಣ, ಮೃತ್ತಿಕಾ ಸಂಬಂಧದಿಂದ ಇಂದಿಗೆ ಅಗಾಧವಾದ ಪ್ರಮಾಣದಿಂದ ಗೋಪೀಚಂದನವಾಗಿ ಪರಿವರ್ತನೆಗೊಂಡು ಲಭಿಸುತ್ತಿದೆ. ಶ್ರೀಹರಿ ನಿರ್ಮಾಲ್ಯವನ್ನು ಸ್ವೀಕರಿಸದೆ ಯಾವ ಕರ್ಮಗಳನ್ನು ಮಾಡಿದರೂ ಸರಿ. ಅದು ನಿಷ್ಫಲವಾಗುತ್ತದೆ. ನಿರ್ಮಾಲ್ಯ ತೀರ್ಥಮಾಡಲಿಕ್ಕೆ ಮುಂಚಿತವಾಗಿ ನಿರ್ಮಾಲ್ಯವನ್ನು ಧರಿಸಬೇಕು. ಆದರೆ ಅದು ಹೇಗೆ ಸಾಧ್ಯ? ಎಂದರೆ ಸಿದ್ಧ ನಿರ್ಮಾಲ್ಯವೇ ಆದ ಗೋಪೀಚಂದನವನ್ನು ಮೊದಲು ಧರಿಸಿ ಆಮೇಲೇ ಆಚಮನ.

"ಯಜ್ಞೋದಾನ ತಪೋಹೋಮ । ಸ್ವಾಧ್ಯಾಯಃ ಪಿತೃತರ್ಪಣಂ ॥
ವ್ಯರ್ಥಂ ಭವತಿ ತತ್ಸರ್ವಂ । ಊರ್ಧ್ವಪುಂಡ್ರಂ ವಿನಾ ಕೃತಂ ॥ ಎಂದರು
ಶ್ರೀಮಧ್ವಾಚಾರ್ಯರು.

ಹೀಗೆ ಶ್ರೀಮಧ್ವಾಚಾರ್ಯರು ಉಡುಪಿಯಲ್ಲಿ ಶ್ರೀಕೃಷ್ಣನನ್ನು ಪ್ರತಿಷ್ಠಾಪಿಸಿದ ಮೇಲೆ ಅವನ ಪೂಜಾರ್ಥವಾಗಿ ಅಷ್ಟ ಮಠಗಳನ್ನು ಸ್ಥಾಪಿಸಿ ಅಷ್ಟ ಶಿಷ್ಯರಿಗೆ ಸನ್ಯಾಸಾಶ್ರಮವನ್ನು ನೀಡಿ ಪ್ರತಿಯೊಬ್ಬ ಯತಿಯು ಎರಡು ತಿಂಗಳಿಗೊಮ್ಮೆ ಪರ್ಯಾಯ ಕ್ರಮದಿಂದ ಪೂಜೆಯನ್ನು ಮಾಡಿಕೊಂಡು ಬರುವ ವ್ಯವಸ್ಥೆಯನ್ನು ಮಾಡಿದರು. (ಕಾಲಾಂತರದಲ್ಲಿ ಶ್ರೀವಾದಿರಾಜರು ಈ ಪದ್ಧತಿಯನ್ನು ಎರಡು ವರ್ಷಗಳಿಗೆ ಮಾರ್ಪಡಿಸಿದರು. ಈಗ ಅದೇ ರೀತಿಯಾಗಿ ಉಡುಪಿಯಲ್ಲಿ ಪರ್ಯಾಯೋತ್ಸವವು ನಡೆದುಕೊಂಡು ಬರುತ್ತಿವೆ).

ಶ್ರೀಮಧ್ವಾಚಾರ್ಯರು ಶ್ರೀಕೃಷ್ಣನ ಪ್ರತಿಷ್ಠೆ ಮತ್ತು ಅವನ ಪೂಜಾನಿರ್ವಹಣೆಯ ವ್ಯವಸ್ಥೆಯನ್ನು ಮಾಡಿದ ತರುವಾಯ ಧರ್ಮ ಪ್ರಚಾರಕ್ಕಾಗಿ ದಿಗ್ವಿಜಯ ಪೀಠವನ್ನು ನಿರ್ಮಾಣ ಮಾಡಿದರು. ಅದಕ್ಕೆ ಆದಿಮದಲ್ಲಿ ತಮ್ಮ ಪ್ರಥಮ ಶಿಷ್ಯರಾದ ಶ್ರೀ ಪದ್ಮನಾಭ ತೀರ್ಥರನ್ನು ಜೇಷ್ಠರನ್ನಾಗಿ ಪರಿಗಣಿಸಿ ಕ್ರಮವಾಗಿ ಶ್ರೀನರಹರಿ ತೀರ್ಥರು, ಶ್ರೀಮಾಧವ ತೀರ್ಥರು ಮತ್ತು ಅಕ್ಷೋಭ್ಯ ತೀರ್ಥರು ವೇದಾಂತ ಸಾಮ್ರಾಜ್ಯವನ್ನು ಪರಿಪಾಲನೆ ಮಾಡಿ ಸಿದ್ಧಾಂತ ರಕ್ಷಣೆ, ಪ್ರಚಾರವನ್ನು ಪಾರಂಪರ್ಯವಾಗಿ ನಡೆಸಿಕೊಂಡು ಬರುವಂತೆ ನೇಮಿಸಿದರು.

ಶ್ರೀಮನ್ಮಧ್ವಾಚಾರ್ಯರು ಕಳಿಂಗ ದೇಶ (ಒರಿಸ್ಸಾ)ಕ್ಕೆ ಹೋಗಿದ್ದಾಗ ಅಲ್ಲಿನ ಅಮಾತ್ಯ ಶಿರೋಮಣಿ ಶಾಮಾ ಶಾಸ್ತ್ರೀಗಳು ಆಚಾರ್ಯರ ಜ್ಞಾನ, ವರ್ಚಸ್ಸುಗಳಿಗೆ ತಲೆಬಾಗಿ ಅವರ ಶಿಷ್ಯರಾದರು. ಅವರೇ ಶ್ರೀನರಹರಿ ತೀರ್ಥರು. ಇವರು ಸನ್ಯಾಸಿಗಳಾದ ಮೇಲೂ ಕೆಲವು ಕಾಲ ರಾಜ್ಯಸೂತ್ರವನ್ನು ನಡೆಸಬೇಕಾದ ಪ್ರಸಂಗವು ಬಂದಿತು. ರಾಜಕುಮಾರನು ಪ್ರಾಪ್ತ ವಯಸ್ಕನಾದ ಮೇಲೆ ಶ್ರೀನರಹರಿತೀರ್ಥರು ಆ ರಾಜ್ಯಭಾರವನ್ನು ರಾಜಕುಮಾರನಿಗೆ ಒಪ್ಪಿಸಿ ನಿಶ್ಚಿಂತರಾದರು.

ಶ್ರೀನರಹರಿ ತೀರ್ಥರು ರಾಜ್ಯಭಾರವನ್ನು ಹಸ್ತಾಂತರಗೊಳಿಸುವಾಗ ಆ ಗಜಪತಿಯ ಕೋಶದಲ್ಲಿ ಅಡಗಿದ್ದ ಬ್ರಹ್ಮಕರಾರ್ಚಿತವಾದ ಮೂಲರಾಮ, ಸೀತಾ ವಿಗ್ರಹಗಳನ್ನು ತಂದು ಶ್ರೀಮಧ್ವಾಚಾರ್ಯರಿಗೆ ಸಮರ್ಪಿಸಿದರು. ಆ ವಿಗ್ರಹಗಳ ಆಗತಿ ಕ್ರಮವು ಹೀಗಿದೆ.

ಅಪ್ರತೀಕಾಲಂಬನ ಪ್ರಮುಖನಾದ ಬ್ರಹ್ಮದೇವರು ಧ್ಯಾನದಲ್ಲಿ ಅಸಂಖ್ಯಾತಗಳಾದ ಭಗವನ್ಮೂರ್ತಿಗಳನ್ನು ಚಿಂತಿಸುತ್ತಾ ವಿಶ್ವಕರ್ಮನಿಗೆ ಆ ಮೂರ್ತಿಗಳನ್ನು ವರ್ಣಿಸುತ್ತಾ ಆ ವಿಗ್ರಹಗಳನ್ನು ಅವನಿಂದ ಮಾಡಿಸುತ್ತಾ ತಾನು ಪ್ರತೀಕಾಲಂಬನರಾದ ಜನರಿಗೆ ಮಾರ್ಗದರ್ಶಕನಾಗಿ ತಾನೂ ಆ ವಿಗ್ರಹಗಳನ್ನು ತಂತ್ರಸಾರಾನುಸಾರವಾಗಿ ಅರ್ಚಿಸಿ ದೇವತೆಗಳಿಗೆ ನೀಡುತ್ತಾನೆ. ಹಾಗೆ ನೀಡುತ್ತಿದ್ದ ಕ್ರಮದಲ್ಲಿ ಈಗಿನ ಮೂಲ ರಾಮ, ಸೀತಾ ವಿಗ್ರಹಗಳು ಮುಮುಕ್ಷುಗಳ ಪುಣ್ಯವಶಾತ್ ಈ ಭೂಲೋಕಕ್ಕೆ ಪ್ರಾಪ್ತವಾದುವು. ಅದು ಹೇಗೆಂದರೆ ವಿಶ್ವಕರ್ಮನಿಂದ ನಿರ್ಮಿತವಾದ ಆ ಮೂಲ ರಾಮಾ, ಸೀತಾ ವಿಗ್ರಹಗಳನ್ನು ಚತುರ್ಮುಖ ಬ್ರಹ್ಮನು ಪೂಜಿಸಿ ಜಾಬಾಲಿಮುನಿಗಳಿಗೆ ನೀಡಿದನು. ಆ ಮುನಿಗಳು ಅವನ್ನು ಅರ್ಚಿಸಿ ಶಂಕರನಿಗೆ ಇತ್ತರು. ಶಂಕರನು ಅದನ್ನು ಅರ್ಚಿಸಿ ತನ್ನ ಸತಿ (ದಕ್ಷಕುಮಾರಿ) ದೇವಿಗೆ ನೀಡಿದನು. ಸತಿದೇವಿಯು ದಕ್ಷಾಧ್ವರಕ್ಕೆ ಬಂದಾಗ ಅಲ್ಲಿನ ವಿದ್ಯಮಾನಗಳನ್ನು ಕಂಡು ಯೋಗಾಗ್ನಿಯಲ್ಲಿ ಅಂತರ್ಧಾನಳಾದಳು. ಅದಕ್ಕೆ ಮುನ್ನ ಆಕೆಯು ಈ ವಿಗ್ರಹಗಳನ್ನು ಸೌಭರಿ ಮುನಿಗಳಿಗೆ ನೀಡಿ ನಿರ್ಗಮಿಸಿದಳು. ಆ ಸೌಭರಿ ಮುನಿಗಳು ಅದನ್ನು ಪೂಜಿಸಿ ಪುನಃ ಬ್ರಹ್ಮನಿಗೇ ನೀಡಿದರು. ಆ ಬ್ರಹ್ಮನು ಆ ವಿಗ್ರಹಗಳನ್ನು ಮೇರು ಪರ್ವತದಲ್ಲಿದ್ದು ಪೂಜಿಸುತ್ತಿದ್ದಾಗ ಸೂರ್ಯವಂಶದ ಚಕ್ರವರ್ತಿ ಇಕ್ಷ್ವಾಕುಮಾಹಾತ್ಮನು ತಪಸ್ಸನ್ನು ಮಾಡಿ ಬ್ರಹ್ಮದೇವರನ್ನು ಮೆಚ್ಚಿಸಿ ಆ ವಿಗ್ರಹಗಳನ್ನು ಪಡೆದು ಪೂಜಿಸಿದನು. ಆತನ ವಂಶದಲ್ಲಿ ಬಂದ ಅಜ, ದಶರಥ ಮತ್ತು ಶ್ರೀರಾಮನೂ ಅವುಗಳನ್ನು ಪೂಜಿಸಿದರು. ದಶರಥನ ಪುತ್ರನಾಗಿ ಅವತರಿಸಿದ ಶ್ರೀಮನ್ನಾರಾಯಣನಿಗೆ ದಶರಥನು ತನ್ನ ಮನೆದೇವರಾಗಿದ್ದ ಶ್ರೀರಾಮ ವಿಗ್ರಹದ ಹೆಸರನ್ನೇ ಇಟ್ಟನು. ಮಗನಾದ ಶ್ರೀರಾಮನ ಹೆಸರಿಗೆ ಕಾರಣವಾದ ಆ ವಿಗ್ರಹಗಳು ಮೂಲರಾಮ – ಸೀತಾ ವಿಗ್ರಹಗಳಾದುವು. ತರುವಾಯ ಶ್ರೀರಾಮನೂ, ಸೀತೆಯೂ, ಹನುಮಂತನೂ, ಜಾಂಬವಂತನೂ ಆ ವಿಗ್ರಹಗಳನು ಕ್ರಮವಾಗಿ ಅರ್ಚಿಸಿದರು. ತರುವಾಯ ವೇದಗರ್ಭನೆಂಬ ಬ್ರಾಹ್ಮಣನು ಶ್ರೀರಾಮನ ದರ್ಶನವಿಲ್ಲದೆ

ಊಟವಮಾಡುವುದಿಲ್ಲವೆಂದು ತಪೋ ನಿರತನಾಗಿದ್ದಾಗ ಶ್ರೀರಾಮನು ಆತನ ಭಕ್ತಿಗೆ ಮೆಚ್ಚಿ ಜಾಂಬವಂತನ ಮುಖಾಂತರವಾಗಿ ಆ ವಿಗ್ರಹಗಳನ್ನೇ ಆ ವೇದಗರ್ಭದಿನಿಗೆ ನೀಡಿಸಿದನು. ಆ ವಿಗ್ರಹಗಳನ್ನು ಕಂಡಮಾತ್ರದಿಂದಲೇ ಆ ಬ್ರಾಹ್ಮಣನಿಗೆ ಸಾಕ್ಷಾತ್ ಶ್ರೀರಾಮನನ್ನು ಕಂಡಷ್ಟೇ ತೃಪ್ತಿಯಾಯಿತು. ಆ ವಿಗ್ರಹಗಳನ್ನು ಅರ್ಚಿಸುತ್ತಾ ಭರತಖಂಡದ ತೀರ್ಥಯಾತ್ರೆಯನ್ನು ಕೈಕೊಂಡು ವಡ್ಡಿ ಪುರಿ ಜಗನ್ನಾಥನಲ್ಲಿಗೆ ಬಂದು ಅಲ್ಲಿ ಮನಸಾರೆ ದೇವರನ್ನು ಅರ್ಚಿಸಿ ಒಂದು ತುಲಸೀ ಗಿಡದ ಅಡಿಯಲ್ಲಿ ಆ ವಿಗ್ರಹಗಳನ್ನು ಸ್ಥಾಪಿಸಿ ವೈಕುಂಠಕ್ಕೆ ನಡೆದನು. ಕಾಲಾಂತರದಲ್ಲಿ ಆ ವಡ್ಡಿದೇಶ (ಕಳಿಂಗ)ಕ್ಕೆ ರಾಜನಾಗಿದ್ದ. ಮುಕುಂದವರ್ಮನಿಗೆ ಆಕಾಶವಾಣಿಯ ಮುಖಾಂತರವಾಗಿ ಆ ವಿಗ್ರಹಗಳು ಇರುವುದು ತಿಳಿಯಿತು. ಆತನು ಆ ವಿಗ್ರಹಗಳನ್ನು ತಂದು ತನ್ನ ಭಂಡಾರದಲ್ಲಿ ಇರಿಸಿದನು. ಆದರೆ ಚತುರ್ಮುಖ ಬ್ರಹ್ಮನು ಪ್ರತಿ ನಿತ್ಯವೂ ಗುಪ್ತವಾಗಿ ಅಲ್ಲಿಗೆ ಬಂದು ಆ ವಿಗ್ರಹಗಳನ್ನು ಪೂಜಿಸುತ್ತಿದ್ದನು. ಈ ಮುಕುಂದ ವರ್ಮ ಮಹಾರಾಜನ ಕಾಲಾನಂತರದಲ್ಲಿ ವಡ್ಡಿ ದೇಶದ ಮಹಾಮಂತ್ರಿಗಳಾಗಿದ್ದ ಶ್ರೀನರಹರಿತೀರ್ಥರು ಶ್ರೀಮಧ್ವಾಚಾರ್ಯರ ಮುಖಾಂತರವಾಗಿ ಆ ವಿಗ್ರಹಗಳ ಅಸ್ತಿತ್ವವನ್ನೂ ಇತಿಹಾಸವನ್ನೂ ತಿಳಿದು ಹರ್ಷನಿರ್ಭರರಾಗಿ ಆ ವಿಗ್ರಹಗಳನ್ನು ತಂದು ಶ್ರೀಮಧ್ವಾಚಾರ್ಯರಿಗೆ ಅರ್ಪಿಸಿದರು. ಗುಪ್ತವಾಗಿ ಗಜಪತಿಯ ಆ ಸ್ಥಾನದಲ್ಲಿ ಪೂಜೆಗೊಳ್ಳುತ್ತಿದ್ದ ಶ್ರೀಮನ್ಮೂಲ ಸೀತಾರಾಮಾರ್ಚಗಳು ಈಗ ಪ್ರತ್ಯಕ್ಷವಾಗಿ ಭಾವಿ ಬ್ರಹ್ಮನಿಂದ ಅರ್ಚನೆಗೊಳ್ಳಲಾರಂಭಿಸಿದುವು. ಋಜುಗಣಸ್ಥರಿಂದ ಅರ್ಚಿತವಾದ ವಿಗ್ರಹಗಳಲ್ಲಿ ಪರಮಾತ್ಮನ ಸನ್ನಿಧಾನವು ಒಂದು ಬ್ರಹ್ಮಕಲ್ಪ ಪರಿಯಂತವಾಗಿ ಇರುತ್ತದೆ. "ಪ್ರತಿಮಾಯಾಂತು ಸಾನ್ನಿಧ್ಯಂ । ಅರ್ಚಕಸ್ಯ ತಪೋಬಲಾತ್" ಎಂದಂತೆ ಭಾವಿ ಬ್ರಹ್ಮಕರಾರ್ಚಿತವಾದ ಶ್ರೀಉಡುಪಿ ಕೃಷ್ಣನಲ್ಲಿ ಸಹ ಸನ್ನಿಧಾನವು ಒಂದು ಕಲ್ಪ ಪರಿಯಂತವಾಗಿರುತ್ತದೆ ಎಂಬಲ್ಲಿ ಸಂದೇಹವೇಕೆ?

ಈ ರೀತಿಯಾಗಿ ಮುಮುಕ್ಷು ಕುಲವನ್ನು ಉದ್ಧರಿಸಿದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಸುಮಾರು ಎಂಭತ್ತು ವರ್ಷಗಳ ಕಾಲ ಈ ಭರತಖಂಡವನ್ನು ಅಲಂಕರಿಸಿದ್ದು ಇನ್ನೂ ಸಾಕ್ಷಾತ್ತಾಗಿ ವೇದವ್ಯಾಸರ ಸನ್ನಿಧಾನವನ್ನು ಹೊಂದಲು ಬಯಸಿದರು. ಅವರು ಬಹು ಶಾಸ್ತ್ರಗಳ ವೇತ್ತರಾಗಿದ್ದರೂ ಐತರೇಯ ಉಪನಿಷತ್ತನ್ನು ವಿಶೇಷವಾಗಿ ಪಾಠವನ್ನು ಹೇಳುತ್ತಿದ್ದರು. ಹಾಗೆ ಅವರು ಪಾಠವನ್ನು ಹೇಳುತ್ತಿರುವಾಗ ಶ್ರುತಿ, ಸ್ಮೃತ್ಯುಕ್ತ ವಾಣಿಗಳನ್ನು ಸತ್ಯ ಮಾಡಲೋಸುಗವಾಗಿ ಮಾಘ ಶುದ್ಧ ನವಮಿಯ ದಿನ ಅತ್ಯಂತ ಆನಂದಭರಿತರಾಗಿ ಉತ್ಕಂಠದಿಂದ ಐತರೇಯ ಉಪನಿಷತ್ತನ್ನು ಪಾಠ ಹೇಳತೊಡಗಿದರು. ಶಿಷ್ಯವೃಂದವು ಮೈಮರೆತ್ತಿತ್ತು. ದೇವ ದುಂದುಭಿಗಳು ಮೊಳಗಿದುವು. ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಲಾರಂಭಿಸಿತು. ಆಚಾರ್ಯರು ತಮ್ಮ ಆರಾಧ್ಯ ಕುಲದೈವವಾಗಿದ್ದ ಅನಂತೇಶ್ವರನ ಸನ್ನಿಧಿಯಲ್ಲಿ ಆ ಪುಷ್ಪಗಳ ರಾಶಿಯಲ್ಲಿ ಕ್ರಮೇಣ ಮುಳುಗಿ ಆ ರಾಶಿಯಲ್ಲಿ ಅದೃಶ್ಯರಾಗಿ ಸಾಕ್ಷಾತ್ತಾಗಿ ಬದರಿಕಾಶ್ರಮಕ್ಕೆ ತೆರಳಿ ಅಲ್ಲಿ ಶ್ರೀವೇದವ್ಯಾಸರ ದರ್ಶನವನ್ನು ಹೊಂದಿ ನಮಸ್ಕರಿಸಿದರು.

ಇತ್ತ ಶಿಷ್ಯ ಜನ ಸಮೂಹವು ಆಚಾರ್ಯರು ಅದೃಶ್ಯರಾದುದರಿಂದ ಬಹಳ ಚಿಂತಾವ್ಯಾಕುಲರಾಗಿ ಪರಿತಪಿಸುತ್ತಿದ್ದರು. ಆಗ ಒಂದಂಶದಿಂದ ಶ್ರೀಮಧ್ವಾಚಾರ್ಯರು ಅಶರೀರವಾಣಿಯ ಮೂಲಕವಾಗಿ ಜನರಿಗೆ ಕೇಳಿಸುವಂತೆ "ಅದೃಶ್ಯೋ ರೌಪ್ಯಪೀಠೋಽಸ್ತಿ । ದೃಶ್ಯೋಽಸ್ತಿ ಬದರೀ ತಟೇ" ಎಂದು ಘೋಷಿಸಿದರು. ಆಮಾಘ ಶುದ್ಧ ನವಮಿಯನ್ನೇ ಇಂದು ಮುಮುಕ್ಷು ಕುಲವು ಶ್ರೀಮಧ್ವ ನವಮಿಯ ದಿನವನ್ನಾಗಿ ಅತಿ ವೈಭವದಿಂದ ಆಚರಿಸುತ್ತಾ ಬಂದಿರುತ್ತಾರೆ.

ಶ್ರೀಮಧ್ವಾಚಾರ್ಯರ ಈ ವಿಧವಾದ ಮಹಿಮೆಗಳು ಪೂರ್ವನಿಯೋಜಿತವಾದುವುಗಳೇ ಆಗಿರುವುದರಿಂದ ಇದರಲ್ಲಿ ಸಂಶಯಕ್ಕೆ ಆಸ್ಪದವಿಲ್ಲ. ಶ್ರೀಮಧ್ವಾಚಾರ್ಯರ ಅವತಾರಕ್ಕೆ ಮೊದಲೇ ಅವರು ಯಾರು? ಏನು ಮಾಡುತ್ತಾರೆ ಎಂಬುದನ್ನು ಶ್ರುತಿ ಪುರಾಣಗಳು ಸಾರಿಬಿಟ್ಟಿವೆ.

ಹಲವು ಪುರಾಣಗಳು ಏನು ಹೇಳುತ್ತವೆ ಎಂಬುದನ್ನು ನೋಡೋಣ.

೧. "ತ್ರಿಕೋಟಿ ಮೂರ್ತಿ ಸಂಯುಕ್ತಂ । ಸ್ತ್ರೇತೇಯಾಂ ರಾಕ್ಷಸಾಂತಕಃ ॥
ಹನುಮಾನಿತಿ ವಿಖ್ಯಾತಃ । ರಾಮ ಕಾರ್ಯ ಧುರಂಧರಃ ॥
ಸವಾಯು ಭೀಮಸೇನೋಽಭೂತ್ । ದ್ವಾಪರಾಂತೇ ಕುರೂದ್ವಹಃ ॥
ಕೃಷ್ಣಂ ಸಂಪೂಜಯಾಮಾಸ । ಹತ್ವಾ ದುರ್ಯೋಧನಾಧಿಕಾನ್ ॥
ದ್ವೈಪಾಯನಸ್ಯ ಸೇವಾರ್ಥಂ । ಬದರ್ಯಾಂಚ ಕಲೌಯುಗೇ ॥
ಯತಿರೂಪ ಧರೋ ವಾಯು। ರ್ಭವಿಷ್ಯತಿ ನಸಂಶಯಃ ॥ ಹರಿವಂಶ ॥

೨. ಯತಿರೂ.ಪೋ ಮಾತರಿಶ್ವಾ । ಅಷ್ಟಾವಿಂಶತಿಮೇ ಕತೌ ॥
ಅವತೀರ್ಯ ವಸತ್ಯತ್ರ । ಮಧ್ವನಾಮಾವರೋ ವಿಭೋಃ ॥
ಸವಾಯು ಸ್ತಪಸಾ ಪುಣ್ಯಂ । ಪ್ರೀತ್ಯಾ ಅಗಸ್ತ್ಯಯೋಗಿನಃ ॥
ತಥಾ ಮಿತ್ರಾಲಯೇ ಪುಣ್ಯೇ । ಚಾತುರ್ಮಾಸ್ಯಂ ಕರಿಷ್ಯತಿ ॥
ಶುಕಃಶ್ರೋಷ್ಯತಿ ಸಚ್ಛಾಸ್ತ್ರಂ । ಪದ್ಮತೀರ್ಥಾದಿ ಹಾಗತಃ ॥ ಬ್ರಹ್ಮ (ಪುರಾಣ)

೩. ವಿಷ್ಣಾಜ್ಞಯಾ ಮರ್ತ್ಯಲೋಕೇ । ಜನಿಷ್ಯನ್ ಜ್ಞಾನ ಸಿದ್ಧಯೇ ॥
ಮಾತರಿಶ್ವಾಂಬುಧೌ ಮಗ್ನಾಂ । ಪ್ರತಿಮತಾಂ ಮಹಾಮುನಿಃ ॥
ಮಹಾನುಭಾವೋ ವಿಜ್ಞೇಯ । ಸಮಾನೀಯ ದಯಾನ್ವಿತಃ ॥
ನಾಗಾಸನಸ್ಯ ನಿಕಟೇ । ವಿಧಿನಾ ಸ್ಥಾಪಯಿಷ್ಯತಿ ॥
ಸಯೋಗೀ ಮಾತರಿಶ್ವಾಂಶೋ । ಮಧ್ವೋಧ್ವಸ್ತದುರಾಗಮಃ ॥
ಸ್ವಯಮಭ್ಯರ್ಚದೇವಾಂಶೋ । ಕೃಷ್ಣಂ ಕಲಿಮಲಾಪಹಂ ॥
ನವಮ್ಯಾಂ ಪ್ರಾತರೇ ವಾಸೌ । ಮಾಷ್ಷೇಮಕರಕೇ ರವೌ ॥
ಪ್ರತಿಪೇದೇ ಬದರಿಕಾಂ । ಶುಕ್ಲಪಕ್ಷೇಸತಾಂಗತಿಃ ॥
ತಚ್ಛಿಷ್ಯಾಷ್ಟ ಮಹಾತ್ಮಾನೋ । ಯತಯಃ ಕೃಷ್ಣ ಮಾದರಾತ್ ॥ ಸ್ಕಾಂದೇ ॥

೪. ಪ್ರಥಮೋ ಹನುಮನ್ನಾಮ । ದ್ವಿತೀಯೋ ಭೀಮಏವಚ ॥
ಪೂರ್ಣಪ್ರಜ್ಞಸ್ತೃತೀಯಸ್ತು । ಭಗವತ್ಕಾರ್ಯಸಾಧಕಃ ॥
ಜ್ಞಾನಿ ಮಧ್ವೋ ಮಾತರಿಶ್ವಾ । ಗುಹಾಸಂತಂ ಜಗತ್ಪತಿಂ ॥
ಹನುಮ ಭೀಮ ಮಧ್ವಾಖ್ಯ । ಸ್ತ್ರಯೊವಾಯು ಸುತಾಇಮೇ (ಪಾದ್ಮೇ)

ಮೇಲಿನ ಪ್ರಮಾಣಗಳಿಂದ ಶ್ರೀಮಧ್ವಾನಂದತೀರ್ಥ ಭಗವತ್ಪಾದಾಚಾರ್ಯರು ವಾಯುದೇವರೆಂದು ಶತಃ ಸಿದ್ಧವಾಗಿರುತ್ತದೆ. ಮಹಾ, ಒಲ, ಓಜ, ತೇಜ, ಸರ್ವಪ್ರೇರಕತ್ವ, ನಿಯಾಮಕತ್ವ, ನಿಗ್ರಹಾನು ಗ್ರಹೀತ್ಯಾದಿ ಜಗಚ್ಚೇಷ್ಟಾ ಸಾಮರ್ಥ್ಯ ಉಳ್ಳವರಾಗಿದ್ದ ಶ್ರೀಮಧ್ವರು ನಿರಾಯಸವಾಗಿ ಎಲ್ಲರನ್ನೂ ಮಂತ್ರದಗಿಡವತ್ ವಶೀಕರಣ ಮಾಡಿ ಬಿಡಬಹುದಿತ್ತು. ಅದನ್ನು ಬಿಟ್ಟು ಯಾಕೆ ಅಸ್ತ್ರಿಂದ, ಅಸ್ತ್ರಿಗಾಗಿ ಶ್ರಮವಹಿಸಿ ಎದುರಾಳಿಗಳನ್ನು ಜಯಿಸಬೇಕಾಗಿತ್ತು? ಎಂದರೆ ಅವರು ಹಾಗೆಯೇ ಮಾಡಬಹುದಿತ್ತು. ಆದರೆ ಅಸುರರಿಗೆ ಅವರು ತಮ್ಮ ಮಹಿಮೆಯನ್ನು ಮರೆಮಾಚಿ ಸಾಮಾನ್ಯ ಒಬ್ಬ ದಾರ್ಶನಿಕರೆಂಬಂತೆ ವರ್ತಿಸಿದರು ಮತ್ತು ತ್ರಿವಿಧಜೀವರು ತಮ್ಮ ಪ್ರಾರಬ್ಧಾನುಸಾರವಾಗಿಯೇ ಸಾಧನವನ್ನು ಮಾಡಿ ಕೊಳ್ಳುವುದು ಲಿಂಗಶರೀರದ ವ್ಯಾಪಾರವಾಗಿರುವುದರಿಂದ ತದನುಸಾರಿಯಾಗಿ ಶ್ರೀಮಧ್ವರು ಪೂರ್ವಾವತಾರದ ದ್ವಯಗಳಲ್ಲಿ ಅನುಸರಿಸಿದ ನೀತಿಯನ್ನೇ ಇಲ್ಲೂ ಅನುಸರಿಸಿದರು. ತ್ರಿವಿಧ ಜೀವರಾಶಿಗಳಲ್ಲಿ ಲಿಂಗ ಶರೀರ ಚೇಷ್ಟಾನುಸಾರವಾಗಿ ಸಂಕರ್ಷಣ ರೂಪೀ ಪರಮಾತ್ಮನ ಸೇವಾರೂಪವಾಗಿ ವಾಯುದೇವರು ಸೂತ್ರನಾಮಕರಾಗಿ ಜೀವರಲ್ಲಿ ನಿಂತು ಉಚಿತ ರೀತಿಯಲ್ಲಿ ಕಾರ್ಯ ತತ್ಪರರಾಗಿದ್ದಾರೆ. ಆಚಾರ್ಯರ ಸಿದ್ಧಾಂತವು ಶಾಶ್ವತವಾಗಿ ಉಳಿದುಕೊಂಡು ಬರಬೇಕಾದರೆ ಶ್ರೀವಾಯುದೇವರು ಸತ್ಪ್ರೇರಣ ಮಾತ್ರದಿಂದಲೇ ಮಾಡಿದ್ದರೆ ಮುಂದೆ ಬರುವವರಿಗೆ ಅಂಥಾ ವ್ಯಾಪ್ತವಾದ ಪ್ರೇರಣ ಶಕ್ತಿ ಇರುವುದಿಲ್ಲವಾದುದರಿಂದ ಪ್ರಯತ್ನಪೂರ್ವಕವಾಗಿ ಅದನ್ನು ಹೇಗೆ ರಕ್ಷಿಸಿಕೊಂಡು ಬರಬೇಕೆಂಬ ನಿಯಮ, ರೀತಿ, ನೀತಿಗಳನ್ನು ಮುಂದಿನ ಜನಾಂಗಕ್ಕೆ ತೋರಿಸಿಕೊಡಲು ಶ್ರೀಮಧ್ವಾಚಾರ್ಯರು ಹಾಗೆ ಸಾಮಾನ್ಯರಂತೆ ತತ್ವಪ್ರಚಾರ ಮಾಡಿದರು. ಮೂಲವತಾರ ವರ್ಣನೆ.

**॥ ಪದ ॥ ದಣಿದಾರ್ಜಿಸಿದ್ದಲ್ಲ । ಅಣಿಮಾದಿಸಿದ್ಧಿಗಳು ।**
**ಗುಣತ್ರಯದೊಳು ಸತ್ವ । ಗುಣವದು ಪ್ರಚುರ ॥**
**ಪಣಿಗಣ್ಣ ಗಗನಾಂ । ಗಣ ತುರಗಾದಿಗಳ ।**
**ಗಣನೆಗೆತಾರನು । ಅನಭಿಮಾನದನು ॥ ೩೮ ॥**

**ಅರ್ಥ:** ದಣಿದಾರ್ಜಿಸಿದ್ದಲ್ಲ = ಕಷ್ಟಪಟ್ಟು ಯತ್ನಶೀಲನಾಗಿ ಸಿದ್ಧಿ ಮಾಡಿಕೊಂಡಿದ್ದು ಅಲ್ಲ; ಅಣಿಮಾದಿಸಿದ್ಧಿಗಳು = ಅಣಿಮ ಮೊದಲಾದ ಎಂಟು ಬಗೆಯ ಸಿದ್ಧಿಗಳು; ಗುಣತ್ರಯ = ಸತ್ವ ರಾಜಸ, ತಾಮಸಗಳೆಂಬ ಗುಣಗಳು ಮೂರು; ಸತ್ವಗುಣ ಪ್ರಚುರ ಆ ಸತ್ವವೇ ಹೆಚ್ಚಾಗಿ ತೋರುವುದು; ಪಣಿಗಣ್ಣ = ರುದ್ರದೇವರು; ಗಗನಾಂಗಣ ತುರಗ = ಆಕಾಶದಲ್ಲಿ ಚರಿಸುವ ಕುದುರೆ ಎಂದರೆ ಗರುಡ; ಗಣನೆಗೆ ತಾರನು = ಅವರ ಹಂಗು ಇಲ್ಲದವನು; ಅನಭಿಮಾನದನು = ಅಭಿಮಾನ ರಹಿತವಾದ ದೇಹಹೊಂದಿದವನು;

**ವಿಶೇಷಾರ್ಥ:** ಸಾಧನ ಪ್ರಪಂಚದಲ್ಲಿ ಜೀವಿಗಳು ಗರ್ಭಯಾತನೆ ಮರಣ ಸಂಕಟಗಳಿಂದ ಪಾರಾಗಲು ಹಲವು ಬಗೆ ಯೋಗಾಭ್ಯಾಸಗಳನ್ನು ಮಾಡಿ ಸಿದ್ಧಿಸಿಕೊಳ್ಳುತ್ತಾರೆ. ಅವುಗಳಲ್ಲಿ ಅಣಿಮಾ, ಗರಿಮಾ, ಮಹಿಮಾ, ಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವಗಳೆಂಬ ಅಷ್ಟ ಯೋಗಳು ಇವೆ. ಇವೆಲ್ಲವುಗಳನ್ನು ದೇವ, ದಾನವ, ಮಾನವರೂ ಸಿದ್ಧಿ ಮಾಡಿಕೊಳ್ಳುತ್ತಾರೆ. ಇವೇನಿದ್ದರೂ ನಶ್ವರ ಸುಖಕ್ಕೆ ಕಾರಣವಾಗಬಹುದು. ದೇವತೆಗಳಿಗೆ ಅಪರೋಕ್ಷಕ್ಕೂ ಸಹಾಯಕಗಳು ಇವು ಕೇವಲ ಕರ್ಮಕಾಂಡಗಳು ಇವು ಜ್ಞಾನಯೋಗ, ಭಕ್ತಿಯೋಗದ ಮುಂದೆ ಗೌಣ. ಏನಿದ್ದರೂ ತ್ರಿವಿಧ ಜೀವರಾಶಿಗಳು ಈ ಅಷ್ಟ ಸಿದ್ಧಿಗಳನ್ನು ಸತತವಾದ ಯತ್ನಗಳ ಮೂಲಕವಾಗಿ ಸಂಪಾದಿಸಬೇಕಾಗುತ್ತದೆ. ಆದರೆ ವಾಯುದೇವರಿಗೆ ಇದಕ್ಕಾಗಿ ಯತ್ನದ ಅವಶ್ಯಕತೆಯಿಲ್ಲ. ಈ ಸಿದ್ಧಿಗಳು ವಾಯುದೇವನಲ್ಲಿ ಸ್ವಾಭಾವಿಕವಾಗಿ ಸ್ವರೂಪಭೂತವಾಗಿಯೇ ಇವೆ. ಬೇರೆಯವರಿಗೆ ಈ ಸಿದ್ಧಿಗಳು ನಷ್ಟವಾಗಬಹುದು. ವೃದ್ಧಿಸಲೂಬಹುದು. ಆದರೆ ವಾಯುದೇವರಿಗೆ ಇದು ವೃದ್ಧಿ, ಹ್ರಾಸಗಳಿಲ್ಲದೆ ಸ್ವಾಭಾವಿಕವಾಗಿ ಇರುತ್ತದೆ. ಸ್ವಾಭಾವಿಕವಾದ ಸಿದ್ಧಿಗಳು ಎಂದರೆ ಏನೂ? ಯತ್ನಸಿದ್ಧಿಗಳು ಎಂದರೇನು ಎಂದರೆ ಈ ದೃಷ್ಟಾಂತಗಳಿಂದ ಇದನ್ನು ತಿಳಿಯಬಹುದು. ನೀರು ಬಿಸಿಯಾಗಬೇಕಾದರೆ ಅದಕ್ಕೆ ಅಗ್ನಿಯ ಸಂಪರ್ಕವು ಬೇಕು. ಹೂರಣವು ಸಿಹಿಯಾಗಬೇಕಾದರೆ ಅದಕ್ಕೆ ಬೆಲ್ಲವನ್ನು ಬೆರಸಬೇಕು. ಹಾಗಾದರೆ ಅಗ್ನಿಯು ಬಿಸಿಯಾಗಬೇಕಾದರೆ, ಬೆಲ್ಲವು ಸಿಹಿಯಾಗಬೇಕಾದರೆ ಏನು ಮಾಡಬೇಕು? ಎಂದರೆ ಇವುಗಳಿಗೆ ಏನೂ ಮಾಡಬೇಕಾಗಿಲ್ಲ. ಸ್ವಯಂ ಅವುಗಳು ಸ್ವಾಭಾವಿಕವಾಗಿಯೂ, ಸ್ವರೂಪಭೂತವಾಗಿಯೂ ಬಿಸಿ, ಸಿಹಿಗಳಾಗಿಯೇ ಇವೆ. (ಇಲ್ಲಿ ಕೇವಲ ದೃಷ್ಟಾಂತಕ್ಕಾಗಿ ಮಾತ್ರ ಇವನ್ನು ಹೇಳಲಾಗಿದೆ. ಭಗವಚ್ಚಿಂತನೆ ಬೇರೆ ಉಂಟು). ಅದೇ ರೀತಿಯಾಗಿ ಬೇರೆಯ ತ್ರಿವಿಧ ಜೀವರಾಶಿಗಳು ತಮ್ಮ ಸಿದ್ಧಿಗಾಗಿ ಯತ್ನ ಮತ್ತು ಪರಾಶ್ರಯಗಳನ್ನು ಹೊಂದಬೇಕು. ಆದರೆ ವಾಯುದೇವರಿಗೆ ಯತ್ನವಾಗಲೀ ಇತರ ದೇವತೆಗಳ ಸಹಾಯವಾಗಲೀ ಬೇಕಾಗಿಲ್ಲ. ಇತರರಿಗೆ ಇವರೇ ಪ್ರೇರಕರು, ಸಿದ್ಧಿಪ್ರದರು. "ಸ್ವಾಭಾವಿಕಾಣಿಮಾದಿಕೂಟಾಯ" ಎಂದು ಶ್ರೀವ್ಯಾಸರಾಯರು ವಾಯುಗದ್ಯದಲ್ಲಿ ಹೇಳಿದ್ದಾರೆ. ಅಗ್ನಿಯಲ್ಲಿ ಬಿಸಿ, ಬೆಲ್ಲದಲ್ಲಿ ಸಿಹಿ ಇರುವಂತೆ ವಾಯುದೇವರಲ್ಲಿ ಅಣಿ ಮಾದಿ ಅಷ್ಟ ಸಿದ್ಧಿಗಳು ಸ್ವಾಭಾವಿಕವಾಗಿ ಇದೆ.

ಮೂರು ವಿಧ ಜೀವರಾಶಿಗಳಲ್ಲಿ ದೇವ, ಮಾನವ, ದಾನವರೆಂದು ಇದ್ದು ಇವರೆಲ್ಲಾ ತ್ರಿಗುಣಾತ್ಮಕವಾದ ಲಿಂಗಶರೀರದಿಂದ ಬದ್ಧರಾಗಿದ್ದಾರೆ. ಶ್ರೀಲಕ್ಷ್ಮೀನಾರಾಯಣರಿಗೆ ಲಿಂಗವೂ ಇಲ್ಲ. ತತ್ತ್ರಯುಕ್ತಜನ್ಯ ಪ್ರಾಕೃತ ಗುಣಗಳಾದ ಸತ್ವ ರಾಜಸ, ತಾಮಸ ಗುಣಗಳೂ ಇವರಿಗಿಲ್ಲ. ಇವರನ್ನು ಔಪಚಾರಿಕವಾಗಿ ನಿತ್ಯ ಮುಕ್ತರೆಂದು ಕರೆಯುತ್ತಾರೆ. ಇವರು ಅಕ್ಷರ ಪುರುಷರೆನಿಸುತ್ತಾರೆ. ಇವರಿಗೆ ಯಾವ ಸಾಧನ ನಿರ್ಬಂಧಗಳೂ ಇಲ್ಲ. ಸಾಧನಾಧಿಕಾರಿಗಳಿಗೆ (ತ್ರಿವಿಧ ಜೀವರಿಗೆ) ಪ್ರೇರಕರಾಗಿದ್ದಾರೆ.

ಇನ್ನು ಮೂರು ವಿಧ ಜೀವರಾಶಿಗಳಲ್ಲಿ ಸತ್ವ ಗುಣ ಉಳ್ಳ ಬ್ರಹ್ಮನಿಂದ ಆರಂಭಿಸಿ ತೃಣ ಪರಿಯಂತವಾಗಿ, ರಾಜಸ ಗುಣ ಉಳ್ಳ ಪುರಂಜನನಿಂದ ಆರಂಭಿಸಿ ತೃಣ ಪರಿಯಂತವಾಗಿ ಮತ್ತು ತಾಮಸಗುಣ ಉಳ್ಳ ಕಲಿಯಿಂದ ಆರಂಭಿಸಿ ತೃಣ ಪರಿಯಂತವಾಗಿ ಇರುವ ಜೀವರಾಶಿಗಳಿಗೆ ಲಿಂಗಶರೀರವಿದ್ದು ಇವರು ದೇಹ ವಿಯೋಗ ಉಳ್ಳವರಾಗಿದ್ದು ಕ್ಷರ ಪುರುಷರೆನಿಸುತ್ತಾರೆ. ಇವರು ಸಾಧನಾ ನಂತರದಲ್ಲಿ ಲಿಂಗ ಭಂಗವನ್ನು ಮಾಡಿಕೊಂಡು ಮೋಕ್ಷವನ್ನು ಹೊಂದುತ್ತಾರೆ. (ಮೋಕ್ಷವೆಂದರೆ ಲಿಂಗ ಭಂಗವೆಂದು ಮಾತ್ರ ಇಲ್ಲಿ ತಿಳಿಯಬೇಕು).

ಸತ್ವ, ರಾಜಸ, ತಾಮಸ ಗುಣದ ಜೀವರಾಶಿಗಳ ಲಿಂಗಕ್ಕೆ ಶ್ರೀಲಕ್ಷ್ಮೀದೇವಿಯೇ ಕ್ರಮವಾಗಿ ಶ್ರೀ ಭೂ, ದುರ್ಗಾ ರೂಪಗಳಿಂದ ಅಭಿಮಾನಿಯಾಗಿದ್ದು ಸಾತ್ವಿಕರಿಂದ ಸತ್ಸಾಧನೆಯನ್ನೂ, ರಾಜಸರಿಂದ ಕಾಮ್ಯಕ ಕರ್ಮಗಳನ್ನೂ, ತಾಮ್ಸ(ದೈತ್ಯ)ರಿಂದ ಹರಿ ದ್ವೇಷಕಾರ್ಯವನ್ನೂ ಮಾಡಿಸಿ ಮುಕ್ತಿ, ಸಾಂತಾನಿಕ ಲೋಕ ಮತ್ತು ಅಂಧಂತಮವಸ್ಸಿಗೆ ದೂಡುತ್ತಾಳೆ. "ತ್ರಿಗುಣ ಮಾನಿ ಮಹಾಲಕುಮಿ ಸಂತೈಸಲನು ದಿನವು" ಎಂದರು ಶ್ರೀಜಗನ್ನಾಥದಾಸರು.

ಋಜುಗಣಸ್ಥರಾದ ಬ್ರಹ್ಮ, ವಾಯು, ಎಣೀ ಭಾರತೀಯರಿಗೆ ಲಿಂಗ ಶರೀರವು ದಗ್ಧಪಟದೋಪಾದಿಯಲ್ಲಿ ಅತಿ ಸೂಕ್ಷ್ಮವಾಗಿದ್ದು ಅದು (ಪ್ರಾರಬ್ಧವು) ಇವರ ಮೇಲೆ ಯಾವ ಪರಿಣಾಮವನ್ನು ಬೀರುವುದಿಲ್ಲ. ಆದ್ದರಿಂದ ಇವರು ಉಪಾಂಗ ಅಪಾಂಗರೆಂದು ಕರೆಸುತ್ತಾರೆ. ಇದ್ದೇ ಅಪಾಂಗವೆಂದರೆ ದೇಹಾಭಿಮಾನವಿರದವರು ಎಂದರ್ಥ. ಉಪಾಂಗವೆಂದರೆ ಸೂಕ್ಷ್ಮವಾದ ಲಿಂಗಶರೀರವಂತೂ ಇದ್ದೇ ಇದೆ ಎಂದರ್ಥ. ಇವರನ್ನು ಬಿಟ್ಟರೆ ಉಳಿದ ಗರುಡ, ಶೇಷ, ರುದ್ರರಿಂದಾರಂಭಿಸಿ ಪುರಂಜನ, ಕಲಿ, ತೃಣ ಜೀವ ಪರಿಯಂತವಾಗಿ ಎಲ್ಲರಿಗೂ ಲಿಂಗಶರೀರವು ಸ್ಥೂಲವಾಗಿದ್ದು ಪ್ರಾರಬ್ಧ ಬೋಗದ ಪರಿಣಾಮ ಉಳ್ಳವರಾಗಿದ್ದಾರೆ.

ಋಜುಗಣಸ್ಥರಿಗೆ ಸುಖ ಪ್ರಾರಬ್ಧವೂ, ರಾಜಸ ಪುರಂಜರನಿಗೆ ಸುಖ ದುಃಖ, (ಮಿಶ್ರ)ಪ್ರಾರಬ್ಧವೂ, ಮತ್ತು ಕಲಿಗೆ ಕೇವಲ ದುಃಖ ಪ್ರಾರಬ್ಧವೂ ಇದ್ದು ಈ ಮೂವರನ್ನು ಮಾತ್ರ ಬಿಟ್ಟು ತಾರತಮ್ಯಾನುಸಾರವಾಗಿ ಇವರ ಅನುಯಾಯಿಗಳಿಗೆ ಮಿಶ್ರ ಪ್ರಾರಬ್ಧವು ಭೋಗಿಸಲ್ಪಡುತ್ತದೆ. ಸಾತ್ವಿಕರಿಗೆ ಆರ್ಧ ೦.೫೦ ಸುಖ. (೦.೭೫ (೩೭.೫೦) ಅರ್ಧಮಿಶ್ರ, ಉಳಿದ ಭಾಗ (೬೨.೫೦) ದುಃಖ ಉಂಟು. ರಾಜಸರಿಗೆ ೦.೫೦ ಮಿಶ್ರ, ೩೭.೫೦ ಸುಖ, ೬೨.೫೦ ಭಾಗ ದುಃಖ ಉಂಟು. ತಾಮಸರಿಗೆ ೦.೫೦ ದುಃಖ, ೩೭.೫೦ ಮಿಶ್ರ, ೬೨.೫೦ ಭಾಗ ಸುಖ ಉಂಟು. ಈ ಫಲಗಳು ಕೇವಲ ಸಾಧನ ಕಾಲದ ಫಲಗಳು ಮಾತ್ರ. ಸ್ವರೂಪದಲ್ಲಿ ಬ್ರಹ್ಮಾದಿ ಸಾತ್ವಿಕರಿಗೆ ಕೇವಲ ಸುಖವೂ, ಪುರಂಜನಾದಿ ರಾಜಸರಿಗೆ ಮಿಶ್ರ ಫಲವೂ, ಕಲ್ಯಾದಿ ತಾಮಸರಿಗೆ ಕೇವಲ ದುಃಖವೂ ಪ್ರಾಪ್ತಿಯಾಗುತ್ತದೆ. ಮಿಶ್ರ ಫಲಗಳು ಇರುವುದು ಬ್ರಹ್ಮಾಂಡದಲ್ಲಿ ಇದ್ದಾಗ ಮಾತ್ರ.

ಎಲ್ಲಾ ಮೂರು ವಿಧವಾದ ಜೀವರಾಶಿಗಳಲ್ಲಿಯೂ ಮೂರು ಬಗೆಯವುಗಳಾದ ಸತ್ವ, ರಾಜಸ, ತಾಮಸ ಗುಣಗಳು ಇದ್ದೇ ಇರುತ್ತವೆ. ಆದರೆ ಅವುಗಳ ಪ್ರಮಾಣದಲ್ಲಿ ಮಾತ್ರ ವ್ಯತ್ಯಾಸವಿರುತ್ತದೆ. ಕಲಿಯಲ್ಲಿ ಮೂರು ಗುಣಗಳು ಇದ್ದರೂ ತಾಮಸ ಗುಣ ಪ್ರಚುರ. ಇರುವ ಸಾತ್ವಿಕ, ರಾಜಸ ಗುಣಗಳು ಅಪ್ರಚುರ, ಅಂದರೆ ಲೆಕ್ಕಕ್ಕಿಲ್ಲವೆಂದು ಅರ್ಥ. ಉದಾ: ಬೇವಿನ ಕಾಯಿಯಲ್ಲಿ ಕಹಿ ಪ್ರಚುರ. ಸಿಹಿ ಹುಳಿ ಇವೆ. ಆದರೆ ಅವು ನಗಣ್ಯ. ಹುಣಸೇ ಹಣ್ಣಿನಲ್ಲಿ ಸಿಹಿ, ಕಹಿ ಇವೆ ಇವು ನಗಣ್ಯ. ಆದರೆ ಹುಳಿಯು ಪ್ರಚುರ. ಹೀಗೆ ರಾಜಸ ಪ್ರಮುಖನಾದ ಪುರಂಜನನಲ್ಲಿ ರಾಜಸ ಪ್ರಚುರ, ಸತ್ವ ತಾಮಸ ಗುಣಗಳು ನಗಣ್ಯ. ಇದೇ ರೀತಿಯಾಗಿ ಋಜುಗಣಸ್ಥರಲ್ಲಿ ಸತ್ವಗುಣ ಪ್ರಚುರ. ರಾಜಸ ತಾಮಸಗಳು ಇವೆ. ಆದರೆ ಅವು ಅಪ್ರಚುರ. ಹೇಗೆಂದರೆ ಕಬ್ಬಿನಲ್ಲಿ ಕಹಿ, ಹುಳಿ ರುಚಿಗಳಿವೆ. ಆದರೆ ಅವು ಲೆಕ್ಕಕ್ಕೆ ಸಿಗದಷ್ಟು ಅಲ್ಪ ಪ್ರಮಾಣದಲ್ಲಿ ಇರುವುದರಿಂದ ಅವು ನಗಣ್ಯ. ಸಿಹಿ ಪ್ರಚುರ ಹೀಗೆ ಗಣತ್ರಯ ಮುಖಂಡರನ್ನು ಬಿಟ್ಟರೆ ಅವರವರ ಗಣ ಪರಿವಾರದಲ್ಲಿ ಗುಣ ತ್ರಯಗಳು ಮಿಶ್ರಭಾವದಿಂದ ಇದ್ದು ಸಾತ್ವಿಕರಲ್ಲಿ ಸತ್ವಗುಣ ಅಧಿಕ, ರಾಜಸರಲ್ಲಿ ರಜೋಗುಣ ಅಧಿಕ, ತಾಮಸರಲ್ಲಿ ತಮೋಗುಣ ಅಧಿಕವಾಗಿ ಇರುತ್ತವೆ. ಪ್ರಚುರ ಎಂಬುದಕ್ಕೂ ಅಧಿಕ ಎಂಬುದಕ್ಕೂ ಇರುವ ವ್ಯತ್ಯಾಸವೇನೆಂದರೆ 'ಪ್ರಚುರ' ಎಂಬುದು ಇತರ ಗುಣಗಳನ್ನು ಇದ್ದರೂ ಮರೆಮಾಚುತ್ತದೆ. 'ಅಧಿಕ' ಎಂದರೆ ತಾನು ಇದ್ದು ಇತರ ಗುಣಗಳನ್ನೂ ಅಭಿವ್ಯಕ್ತಗೊಳಿಸುತ್ತದೆ. ಕಬ್ಬು, ಹುಣಸೇಕಾಯಿ, ಬೇವಿನಕಾಯಿಗಳು ತೀಕ್ಷ್ಣಗುಣ ಉಳ್ಳವುಗಳಾದರೆ ಮಾವಿನ ಹಣ್ಣು, ಉಳಿ ದ್ರಾಕ್ಷಿ, ಬುಡುಮೇಕಾಯಿಗಳಂತೆ ಅನುಯಾಯಿಗಳ ಗುಣಗಳಲ್ಲಿ ಗುಣತ್ರಯಗಳೂ ಅಭಿವ್ಯಕ್ತವಾಗುತ್ತವೆ. ವಾಯುದೇವರು ಸತ್ವಗುಣ ಪ್ರಖರತೆಯುಳ್ಳವರು. ಅತ್ಯಲ್ಪವಾದ ರಾಜಸ, ತಾಮಸ ಗುಣಉಳ್ಳವರು. "ಸತ್ವಸತ್ವಮಹಾಸತ್ವ ಸೂಕ್ಷ್ಮಾಯ । ಸತ್ವಪ್ರಚುರಾತ್ಯಲ್ಪರಜಸ್ತಮಸ್ಕಾಯ" ಎಂದರು ಶ್ರೀವ್ಯಾಸರಾಜರು, ವಾಯುಗದ್ಯದಲ್ಲಿ.

೧. ವಾಯುದೇವರಲ್ಲಿ ಸತ್ವ, ರಾಜಸ, ತಾಮಸಗುಣಗಳು ಇವೆ. ಅಧಿಕ ಸತ್ವದ ದೆಸೆಯಿಂದ ರಾಜಸ, ತಾಮಸಗಳು ಸತ್ವದಲ್ಲಿ ಅಡಗಿ ವೀರ್ಯರಹಿತವಾಗಿರುತ್ತವೆ. (ಅಗೋಚರ)

೨. ಪುರಂಜನನಲ್ಲಿ ರಾಜಸವು ಅಧಿಕವಾಗಿ ಸತ್ವ, ತಾಮಸಗಳು ರಾಜಸದಲ್ಲಿ ಅಡಗಿ ವೀರ್ಯ ಹೀನವಾಗಿರುತ್ತವೆ. (ಅಗೋಚರ)

೩. ಕಲಿಯಲ್ಲಿ ತಮೋಗುಣ ಅಧಿಕವಾಗಿ ಸತ್ವ, ರಾಜಸಗಳು ತಾಮಸದಲ್ಲಿ ಅಡಗಿ ನಿರ್ವೀರ್ಯವಾಗಿರುತ್ತವೆ. (ಅಗೋಚರ)

೧. ಋಜಗಣಸ್ಥರನ್ನು ಬಿಟ್ಟು ಉಳಿದ ಸಾತ್ವಿಕ ಜೀವರಲ್ಲಿ ಸತ್ವ ಗುಣವು ಅಧಿಕವಾಗಿದ್ದರೂ ರಾಜಸ, ತಾಮಸ ಗುಣಗಳು ಸಹ ಅವರಲ್ಲಿ ಅಭಿವ್ಯಕ್ತಿಯಲ್ಲಿ ಇರುತ್ತವೆ. (ಗೋಚರ)

೨. ಪುರಂಜನನನ್ನು ಬಿಟ್ಟು ಉಳಿದ ರಾಜಸ ಜೀವರಲ್ಲಿ ರಾಜಸಗುಣವೇ ಅಧಿಕವಾಗಿದ್ದರೂ ಸಾತ್ವಿಕ, ತಾಮಸ ಗುಣಗಳು ಸಹ ಅವರಲ್ಲಿ ಅಭಿವ್ಯಕ್ತಿಯಲ್ಲಿ ಇರುತ್ತವೆ. (ಗೋಚರ)

೩. ಕಲಿಯನ್ನು ಬಿಟ್ಟು ಉಳಿದ ತಾಮಸ ಜೀವರಲ್ಲಿ ತಮೋಗುಣವೇ ಅಧಿಕವಾಗಿದ್ದರೂ ಸಾತ್ವಿಕ, ರಾಜಸ ಗುಣಗಳು ಸಹ ಅವರಲ್ಲಿ ಅಭಿವ್ಯಕ್ತಿಯಲ್ಲಿ ಇರುತ್ತವೆ (ಗೋಚರ)

ಹೀಗಿರುವುದೇ ತ್ರಿವಿಧ ಜೀವರ ಮುಖಂಡರಿಗೂ ಮತ್ತು ಅವರವರ ಅನುಯಾಯಿಗಳಿಗೂ ಇರುವ ವ್ಯತ್ಯಾಸ.

ಈ ವಾಯುದೇವರು ಚತುರ ವಿಂಶತಿ ತತ್ವಾಭಿಮಾನಿ ದೇವತೆಗಳಿಗೆ ನಿಯಾಮಕರು. ಇವರ ಅಂತಯಾಮಿತ್ವವೂ ಇವರ ಪ್ರೇರಣೆಯು ಆ ತತ್ವಾಭಿಮಾನಿ ದೇವತೆಗಳಿಗೆ ಇದೆ. ಆದರೆ ಈ ತತ್ವಾಭಿಮಾನಿಗಳ ನಿಯಾಮಕತ್ವವು ವಾಯುದೇವರ ಮೇಲೆ ಇಲ್ಲ. ಇವರೇ ವಾಯುವನ್ನು ಆಶ್ರೈಸಿಕೊಂಡಿರುವರು. ಇವರ ಸ್ವರೂಪೋದ್ಧಾರಕರೇ ವಾಯುದೇವರು.

**"ಸುಪರ್ಣಾತ್ಯಧಿಕ ತತ್ವಜ್ಞಾನಾಯ । ತದಭಿಮಾನವರ್ಜಿತ ಗುಣಪೂರ್ಣಾಯ"**
**"ಸುಪರ್ಣ ಶೇಷಶ ಕ್ರಾದಿ । ದೇವೇಭ್ಯೋಪ್ಯಧಿಕಾಗುಣಾಃ । ಸುಪರ್ಣಾದಿಭಿಃರತಜ್ಞಾತ್ವಾ । ಸ್ತದಭಿಮಾನವರ್ಜಿತಾ"**

॥ ಪದ ॥ ತತ್ವೇಶರೆಲ್ಲರ । ಸತ್ವ ಸ್ವರೂಪನು ।
ದ್ಗೀಥನರ್ಚಿಸಿ ಜಯ । ವಿತ್ತನು ಸುರರಿಗೆ ॥
ಹತ್ತೆರಡೊಂದಾರು । ಯುಕ್ತ ಜಪದಿ ತಾ ।
ನೆತ್ತಿಯ ದ್ವಾರಕೆ । ಹತ್ತಿಸಿ ಜೀವರಾ ॥ ೩೯ ॥

**ಅರ್ಥ:** ತತ್ವೇಶರು = ತತ್ವಾಭಿಮಾನಿಗಳು; ಸತ್ವಸ್ವರೂಪನು = ಕಾರ್ಯ ನಿರ್ವಹಣೆಯ ಜ್ಞಾನ ಮತ್ತು ಶಕ್ತಿಗಳನ್ನು ನೀಡುವವನು; ಉದ್ಗೀಥನ ಅರ್ಚಿಸಿ = ಉತ್ಕಂಠದಿಂದ ಹರಿನಾಮವನ್ನು ನುಡಿಯುತ್ತಾ; ಜಯವಿತ್ತನು ಸುರರಿಗೆ = ತತ್ವವ್ಯಾಪಾರ ಪ್ರತಿಬಂಧಕರಾದ ತತ್ವಾಭಿಮಾನಿ ದೈತ್ಯರನ್ನು ನಿಗ್ರಹ ಮಾಡಿ ದೇವತೆಗಳಿಗೆ ಜಯವನ್ನು ಉಂಟು ಮಾಡಿದನು; ಹತ್ತರಡೊಂದಾರು = ೧೦ X ೨ = ೨೦ + ೧ = ೨೧ X ೧೦೦೦ (ಅಧ್ಯಾಹಾರ) = ೨೧೦೦೦ + ೬೦೦ ೨೧೬೦೦; ಯುಕ್ತ ಜಪದಿ = ಶ್ವಾಸಜಪದಿಂದ (ಹಂಸ ಜಪದಿಂದ); ನೆತ್ತಿಯದ್ವಾರಕೆ ಹತ್ತಿಸಿ ಜೀವರ = ಜೀವರನ್ನು ಬ್ರಹ್ಮನಾಡಿಯ ಮೂಲಕವಾಗಿ ಬ್ರಹ್ಮರಂಧ್ರವನ್ನು ಭೇದಿಕೊಂಡು ಹೋಗುವಂತೆ ಅನುಗ್ರಹ ಮಾಡಿ ತೋರಿದ ಲೀಲಾ = ಈ ವಿಧವಾದ ವ್ಯಾಪಾರವನ್ನು ಲೀಲೆಯಿಂದಲೇ ಜಗತ್ತಿನಲ್ಲಿ ಮಾಡುತ್ತಿರುವವನಾಗಿದ್ದಾನೆ.

**ವಿಶೇಷಾರ್ಥ:** ಈ ಹಿಂದೆ ವಿವರಿಸಿದ ಪ್ರಕಾರವಾಗಿ ಶ್ರೀವಾಯುದೇವರೇ ಹನುಮ, ಭೀಮ, ಮಧ್ವರಾಗಿ ಅವತಾರ ಭೇದವರ್ಜಿತರಾಗಿ ಅವತರಿಸಿದರೆಂಬುದು ನಿರ್ವಿವಾದವಾಗಿದೆ ತಾನೇ? ಮುಂದೇ ಈ ಮಹಾಮಹಿಮನ ಲೀಲೆಯು ಎಷ್ಟು ಅದ್ಭುತವಾದುದೆಂದು ವಿವರಿಸಿರುವ ಕೆಲವು ಉಪನಿಷತ್ತು ಪ್ರಮಾಣಗಳನ್ನು ಅವಲೋಕಿಸುವಾ.

ವಾಯುದೇವರು ಸಕಲ ತತ್ವಾಭಿಮಾನಿ ದೇವತೆಗಳಿಗಿಂತಲೂ ಶ್ರೇಷ್ಠರು ಮತ್ತು ಸಕಲ ತತ್ವಾಭಿಮಾನಿ ದೇವತೆಗಳ ನಿಯಾಮಕರು. ಒಮ್ಮೆ ದೇವದಾನವರಿಗೆ ಯುದ್ಧವಾದಾಗ ದೇವತೆಗಳು ದೈತ್ಯರನ್ನು ಜೈಸಿದರು. ಆಗ ಆ ಯುದ್ಧದ ಜಯಕ್ಕೆ ತಾನೇ ಕಾರಣನೆಂದು ಪ್ರತಿಯೊಬ್ಬ ದೇವತೆಯೂ ವಾದ ಮಾಡಲಾರಂಭಿಸಿದರು. ಅವರ ವಾದವು ಬಗೆಹರಿಯಲಿಲ್ಲ; ಅಸುರಾವೇಶ ನಿಮಿತ್ತವಾಗಿ ಅಹಂಭಾವನೆಗೆ ಬಲಿಯಾದ ದೇವತೆಗಳನ್ನು ಉದ್ಧರಿಸಲಿಕ್ಕಾಗಿ ವಾಯುದೇವರೇ ಅವರ ಮುಂದೆ ಬಂದು ಹೀಗೆ ಹೇಳಿದನು.

"ತಾನ್ ವರಿಷ್ಠಃ ಪ್ರಾಣ ಉವಾಚ – "ಮಾಮೋಹಂ ಅವದ್ಯಥ। ಅಹಂ ಏವೇತತ್ ಪಂಚಧಾಅತ್ಮಾನಾ । ಪ್ರವಿಭಜ್ಯ ಬಾಣಂ ॥ ಅವಷ್ಟಭ್ಯ ವಿಧಾರಯಾಯಿತಿ ॥ ತೇ ಅಶ್ರದ್ಧಧಾನಾಃ ಬಭೂವುಃಸಃ ॥ ಅಭಿಮಾನಾತ್ ಉರ್ಧ್ವಂಉತ್ಕ್ರಮತ ಇವತಸ್ಮಿನ್ । ಉತ್ಕ್ರಾಮತಿ ಅಥ ಇತರೇಸರ್ವಃ ಏವ ಉತ್ಕ್ರಾಮಂತೇ ॥ ತಸ್ಮಿಂಚ ಪ್ರತಿಷ್ಠಮಾನೇ ಸರ್ವೇ ಏವ ಪ್ರತಿಷ್ಠತೇ.

"ಏ ತತ್ವಾಧಿಪತಿಗಳೇ ಅಹಂಕಾರವನ್ನು ಬಿಡಿರಿ. ನಿಮ್ಮಲ್ಲಿ ಯಾವ ಶಕ್ತಿಯೂ ಇಲ್ಲ ನಿಮಗೆ ಶಕ್ತಿ ಪ್ರದನು ನಾನೇ ನನ್ನಿಂದಲೇ ನಿಮಗೆ ಜಯವಾಯಿತು" ಹೀಗೆ ಹೇಳಿದುದರಲ್ಲಿ ಅಸುರಾವೇಶ ನಿಮಿತ್ತವಾಗಿ ದೇವತೆಗಳು ವಾಯುವಿನ ಮಾತನ್ನು ನಂಬಲಿಲ್ಲ. ಆಗ ವಾಯುದೇವರು ದೇಹಗಳಲ್ಲಿಂದ ನಿರ್ಗಮಿಸಿದ ತಕ್ಷಣವೇ ಸಕಲ ದೇವತೆಗಳು ಅಲ್ಲಿ ಇರಲು ಶಕ್ತರಾಗದೆ ಚಡಪಡಿಸುತ್ತ ವಾಯುವನ್ನು ಅನುಸರಿಸಿ ಹೊರಟು ಬಿಟ್ಟರು. ತರುವಾಯ ವಾಯುದೇವರು ಶರೀರವನ್ನು ಪ್ರವೇಶ ಮಾಡಿದರೆ ಪುನಃ ಅವರೆಲ್ಲರೂ ಅಲ್ಲಿ ಪ್ರತಿಷ್ಠಿತರಾಗಿ ಸುಖಾನುಭವವನ್ನು ಹೊಂದಿದರು.

**"ವಾಯುರ್ಭೀಮೋ ಭೀಮನಾದೋ । ಮಹೌಜಾಃಸರ್ವೇಷಾಚ ಪ್ರಾಣಿನಾಂ ಪ್ರಾಣ ಭೂತಃ ॥**
**ಅನಾವೃತ್ತಿರ್ದೇಹಿನಾಂ ದೇಹಪಾತೇ ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ ॥ ಭಾರತ ॥**

ಸಮಸ್ತ ಪ್ರಾಣಿ ದೇಹಗಳಲ್ಲಿ ವಾಯುದೇವನಿದ್ದರೆ (ತತ್ವಾಭಿಮಾನಿಗಳನ್ನೂ ಒಳಗೊಂಡು) ಎಲ್ಲರೂ ಇದ್ದು ಬದುಕಿರುತ್ತಾರೆ. ಆದರೆ ವಾಯುವು ತೊಲಗಿದರೆ ಸರ್ವರೂ ಅಲ್ಲಿರಲಾಗದೇ ಅವರೆಲ್ಲರೂ ಅಲ್ಲಿಂದ ನಿರ್ಗಮಿಸುವುದರಿಂದ ದೇಹವು ಪತನಗೊಳ್ಳುತ್ತದೆ. ಇದರಿಂದ ವಾಯುದೇವರು ಜೀವೋತ್ತುವರೆಂದು ತಿಳಿಯಬೇಕು.

**"ವಾಯುರನಿಲಮಮೃತಂಯಥೇದಂ ಭಸ್ಮಾಂತಂಶರೀರಂ" (ಈ.ವಾ)"**

**ಅರ್ಥ:** ಭಸ್ಮೀ ಭೂತವಾಗತಕ್ಕ ಶರೀರದಲ್ಲಿ ವಾಯುದೇವರು ಅಮೃತಸ್ವರೂಪರಾಗಿದ್ದು ಜೀವರನ್ನು ರಕ್ಷಿಸುತ್ತಾರೆ.

**"ಪ್ರಾಣಂವಾ ಅನುಪ್ರಾಣಂತಿ । ಮನುಷ್ಯಾಃ ಪಶವಶ್ಚೆಯೇ ॥**
**ಪ್ರಾಣೋಹಿಭೂತಾನಾಮಾಯುಃ ॥ ತಸ್ಮಾತ್ ಸರ್ವಾಯುಷ ಮುಚ್ಯತೇ (ತೈ.ಉ.)"**

ಅರ್ಥ ಸರ್ವಮನುಷ್ಯ – ಪಶುಗಳಿಗೆ (ಎಲ್ಲಾ ಜೀವರಿಗೆ) ಪ್ರಾಣನೇ ಆಯು ಸ್ವರೂಪನು.

**"ತಾ ಏತಾಃ ಶೀರ್ಷಂಚ್ಛಿಯಃ ಶ್ರಿತಾಶ್ಚಕ್ಷುಃ । ಶ್ರೋತ್ರಂ ಮನೋವಾಕ್ಪಾಣಿಃ ।**
**ಶ್ರಮಂತೇಽಸ್ಮಿಂಚ್ಛ್ರಿಯೋಽಯ । ಏವಮೇತ ಚ್ಛಿರಸಃಶಿರಸ್ತ್ವಂವೇದ ।**

ತಾ ಆಹಿಂ ಸಂತಾಪ । ಮುಕ್ತಮಸ್ಸ್ವ್ರಹ । ಮುಕ್ಥಮಸ್ಮೀತಿತಾ ಅಬ್ರುವನಂ ತಾಸ್ಮಾ। ಚ್ಛರೀರಾ ದುತ್ಕ್ರಾಮಾಮ । ತದ್ವಸ್ಮಿನ್ನ ಉತ್ಕ್ರಾಂತ । ಇದಂ ಶರೀರಂ ಪಸ್ಯತಿ ತದುಕ್ಥಂ ಭವಿಷ್ಯತೀತಿ . . . (ಐತರೇಯಾ ) ೨. ೧. ೪)

**ಅರ್ಥ:** ಶರೀರವನ್ನು ಆಶ್ರೈಸಿ ಕೊಂಡಿದ್ದ ನಯನ, ಶ್ರೋತೃ, ಮನ, ವಾಕ್ ಭೂತವಾಯುಗಳು ತಾವೇ ಶ್ರೇಷ್ಠರೆಂದು ವಾಜ್ಯಕ್ಕೆ ತೊಡಗಿದರು. ಆಗ ಒಬ್ಬೊಬ್ಬರಾಗಿ ದೇಹದಿಂದ ತೊಲಗಿದರು. ಆಗ ಆ ದೇಹವು ಪ್ರಾಣನಿಂದ ಯುಕ್ತವಾಗಿದ್ದುದರಿಂದ ಇತರ ದೇವತೆಗಳ ನಿರ್ಗಮನದಿಂದ ಯಾವ ಪರಿಣಾಮವೂ ಆಗದೆ ಕುರುಡ, ಕಿವುಡ, ಮೂಕ, ಹೆಳವ, ಚೊಂಚ ಇತ್ಯಾದಿಯಾಗಿ ಕರೆಸುತ್ತಾ ಜೀವಂತವಾಗಿತ್ತು. ಕೊನೆಗೆ ಮುಖ್ಯಪ್ರಾಣನು ಆ ದೇಹದಿಂದ ನಿರ್ಗಮಿಸಿದ ಕೂಡಲೇ ದೇಹವು ಬಿದ್ದು ಶಿಥಿಲವಾಯಿತು.

ಹೀಗೆ ಮುಖ್ಯ ಪ್ರಾಣನ ಶ್ರೇಷ್ಠತ್ವವು ಸಿದ್ಧವಾದರೂ ಅಸುರಾವೇಶದಿಂದ ಭ್ರಾಂತರಾಗಿದ್ದ ದೇವತೆಗಳು ವಾಯು ದೇವರು ದೇಹದಿಂದ ಹೊರ ಹೊರಟರೇನಾಯಿತು. ನಾವು ಶರೀರವನ್ನು ಹೊಕ್ಕು ನಮ್ಮ ಶಕ್ತಿಯನ್ನು ತೋರುತ್ತೇವೆ ಎಂದು ಹಾರಾಡಿದರು. ಅದೇ ವಾದಾನುಸಾರವಾಗಿ ತತ್ವಾಭಿಮಾನಿಗಳು ಒಬ್ಬೊಬ್ಬರಾಗಿ ಶರೀರವನ್ನು ಪ್ರವೇಶಿಸಿದರು. ಆದರೆ ಆ ಶರೀರವು ಮೇಲೇಳಲಿಲ್ಲ. ಮಾತ್ರವಲ್ಲ ವಾಯುವಿಲ್ಲದ ಆ ಶರೀರದಲ್ಲಿ ನೆಲೆಸಿರಲು ಶಕ್ಯವಿಲ್ಲದೆ ಮಹಾಯಾತನೆಯನ್ನು ಅನುಭವಿಸಲಾರಂಭಿಸಿದರು. ಆಗ ಮುಖ್ಯ ಪ್ರಾಣನು ಆ ಶರೀರವನ್ನು ಪ್ರವೇಶಿಸಿದ ಕೂಡಲೇ ಎಲ್ಲರೂ ಸುಖವನ್ನು ಹೊಂದಿದರು ಮತ್ತು ಶರೀರವು ಮೇಲೆದ್ದಿತು.

**ಪ್ರಮಾಣ:** "ತಾ ಅಹಿಂ ಸಂತೇವಾಹ ಮಕ್ಥಮ । ಸ್ಥಹ ಮುಕ್ಥ ಮಸ್ಮೀತಿ ತಾ । ಅಬ್ರುವ ನ್ವಂತೇಡಂ ಪುನಃ ಶರೀರಂ ಪ್ರವಿಶಾಮ ತದ್ಯಸ್ಮಿನ್ನಃ ಪ್ರಪನ್ನ ಇದಂ ಶರೀರ ।ಮುತ್ಥಾಸ್ಯತಿ ತದುಕ್ಥಂ । ಭವಿಷ್ಯತೀತಿ । . . . ಪ್ರಾಣ ಏವ ಪ್ರಾಣ ಉಕ್ಥಮಿತ್ಯೇವ ವಿದ್ಯಾತ್ತಂ ದೇವಾ ಅಬ್ರುವಂ ಸ್ತ್ವ ಮುಕ್ಥಮಸಿತ್ವಮಿದಂ । ಸರ್ವಮಸಿ ತವವಯಂ ಸ್ವಸ್ತ್ವಮಸ್ಮಾಕ ಯಸೀತಿ । ತದಪ್ಯೇ ತದೃಷಿಣೋಕ್ತಂ ತ್ವಮಸ್ಮಾಕಂ ತವ ಸ್ಮಸೀತಿ (ಐತರೇಯ ೨.೧.೪)"

ಆಗ ದೇವತೆಗಳು ಮುಖ್ಯ ಪ್ರಾಣನಿಂದಲೇ ತಮ್ಮ ಉದ್ಧಾರವೆಂದು ತಿಳಿದು ಸ್ತೋತ್ರ ಮಾಡಿದರು. ಪುನಃ ಶರೀರವನ್ನು ವಾಯುದೇವರು ಬಿಟ್ಟು ಹೋಗಲು ಸಿದ್ಧರಾದರು. ಆದರೆ ಆತನ ಅಗಲಿಕೆಯಿಂದ ಉಂಟಾಗುವ ತಾಪವು ಎಂಥಹುದು ಎಂಬುದನ್ನು ಅರಿತ ದೇವತೆಗಳು ಪ್ರಾಣನ ಕಾಲಿಗೆ ಎರಗಿ – "ಯಾತೇ ತನುರ್ವಾಚಿ ಪ್ರತಿಷ್ಠಿತಾ । ಯಾಶ್ರೋತ್ರೇಯಂ । ಚಕ್ಷಿಸಿ । ಯಾಮನಸಿ । ಸಂತತಾ ಶಿವಾಂ (ಮನದಲ್ಲಿ ಇರುವಿ) ತಾಂಕುರು ಮೋತ್ಕಮೀಃ (ಇರು ಹೋಗಬೇಡಾ) । ಪ್ರಾಣ ಶ್ಯೈತದ್ವಶೇ ಸರ್ವಂ । ತ್ರಿದಿವೇಯ ತ್ವತ್ರಿಷ್ಠಿತಂ ॥ ಮಾತೇವ ಪುತ್ರಾನ್‌ರಕ್ಷಸ್ವಶ್ರೀಶ್ಚ । ಪ್ರಜ್ಞಾಚ । ವಿದೇಹಿನ್ನೂತಿ (ಷಟ್ಟ್ರಶ್ನ)

ಅರ್ಥ ಅಪ್ಪಾ ನೀನು ಇಲ್ಲಿಂದ ಹೋಗಬೇಡಾ. ನಾನು ನಿನ್ನ ವಶವರ್ತಿಗಳು. ನೀನು ಇಲ್ಲೇ ಇರು. ನೀನು ತಾಯಿಂತೆ ನಮಗೆ ಐಶ್ವೈರ್ಯವನ್ನೂ, ಜ್ಞಾನವನ್ನೂ ಇತ್ತು ರಕ್ಷಿಸುತ್ತಿರುವಿ ಎಂದು ಪ್ರಾರ್ಥಿಸಿದರು. ಆಗ ವಾಯುದೇವರು ಆ ದೇವತೆಗಳಿಗೆ ಶ್ರೀನಾರಾಯಣನ ತತ್ವೋಪದೇಶವನ್ನು ಮಾಡಿ ಅವರನ್ನು ಉದ್ಧರಿಸಿದರು. "ತಂದೇವಾಃ ಪ್ರಾಣಯಂತಸ ಪ್ರಣೀತಃ" "ತದ್ಯಥಾಮಧುಮಕ್ಷಿಕಾ ಮಧುಕರಾರಾಜಾನ ಮುತ್ಕ್ರಾಮಂತಂ । ಸರ್ವಾಏವೋತ್ಕ್ರಾಮಂತೇ । ತಸ್ಮಿಂಶ ಪ್ರತಿಷ್ಠಮಾನೇ ಸರ್ವಾಏವ ಪ್ರತಿಷ್ಠಂತೇ ॥ ಷಟ್ಟ್ರಶ್ನ ॥"

**ಅರ್ಥ:** ಜೇನುಗೂಡಿನ ರಾಣಿನೊಣವು ಹೊರಟರೆ ಎಲ್ಲಾ ನೊಣಗಳು ಹೊರಡುತ್ತವೆ. ರಾಣಿ ನೊಣವು ಕೂತರೆ ಎಲ್ಲಾ ಕೂಡುತ್ತವೆ. ಹಾಗೆಯೇ ದೇಹದಲ್ಲಿ ತತ್ವಾಭಿಮಾನಿಗಳು ವಾಯುದೇವನನ್ನು ಅನುಸರಿಸುತ್ತಾರೆ.

ದೇವತೆಗಳು ದಾನವರನ್ನು ಜೈಸಲಿಕ್ಕೆ ನಾನಾ ವಿಧವಾದ ಅಧಿಷ್ಠಾನಗಳನ್ನು ಆಶ್ರೈಸಿಕೊಂಡು ಭಗವದುಪಾಸನೆಯನ್ನು ಮಾಡಿದರು. ಆದರೆ ದೈತ್ಯರು ಬಂದು ಅವರು ಅರ್ಚಿಸುತ್ತಿದ್ದ ಮೂರ್ತಿಗಳನ್ನು ಪುಡಿ ಪುಡಿ ಮಾಡಿ ದೇವತೆಗಳನ್ನು ಹಿಂಸಿಸಿದರು. ತರುವಾಯ ಎಲ್ಲಾ ಅಧಿಷ್ಠಾನೋಪಾಸನೆಗಳು ವಿಫಲವಾದಾಗ ದೇವತೆಗಳು ಮುಖ್ಯ ಪ್ರಾಣಾಧಿಷ್ಠಾನದಲ್ಲಿ ಉದ್ಗೀಥನಾಮಕನಾದ ಶ್ರೀಹರಿಯನ್ನು ಪೂಜಿಸಿದರು. ಯಥಾಪ್ರಕಾರ ದೈತ್ಯರು ಪೂಜೆಯನ್ನು ಧ್ವಂಸಗೊಳಿಸಲು ದಾಳಿ ಮಾಡಿದರು. ಆದರೆ ಅಖಿಣಾತ್ಮಸಮಾನರೂ, ಅತಿರೋಹಿತ ವಿಜ್ಞಾನಿಗಳೂ ಆದ ವಾಯು ಅಧಿಷ್ಠಾನದ ಮೇಲೆ ಎರಗಿದ ದೈತ್ಯರು ಸರ್ವನಾಶವನ್ನು ಹೊಂದಿದರು. ಮುಖ್ಯ ಪ್ರಾಣನಾದರೂ ಉದ್ಗೀಥನನ್ನು ಚಿಂತಿಸಿ ದೈತ್ಯರನ್ನು ಸದೆ ಬಡಿದು ದೇವತೆಗಳಿಗೆ ಜಯವನ್ನು ತಂದಿತ್ತರು. ವಾಯುಚಿಂತನಾ ರಹಿತವಾದ ವಿಷ್ಣುವಿನ ವಿಗ್ರಹಗಳನ್ನು ಸಹ ದೈತ್ಯರು ಪುಡಿ ಮಾಡಿದರು. ಅಂದರೆ ವಾಯುಚಿಂತನೆ ರಹಿತವಾದ ಯಾವಪೂಜೆಯನ್ನೂ ಶ್ರೀ ಹರಿಯು ಸ್ವೀಕರಿಸುವುದಿಲ್ಲ ಎಂಬದು ಪ್ರಬಲ ತತ್ವ.

**ಪ್ರಮಾಣ** "ಅಥಹಯ ಏ ವಾಯಂ । ಮುಖ್ಯ ಪ್ರಾಣಸ್ತಮುದ್ಗೀಥ ಮುಪಾಸಾಂ । ಚಕ್ರಿರೇತಂ ಹಾಸುರಾ ಋತ್ವಾ । ವಿಧ್ವಸುರ್ಯಥಾ ಶ್ಮಾನಮೂಖಿಣ । ಮೃತ್ವಾ ವಿಧ್ವಂಸೇತ್ಯೆವಂ (ಛಾಂದೋಗ್ಯ)"

"ಸಾವಾ ಏಷಾ ದೇವತಾ ದೂರ್ನಾಮ ದೂರಂ । ಹ್ಯಸ್ಯಾಮೃತ್ಯುದೂರಂ" ದೇವತೆಗಳ ಮೃತ್ಯುವನ್ನು ದೂರ ಮಾಡುವುದರಿಂದ ವಾಯುವಿಗೆ 'ದೂ' ಎಂದು ಹೆಸರು.

"ಪ್ರಾಣೋ ಹಿವಾ ಅಂಗಾನಾಂ ರಸಸ್ತಸ್ಮಾದ್ಯಸ್ಮಾತ್ ಅಂಗೀರಸಃ" ಪ್ರಾಣನೇ ಸರ್ವ ಅಂಗಗಳಿಗೆ ರಸ ಸ್ವರೂಪನು. ಆದ್ದರಿಂದ ಆತನು ಅಂಗೀರಸನೆಂದು ಕರೆಸಲ್ಪಡುತ್ತಾನೆ.

ಈ ವಾಯುದೇವನಿಗೆ ಬೃಹಸ್ಪತಿ, ಬ್ರಹ್ಮಣಸ್ಪತಿ, ಸಮ, (ಸಾ = ಭಾರತಿ ಆಮ ವಾಯು) ಇತ್ಯಾದಿಯಾಗಿ ಹೆಸರುಗಳುಂಟು. ಈತನಿಗೆ ಉದ್ಗೀಥ ಎಂಬ ಹೆಸರೂ ಉಂಟು –

"ಏಷ ಉವಾ ಉದ್ಗೀಥಃ ಪ್ರಾಣೋವಾ ಉತ್ಪ್ರಾಣೇನ ಹೀದಲ್ನ ಸರ್ವಮುತ್ತಬ್ದಂ ವಾಗೇವ ಗೀತೋಚ್ಚ ಗೀಥಾ ಚೆತಿ ಸಉದ್ಗೀಥಃ" (ಬೃ.ಉ.)

**"ವಾಯುನಾವೈ ಸೂತ್ರೇಣಾಯಂಚಲೋಕಃ । ಉಕ್ಥಂಪ್ರಾಣೋವಾ ।**
**ಯಜುಃ ಪ್ರಾಣೋವೈ ಯಜುಃ । ಸಾಮ ಪ್ರಾಣೋವೈ ಸಾಮ ।**
**ಕ್ಷತ್ರಂ ಪ್ರಾಣೋವೈ ಕ್ಷತ್ರಂ । ಯೋಹವೈ ಜೇಷ್ಠಂಚ ।**
**ಶ್ರೇಷ್ಠಂಚ ವೇದ ಜೇಷ್ಠಶ್ಚ ಶ್ರೇಷ್ಠಶ್ಚ ಸ್ವಾನಾಂ ಭವತಿ ಪ್ರಾಣೋ ವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ"**
**(ಬೃ.ಉ)**

**ಅರ್ಥ:** ವಾಯುವು ಉಚ್ಚ ಸ್ವರದಿಂದ ಗಾನ ಮಾಡುವುದರಿಂದ ಉದ್ಗೀಥ ಎಂದು ಹೆಸರು. ಸಕಲವನ್ನೂ ಧರಿಸುವುದರಿಮದ ಸೂತ್ರನೆಂದು ಹೆಸರು. ಪ್ರವೃತ್ತಿಗೈಸುವುದರಿಂದ ಉಕ್ಥನು – ಶ್ರೇಷ್ಠನು ಎಂದು ಹೆಸರು. ಪ್ರಾಣಿಗಳ ಪ್ರಾಣನಾದ್ದರಿಂದ ಪ್ರಾಣನೆಂದು ಹೆಸರು. ಸುಖ ಪ್ರದನಾದುದರಿಂದ ಸಾಮನೆಂದು ಕರೆಸಲ್ಪಡುತ್ತಾನೆ. ಸರ್ವ ರಕ್ಷಕನಾದುದರಿಂದ ಈತನು ಕ್ಷತ್ರನೆನಿಸುತ್ತಾನೆ. ಸರ್ವ ದೇವತಾಧಿಕ್ಯನಾದುದರಿಂದ ಜೇಷ್ಠ, ಶ್ರೇಷ್ಠ ಎನಿಸುತ್ತಾನೆ.

ಈ ವಾಯುದೇವರು ಸರ್ವ ಜೀವರಲ್ಲಿ ನಿಂತಿದ್ದು ಪ್ರತಿ ದಿವಸದಲ್ಲಿ ಇಪ್ಪತ್ತೊಂದು ಸಾವಿರದ ಆರು ನೂರು ಹಂಸ (ಶ್ವಾಸ) ಜಪವನ್ನು ಮಾಡುತ್ತ ಜೀವರನ್ನು ರಕ್ಷಿಸುತ್ತಿರುವನು.

"ಆರುಮೂರೆರಡೊಂದು ಸಾವಿರ। ಮೂರೆರಡು ಶತ ಶ್ವಾಸ ಜಪಗಳ ।
ಮೂರುವಿಧ ಜೀವರೊಳಗಬ್ಜಜ ಕಲ್ಪ ಪರಿಯಂತ ॥
ತಾ ರಜಿಸಿ ಸಾತ್ವರಿಗೆ ಸುಖ ಸಂ । ಸಾರ ಮಿಶ್ರರಿಗಧಮ ಜನರಿಗ ।
ಪಾರ ದುಃಖಗಳೀವ ಗುರು ಪವಮಾನ ಸಲಹೆಮ್ಮ ॥ ಹ.ಕ.ಸಾ.॥"
"ಮೂರೇಳು ಸಾವಿರದಾರು ನೂರು ಜಪ ।
ಓರಂತೆ ಜಪಿಸಿ ಉದ್ಧಾರ ಮಾಡುವಿ ಎಮ್ಮ ॥

ಭಾರತೀರಮಣಾ (ಮನ್ಮನದಲಿ । ತೋರು ತವ ಚರಣ ॥ ಶ್ರೀಜ.ದಾಸರು) (ಓರಂತೆ = ಕಮ್ಮಾರನ ತಿತ್ತಿಯಂತೆ ಎಡೆಬಿಡದೆ ಶ್ವಾಸ ಕಾರ್ಯವನ್ನು ನಡೆಸುವನು)

ವಾಯುದೇವರು ದೇಹದಲ್ಲಿ ಇರುವ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಸಂಚರಿಸುತ್ತಾ ಬೃಹತೀನಾಮಕ ಶ್ರೀಹರಿಯನ್ನು ಧರಿಸಿಕೊಂಡು ಜೀವರಿಗೆ ಅಪರೋಕ್ಷಜ್ಞಾನವನ್ನಿತ್ತು ಮರಣ ಸಂಕಟವಾಗದ ರೀತಿಯಲ್ಲಿ ಬ್ರಹ್ಮನಾಡೀ ಮೂಲಕವಾಗಿ ಜೀವರನ್ನು ಕೊಂಡೊಯ್ದು ಬ್ರಹ್ಮರಂಧ್ರವನ್ನು ಭೇದಿಸಿ ಹನ್ನರಡು ಅಂಗುಲದ ಮೇಲೆ ವಿರಾಜಿಸುತ್ತಿರುವ ತುರಿಯನಾಮಕ ಹರಿಯನ್ನು ಹೊಂದಿಸುತ್ತಾನೆ.

**"ಹತ್ತೇಳು ಎರಡಯುತಾ । ನಾಡಿಗಳಲ್ಲಿ । ಸುತ್ತೀ ಸುತ್ತುವ ಮಾರುತಾ ॥**
**ಉತ್ತರ ಲಾಲಿಸು ಉತ್ಕ್ರಮಣದಲ್ಲಿ । ನೆತ್ತಿಯ ದ್ವಾರದಿಂದ ಲೆತ್ತ ಪೋಗಲೀಸದೆ ॥**
**ತತ್ವುವರೊಳು ಜೀವೋತ್ತಮನೆ ಸಮ । ಚಿತ್ತ ಎನಗೆ ಕೊಡುತಲಿ ಉದ್ಧರಿಸೋ ॥**
**ನಂಬಿದೆ ನಿನ್ನ ಪಾದ । ಮುಖ್ಯ ಪ್ರಾಣ । ನಂಬಿದೆ ನಿನ್ನ ಪಾದ ॥ ಶ್ರೀ ವಿ.ದಾಸರು)**

ತುರಿಯ ನಾಯಕ ಪರಮಾತ್ಮನ ವ್ಯಾಪಾರವು ಈ ಬ್ರಹ್ಮಾಂಡದಲ್ಲಿ ಇಲ್ಲ. ಮೋಕ್ಷದಲ್ಲೇ ಆತನ ವ್ಯಾಪಾರ. ಬ್ರಹ್ಮಾಂಡದಲ್ಲಿ ಶ್ರೀಹರಿಯು ವಿಶ್ವ, ತೈಜಸ, ಪ್ರಾಜ್ಞನಾಗಿ ವ್ಯಾಪಾರ ಮಾಡುತ್ತಾನೆ. ಇದೇ ರೀತಿಯಾಗಿ ಬ್ರಹ್ಮಾಂಡ ಸದೃಶವಾದ ದೇಹದಲ್ಲಿ ಶ್ರೀಹರಿಯು ವಿಶ್ವ, ತೈಜಸ, ಪ್ರಾಜ್ಞನಾಗಿದ್ದು ಜಾಗೃತ್ಸ್ವಪ್ನ, ಸುಷುಪ್ತಿ ಅವಸ್ಥೆಗಳನ್ನು ಜೀವರಿಗೆ ನೀಡುತ್ತಾನೆ. ಆದರೆ ತುರಿಯನಾಮಕನಾಗಿ ಈ ದೇಹದೊಳಗೆ ಇರದೆ ದೇಹವನ್ನು ಬಿಟ್ಟು ನೆತ್ತಿಯ ಮೇಲೆ ಹನ್ನೆರಡು ಅಂಗುಲ ಎತ್ತರದಲ್ಲಿ ಇದ್ದು ಬ್ರಹ್ಮರಂಧ್ರದ ಮೂಲಕವಾಗಿ ಜೀವನನ್ನು ವೀಕ್ಷಿಸುತ್ತಿರುತ್ತಾನೆ. ವಾಯುವಿನ ಅನುಗ್ರಹದಿಂದ ಬ್ರಹ್ಮರಂಧ್ರದ ಮೂಲಕವಾಗಿ ಸಿಡಿದ ಜೀವನನ್ನು ತುರಿಯನಾಮಕ ಹರಿಯು ಹಿಡಿದು ಆಲಂಗಿಸಿಕೊಂಡು ಅಪರೋಕ್ಷವನ್ನು ನೀಡಿ ಕಲ್ಪಸಾಧನವು ಮುಗಿದ ಮೇಲೆ ಮೋಕ್ಷವನ್ನೇ ಕೊಡುತ್ತಾನೆ.

**"ಪುರುಷ ನಾಮಕ ಸರ್ವ ಜೀವರೊ । ಳಿರುವ ದೇಹಾಕಾರ ರೂಪದಿ ।**
**ಕರಣನಿಯಾಮಕ ಹೃಷೀಕಪ ನಿಂದ್ರಿಯಂಗಳಲಿ ॥**
**ತುರಿಯ ನಾಮಕ ವಿಶ್ವ ತಾಹ। ನ್ನೆರಡು ಬೆರಳುಳಿದುತ್ತಮಾಂಗದಿ ।**
**ಎರಡಧಿಕ ಎಪ್ಪತ್ತು ಸಾವಿರ ನಾಡಿಯೊಳಗಿಪ್ಪ ॥ ಹ.ಕ.ಸಾ. ೯–೧೦ ॥**

॥ ಪದ ॥ ನಾಲ್ಕರೊಳೆಂಭ । ತ್ನಾಲ್ಕೆರಡು ಸಾವಿರ ।
ನಾಲ್ಕು ನೂರು ಜಪ । ತಾ ಕುಳಿತು ॥
ನಾಲ್ಕದಿ – ನೆಂಟು ಸಹಸ್ರ । ಓಕುಳಿ ಮಾರ್ಗದಿ ।
ಶ್ರೀಕರನರ್ಚಿಸಿ । ಸಾಕುತ ಸುಜನರ ॥ ೪೦ ॥

**ಅರ್ಥ:** ನಾಲ್ಕರೊಳು = ಸ್ಥೂಲ, ಅನಿರುದ್ಧ, ಲಿಂಗ, ಸ್ವರೂಪಗಳೆಂಬ ನಾಲ್ಕು ವಿಧ ದೇಹಗಳಲ್ಲಿ; ೮೪+೨=೮೬; ಸಾವಿರ = ೮೬೦೦೦; ನಾಲ್ಕು ನೂರು ಜಪ = ೮೬೦೦೦+೪೦೦ ಶ್ವಾಸ (ಜಪ) ಸಂಖ್ಯೆಯ ಶ್ವಾಸೋಚ್ಛ್ವಾಸಗಳನ್ನು; ತಾ ಕುಳಿತು = ವಾಯುದೇವರು ಶರೀರಗಳಲ್ಲಿ ಇದ್ದು; ನಾಲ್ಕ್ದಿನೆಂಟು ಸಹಸ್ರ = ೪X೦೮=೭೨೦೦೦ ಸಾವಿರ; ಓಕುಳಿಮಾರ್ಗದಿ = ರಕ್ತಪ್ರವಾಹಕ್ಕೆ ಎಡೆಯಾಗಿರುವ ನಾಡಿಗಳಲ್ಲಿ; ಶ್ರೀಕರನರ್ಚಿಸುತ = ಶ್ರೀಕರರೂಪನಾದ ಶ್ರೀಹರಿಯ ಪೂಜಾರೂಪವಾದ ವ್ಯಾಪಾರವನ್ನು ಮಾಡುತ್ತ; ಸಾಕುತ ಸುಜನರ = ಸಜ್ಜನರನ್ನು (ಜ್ಞಾನವಿತ್ತು) ರಕ್ಷಿಸುವನು.

**ವಿಶೇಷಾರ್ಥ:** ವಾಯುದೇವರು ಪ್ರತಿ ನಿತ್ಯವೂ ಜೀವರಾಶಿಗಳಲ್ಲಿ ಇದ್ದು ಒಟ್ಟಿಗೆ ಎಂಭತ್ತಾರು ಸಾವಿರದ ನಾನ್ನೂರು ಹಂಸ ಜಪವನ್ನು ಮಾಡುತ್ತಾರೆ. ಹಲವು ಕಡೆ ದಿನ ಒಂದಕ್ಕೆ ೨೧೬೦೦ ಜಪ ಮಾಡುತ್ತಾರೆ ಎಂದು ಶ್ರೀಜಗನ್ನಾಥದಾಸರು ಹೇಳಿರುವರು. ಇದು ಹೇಗೆ ಸಮನ್ವಯವಾಗುತ್ತದೆ ಎಂದರೆ ಶ್ರೀದಾಸರೇ ಈ ಸಮಸ್ಯೆಯನ್ನು ಹೀಗೆ ಬಿಡಿಸಿದ್ದಾರೆ –

"ಈಶರೀರ ಚತುಷ್ಟಯಗಳೊಳು । ಕೋಶಧಾತುಗ ಭಾರತಿಪ ಪ್ರಾ ।
ಣೇಶ ನಿಪ್ಪತ್ತೊಂದು ಸಾವಿರದಾರು ನೂರೆನಿಪ ॥
ಶ್ವಾಸ ರೂಪಕ ಹಂಸ ಭಾಸ್ಕರ । ಭೇಶ ರವಿಗಳೊಳಿದ್ದವರ ಕೈ ಪಿಡಿ ।
ದೀಸರೋಜಭವಾಂಡದೊಳು ಸರ್ವತ್ರ ತುಂಬಿಹನು ॥ ೭ – ೫ ॥"

ಮೇಲಿನ ಪದ್ಯದಲ್ಲಿ "ಈ ಶರೀರ ಚತುಷ್ಟಯಗಳೊಳು" ಎಂಬ ವಾಕ್ಯಕ್ಕೆ ಪ್ರತಿಯೊಂದು ಶರೀರದಲ್ಲಿಯೂ ೨೧೬೦೦ ರಂತೆ ಜೀವ ಲಿಂಗನಿರುದ್ಧ, ಸ್ಥೂಲ ಕಳೇವರಗಳಲ್ಲಿ ಮಾಡುವ ಹಂಸ ಜಪಗಳನ್ನು ಒಟ್ಟಿಗೆ ಸೇರಿಸಿದರೆ ೨೧೬೦೦ X ೪ = ೮೬೪೦೦ ಹಂಸ, ಜಪಗಳಾಗುತ್ತವೆ ಎಂದು ತಿಳಿಯಬೇಕು. ಇದನ್ನು ಶ್ರೀದಾಸರು ಮುಂದಿನ ಪದ್ಯದಲ್ಲಿ ವಿಶದೀಕರಿಸಿರುತ್ತಾರೆ.

"ಈರೆರಡು ದೇಹಗಳೊಳಗಿದ್ದು ಸ । ಮಿರದೇವನು ಶ್ವಾಸ ಜಪನಾ ।
ನೂರಧಿಕವಾಗಿಪ್ಪ ಎಂಭತ್ತಾರು ಸಾಹಸ್ರ ॥
ತಾ ರಚಿಸುವನು ದಿವಸ ಒಂದಕೆ । ಮೂರು ವಿಧ ಜೀವರೊಳಗಿದ್ದು ಖ ।
ರಾರಿಯ ಕರುಣಾ ಬಲವದೆಂತುಟೋ ಪವನರಾಯನೊಳು (ಸಾ.ಪ್ರ.ಸಂ. ೪೪)

ಈರೆರಡು ಎಂದರೆ ೨ X ೨ = ೪ ಶರೀರಗಳೆಂದಾಯಿತಲ್ಲವೇ? ಈ ನಾಲ್ಕು ಶರೀರಗಳಲ್ಲಿ ಸ್ವರೂಪವೂ ಸೇರಿದೆ ಎಂಬುದು ನಿರ್ವಿವಾದ. ಇದನ್ನು ಅನುಸರಿಸಿ ವಾಯುದೇವರು ಸ್ವರೂಪದಲ್ಲಿಯೂ ಇರುವರೆಂಬುದು ಕೈಮುತ್ತು ನ್ಯಾಯವಾಗುತ್ತದೆ. ಆದರೆ ಕೆಲವೆಡೆ ವಾಯುದೇವರು ಸ್ವರೂಪದಲ್ಲಿ ಇರಲು ಶಕ್ಯವಿಲ್ಲ. ಯಾಕೆಂದರೆ ಆ ಬ್ರಹ್ಮ ಸ್ಥಂಭ ಪರಿಯಂತವಾಗಿ ಜೀವರ ಗಾತ್ರವು ಒಂದೇ ಆಗಿರುವುದರಿಂದ ಅದ್ಹೇಗೆ ವಾಯುದೇವರು ಸ್ವರೂಪದಲ್ಲಿ ಇರಲು ಸಾಧ್ಯ? ಎಂದು ಕೇಳುತ್ತಾರೆ. ಇದಕ್ಕೆ ಉತ್ತರವು ಇಷ್ಟೇ. ವಾಯುದೇವರ ಸ್ವರೂಪಗಾತ್ರವು ಇತರ ಜೀವರಷ್ಟೇ ಆಗಿದ್ದರೂ ಗುಣದಲ್ಲಿ ವಿಭಿನ್ನತೆ ಹೊಂದಿರುವುದಾಗಿದೆ. ಘನ, ದ್ರವ, ಅನಿಲಗಳ ಗಾತ್ರವು ಒಂದೇ ಆಗಿದ್ದರೂ ಅವು ಒಂದಕ್ಕೊಂದು ಏಕಕಾಲದಲ್ಲಿ ಏಕದೇಶದಲ್ಲಿ ಸಮ್ಮಿಳಿತವಾಗಿರಬಲ್ಲವು. ಉದಾಹರಣೆಗೆ ಬಟ್ಟೆಯನ್ನು ಬಿಸಿ ನೀರಿನಲ್ಲಿ ತೋಯಿಸಿದರೆ ನೀರು ಹಾಗೂ ಉಷ್ಣಗಳು ಬಟ್ಟೆಯಲ್ಲಿ ವ್ಯಾಪಿಸಿಕೊಂಡಿರುತ್ತವೆಯಲ್ಲವೇ? ಹಾಗೆಯೇ ಸೂಕ್ಷ್ಮವಾದ ತೇಜೋರೂಪದಿಂದ ವಾಯುದೇವರು ಸ್ವರೂಪ ದೇಹಗಳಲ್ಲಿ ಅಂತರ್ಯಾಮಿಯಾಗಿ ಇದ್ದೇ ಇರುವರು. ಮೇಲಾಗಿ ವಾಯುದೇವರಲ್ಲಿ ಅಸುರಾವೇಶವಿಲ್ಲ. ಅಜ್ಞಾನವಿಲ್ಲ. ಅವರ ಲಿಂಗ ಶರೀರವು ದಗ್ಧಪಟದೋಪಾದಿಯಲ್ಲಿ ಇತರರಿಗಿಂತ ವಿಭಿನ್ನವಾಗಿದೆ. ಹೀಗೆ ಅವರು ಸ್ವರೂಪದಲ್ಲಿ ಇರಲು ಶಕ್ಯವಿದೆ. ಮುಂದೆ ಇದನ್ನೇ ಸತ್ಪ್ರಮಾಣ ಪೂರ್ವಕವಾಗಿ ಸಮರ್ಥಿಸಲಾಗುವುದು.

ಮೇಲಾಗಿ ಸ್ವರೂಪದೇಹದಲ್ಲಿ ವಾಯು ವ್ಯಾಪ್ತಿತ್ವವನ್ನು ನಿರಾಕರಿಸಿದರೆ ಹಂಸ ಜಪಗಳು ೨೧೬೦೦ X ೩ = ೬೪,೮೦೦ ಮಾತ್ರ ಆಗುತ್ತವೆ. ಶ್ರೀದಾಸರಾಯರು ಹೇಳಿರುವಂತೆ ೮೬,೪೦೦ ಆಗುವುದಿಲ್ಲ. ಈ ಆಕ್ಷೇಪಣೆಗೆ ಹೀಗೆ ಹೇಳುತ್ತಾರೆ "ತನು ಚತುಷ್ಟಯ"ಗಳೆಂದರೆ ಸ್ಥೂಲ, ಸೂಕ್ಷ್ಮ, ಲಿಂಗ, ಸ್ವರೂಪಗಳಲ್ಲ ಅವು ಉದ್ಭಿಧ, ಶ್ವೇದಜ, ಅಂಡಜ, ಬೀಜ ಎಂದು ನಾಲ್ಕು ವಿಧವಾದ ಜೀವಿಗಳ ದೇಹಗಳೆಂದು ತಿಳಿಯಬೇಕು ಎನ್ನುತ್ತಾರೆ. ಆದರೆ ಈ ನಿರೂಪಣೆಯು ಸಮರ್ಪಕವಾಗಲಾರದು. ಏಕೆಂದರೆ ಉದ್ಭಿಧ, ಶ್ವೇದಜ, ಅಂಡಜ, ಬೀಜ ಎಂಬುವು ಭಿನ್ನ, ಭಿನ್ನವಾದ ದೇಹಗಳು. ಈ ನಾಲ್ಕು ವಿಧದ ಜೀವರಾಶಿಗಳಲ್ಲಿ ಅನಂತ ಸಂಖ್ಯಾತ ಜೀವರು ಇರುವುದರಿಂದ ೨೧೬೦೦ X ಅನಂತ ಎನ್ನಬೇಕಾಗುತ್ತದೆಯೇ ವಿನಃ ೮೬೪೦೦ ಆಗಲಾರದು ಇದು ಅನವಸ್ಥಾದೋಷದಿಂದ ನಿರಾಕೃತವಾಗುತ್ತದೆ. ಆದ್ದರಿಂದ ಒಬ್ಬ ಜೀವನೇ ಹೊಂದಿರುವ ತನುಚತುಷ್ಟಯಗಳಲ್ಲಿ ವಾಯುವಿನ ವ್ಯಾಪಾರ ಉಂಟೆಂದು ತಿಳಿಯಬೇಕು. ಶ್ರೀಜಗನ್ನಾಥದಾಸರಾಯರೂ ಹೇಳಿರುವುದೂ ಹಾಗೆಯೇ.

ಒಂದು ವೇಳೆ ತನುಚತುಷ್ಟಯಗಳೆಂದರೆ ೧ ಉದ್ಭಿಧ, ೨. ಶ್ವೇದಜ, ೩. ಅಂಡಜ ೪. ಬೀಜ ಎಂದು ತೆಗೆದುಕೊಂಡರೆ ಆಗುವ ತೊಂದರೆ ಏನೆಂದರೆ ವಾಯುದೇವರು ಈ ಗಣಗಳ ಸ್ಥೂಲಾದೇಹಗಳಲ್ಲಿ ಮಾತ್ರ ಇರುವನೆಂಬ ಅಭಿಪ್ರಾಯವು ಮಾತ್ರ ಮೂಡುತ್ತದೆ. ಈ ಗಣಗಳಿಗೆ ತನುಚತುಷ್ಟಯಗಳು ಇಲ್ಲವೆಂಬುದನ್ನು ಒಪ್ಪಲಿಕ್ಕಾಗುವುದಿಲ್ಲ. ಅಲ್ಲಿಗೆ ವಾಯುದೇವರು ಸ್ವರೂಪವನ್ನು ಬಿಟ್ಟರೂ ಉಳಿದಮೂರು ಶರೀರಗಳಲ್ಲಿ ವ್ಯಾಪಾರ ಮಾಡುತ್ತಾರೆಂದರೆ (ಉದ್ಭಿದ, ಶ್ವೇದಜ, ಅಂಡಜ, ಬೀಜ) X ಅನಂತ X ೩ ಆಗಬೇಕಲ್ಲವೆ? ಅಥವಾ ಸ್ವರೂಪ ಒಂದನ್ನು ಬಿಟ್ಟು ಯಾವುದೋ ಒಂದು ಅಂದರೆ (ಯಾವುದು) ಒಂದು ಶರೀರದಲ್ಲಿ, ಶ್ವಾಸ ಜಪಮಾಡುತ್ತಾರೆಂದು ತಿಳಿಯೋಣವೇ? ಎಷ್ಟು ಹಾಸ್ಯಾಸ್ಪದ! ಹಂಸ ಮಂತ್ರ ಜಪದ ಚಿಂತನೆಯೇ ಇಲ್ಲಿ ಬುಡಮೇಲು ಆಗುತ್ತಿದೆಯಲ್ಲಾ !! ಈ ರೀತಿಯಾದ ತಪ್ಪು ದಾರಿಯನ್ನು ಒಡಿಯಬಾರದು.

**ಮಾನಸ ಸ್ಮೃತಿಯಲ್ಲಿ ಶ್ರೀವ್ಯಾಸತತ್ವಜ್ಞರು "ಮುಖ್ಯ ಪ್ರಾಣೋ ಶ್ವಾಸ ರೂಪ । ಹಂಸಮಂತ್ರ ಜಪೇತ್ಸದಾ ॥ ಜೀವೇನ ಕಾರಯತ್ವೇವ । ತಜ್ಜಪಂ ಹರಿ ತುಷ್ಟಯೇ ॥"**

ಎಂದು ಹೇಳುತ್ತಾ ದೇಹಗಳಲ್ಲಿ ವ್ಯಾಪಿಸಿಕೊಂಡಿರುವ ಒಂಭತ್ತು ಕೋಟಿ ತತ್ವಾಭಿಮಾನಿ ದೇವತೆಗಳು ಶ್ರೀಹರಿಯಾಜ್ಞೆಯಂತೆ ಪ್ರವರ್ತರಾಗಿದ್ದಾರೆ ಎಂದೂ ತಿಳಿಸಿರುತ್ತಾರೆ. ಈ ತತ್ವಾಭಿಮಾನಿಗಳು ಶ್ರೀಹರಿಯ ತರುವಾಯ ಮುಖ್ಯಪ್ರಾಣನಿಂದಲೇ ಪ್ರೇರಿತರಾಗಿ ತತ್ವಕಾರ್ಯಗಳನ್ನು ತಮ್ಮ ಮಟ್ಟಿಗೆ ನಡೆಸುತ್ತಾರೆ. ಆದರೆ ಮುಖ್ಯಪ್ರಾಣನು ಸಕಲ ತತ್ವಕಾರ್ಯಗಳನ್ನು ದೇವಾಂತರ್ಯಾಮಿಯಾಗಿ ಅನಾಯಾಸವಾಗಿ ನಿರ್ವಹಿಸುತ್ತಿದ್ದಾನೆ. "ಮುಖ್ಯ ಪ್ರಾಣ ವಶೇ ಸರ್ವಂ । ಸವಿಷ್ಣೋರ್ವಶಗ ಸದಾ" ॥ ಅ.ಭಾ ॥"

**"ತತ್ವಾಭಿಮಾನಿನೋ ದೇವಾಃ । ದೇಹೇಸ್ಮಿನ್ನವ ಕೋಟಯಃ ॥ ವಿಷ್ಣಾಜ್ಞೆಯಾ ಪ್ರವರ್ತಂತೇ । ತತ್ತತ್ತತ್ವಾವ ಬೋಧಕಃ ॥ ಮಾ.ಸ್ಮೃ ॥**

ವಾಯುದೇವರು ಒಬ್ಬ ಮನುಷ್ಯನು ಪೂರ್ಣಾಯುನಾಗಿದ್ದಲ್ಲಿ ಆತನ ಆಯುರ್ಮಾನದಲ್ಲಿ ಒಟ್ಟಿಗೆ ೨೧೬೦೦ X ೩೬೦ X ೧೦೦ = ೭೭,೭೬,೦೦,೦೦೦ ಶ್ವಾಸ ಜಪಗಳನ್ನು ಮಾಡುತ್ತಾರೆ. (ನಾಲ್ಕು ಶರೀರಗಳಲ್ಲಿ ೭೭,೭೬೦೦,೦೦೦ X ೪ = ೩೧೧,೦೪,೦೦,೦೦೦ ಶ್ವಾಸಜಪಗಳನ್ನು ಮಾಡುತ್ತಾರೆ. ಪ್ರತಿಯೊಂದು ಶ್ವಾಸಕ್ಕೂ ಗಣಿತ ಮಹಾತ್ಮೆಯು ಉಂಟು)

ಹೀಗೆ ಶ್ವಾಸರೂಪಿಯಾದ ವಾಯುವು ನಮ್ಮ ಶರೀರದಲ್ಲಿ ವ್ಯಾಪಿಸಿಕೊಂಡಿರುವ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಶ್ರೀಕರೂಪಿಯಾದ ಪರಮಾತ್ಮನನ್ನು ಧರಿಸಿಕೊಂಡು ಗರುಡಾಂತರ್ಯಾಮಿಯಾಗಿ ಸಂಚರಿಸುತ್ತ ಜೀವರನ್ನು ಬದುಕಿಸಿರುತ್ತಾನೆ. ಗರುಡನು ಅಮುಖ್ಯನು. ವಾಯುವೇ ಗರುಡನಲ್ಲಿ ಇದ್ದು ತತ್ಶಬ್ದವಾಚ್ಯನಾಗಿ ತದ್ರೂಪದಿಂದ ಶ್ರೀಹರಿಯನ್ನು ಹೊತ್ತು ತಿರುಗುವನು. ಅದಕ್ಕೆ ವಿಷ್ಣು ಸಹಸ್ರನಾಮದಲ್ಲಿ ಶ್ರೀಹರಿಯನ್ನು "ವರದೋ ವಾಯುವಾಹನಃ" ಎಂದಿರುವುದು. ಇದನ್ನು ಉಪಾಸಿಸುವವರು ದೀರ್ಘಾಯುಷ್ಯವಂತರಾಗುತ್ತಾರೆ. ಅಪಮೃತ್ಯು, ದಾರಿದ್ರ್ಯ ನಿವಾರಣಾರ್ಥವಾಗಿ ಬೃಹತೀ ಸಹಸ್ರ ಹೋಮವನ್ನು ಮಾಡುತ್ತಾರೆ. ೭೨೦೦೦ ನಾಡಿಗಳ ವಿವರಣೆಯು ಹೀಗಿದೆ.

ಗರುಡನಿಗೆ ಸಾದೃಶವಾದುದೇ ನಮ್ಮ ದೇಹ.

ಎಡ ಬಲಗಳಲ್ಲಿ ವ್ಯಾಪಿಸಿರುವ ನಾಡಿಗಳ ಪ್ರಭೇದವು ಹೀಗಿದೆ.

| | | | | |
|---|---|---|---|---|
| ಬಲ | ಸಂಖ್ಯ ೩೬೦೦೦ | ಪುರುಷ ೩೬೦೦೦ | ದೀರ್ಘ ೩೬೦೦೦ | ದಿವ ೩೬೦೦೦ |
| ಎಡ | ೩೬೦೦೦ | ಸ್ತ್ರೀ ೩೬೦೦೦ | ಹ್ರಸ್ವ ೩೬೦೦೦ | ರಾತ್ರಿ ೩೬೦೦೦ |

ವಾಯುದೇವರು ಪ್ರತಿ ಭಾಗದ ನಾಡಿಗಳಲ್ಲಿ ೫೦೦ ನಾಡಿಗಳಲ್ಲಿ ಜೀವರನ್ನು ಬಲಭಾಗದಿಂದ ಎಡಗಿವಿಯವರೆಗೆ ಸಾಗಿಸುತ್ತ ಉತ್ಕ್ರಮಣ ಮಾಡಿಸಿದರೆ ಅದಕ್ಕೆ ದಕ್ಷಿಣಾಯನವೆಂದೂ, ಅಂಥವರು ನರಕಾದಿಗಳನ್ನು ಅನುಭವಿಸುತ್ತಾರೆಂದೂ ಮತ್ತು ಎಡಬಾಗದ ೫೦೦ ನಾಡಿಗಳ ಮುಖಾಂತರವಾಗಿ ಬಲಗಿವಿಯಿಂದ ಉತ್ಕ್ರಮಣ ಮಾಡಿಸಿದರೆ ಅದಕ್ಕೆ ಉತ್ತರಾಯಣವೆಂದೂ ಅಂಥವರು ಸ್ವರ್ಗಾದಿ ಲೋಕಗಳನ್ನು ಸೇರುವರೆಂದೂ ವಿದಿತವಾಗಿದೆ. ಈ ಬಗ್ಗೆ ಇದೇ ಪುಸ್ತಕದ ಪದ ೨೫ ರಲ್ಲಿ ಹೆಚ್ಚಿಗೆ ವಿವರಿಸಲಾಗಿದೆ.

॥ ಪದ ॥ **ಮಾತರಿಶ್ವನೆಂದು । ಆತ್ಮದೊಳಿರುವನು ।**
**ಸೂತ್ರ ನಾಮದಿ ಲಿಂಗ । ಗಾತ್ರದಲಿಹನು ॥**
**ಮತ್ತೆ ಸೂಕ್ಷ್ಮದೊಳು । ಉಕ್ತನಾಮದಿ ಮು ।**
**ಖ್ಯಾತ್ಮನೆಂದು ಸ್ಥೂಲ । ಕತೃಕದಿರುತಲಿ ॥ ೪೧ ॥**

**ಅರ್ಥ:** ಆತ್ಮದೊಳು = ಸ್ವರೂಪದೇಹದಲ್ಲಿ, (ಮಾತರಿಶ್ವನೆಂಬ ಹೆಸರಿನಿಂದ); ಲಿಂಗ ಗಾತ್ರ = ಲಿಂಗ ಶರೀರದಲ್ಲಿ (ಸೂತ್ರನೆಂಬ ಹೆಸರಿನಿಂದ); ಸೂಕ್ಷ್ಮದೊಳು = ಸೂಕ್ಷ್ಮ ಶರೀರದಲ್ಲಿ; ಉಕ್ತನಾಮದಿ = ಇದೇ ಹೆಸರಿನ ಅಂದರೆ ಸೂಕ್ಷ್ಮನೆಂದೇ ಕರೆಸುತ್ತ; ಮುಖ್ಯಾತ್ಮನೆಂದು = ಮುಖ್ಯ ಪ್ರಾಣನೆಂಬ ಹೆಸರಿನಿಂದ; ಸ್ಥೂಲ ಕತೃಕದಿ ಇರುತಾ = ಸ್ಥೂಲ ದೇಹದಲ್ಲಿ ಇರುವವನಾಗಿದ್ದು; ಲೀಲೆಗಳನ್ನು ತೋರಿಸುತ್ತಿರುವನು;

**ವಿಶೇಷಾರ್ಥ:** ಹಿಂದಿನ ಪದ್ಯದಲ್ಲಿ ವಾಯುದೇವರು ಸ್ವರೂಪ ದೇಹವನ್ನೂ ಒಳಗೊಂಡು ಉಳಿದ ಮೂರು ದೇಹಗಳಲ್ಲಿಯೂ ವ್ಯಾಪ್ತರಾಗಿದ್ದು ಶ್ವಾಸ ಜಪಗಳನ್ನು ಮಾಡುತ್ತಿರುವರೆಂದು ಸ್ಥೂಲವಾಗಿ ಹೇಳಲಾಗಿದೆಯಲ್ಲವೇ ಅದನ್ನೇ ಈ ಪದ್ಯದಲ್ಲಿ ಸಪ್ರಮಾಣ ಪೂರ್ವಕವಾಗಿ ಸಮರ್ಥಿಸಲಾಗಿದೆ. ವಾಯುದೇವನು ಸ್ವರೂಪ ದೇಹದಲ್ಲಿ ಇದ್ದು ಮಾತರಿಶ್ವನೆಂದೂ ಕರೆಸುತ್ತಾನೆ. ಈತನು ಮತ್ತೊಂದು ಪ್ರಕಾರದಿಂದ ಸೂತ್ರನೆಂಬ ಹೆಸರಿನಿಂದ ಲಿಂಗ ಶರೀರದಲ್ಲಿಯೂ, ಸೂಕ್ಷ್ಮನೆಂಬ ಹೆಸರಿನಿಂದ ಅನಿರುದ್ಧ (ಸೂಕ್ಷ್ಮ) ದೇಹದಲ್ಲಿಯೂ ಮತ್ತು ಮುಖ್ಯಪ್ರಾಣನೆಂದು ಸ್ಥೂಲ ದೇಹದಲ್ಲಿಯೂ ಇರುತ್ತ ಪ್ರತಿ ದೇಹದಲ್ಲಿಯೂ ೨೧೬೦೦ ಶ್ವಾಸಜಪದಂತೆ ಒಟ್ಟು ನಾಲ್ಕು ಶರೀರಗಳಲ್ಲಿ ಒಂದು ದಿನಕ್ಕೆ ೮೬೪೦೦ ಶ್ವಾಸ ಜಪಗಳನ್ನು ಮಾಡುತ್ತಿರುವರೆಂದು ತಿಳಿಯಬೇಕು.

ಪ್ರಮಾಣಗಳು "ಮೂರು ವಿಧ 'ಜೀವಾ'ರೊಳ ಹೊರ ನೀ ಪ್ರೇರಕದೇವಾ" ಎಂಬ ಪದದಲ್ಲಿ ಶ್ರೀಜಗನ್ನಾಥದಾಸರು ಮೂರು ವಿಧ ಜೀವಾ ಎಂದಿದ್ದಾರೆಯೇ ವಿನಃ 'ಮೂರು ವಿಧ ದೇಹಾ' ಎನ್ನಲಿಲ್ಲ. 'ಒಳ- ಹೊರ' ಎಂಬ ಶಬ್ದವು ಕೈಮುತ್ತುನ್ಯಾಯದಂತೆ ಜೀವನ ಒಳಗೂ ಹಾಗೂ ಹೊರಗಿನ ಇತರ ಮೂರು ದೇಹಗಳಲ್ಲಿಯೂ ಸಹ ಇವರ ವ್ಯಾಪ್ತಿಯು ಇದೆ ಎಂಬುದನ್ನು ತಿಳಿಸಿರುತ್ತಾರೆ.

ಮೇಲಿನ ವಾದವನ್ನು "ಮೂರು ವಿಧ ಜೀವರೊಗಬ್ಜಜ ಕಲ್ಪ ಪರಿಯಂತ । ತಾರಜಿಸಿ . . . ." ಎಂಬ ಮಾತಿನಿಂದಲೂ ಸಮರ್ಥಿಸಿರುತ್ತಾರೆ. ಮತ್ತು

**"ಪವಮಾನರಾಯ ನೀ । ತ್ರಿವಿಧ ಜೀವರೊಳಿದ್ದು ।**
**ವಿವಿಧ ವ್ಯಾಪಾರಾ ನೀಮಾಡೀ ॥**
**ವಿವಿಧ ವ್ಯಾಪಾರಾ ನೀ ಮಾಡಿ ಮಾಡಿಸಿ ।**
**ಅವರವರ ಗತಿಯಾ ಕೊಡುತಿಪ್ಪೆ ಸುವ್ವಿ ॥ ತ.ಸು॥"**
**ಎಂದು ತಮ್ಮ ತತ್ವ ಸುವ್ವಾಲಿಯಲ್ಲಿ ಧೃಡೀಕರಿಸಿರುತ್ತಾರೆ.**
**"ಗರುಡ ಶೇಷ ಭವಾದಿ ನಾಮವ । ಧರಿಸಿ ಪವನ ಸ್ವರೂಪ ದೇಹದಿ ।**
**ಕರಣನೀಯಾಮಕನು ತಾನಾಗಿಪ್ಪ ಹರಿಯಂತೆ ॥**

**ಸರಸಿಜಾಸನವಾಣಿ ಭಾರತಿ । ಭರತನಿಂದೊಡಗೂಡಿ ಲಿಂಗದಿ ।**
**ಇರುತಿಹರು ಮಿಕ್ಕಾದಿತೇಯರಿಗಿಲ್ಲವಾ ಸ್ಥಾನ ॥ ಹ.ಕ.ಸಾ॥**

ವಾಯುದೇವರು "ಹರಿ ರಮಾ ಪ್ರಸಿದ್ಧಾತಿರಿಕ್ತಾನಂತ ವೇದವೇದ್ಯಾಯ ನಮಃ" ಎಂದು ಶ್ರೀವ್ಯಾಸರಾಯರು ಹೇಳಿರುವಂತೆ ಸಕಲ ಶಬ್ದ ವಾಚ್ಯರು. ಅಂತೆಯೇ ಅವರು ಸಕಲ ಜೀವರ ಗುಣ, ರೂಪ, ಕ್ರಿಯೆಗಳಿಂದ ನಿಯಾಮಕತ್ವೇನ ಚಿಂತಿತರು. ಎಂದರೆ ಇತರ ದೇವತೆಗಳು ತಮ್ಮ ನಿಯಾಮಕರು ವಾಯುದೇವರೆಂದು ತಿಳಿಯುತ್ತಾರೆ. ವಾಯು ದೇವರೇ ಗರುಡ, ಶೇಷ, ರುದ್ರರ ನಾಮಗಳನ್ನು ಧರಿಸಿಕೊಂಡು ಜೀವರ ಸ್ವರೂಪದಲ್ಲಿ ಇರುತ್ತಾರೆ. ವಾಯುದೇವರ ವಿನಃ ಸ್ವರೂಪದಲ್ಲಿ ಬ್ರಹ್ಮ, ವಾಣಿ, ಭಾರತಿಯರಿಗೂ ಸಹ ಈ ದೇಹಗಳಲ್ಲಿ ವ್ಯಾಪ್ತಿತ್ವವು ಇಲ್ಲ. ಇವರಿಗೆ ಲಿಂಗ, ಸೂಕ್ಷ್ಮ, ಸ್ಥೂಲ ದೇಹಗಳಲ್ಲಿ ಮಾತ್ರ ವ್ಯಾಪ್ತಿತ್ವವು ಉಂಟು. ಆದರೆ ಗರುಡ, ಶೇಷ, ರುದ್ರರಿಂದಾರಂಭಿಸಿ ಕೆಳಗಿನ ದೇವತೆಗಳಿಗೆ ಲಿಂಗ ಮತ್ತು ಸ್ವರೂಪ ದೇಹಗಳಲ್ಲಿ ವ್ಯಾಪ್ತಿತ್ವವು ಇಲ್ಲ. ಗರುಡ, ಶೇಷ, ರುದ್ರರಿಗೆ, ತತ್ಪತ್ನಿಯರಿಗೆ ಅನಿರುದ್ಧ ದೇಹದಲ್ಲಿಯೂ, ಇಂದ್ರ ಕಾಮಾದಿ ಕೆಳ ದೇವತೆಗಳಿಗೆ ಸ್ಥೂಲ ದೇಹದಲ್ಲಿ ಮಾತ್ರ ವ್ಯಾಪ್ತಿತ್ವವು ಇರುತ್ತದೆ.

ಕೆಲವರು ಅದೇ ಹಳೇ ರಾಗದಿಂದ "ಗರುಡ, ಶೇಷ, ಭವಾದಿ ನಾಮದಿ ಸ್ವರೂಪದಲ್ಲಿ ಇರುವವನು ಶ್ರೀಹರಿಯೇ ಹೊರತಾಗಿ ವಾಯುವು ಅಲ್ಲ" ಎಂದು ಡಿಂಡಿಮ ಬಾರಿಸುತ್ತಾರೆ. ಆದರೆ ಶ್ರೀಜಗನ್ನಾಥದಾಸರು ಇಲ್ಲಿ ಶ್ರೀಹರಿಯನ್ನು ಉಪಮಾನ ಸ್ಥಾನದಲ್ಲಿ ನಿಲ್ಲಿಸಿರುವರೆಂಬುದನ್ನು ಇವರು ಏಕೆ ಗಮನಿಸುತ್ತಿಲ್ಲವೋ ತಿಳಿಯದು. ಉಪಮೇಯನು ಪವನನಲ್ಲವೇ? ". . . ನಾಮವ ಧರಿಸಿ ಪವನ ಸ್ವರೂಪ ದೇಹದಿ . . . ಇಪ್ಪ ಹರಿಯಂತೆ" ಎಂದರೆ "ಹರಿಯಂತೆ" ಎಂದರೆ "ಹರಿ" ಎಂತ ಅರ್ಥವೇ? ಹರಿಯು ಇರುವ ಪರಿಯಲ್ಲಿ ಪವಮಾನನು ಇರುವನೆಂಬುದಾಗಿ ಮಂದಾಧಿಕಾರಿಗಳೂ ಅರ್ಥೈಸುತ್ತಾರೆ. ಇನ್ನು ಕೆಳಗಿನ ಪ್ರಮಾಣಗಳನ್ನು ಗಮನಿಸಿರಿ.

"ಪ್ರಾಣೋ ವಂಶ ಸ್ಥವಿರಃ . . . .ಚಕ್ಷುಃ ಶ್ರೋತ್ರಂ । ಮನೋವಾಗಿಂದ್ರಿಯಾಣಿ ಶರೀರಂ ॥ ಸರ್ವ ಆತ್ಮಾ ಸಮಾಹಿತಸ್ತಸ್ಯೈ । ತಸ್ಮಾತ್ಮನಃ ಪ್ರಾಣ ಊಷ್ಮ ರೂಪವಸ್ತೀ ನೀ ॥ಐ.ಉ.ಅ.೨ಖಂಡ ೧॥"

**ಅರ್ಥ:** ಪ್ರಾಣನು ಇಂದ್ರಿಯ, ಶರೀರ, ಆತ್ಮಗಳಲ್ಲಿ ಪ್ರಾಣನಾಗಿ ವಾಸಿಸಿರುತ್ತಾನೆ.

**"ಮುಖ್ಯ ಪ್ರಾಣೋ ಮಹಾ ನೇಷಾ । ಏನವ್ಯಾಪ್ತಂಚ ಚರಾಽಚರಂ ॥**
**ತಸ್ಮಿನ್ ಬತಮಿದಂ ಸರ್ವಂ ॥ ಚೇತನಾ ಽಚೇತನಾತ್ಮಕಂ ॥**
**ಯಥಾ ಸೂತ್ರೇ ಮಣಿಗಣಾಃ ರಥಾ ನಾಭಾ ವರಾಯಥಾ ॥**
**ಯಥಾ ಕಂಠ ಪಟಾಸೂತ್ರೇ ಓತಾಃ ಪ್ರೇತಾಶ್ಚ ಸಂಸ್ಥಿತಾಃ ॥ಭಾಗ.ತಾ॥"**

**ಅರ್ಥ:** ವಾಯುದೇವರು ಚೇತನಾ ಚೇತನಾತ್ಮಕವಾದ ಈ ಜಗತ್ತಿನಲ್ಲಿ ಆಧಾರ ಸ್ವರೂಪನಾಗಿ ಮಣಿಗಳಿಗೆ ಸೂತ್ರದಂತೆ, ರಥದ ಗಾಲಿಗಳಿಗೆ ಅಚ್ಚಿನಂತೆ ವಸ್ತ್ರಗಳಿಗೆ ತಂತುಗಳಂತೆ ಓತ ಪ್ರೋತನಾಗಿ ವ್ಯಾಪಿಸಿ ಕೊಂಡಿರುವನು.

"ಜೀವೇಷು ತಿವಿಧಾ ಪ್ರೋಕ್ತಾಃ । ತೇಷು ಜೀವೇಷು ದೇಹೇಷುಚ ವಸತ್ಯಯಂ"
ಪವಮಾನಾಭಿದೋ ವಾಯುಃ । ಉತ್ತಮಾನಾಂ ಶರೀರಗಃ ॥
ಸ್ವರೂಪೇಂದ್ರಿಯ ದೇಹೇಷು । ಮಾತರಿಶ್ವಾಭಿಧಾನತಃ ॥
ಸ್ಥೂಲ ದೇಹ ಗತಸ್ಯೋಽಪಿ । ಮುಖ್ಯ ಪ್ರಾಣಾಭಿದೋ ಹಿಚಃ ॥
ಧತ್ತೇಲಿಂಗ ಶರೀರಸ್ಥಃ ಸೂತ್ರನಾಮಾ ಮಹಾಪ್ರಭುಃ ॥
ಸೂಕ್ಷ್ಮದೇಹ ಗತ ಸ್ಯೋಽಪಿ । ಸೂಕ್ಷ್ಮರೂಪೇತಿ ಚೋಚ್ಯತೇ ॥
ಮಧ್ಯಮಾಧಮ ದೇಹೇಷು । ಪ್ರಾಣಾಪಾನಾಭಿಧಾನತಃ ॥
ಸ್ವರೂಪ ದೇಹ ಬುಧ್ಯಾದಿ । ಸ್ಥಿತತ್ವೇನ ಮಹಾ ವಿಭುಃ ॥
ಪ್ರೇರಯತ್ಯಖಿಳಂವಿಶ್ವಂ । ಜಂಗಮಾರಚರ ಮತ್ತಥಾ ॥
ತತ್ತದ್ದೇಹ ಗತಃ ಪ್ರಾಣಃ । ತತ್ತ ದ್ದೇಹಸ್ಥ ಮೂರ್ತಿನಾ ॥
ಅನಿರುದ್ಧಾದಿ ನಾನ್ಮಾಹಿ । ಸ್ವಪ್ರೇರಕ ಮೂರ್ತಿನೇ ॥
ಇತಿ ಪವಮಾನ ಸಂಹಿತಾ ಯಾಂ ॥"

(ಶ್ರೀನರಹರಿ ತೀರ್ಥ ಶ್ರೀಪಾದ ವಿರಚಿತ ತಾತ್ಪರ್ಯ ದೀಪಿಕಾಯಾಂ)

**ಅರ್ಥ:** ಜೀವರಲ್ಲಿ ಮೂರು ವಿಧ. ಆ ಜೀವರು ದೇಹಗಳಲ್ಲಿ ವಾಸಿಸುತ್ತಾರೆ. ಪವಮಾನನು (ವಾಯುವು) ಜೀವೋತ್ತಮನಾಗಿ ಶರೀರಗಳಲ್ಲಿ ಇರುತ್ತಾನೆ. ಸ್ವರೂಪದಲ್ಲಿ ಮಾತರಿಶ್ವನೆಂದೂ, ಸ್ಥೂಲ ದೇಹದಲ್ಲಿ ಮುಖ್ಯ ಪ್ರಾಣನೆಂದೂ, ಲಿಂಗ ಶರೀರದಲ್ಲಿ ಸೂತ್ರನೆಂದೂ, ಸೂಕ್ಷ್ಮ (ಅನಿರುದ್ಧ) ದೇಹದಲ್ಲಿ ಸೂಕ್ಷ್ಮನೆಂದೂ ಕರೆಸುತ್ತಾನೆ ಮತ್ತು ಪ್ರಾಣಾ, ಪಾನ, ವ್ಯಾನ, ಉದಾನ, ಸಮಾನ ಇತ್ಯಾದಿ ನಾಮಗಳಿಂದ ದೇಹಗಳ ಮಧ್ಯೆ, ಕೆಳಗೆ ನೆಲಸಿದ್ದು ಸ್ವರೂಪ, ಬುದ್ಧಿಗಳಲ್ಲಿ ನೆಲಸಿದ್ದು ಜೀವನ ಯೋಗ್ಯತೆಯಂತೆ ಉಪಾಸನೆಯಲ್ಲಿ ತೊಡಗಿಸಿ ಸಾಧನ ಮಾಡಿಸುತ್ತಾನೆ. ಹೀಗೆ ವಾಯುವು ಜಂಗಮಾಽಚರಗಳಲ್ಲಿ ನೆಲೆಸಿದ್ದು ಅಲ್ಲಲ್ಲಿ ಇರುವ ಸರ್ವೋತ್ತಮನಾದ ಶ್ರೀಹರಿಯ ರೂಪಗಳನ್ನು ಅರ್ಚಿಸುತ್ತಿರುತ್ತಾನೆ. ಅರ್ಚನೆ ಎಂದರೆ ಜೀವ ಪ್ರೇರಕತ್ವ ಮತ್ತು ತತ್ತನ್ಮೂರ್ತಿಗಳಿಗೆ ತತ್ತತ್ಕರ್ಮಗಳನ್ನು ಸದಾ ಅರ್ಪಿಸುತ್ತಿರುವುದೇ ಆಗಿದೆ.

"ಪವಮಾನಾಭಿದೋ ವಾಯುಃ । ಜೀವಾನಾಂಚ ಸ್ವರೂಪಗಃ ॥
ತತ್ವ ದೇವಾಭಿದಾನೇನ । ತತ್ವ ಕಾರ್ಯಾಣಿ ನಿತ್ಯಶಃ ॥
ಕುರ್ವನ್ ಬಿಂಬ ಇವಾದೇವೋ । ಹರೇರಾಜ್ಞಾನುಸಾರತಃ ॥
ಇತಿ ಪ್ರಕಾಶ ಸಂಹಿತಾಯಾಂ ॥"
"ಪ್ರಾಣನಾಮ್ನಾ ಜೀವ ಸ್ಥಿತೇನ । ಜೀವಸ್ವರೂಪಾಂತಃ ಕರಣಸ್ಥಿತೇನ ।

ಸರ್ವಾ ವಶೀಕರೋತೀತಿ 'ವಶೀ' (ತಾಮ್ರ ಪರ್ಣೀಯಾ)" ಪ್ರ+ಆಣ = ಪ್ರಾಣ = ಪ್ರಖರವಾದ ಚೇಷ್ಟಾಯುತ, ಜ್ಞಾನ, ಇಚ್ಛಾ, ಕ್ರಿಯಾತ್ಮಕ ಪ್ರಾಣನಾಮಕವಾಯುವು ಸ್ವರೂಪ ದೇಹಗಳಲ್ಲಿ ಇದ್ದು ಜಗದ್ವಶಮಾಡಿ ಕೊಂಡಿರುವುದರಿಂದ ಆತನಿಗೆ 'ವಶೀ' ಎಂದು ಹೆಸರು ಇರುತ್ತದೆ.

**"ಸಮೀ ರಸ್ಯಸ್ಥಿತಿಂ ಲಿಂಗ ಸ್ವರೂಪಯೋಃ ॥ ಪ್ರಾಣ ನಾಮ್ನಾ ಜೀವ ಗತಃ ॥**
**ಲಿಂಗ ಶರೀರಸ್ಥಃ ಸೂತ್ರನಾಮಕಃ ॥ ಇತಿ ಶ್ರೀವಾದಿರಾಜೀಯ॥"**

**ಅರ್ಥ**: ವಾಯುವು ಲಿಂಗ, ಸ್ವರೂಪಗಳಲ್ಲಿ ಇದ್ದು ಕ್ರಮವಾಗಿ ಸೂತ್ರ ಮತ್ತು ಪ್ರಾಣ ಎಂದು ಕರೆಸುವವನಾಗಿದ್ದಾನೆ.

ಶ್ರೀವಾಯುದೇವನು ಎಲ್ಲಿದ್ದು ಏನೇ ಕರ್ಮಗಳನ್ನು ಮಾಡುತ್ತಿದ್ದರೂ ಅವೆಲ್ಲವುಗಳೂ ಭಗವಂತನ ಪೂಜೆ ಎಂದೇ ತಿಳಿಯಬೇಕು. ಆತನು ಎಲ್ಲೆಲ್ಲಿ ಯಾವ ಯಾವ ಭಗವನ್ಮೂರ್ತಿಗಳನ್ನು ಅರ್ಚಿಸುತ್ತಾನೆ ಎಂಬುದನ್ನು ----
---..

॥ ಪದ ॥ ಮಾಯೇಶನನು ಸ್ವ । ಕಾಯದಲರ್ಚಿಸಿ ।
ವಾಯುಪಿತನ ಲಿಂಗ । ಕಾಯದಲೀ ॥
ಛಾಯಶರೀರದಿ । ತಾಯಿ ಶಾಂತಿಪನ ।
ಜಾಯಾ ಪಿತನ ಸ್ಥೂಲ । ಕಾಯದ ಲರ್ಚಿಸಿ ॥ ೪೨ ॥

**ಅರ್ಥ:** ಮಾಯೇಶ = ಶ್ರೀಲಕ್ಷ್ಮೀದೇವಿಯ ಮಾಯಾರೂಪಕ್ಕೆ ಪತಿಯ ರೂಪವು ವಾಸುದೇವ; ಸ್ವಕಾಯದಲಿ = ಸ್ವರೂಪ ದೇಹದಲ್ಲಿ; ವಾಯುಪಿತ = ಜಯಾಪತಿ ಸಂಕರ್ಷಣ; ಲಿಂಗಕಾಯ = ಲಿಂಗದೇಹ; ಛಾಯಾಶರೀರ = ಸೂಕ್ಷ್ಮ (ಅನಿರುದ್ಧ) ದೇಹದಲ್ಲಿ; ತಾಯಿ ಶಾಂತಿಪನಾ = ಶಾಂತಿಪತಿ ಅನಿರುದ್ಧನನ್ನು; ಜಾಯಾಪಿತನ = ಜಾಯ = ಪತ್ನಿ; ವಾಯುವು ತನ್ನ ಪತ್ನಿಯ ತಂದೆಯಾದ ಭಾರತಿಗೆ ತಂದೆಯಾದ ಕೃತಿಪತಿ ಪ್ರದ್ಯುಮ್ನನನ್ನು; ಸ್ಥೂಲದೇಹದಲ್ಲಿ ಅರ್ಚಿಸುವನು.

**ವಿಶೇಷಾರ್ಥ:** ವಾಯುದೇವರು ನಾಲ್ಕು ಶರೀರಗಳಲ್ಲಿ ವ್ಯಾಪ್ತನಾಗಿದ್ದರೂ ಅಲ್ಲಿ ಸನ್ನಿಹಿತನಾದ ಶ್ರೀಹರಿಯ ನಾಲ್ಕು ರೂಪಗಳ ಪೂಜಾರೂಪವಾದ, ಜೀವರಿಗೆ ಸಾಧನ ರೂಪವಾದ ವ್ಯಾಪಾರಗಳನ್ನು ಆಯಾಸ ರಹಿತನಾಗಿ ಮಾಡುತ್ತಾನೆ.

ಪರಮಾತ್ಮನು ಸ್ವರೂಪ ದೇಹದಲ್ಲಿ ಮಾಯಾಪತಿ ವಾಸುದೇವನಾಗಿ ಇರುವನು. ಅಲ್ಲಿ ವಾಯುದೇವರು ಮಾತರಿಶ್ವನಾಗಿ ಆತನ ಸೇವೆಯನ್ನು ಮಾಡುತ್ತಾನೆ. ಲಿಂಗಶರೀರದಲ್ಲಿ ಜಯಾಪತಿಯಾಗಿ ಸಂಕರುಷಣನು ಇದ್ದು ಅಲ್ಲಿ ವಾಯುದೇವರು ಸೂತ್ರನಾಗಿ ಆತನ ಸೇವೆಯನ್ನು ಮಾಡುತ್ತಾನೆ. ಅನಿರುದ್ಧ (ಸೂಕ್ಷ್ಮ) ದೇಹದಲ್ಲಿ ಶಾಂತಿಪತಿಯಾದ ಅನಿರುದ್ಧನು ಇದ್ದು ಅಲ್ಲಿ ವಾಯುವು ಸೂಕ್ಷ್ಮ ಎಂಬ ಹೆಸರಿನಿಂದ ಆತನ ಸೇವೆಯನ್ನು ಮಾಡುತ್ತಾನೆ. ಕೊನೆಯದಾದ ಸ್ಥೂಲದೇಹದಲ್ಲಿ ಪರಮಾತ್ಮನು ಕೃತಿಪತಿ ಪ್ರದ್ಯುಮ್ನನಾಗಿ ಇರುವನು. ಅಲ್ಲಿ ವಾಯುದೇವರು ಮುಖ್ಯಪ್ರಾಣನೆಂಬ ಹೆಸರಿನಿಂದ ಆತನ ಸೇವೆಯನ್ನು ಮಾಡುತ್ತಿರುವನು. ವಾಯುದೇವರ ಪತ್ನಿಯಾದ ಭಾರತೀದೇವಿಯು ಕೃತಿ (ಲಕ್ಷ್ಮೀ) ಮತ್ತು ಪ್ರದ್ಯುಮ್ನ ರೂಪದ ಶ್ರೀಹರಿಯ ಪುತ್ರಿಯಾಗಿದ್ದಾಳೆ. ವಾಯುದೇವರು ಸೇವೆಯನ್ನು ಮಾಡುತ್ತಾನೆ ಎಂದರೆ ಏನರ್ಥ? ಸ್ವರಮಣನಾದ ಪರಮಾತ್ಮನಿಗೆ ಯಾರ ಸೇವೆಯಿಂದ ಏನಾಗಬೇಕಾಗಿದೆ? ಎಂದರೆ ಜೀವರ ಸಾಧನಾರ್ಥವಾಗಿ ಇರುವ ದೇಹಗಳಲ್ಲಿ ಇದ್ದು ಆಯಾ ದೇಹಧರ್ಮ ಕರ್ಮಗಳನ್ನು ಜೀವರಿಂದ ಮಾಡಿಸಿ ಜೀವರಿಗೆ ನಿಜಗತಿಯನ್ನು ನೀಡುವುದೇ ಶ್ರೀಹರಿಯ ಸೇವೆ ಎನಿಸುತ್ತದೆ. ಜೀವರನ್ನು ಉದ್ಧರಿಸುವುದೇ ಶ್ರೀಹರಿಯ ಆಜ್ಞಾಪಾಲನ ರೂಪವಾದ ಸೇವೆಯು.

ಪರಮಾತ್ಮನು ಒಬ್ಬನೇ ಆದರೂ ಬೇರೆ ಬೇರೆ ಕಾರ್ಯಗಳ ನಿಮಿತ್ತವಾಗಿ ಬೇರೆ ಬೇರೆ ಹೆಸರುಗಳು ಬರುತ್ತವೆ. ಅನಂತ ಕರ್ಮ ಪ್ರವರ್ತಕನಾದ ಶ್ರೀಹರಿಗೆ ಅನಂತನಾಮಗಳು. ನಾಮಗಳು ನಿಮಿತ್ತವಾದುವುಗಳು. ಶ್ರೀಹರಿಯ ಏಕದೇಶ ಮಾತ್ರ ಬೋಧಕಗಳು ಸಾಕಲ್ಯೇನ "ಮನವಚನಕತಿ ದೂರ" "ಯತೋವಾಚೋ ನಿವರ್ತಂತೇ । ಅಪ್ರಾಪ್ಯ ಮನ ಸಾತಥಾ" ಶ್ರೀಹರಿಯು ವಾಚಾಮಗೋಚರನು. ಏಕ ದೇಶತಃ ಸರ್ವಶಬ್ದವಾಚ್ಯನು ಪ್ರಾಪ್ತನೂ.

॥ ಪದ ॥ ನಾರಾಯಣನನು । ಸರ್ವತ್ರ ಪವಮಾನ ।
ತೋರಿದನಪರೋಕ್ಷ । ಧೀರರಿಗೇ ॥
ಘೋರ ಪ್ರಹಾರದಿ । ಕ್ರೂರ ಜನಕೆ ಹುಂ ।
ಕಾರದಿ ಲಿಂಗಭಂಗ । ಮಿಶ್ರರಿಗೇ ॥ ೪೩ ॥

**ಅರ್ಥ:** ಸರ್ವತ್ರ = ನಾಲ್ಕು ಶರೀರಗಳ ಒಟ್ಟಿನಲ್ಲಿ; ಪವಮಾನನೆಂಬ ಹೆಸರಿನಿಂದ ವಾಯುವು; ಧೀರರಿಗೆ = ಮುಕ್ತಿಯೋಗ್ಯರಿಗೆ; ತೋರಿದ ನಪರೋಕ್ಷ = ಅಪರೋಕ್ಷ ಜ್ಞಾನವನ್ನು ನೀಡುವನು; ಕ್ರೂರ ಜನಕೆ ದೈತ್ಯರಿಗೆ; ಘೋರ ಪ್ರಹಾರದಿ = ಗದಾ ಪ್ರಹಾರದಿಂದ; ಲಿಂಗಭಂಗ = ಲಿಂಗಶರೀರವು ಬಿಚ್ಚುತ್ತದೆ; (ತರುವಾಯ ತಮಸ್ಸಿಗೆ ಹೋಗುತ್ತಾರೆ); ಮಿಶ್ರರಿಗೆ = ರಾಜಸರಿಗೆ; ಹುಂಕಾರದಿಂದ ಲಿಂಗಭಂಗವಾಗುತ್ತದೆ.

**ವಿಶೇಷಾರ್ಥ:** ಮೇಲೆ ವಿವರಿಸಿದ ಪ್ರಕಾರವಾಗಿ ವಾಯುದೇವರು ನಾಲ್ಕು ಶರೀರಗಳಲ್ಲಿ ನಾಲ್ಕು ರೂಪಗಳಿಂದ ಭಗವತ್ಸೇವೆಯನ್ನು ಮಾಡುತ್ತಿರುವನು. ಪರಮಾತ್ಮನ ನಾಲ್ಕು ರೂಪಗಳ ಸಾರಭೂತವಾದುದು ನಾರಾಯಣ ರೂಪವು. ವಾಯುವು ಕೂಡ ತನ್ನ ನಾಲ್ಕು ರೂಪಗಳ ಸಾರಭೂತವಾದ ಪವಮಾನರೂಪದಿಂದ ನಾರಾಯಣನ ಸೇವೆಯನ್ನು ಮಾಡುತ್ತಿರುವನು.

ಅರ್ಚಿತ (೧) ವಾಸುದೇವ + ಸಂಕರ್ಷಣ + ಅನಿರುದ್ಧ + ಪ್ರದ್ಯುಮ್ನ = ನಾರಾಯಣ.

ಅರ್ಚಕ (೨) ಮಾತರಿಶ್ವ + ಸೂತ್ರ + ಸೂಕ್ಷ್ಮ + ಮುಖ್ಯ ಪ್ರಾಣ = ಪವಮಾನ.

"ವಿಶ್ವವ್ಯಾಪಕ ಹರಿಗೆ ತಾಸಾ । ದೃಶ್ಯ ರೂಪವ ಧರಿಸಿ ಬ್ರಹ್ಮ ಸ ।
ರಸ್ವತೀ ಭಾರತಿಗಳಿಂದೊಡಗೂಡಿ ಪವಮಾನ ॥" ಹ.ಕ.ಸಾ.ಸಂ ೨೦ ॥"

ವಾಯುದೇವರು ವಿಶ್ವವ್ಯಾಪಕ (ಬ್ರಹ್ಮಾಂಡ) ನಾದ ಹರಿಗೆ ಸಾದೃಶ್ಯನು, ಒಂದು ಬ್ರಹ್ಮಾಂಡ ಗತ ಭಗವದ್ರೂಪಗಳಿಗೆ ಮಾತ್ರ ಸಾದೃಶನು. ದೇಶವ್ಯಾಪ್ತಳಾದ ಲಕ್ಷ್ಮೀಯು ಮಾತ್ರ ಅನಂತ ಕೋಟಿ ಭಗವದ್ರೂಪಗಳಿಗೆ ಸಾಕಲ್ಯೇನ ಸಾದೃಶಳು. ಗುಣಸಾಮ್ಯ ರಹಿತಳು. "ಸಮರೂಪ ಸಮಕಾಲ ಸಮದೇಶ ವ್ಯಾಪುತೇ । ಗೋಪಾಲವಿಠಲನ ಅರ್ಧಾಂಗಿ ನೀ ॥(ಪ್ರಮಾಣ)॥"

ತನುಚತುಷ್ಟಯ ಗತ ದೇವ ದಾನವರ ವಿವರಗಳನ್ನು ಈ ಚಿತ್ರದ ಮೂಲಕವಾಗಿ ಅರ್ಥಮಾಡಿ ಕೊಳ್ಳಬಹುದು.



**ಸ್ವರೂಪದಲ್ಲಿ:** ಮಾಯಾ, ವಾಸುದೇವ ಮಾತರಿಶ್ವ
**ಲಿಂಗ ದೇಹದಲ್ಲಿ:** ಜಯಾ, ಸಂಕರ್ಷಣ, ಬ್ರಹ್ಮ, ಸೂತ್ರ, ಸರಸ್ವತಿ, ಭಾರತಿ,

**ಅನಿರುದ್ಧ ದೇಹದಲ್ಲಿ:** ಬೇರೆ ದೇವತೆಗಳಿಗೆ ಇಲ್ಲಿ ಸ್ಥಾನವಿಲ್ಲ, ಶಾಂತಿ, ಅನಿರುದ್ಧ, ಬ್ರಹ್ಮ, ಸೂಕ್ಷ್ಮ ವಾಣಿ, ಭಾರತಿ, ಗರುಡ, ಶೇಷ, ರುದ್ರ, ಸೌಪರ್ಣಿ, ವಾರುಣಿ, ಪಾರ್ವತಿ

**ಸ್ಥೂಲದಲ್ಲಿ:** ಕೃತಿ, ಪ್ರದ್ಯುಮ್ನ, ಬ್ರಹ್ಮ, ಮುಖ್ಯಪ್ರಾಣ, ವಾಣಿ, ಭಾರತಿ, ಗರುಡ, ಶೇಷ, ರುದ್ರ, ಸೌಪರ್ಣಿ, ವಾರುಣಿ, ಪಾರ್ವತಿ, ಇಂದ್ರಾದಿ ಸಕಲ ದೇವತೆಗಳು ಮತ್ತು ತತ್ಸ್ಪರ್ಧಿ ದಾನವರು.

ದೇವ ದಾನವರು ಸಾಂಶರೇ ಆಗಿದ್ದು ಸಾಧನ ಶರೀರಗಳಲ್ಲಿ ಆವಿಷ್ಠರಾಗಿ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಆವೇಶ ಭರದಲ್ಲಿ ಸತ್ಕರ್ಮಾನುಷ್ಠಾನದಿಂದ ಪುಷ್ಟರಾದ ದೇವತೆಗಳು ಪ್ರಬಲರಾಗಿ ದೈತ್ಯರನ್ನು ಸದೆಬಡಿದು ಸತ್ಕರ್ಮಗಳನ್ನು ಮಾಡಿಸಿ ಪುಣ್ಯಭಾಗಿಗಳನ್ನಾಗಿ ಮಾಡುತ್ತಾರೆ. ದೇವತೆಗಳು ದೇಹದ ಬಲಭಾಗದಲ್ಲಿದ್ದು ದೈತ್ಯರನ್ನು ಎದುರಿಸುತ್ತಾರೆ.

ಇದೇ ರೀತಿಯಾಗಿ ದೇಹದ ಎಡಭಾಗದಲ್ಲಿ ದೈತ್ಯರು ಆವಿಷ್ಠರಾದಾಗ ದುಷ್ಕರ್ಮಗಳನ್ನು ಮಾಡಿಸಿ ಪಾಪ ಭಾಗಿಗಳನ್ನಾಗಿ ಮಾಡುತ್ತಾರೆ.

ದುಷ್ಟರಲ್ಲಿ ದೈತ್ಯರಿಗೆ ಜಯವೂ ಶಿಷ್ಟರಲ್ಲಿ ದೇವತೆಗಳಿಗೆ ಜಯವೂ ಲಭಿಸುತ್ತದೆ. ವಾಯುದೇವನಿಂದಲೇ ದೇವತೆಗಳಿಗೆ ಜಯವೂ ಲಭಿಸುತ್ತದೆ.

ಇವರೀರ್ವರ ಕಾಳಗವು ಪ್ರಾಣದೇವರ ಮುಖಾಂತರವಾಗಿ ಶ್ರೀಹರಿಯ ಇಚ್ಛೆಯಂತೆ ಸಾಗಿರುತ್ತದೆ. ಈ ದೇವ ದಾನವರ ಪರಿಚಯವು "ಪಾವಮಾನ ಮತಾನುಗರಿಗೆದು। ಕೇವಲಾವಶ್ಯಕವು ತಿಳಿವುದು ಕೋವಿದರು ನಿತ್ಯ"

## ದೇಹವೆಂಬ ರಂಗ ಮಂಟಪದಲ್ಲಿ

### ಸ್ಪರ್ಧಾಳುಗಳು

| | | | |
|---|---|---|---|
| ೧ | ಮಹಾರಾಜ | ಶ್ರೀಹರಿ | ಅವ್ಯಕ್ತ ತತ್ವ, ಮಹತ್ತತ್ವ |
| ೨ | ಮಹಾರಾಣಿ | ಶ್ರೀಮಹಾಲಕ್ಷ್ಮೀ | ಪರಶುಕ್ಲತ್ರಯರಾದ ಇವರಲ್ಲಿ |
| ೩. | ಸಚಿವರು | ಬ್ರಹ್ಮ, ವಾಯು, ವಾಣಿ, ಭಾರತಿ | ಅಸುರಾವೇಶ ಇಲ್ಲ |

| | ತತ್ವಗಳು | ದೇವತೆಗಳು | ಪ್ರತಿಸ್ಪರ್ಧಿ ದಾನವರು |
|---|---|---|---|
| ೪ | ಅಹಂಕಾರ | ಗರುಡ, ಶೇಷ, ರುದ್ರ | ಕಲಿ, ಕುಲಕ್ಷ್ಮಿ, ವಿಪ್ರಚಿತ್ತಿ, ನರಕ, ಕಾಲನೇಮಿ, ಮಧು |
| ೫ | ಮನಸ್ತತ್ವ | ಇಂದ್ರ, ಕಾಮರು | ಕೈಟಭ, ಹಿರಣ್ಯ ಕಶಿಪ, ಹಿರಣ್ಯಾಕ್ಷ, ಮಣಿಮಂತ, ಬಕಾಸುರ, ತಾರಕಾಸುರ, |
| ೬ | ಶ್ರವಣ | ದಿಗ್ದೇವತಾ, ಚಂದ್ರ | ಸಾಲ್ವ ಶಂಬರಾಸುರ |
| ೭ | ತ್ವಗು | ಅಹಂಕಾರಿಕ ಪ್ರಾಣ | ಹಿಡಂಬ |
| ೮ | ಚಕ್ಷು | ಸೂರ್ಯ | ಬಾಣಾಸುರ (ಕೀಚಕ) |
| ೯ | ಜಿಹ್ವಾ | ವರುಣ | ನಮುಚಿ, ಇಲ್ವಲ |
| ೧೦ | ನಾಶಿಕ | ಅಶ್ವಿನಿಗಳು | ದ್ವಾಪರ (ಶಕುನಿ) |
| ೧೧ | ವಾಕ್ | ಅಗ್ನಿ | ವಾತಾಪಿ |
| ೧೨ | ಪಾಣಿ | ದಕ್ಷಪ್ರಜೇಶ | ಧೇನುಕ–ಕೇಶಿ |
| ೧೩ | ಪಾದ | ಜಯಂತ | ತೃಣಾವರ್ತ–ಮಾಸ |
| ೧೪ | ಪಾಯು | ಮಿತ್ರನಾಮಕ ಸೂರ್ಯ | ಲವಣಾಃಸುರ |
| ೧೫ | ಉಪಸ್ಥಾ | ಋಷಿಗಲು, ಸ್ವಯಂಭೂಮನು | ಧುಂದುಮಾರ ಶಂಬರಾಸುರ |
| ೧೬ | ಶಬ್ದ | ಬೃಹಸ್ಪತಿ, ಪ್ರಾಣ | ಹಂಸ |
| ೧೭ | ಸ್ಪರ್ಶ | ಅಪಾನ | ಡಿಭಿಕ |
| ೧೮ | ರೂಪ | ವ್ಯಾನ | ಪೌಂಡ್ರಕ |
| ೧೯ | ರಸ | ಉದಾನ | ಕೂಪಕರ್ಣ |
| ೨೦ | ಗಂಧ | ಸಮಾನ | ಮೇಘನಾದ (ಇಂದ್ರಜಿತ್) ವೃಷಸೇನ |
| ೨೧ | ಆಕಾಶ | ಗಣಪತಿ | ಕುಭಾಂಡಕ–ವಿಕರ್ಣ |
| ೨೨ | ಕೋಣವಾಯು | ಪ್ರವಾಹ | ರುಗ್ಮಿ |
| ೨೩ | ತೇಜಸ್ಸು | ಅಗ್ನಿ | ಶತಧನ್ವ |
| ೨೪ | ಜಲ | ವರುಣ | ಕಿಮ್ಮಾರ |
| ೨೫ | ಪೃಥ್ವಿ | ಧರಣಿ, ಶನೈಶ್ಚರ | ವೇನ, ಸೈಂಧವ |

ನಮ್ಮ ದೈನಂದಿನದ ಧರ್ಮ ಕರ್ಮಗಳೇ ನಮ್ಮಲ್ಲಿ ದೇವ, ದಾನವರು ಇರುವುದಕ್ಕೆ ಸಾಕ್ಷಿ. ಜೀವನು ಮಲಗಿದ್ದಾಗ ವಾಯುದೇವರು ಅವನ ಸ್ವರೂಪವನ್ನು ಶ್ವಾಸ ಮುಖೇನ ಹೊರಗೆಡುಹುತ್ತಾನೆ. ತಮೋ ಯೋಗ್ಯರಲ್ಲಿ 'ಅಭೂ-ಅಭೂ' ಎಂತಲೂ ಮುಕ್ತಿ ಯೋಗ್ಯರಲ್ಲಿ 'ಭೂ.ಭೂ' ಎಂತಲೂ ಶ್ವಾಸೋಚ್ಛ್ವಾಸಗಳನ್ನು ಮಾಡಿಸುತ್ತಾನೆ.

**ಪ್ರಮಾಣ: ಭೂರಿತಿ ಶ್ವಾಸ ರೂಪೇಣ ಪ್ರಶಂಸಂತಿ ನಿರಂತರಂ ॥**
**ಅಭೂತಿರಿತಿಚ ದುರ್ಜೀವೇ । ಭೂ ಶಬ್ದೋ ಭೂತಿ ವಾಚಕಃ ॥**
**(ಮಾನಸ ಸ್ಮೃತಿ ೧೫೭ )**

"ಹರಿರ್ಯೇವ ಮುಕ್ತಿದಾತಾ ಚ । ವಾಯುಶ್ಚ ತದನುಜ್ಞಯಾ" ಎಂಬ ಪ್ರಮಾಣವನ್ನನು ಸರಿಸಿ ವಾಯುದೇವರು ತ್ರಿವಿಧ ಜೀವರ ಲಿಂಗಭಂಗವನ್ನು ತ್ರಿವಿಧ ರೀತಿಯಾಗಿ ಮಾಡಿ ತ್ರಿವಿಧ ಸ್ಥಾನಗಳಿಗೆ ಕಳುಹಿಸುತ್ತಾನೆ. ವಿರಜಾನದಿ ಸ್ನಾನದಿಂದ ಮುಕ್ತಿಯೋಗ್ಯರಿಗೂ, ಹುಂಕಾರದಿಂದ ರಾಜಸರಿಗೂ, ಗದಾಪ್ರಹಾರದಿಂದ ತಮೋಯೋಗ್ಯರಿಗೂ ಲಿಂಗಭಂಗವಾಗಿ ಕ್ರಮವಾಗಿ ಅವರು ಮೋಕ್ಷಕ್ಕೂ, ಸಾಂತಾನಿಕ ಲೋಕಕ್ಕೂ ಮತ್ತು ತಮಸ್ಸಿಗೂ ಹೋಗುತ್ತಾರೆ.

॥ ಪದ ॥ ನಾಗೇಶನ ಮುಖ । ಭಾಗದ ಅವರಿಗೆ ।
ನಾಗ ಕಮಠ ಕೃಕ । ಲಾಗುತಲೀ ॥
ಬೀಗುತ ದೇವದತ್ತ । ಫಲ್ಗುಣ ನಾಮದಿ ।
ನೀಗುತ ಜ್ಞಾನವ । ಕಗ್ಗತ್ತಲೆಯೊಡಿ ॥ ೪೪ ॥

**ಅರ್ಥ:** ನಾಗೇಶನ ಮುಖ ಭಾಗದವರು = ಸಮುದ್ರ ಮಥನ ಕಾಲದಲ್ಲಿ ಶೇಷದೇವರ ಹೆಡೆಯ ಭಾಗಕ್ಕೆ ನಿಂತವರು, ದೈತ್ಯರು; ನಾಗ; ಕಮಠ = ಕೂರ್ಮ; ಕೃಕಲ; ದೇವದತ್ತ; ಫಲ್ಗುಣ = ಧನಂಜಯ; ಈ ರೂಪಗಳಿಂದ; ನೀಗುತ ಜ್ಞಾನವ = ಜ್ಞಾನ ಹೀನರನ್ನಾಗಿ ಮಾಡಿ; ಕಗ್ಗತ್ತಲೆಯೊಡಿ = ಅಜ್ಞಾನಾಂಧಕಾರವನ್ನು ದಟ್ಟವಾಗಿ ಮಾಡಿ, ಅಸುರರನ್ನು ಮೋಹಿಸುವನು.

**ವಿಶೇಷಾರ್ಥ:** ಸ್ವರೂಪತಃ ತಮೋಯೋಗ್ಯರೂ, ಭಗವದ್ವೇಷಿಗಳೂ, ಲೋಕಕಂಟಕರೂ ಆದ ದೈತ್ಯರಲ್ಲಿ ವಾಯುದೇವರು ಅಂತರ್ಯಾಮಿಯಾಗಿ ಅವರಿಗೆ ಭೂಯಿಷ್ಠವೇ ಆದ ಅಜ್ಞಾನ, ದ್ವೇಷಾದಿಗಳನ್ನು ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯಗಳೆಂಬ ಐದು ರೂಪಗಳಿಂದ ಯುಕ್ತನಾಗಿ ಅಭಿವೃದ್ಧಿಗೊಳಿಸಿ ತಮಸ್ಸಿಗೆ ದೂಡುತ್ತಾರೆ.

"ಮಾರುತನು ನಾಗಾದಿ ರೂಪದಿ । ಮೂರನೇ ಗುಣಮಾನಿ ಶ್ರೀದು ।
ರ್ಗಾ ರಮಣ ವಿದ್ಯಾ ಕುಮೋಹವ ಕೊಡುವ ಕರಣಕ್ಕೆ ॥ ೬–೧೨ ॥"
"ಐದು ವಿದ್ಯೆಗಳೊಳಗೆ ಇಹನಾ । ಗಾದಿಗಳಧಿಷ್ಠಾನದಲಿ ಲಕು ।
ಮೀಧವನು ಕೃದ್ಧೋಲ್ಕ ಮೊದಲಾದೈದು ರೂಪಗಳ ॥
ತಾಧರಿಸಿ ಸಜ್ಜನರವಿದ್ಯವ । ಛೇದಿಸುವ ತಾಮಸರಿಗಜ್ಞಾನ್ನ ।
ನಾದಿಗಳ ಕೊಟ್ಟವರವರ ಸಾಧನವ ಮಾಡಿಸುವ ॥ ೬–೧೩ ॥"

॥ ಪದ ॥ ಪ್ರಾಣನು ತಾ ಪಂಚ । ಪ್ರಾಣನು ಆಗಿ ಗೀ ।
ರ್ವಾಣರಿಗೇ ಕ। ಲ್ಯಾಣವನಿತ್ತು ॥
ಪ್ರಾಣ ಅಪಾನ । ವ್ಯಾನ ಉದಾನ ಸ ।
ಮಾನನು ಎಂದು ದಿವ್ಯ । ಜ್ಞಾನವ ಪಾಲಿಸಿ ॥ ೪೫ ॥

**ಅರ್ಥ:** ಪ್ರಾಣನು = ವಾಯುದೇವರು; ಪಂಚಪ್ರಾಣನಾಗಿ = ಐದು ರೂಪಗಳನ್ನು ಧರಿಸಿಕೊಂಡು; ಗೀರ್ವಾಣರಿಗೆ = ದೇವತೆಗಳಿಗೆ; ಕಲ್ಯಾಣ = ಇಹ-ಪರ ಸೌಖ್ಯ-ಜ್ಞಾನಗಳನ್ನು ಇತ್ತು; ಕಾಪಾಡುವನು.

**ವಿಶೇಷಾರ್ಥ:** ಸ್ವರೂಪತಃ ಮುಕ್ತಿ ಯೋಗ್ಯರಾದ ಭಗವದ್ಭಕ್ತರಾದ ಲೋಕ ಹಿತೈಷಿಗಳಾದ ದೇವತೆಗಳಲ್ಲಿ ವಾಯುದೇವರು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನನೆಂಬ ಐದು ರೂಪಗಳಿಂದ ಇದ್ದು ಜ್ಞಾನಾಭಿವೃದ್ಧಿಯನ್ನು ಮಾಡಿ ಮೋಕ್ಷಕ್ಕೆ ಕಳುಹಿಸುತ್ತಾನೆ.

ದೇವದಾನವರು ಎರಡು ವಿಧ ನೊಣಗಳಿದ್ದಂತೆ. ಕ್ರಮವಾಗಿ ಒಂದು ಜೇನುನೊಣ, ಮತ್ತೊಂದು ಹೇಸಿಗೆ ನೊಣ.

ಜೇನುನೊಣಗಳು ಸದಾ ಸುಗಂಧ ಪರಿಮಳಯುಕ್ತವಾದ ಮಧುಪೂರಿತ ಪುಷ್ಪಗಳನ್ನೇ ಹುಡುಕಿಕೊಂಡು ಹೋಗುತ್ತವೆ. ಸರ್ವದಾ ಹೇಸಿಗೆ ಕಡೆಗೆ ತಲೆ ಹಾಕುವುದಿಲ್ಲ. ಹೇಸಿಕೆ ನೊಣಗಳು ಹೇಸಿಕೆಯನ್ನು ಹುಡುಕಿಕೊಂಡು ಹೋಗುತ್ತವೆ. ವಿನಃ ಸರ್ವದಾ ಸುಗಂಧ ಪುಷ್ಪಗಳ ಕಡೆಗೆ ತಲೆಯನ್ನು ಹಾಕುವುದಿಲ್ಲ. ಇದೇ ರೀತಿಯಾಗಿ ಸತ್ಕರ್ಮಾನುಷ್ಠಾನ ಪರರಾದವರಲ್ಲಿ ದೇವತೆಗಳು ಸನ್ನದ್ಧರಾಗಿರುತ್ತಾರೆ. ದುರ್ನಡತೆಯವರಲ್ಲಿ ದೈತ್ಯರು ಪ್ರವಿಷ್ಟರಾಗಿರುತ್ತಾರೆ. ದುಷ್ಟರಲ್ಲಿ ದೇವತೆಗಳು, ಶಿಷ್ಟರಲ್ಲಿ ದೈತ್ಯರು ದುರ್ಬಲರಾಗಿರುತ್ತಾರೆ.

ದೇವದಾನವರು ದೇಹಿಗಳನ್ನಾಶ್ರೈಸಿಕೊಂಡು ಸಾಧನವನ್ನು ಮಾಡಿ ಮಾಡಿಸುತ್ತಾರೆ. ನಿಷಿದ್ಧ ಕರ್ಮ, ಆಹಾರಾದಿಗಳನ್ನು ಹೊಂದಿದವರಲ್ಲಿ ದೇವತೆಗಳು ಇದ್ದು ಉಪವಾಸವನ್ನು ಅನುಭವಿಸುತ್ತ ದುರ್ಬಲರಾಗಿರುತ್ತಾರೆ. ದೈತ್ಯರು ಕೊಬ್ಬಿ ದೇವತೆಗಳನ್ನು ಬಗ್ಗುಬಡಿಯುತ್ತಾರೆ. ಇಂಥವರ ತತ್ತ್ವ ಕಾರ್ಯಗಳು ಪರ ಪೀಡನಾರ್ಥವಾಗಿ ನರಕಾದ್ಯನರ್ಥಗಳಿಗೆ ಕಾರಣವಾಗುತ್ತದೆ. ಆದ್ದರಿಂದ ನಿಷಿದ್ಧ ಕರ್ಮ ಆಹಾರಗಳನ್ನು ಬಿಡಬೇಕು. ಆಗ ದೈತ್ಯರು ದುರ್ಬಲರಾಗಿ ನಾಶವಾಗುತ್ತಾರೆ.

ಸತ್ಕರ್ಮ, ಶುದ್ಧವಾದ ಭಗವದರ್ಪಿತವಾದ ಧರ್ಮ ಕರ್ಮ ನೈವೇದ್ಯಾದಿಗಳನ್ನು ಸ್ವೀಕರಿಸುವವಗಲ್ಲಿ ದೇವತೆಗಳು ಸಬಲರಾಗಿ ದೈತ್ಯರನ್ನು ಸದೆಬಡಿಯುತ್ತಾರೆ. ದೈತ್ಯರಿಗೆ ಶುದ್ಧ ಕರ್ಮಾಹಾರಗಳು ಒಗ್ಗದೆ ಅಲ್ಲಿದ್ದು ನಿರ್ವೀರ್ಯರಾಗಿ ಹತಪ್ರಾಯರಾಗಿರುತ್ತಾರೆ. ಆದ್ದರಿಂದ ಸದಾಚಾರ ಸಂಪನ್ನರಾಗಿ ಶುದ್ಧಾಹಾರ ಸೇವಿತರಾದವರಲ್ಲಿದ್ದು ದೇವತೆಗಳು ಸಬಲರಾಗಿ ಸತ್ಕರ್ಮ, ಆಯು ಆರೋಗ್ಯಾದಿಳನ್ನಿತ್ತು ಲೋಕೋಪಕಾರ ಕಾರ್ಯಗಳನ್ನು ಮಾಡಿ, ಮಾಡಿಸಿ ಮುಕ್ತಿಭಾಗಿಗಳನ್ನಾಗಿ ಮಾಡುತ್ತಾರೆ.

ಜೇನುನೊಣ (ದೇವತೆ)ಗಳಿಂದ ಮಧು (ಜೇನುತುಪ್ಪ ಪ್ರಾಪ್ತಿ) ಹೇಸಿಗೆ ನೊಣಗಳಿಂದ ಉಂಡನ್ನ ವಾಂತಿ ಹೀಗೆ ದೇವದಾನವರ ಸಹವಾಸಕ್ಕೆ ಫಲ.

॥ ಪದ ॥ ಮೂರು ಕೋಟಿ ರೂಪ । ವಾರಿ ಭೂ ಗಗನದಿ ।
ತೋರುವ ಸಮರ್ಥ। ಪರಮಾರ್ಥಾ॥
ವಾರಿಜಾಸನಕೆರಡು । ನೂರು ಕಲ್ಪಕೆ ಬಂದು ।
ಭೂರಿ ಮೋದಮಯ । ಪ್ರಾರಬ್ಧ ಭೋಗಿಸಿ ॥ ೪೬ ॥

**ಅರ್ಥ:** ಮೂರು ಕೋಟಿ ರೂಪಗಳು; ವಾರಿ = ಜಲಚರಗಳ ರೂಪಗಳು; ಭೂ = ಭೂಚರ ರೂಪಗಳು; ಗಗನ = ಆಕಾಶಚರಗಳಾದ ಪಕ್ಷಿ ರೂಪಗಳು; ಸಮರ್ಥನಾದ ವಾಯುವಿನಲ್ಲಿ ಪರಮಾರ್ಥ = ಅರ್ಥಪೂರ್ಣವಾಗಿ ಇವೆ. ಸಾರ್ಥಕಗಳಾಗಿ ಇವೆ; ವಾರಿಜಾಸನಕೆ = ಕಮಲ ಪೀಠಕ್ಕೆ = ಬ್ರಹ್ಮಪದವಿಗೆ; ಎರಡು ನೂರು ಕಲ್ಪಕೆ ಬಂದು = ಅಸೃಜ್ಯಾವಸ್ಥೆಯಿಂದ ಇನ್ನೂರು ಬ್ರಹ್ಮಕಲ್ಪದವರೆಗೆ ವೃದ್ಧಿಜ್ಞಾನ ಪೂರ್ವಕವಾಗಿಯೇ ಸಾಧನವನ್ನು ಮಾಡಿ ಕೊಂಡು ಬ್ರಹ್ಮಪದವಿಗೆ ಬರುವನು; ಭೂರಿ ಮೋದಮಯ = ದುಃಖಸ್ಪರ್ಶವಿಲ್ಲದ ಸುಖ ಪ್ರಾರಬ್ಧ ಭೋಗಿಸಿ = ಪ್ರಾರಬ್ಧವನ್ನು ಭೋಗಿಸುತ್ತಾನೆ. ಅನಭಿಮಾನ-ಬ್ರಹ್ಮಪದವಿಗೆ ಆಶೆ ಇಲ್ಲದೆ, ಈ ನಿಟ್ಟಿನಲ್ಲಿ ಉತ್ಸಾಹವಿಲ್ಲದೆ.

**ವಿಶೇಷಾರ್ಥ:** ವಾಯುದೇವರಿಗೆ ಬ್ರಹ್ಮಾಂಡದಲ್ಲಿ ಶ್ರೀಹರಿ, ರಮಾರನ್ನು ಬಿಟ್ಟು ಉಳಿದವರಿಗೆ ಎಣಿಸಲಾಗದಷ್ಟು ರೂಪಗಳಿವೆ. ಅದರಲ್ಲಿ ವಿಶೇಷವಾಗಿ ಮೂರು ಕೋಟಿ ರೂಪಗಳಿವೆ ("ಅನಂತ ರೂಪಾಯ । ವಿಶೇಷಃ ಸ್ತ್ರೀ ಕೋಟಿ ರೂಪಯಾ" ಎಂದು.) ಆ ಮೂರು ಕೋಟಿ ರೂಪಗಳು ಯಾವುವು ಎಂದರೆ

"ಖೇಟ ಕುಕ್ಕುಟ ಜಲಟರೆಂಬ ತ್ರಿ । ಕೋಟಿ ರೂಪವಧರಿಸಿ ಸತತ ನಿ ।
ಶಾಟರನು ಸಂಹರಿಸಿ ಸಲಹುವ ಸಕಲ ಸಜ್ಜನರ ॥ ೨೪ – ೨೧ ॥"

ಎಂದರೆ ಗಗನದಲ್ಲಿ ಸಂಚರಿಸುವ ಸಕಲ ಜಾತಿಯ ಪಕ್ಷಿಗಳ ಭೂಮಿಯಲ್ಲಿ ಸಂಚರಿಸುವ ಮೃಗಜಾತಿಗಳ, ಕ್ರಿಮಿ, ಕೀಟಗಳ, ಜಂಗಮ ಸ್ಥಾವರ ಹಾಗೂ ಮತ್ಸ್ಯ, ಕೂರ್ಮ, ಮಕರಾದಿ ಜಲಚರಗಳ, ಒಂದೊಂದು ಬಗೆಯಲ್ಲಿ ಇರುವ ಅಸಂಖ್ಯಾತ ಪ್ರಾಣಿಗಳ ರೂಪಗಳು ವಾಯುದೇವರಲ್ಲಿ ಇವೆ. ಪರಮಾತ್ಮನಿಗೆ ಸಾದೃಶ (ಪ್ರತಿಬಿಂಬ)ವಾದ ಈ ರೂಪಗಳು ದ್ವಿತಿಯ ಗೋಳಕದಲ್ಲಿ ವಾಯುವಿಗೆ ಸಾದೃಶಗಳಾಗಿವೆ.

ಪಕ್ಷಿಗಳಿಗೆ ಗರುಡನೂ, ಭೂಚರಗಳಿಗೆ, ತರು, ಲತೆಗಳಿಗೆ ಶೇಷನೂ ಮತ್ತು ಜಲ ಚರಗಳಿಗೆ ರುದ್ರನೂ (ಗುಂಡುಗಳು ನೀರಿನಲ್ಲಿ ಇರುತ್ತವೆ. ಲಿಂಗ, ಅಭಿಷೇಕ ಪ್ರಿಯ ರುದ್ರ) ಪ್ರತಿನಿಧಿಗಳೆನಿಸಿರುವರು. ಇವರಿಗೆ ಭಗವಂತನ ದರ್ಶನವಾಗಲಿಕ್ಕೆ ವಾಯುದೇವರು ಮಹಾದ್ವಾರ ಸದೃಶರು

"ಕೈಟ ಭಾರಿಯ ಪುರದ ಪ್ರಥಮ ಕ । ವಾಟವೆನಿಸುವ ಗರುಡ ಶೇಷಲ ।
ಲಾಟಲೋಚನ ಮುಖ್ಯ ಸುರರಿಗೆ ಆವಕಾಲದಲಿ ॥ ಕ.ಸಾ.ಸಂ. ೨೧ ॥

ಈ ವಾಯುದೇವರು ಅಸೃಜ್ಯಾವಸ್ಥೆಯಿಂದ ಪ್ರಥಮ ಬಾರಿಗೆ ಸೃಷ್ಟಿಗೆ ಬಂದಾಗ ಕೇವಲ ಋಜುಗಣಸ್ಥನೆಂದು ಕರೆಸುತ್ತಾನೆ. ಅಲ್ಲಿಂದ ನೂರು ಬ್ರಹ್ಮ ಕಲ್ಪಗಳಿಗೆ ಸಾಗುತ್ತ ಬಂದು ನೂರಾಒಂದನೇ ಕಲ್ಪಕ್ಕೆ ಕಾಲಿಟ್ಟಾಗ ಆತನಿಗೆ ಕಲ್ಕಿ

ಎಂದು ನಾಮಕರಣವಾಗುತ್ತದೆ. ಹೀಗೆ ಮತ್ತು ನೂರು ಕಲ್ಪಗಳ ಸಾಧನವಾಗುತ್ತ ಒಟ್ಟು ಇನ್ನೂರನೇ ಕಲ್ಪಕ್ಕೆ ತಲುಪಿದಾಗ ಈತನು ಚತುರ್ಮುಖ ಬ್ರಹ್ಮನೆಂದು ಕರೆಸಿ ಆ ಕಲ್ಪವು ಮುಗಿದ ಮೇಲೆ ವಿರಜಾ ನದಿಯ ಸ್ನಾನ ಮುಖೇನ ಲಿಂಗ ಭಂಗವನ್ನು ಮಾಡಿಕೊಂಡು ಮೋಕ್ಷವನ್ನು ಹೊಂದುತ್ತಾನೆ. ಈತನಿಗೆ ಸೃಷ್ಟ್ಯಾರಬ್ಧ ಇನ್ನೂರು ಬ್ರಹ್ಮಕಲ್ಪ ಸಾಧನೆಯು ಇದರ ಗಣನೆಯು ಹೀಗಿದೆ.

## ದೇವಮಾನ

೧. ಕೃತಯುಗ – ೪೮೦೦ + ತ್ರೇತಾ – ೩೬೦೦ + ದ್ವಾಪರ – ೨೪೦೦ + ಕಲಿ – ೧೨೦೦ = ಒಟ್ಟು ೧೨೦೦೦ ವರ್ಷಗಳು (ಒಂದು ಮಹಾಯುಗ)

೨. ೧೦೦೦ ಮಹಾ ಯುಗವೆಂದರೆ ಬ್ರಹ್ಮನ ಒಂದು ಹಗಲು

೩. ೧೦೦೦ X ೨ = ೨೦೦೦ ಮಹಾ ಯುಗವೆಂದರೆ ಬ್ರಹ್ಮನ ಒಂದು ದಿನ

೪. ಬ್ರಹ್ಮನ ಒಂದು ದಿನವೆಂದರೆ ದೇವಮಾನ ರೀತಿಯಾಗಿ ೧೨೦೦೦ X ೧೦೦೦ X ೨ = ೨,೪೦,೦೦,೦೦೦ ವರ್ಷಗಳು.

೫. ಬ್ರಹ್ಮನ ಒಂದು ವರ್ಷಕ್ಕೆ ೨,೪೦,೦೦,೦೦೦ X ೩೬೦ = ೮೬೪,೦೦,೦೦,೦೦೦ ಎಂಟು ನೂರ ಅರವತ್ನಾಲ್ಕು ಕೋಟಿ ವರ್ಷಗಳು.

೬. ೧ ಬ್ರಹ್ಮಕಲ್ಪಕ್ಕೆ ೮೬೪ ಕೋಟಿ X ೧೦೦ = ೮೬೪,೦೦,೦೦,೦೦,೦೦೦ ಎಂಭತ್ತಾರು ಸಾವಿರದ ನಾನ್ನೂರು ಕೋಟಿ ದೇವಮಾನದ ವರ್ಷಗಳಾದರೆ ೧ ಬ್ರಹ್ಮಕಲ್ಪ. ಅಲ್ಲಿಗೆ ಒಬ್ಬ ಬ್ರಹ್ಮನು ಮುಕ್ತನಾಗುತ್ತಾನೆ.

ಇನ್ನು ಮನುಷ್ಯ ಮಾನದ ಪ್ರಕಾರವಾಗಿ ಒಂದು ಬ್ರಹ್ಮ ಕಲ್ಪದ ಕಾಲಮಾನವು ಹೀಗಿದೆ –

| | | |
|---|---|---|
| ೧. | ಕೃತ – ೧೭,೨೮,೦೦೦ | ೧೦೦೦ ಮಹಾಯುಗ ಬ್ರಹ್ಮನಿಗೆ ಒಂದು ಹಗಲು = |
| ೨. | ತ್ರೇತಾ – ೧೨,೯೬,೦೦೦ | ೪೩,೨೦,೦೦೦ X ೧೦೦೦ = ೪೩೨,೦೦,೦೦,೦೦೦ ವರ್ಷಗಳು. ಒಂದಿನ ಹಗಲು |
| ೩. | ದ್ವಾಪರ – ೮,೬೪,೦೦೦ | ೪೩೨,೦೦,೦೦,೦೦೦ X ೨ = ೮೩೪,೦೦,೦೦,೦೦೦ ವರ್ಷಗಳು. |
| ೪. | ಕಲಿ – ೪,೩೨,೦೦೦ | |

**ಒಂದು ಮಹಾಯುಗ ೪೩,೨೦,೦೦೦**

೫. ಬ್ರಹ್ಮನ ೧ ವರ್ಷಕ್ಕೆ = ೮೬೪,೦೦,೦೦,೦೦೦ X ೩೬೦ = ೩೧೧೦,೪೦,೦೦,೦೦,೦೦೦ ವರ್ಷಗಳು

೬. ಬ್ರಹ್ಮನ ೧೦೦ ವರ್ಷಕ್ಕೆ = ೩೧೧೦,೪೦,೦೦,೦೦,೦೦೦ X ೧೦೦ = ೩೧೧೦೪೦೦೦೦೦೦೦೦೦ ವರ್ಷಗಳು.

೭. ೧ ಬ್ರಹ್ಮಕಲ್ಪಕ್ಕೆ ಮನುಷ್ಯ ಮಾನ ದಿನಗಳು – ೩೧೧೦೪೦೦೦೦೦೦೦೦೦೦ X ೩೬೦ =

೧೧೧೯೭.೪೪೦.೦೦.೦೦.೦೦.೦೦.೦೦ ಒಂದು ಸಾವಿರದ ಒಂದು ನೂರಾ ಹತ್ತೊಂಭತ್ತು ಕೋಟಿ, ಎಪ್ಪತ್ತು ನಾಲ್ಕು ಲಕ್ಷದ, ನಲವತ್ತು ಸಾವಿರ ಕೋಟಿ ದಿನಗಳು.

ಇಷ್ಟು ದಿನಗಳನ್ನು ಒಂದು ಬ್ರಹ್ಮ ಕಲ್ಪ ಎನ್ನುತ್ತಾರೆ.

ಒಬ್ಬ ತೃಣ ಜೀವನಿಗೆ ಒಂದು ಬ್ರಹ್ಮಕಲ್ಪ ಸಾಧನವಿರುತ್ತದೆ. ಅವನು ಅಸೃಜ್ಯಾವಸ್ಥೆಯಿಂದ ಸೃಷ್ಟಿಗೆ ಬಂದ ಮೇಲೆ ಮುಕ್ತನಾಗಲು ಇಷ್ಟು ದಿನಗಳು ಸಾಕು. ಹಾಗೆಯೇ ಬ್ರಹ್ಮ ಪದವಿಗೆ ಬಂದ ಮೇಲೆ ಬ್ರಹ್ಮನಿಗೂ ಇಷ್ಟೇ ಕಾಲದಲ್ಲಿ ಮುಕ್ತಿಯಾಗುತ್ತದೆ. ಆದರೆ ಋಜುಗಣಸ್ಥನಿಗೆ ಬ್ರಹ್ಮಪದವಿಗೆ ಬರಲಿಕ್ಕೇನೇ ಇಂಥಾ ಇನ್ನೂರು ಬ್ರಹ್ಮಕಲ್ಪಗಳ ಕಾಲಾವಧಿಯು ಬೇಕು ಎಂಬುದು ಗಮನಾರ್ಹ. ಅಸೃಜ್ಯಾವಸ್ಥಿಯಿಂದ ಋಜುಗಣಸ್ಥನು ಮುಕ್ತನಾಗಲು ಎಷ್ಟು ಮನುಷ್ಯ ಮಾನದ ದಿನಗಳು ಬೇಕು? ಎಂದರೆ

೧೧೧೯.೭೪.೪೦.೦೦೦.೦೦.೦೦.೦೦೦ X ೨೦೦ = ೨೨.೩೯೪೮೮೦೦೦೦೦೦೦೦೦೦೦೦ ಎರಡು ಸಾವಿರದ ಇನ್ನೂರಾ ಮೂವತ್ತೊಂಭತ್ತು ಕೋಟಿ, ನಲವತ್ತೆಂಟು ಲಕ್ಷದ ಎಂಭತ್ತು ಸಾವಿರ ಕೋಟಿ ಮನುಷ್ಯ ಮಾನ ದಿನಗಳು ಬೇಕು.

ಬ್ರಹ್ಮ ಮೊದಲುಗೊಂಡು ತೃಣ ಜೀವ ಪರಿಯಂತವಾಗಿ ಜೀವರುಗಳಿಗೆ ಬ್ರಹ್ಮಕಲ್ಪಗಳ ಸಾಧನವು ಬೇರೆ ಬೇರೆಯಾಗಿಯೇ ಇರುವುದು. ಎಲ್ಲರಿಗಿಂತಲೂ ಬ್ರಹ್ಮದೇವ (ಋಜುಗಣಸ್ಥ) ರಿಗೆ ಹೆಚ್ಚು ಬ್ರಹ್ಮಕಲ್ಪಸಾಧನ (೨೦೦) ತೃಣನಿಗೆ ಕಡಿಮೆ (೧ ಮಾತ್ರ) ಅದರ ಸ್ಥೂಲ ವಿವರವು ಹೀಗೆ ಇದೆ. ಪುರಂಜನ, ಕಲಿಗಳಿಗೂ ಬ್ರಹ್ಮನಂತೆ ೨೦೦ ಬ್ರಹ್ಮಕಲ್ಪನಾ ಸಾಧನವು ಇರುವುದು.

| ಬ್ರಹ್ಮ | ಗರುಡಶೇಷ | ಇಂದ್ರ | ಪ್ರಾಣ | ಪ್ರವಾಹ | ಸೂರ್ಯ | ಕಕ್ಷ ೧೩ ರಿಂದ ೧೭ರವರೆಗೆ | ಗಣಪಾದಿ | ಸನಕಾದಿ |
|---|---|---|---|---|---|---|---|---|
| ೨೦೦ | ೧೦೦ | ೪೦ | ೩೨ | ೨೪ | ೨೦ | ೧೮ | ೧೬ | ೧೪ |

| ಕರ್ಮಜರು | ಗಂಗಾದಿ | ಆಜಾನಜರು | ಗೋಪಿಕಾಸ್ತ್ರೀ | ಚಿರಪಿತೃ | ದೇ.ಗಂ | ಮ.ಗಂ | ತೃಣ |
|---|---|---|---|---|---|---|---|
| ೧೦ | ೧೨ | ೮ | ೩-೫೦ | ೬ | ೪ | ೨ | ೧ |

ಮೇಲೆ ವಿವರಿಸಿದ ಜೀವಗಣದಲ್ಲಿ ಯಾರ್ಯಾರಿಗೆ ಎಷ್ಟು ಕಲ್ಪಸಾಧನವಿರುತ್ತದೋ ಅಷ್ಟೇ ಸಂಖ್ಯಾಕರಾಗಿ ಈ ಬ್ರಹ್ಮಾಂಡದಲ್ಲಿ ಇರುತ್ತಾರೆ. ಆ ಗಣದಲ್ಲಿ ಕೊನೆಯ ಕಲ್ಪವನ್ನು ತಲುಪಿದನು ಮಾತ್ರ ಪದಸ್ಥನಾಗಿರುತ್ತಾನೆ. ಕೆಳಗಿನವರು ತತ್ಪದಾರ್ಹರಾಗಿದ್ದು ಮುಂದಿನ ಕಲ್ಪಕ್ಕೆ ಪದವಿಗೆ ಬಂದು ಆ ಕಲ್ಪಾಂತ್ಯದಲ್ಲಿ ಮುಕ್ತರಾಗುತ್ತಾರೆ. ಒಬ್ಬರು ಮುಕ್ತರಾದರೆ ಕೆಳಗಿನವರು ಮೇಲಕ್ಕೆ ಬರುತ್ತಾರೆ. ತೆರುಪುಗೊಂಡ ಒಂದನೇ ಕಲ್ಪಕ್ಕೆ ಅಸೃಜ್ಯಾವಸ್ಥೆಯಿಂದ ಬೇರೊಬ್ಬರು ಬರುತ್ತಾರೆ. ಹೀಗೆ ನದೀ ಪ್ರವಾಹದಂತೆ, ಮೆಟ್ಟಿಲೇರಿದಂತೆ ಪದಸ್ಥರು ಮುಕ್ತರಾಗುತ್ತಲೂ, ಪದಾರ್ಹರು ಮುಂದೆ ಸಾಗುತ್ತಲೂ ಅಸೃಜ್ಯರು ಸೃಷ್ಟಿಗೆ ಬರುತ್ತಲೂ ಸಾಗಿರುತ್ತಾರೆ. ಪ್ರತಿ ಪ್ರತಿ ಕಲ್ಪದಲ್ಲಿಯೂ ಇದು ಹೀಗೆಯೇ ಸಾಗಿರುತ್ತದೆ.

ಋಜುಗಣಸ್ಥರು ೧ ರಿಂದ ೧೦೦ ರವರೆಗೆ ಗಣಸ್ಥರೆನಿಸಿ ೧೦೧ ಕ್ಕೆ ಕಲ್ಕಿ, ೧೦೨ಕ್ಕೆ ಸುತೇಜ ಇತ್ಯಾದಿ ನಾಮಗಳಿಂದ ಪ್ರತಿ ಕಲ್ಪದಲ್ಲಿಯೂ ವೃದ್ಧಿ ಹೊಂದಿದ ಜ್ಞಾನದಿಮದ ಮುಂದೆ ಸಾಗುತ್ತಾರೆ. ೧೯೮ಕ್ಕೆ ಲಾತವ್ಯರೆಂದೂ, ೧೯೯ಕ್ಕೆ ವಾಯುವೆಂದೂ, ೨೦೦ ಕ್ಕೆ ಬ್ರಹ್ಮನೆಂದೂ ಕರೆಸುತ್ತಾರೆ. ೧೯೯ ನೇ ಕಲ್ಪದಲ್ಲೇ ವಾಯುವಿನ ವ್ಯಾಪಾರ ಅಪಾರ. ಈ ಕಲ್ಪದಲ್ಲೇ ಅವತಾರ ತ್ರಯಗಳನ್ನು ಹೊಂದುತ್ತಾರೆ. ಇಂಥಾ ಅವತಾರಗಳು ಮಾತ್ರ ಬ್ರಹ್ಮನ ದಿನಕಲ್ಪಗಳಲ್ಲಿ ಬರುತ್ತವೆ. ಮುಕ್ತಿಗೆ ಬೇಕಾಗಿರುವದು ಬ್ರಹ್ಮಕಲ್ಪ ಬ್ರಹ್ಮನ ದಿನ ಕಲ್ಪಗಳಲ್ಲ.

ರುದ್ರದೇವರಿಗೆ ೪೦ ಕಲ್ಪಸಾಧನ. ಇಲ್ಲಿ ಇವರು ೪೦ ಜನರಿದ್ದು ೪೦ನೇ ಸಂಖ್ಯಾಕನು ಮಾತ್ರ ರುದ್ರಪದವಿಯಲ್ಲಿ ಇರುತ್ತಾನೆ. ಉಳಿದ ೩೯ ಜನರು ಪದಾರ್ಹರು. ವಾಯುದೇವರು ಈ ೪೦ ಜನಕ್ಕೆ ಪಾಠವನ್ನು ಹೇಳುತ್ತಾರೆ ಮತ್ತು ಒಂದೇ ಕಲ್ಪದಲ್ಲಿ ಒಬ್ಬರೇ ವಾಯುದೇವರು ಇದ್ದು ಆ ಕಲ್ಪವು ಮುಗಿದ ಮೇಲೆ ಅವರು ಬ್ರಹ್ಮಪದವಿಗೆ ಹೋಗುವುದರಿಂದ ಮುಂದಿನ ಕಲ್ಪದಲ್ಲಿ ಲಾತವ್ಯರು ವಾಯುಪಟ್ಟಕ್ಕೆ ಬಂದು ಪಾಠವನ್ನು ಹೇಳುತ್ತಾರೆ. ಈ ಕ್ರಮದಿಂದ ಒಬ್ಬ ರುದ್ರಗಣಸ್ಥನಿಗೆ ೪೦ ಕಲ್ಪಗಳಲ್ಲಿ ಬರುವ ೪೦ ವಾಯುಗಳಿಂದ ಪಾಠವಾಗುತ್ತದೆ ಮತ್ತು ಒಂದು ಕಲ್ಪದಲ್ಲಿ ಬ್ರಹ್ಮಾಂಡದಲ್ಲಿ ಒಟ್ಟಿಗೆ ಇರುವ ೪೦ ರುದ್ರಗಣಕ್ಕೆ ಒಬ್ಬ ವಾಯುವಿನಿಂದ ಪಾಠವಾಗುತ್ತದೆ ಎಂದು ತಿಳಿಯಬೇಕು.

ರುದ್ರದೇವರಿಗೆ ೧ ರಿಂದ ೩೯ರ ವರೆಗೆ ರುದ್ರ ಪದಾರ್ಹನಾಗಿಯೂ, ೪೦ನೆ ಕಲ್ಪದಲ್ಲಿ ರುದ್ರಪದಾ ರೂಢನಾಗಿಯೂ, ೪೧ ರಿಂದ ೫೦ರ ವರೆಗೆ ಲವಣ ಜಲಧಿಯಲ್ಲಿ ಉಗ್ರತಪ ನಾಮಾಂಕಿತನಾಗಿಯೂ, ೫೧ ರಿಂದ ೯೯ರ ವರೆಗೆ ಶೇಷ ಪದಾರ್ಹನಾಗಿಯೂ ೧೦೦ ರಲ್ಲಿ ವಾರುಣಿ ಸಹಿತ ಪದಸ್ಥ ಶೇಷನಾಗಿಯೂ, ೧೦೦ ಕಲ್ಪಗಳು ಮುಗಿದ ಮೇಲೆ ಮುಕ್ತನೂ ಆಗುವನು.

ಇಂದ್ರನಿಗೆ ೪೦ ಬ್ರಹ್ಮಕಲ್ಪಸಾಧನ. ಒಂದು ಬ್ರಹ್ಮಾಂಡದಲ್ಲಿ ಇವರು ಏಕಕಾಲದಲ್ಲಿ ೪೦ ಜನರಿರುತ್ತಾರೆ. ೪೦ನೇ ಕಲ್ಪವನ್ನು ತಲುಪಿದವನೇ ಇಂದ್ರಪದಸ್ಥನಾಗಿದ್ದು ಪುರಂದರ ಎನಿಸುತ್ತಾನೆ. ಉಳಿದವರು ಪದಾರ್ಹರು. ಹೀಗೆ ಬೇರೆಯವರು ಸಹ ಕಲ್ಪವು ಮುಗಿದಂತೆಲ್ಲಾ ಸರದಿಯಂತೆ ಮೇಲೇರುತ್ತಾ ಪದವಿಗೆ ಬಂದು ಮುಕ್ತರಾಗುತ್ತಾರೆ. ಇದರಂತೆ ಇತರ ಜೀವರುಗಳಲ್ಲಿ ತಕ್ಕಂತೆ ತಿಳಿಯಬೇಕು.

ಇನ್ನು ಬ್ರಹ್ಮೇತರ ಸಾಧಕರ ದೃಷ್ಟಿಯಿಂದ ಬ್ರಹ್ಮಕಲ್ಪದ ಬಗ್ಗೆ ಸ್ಪಷ್ಟೀಕರಣವನ್ನು ನೀಡುವುದು ಅವಶ್ಯವಾಗಿದೆ. ಯಾಕೆಂದರೆ ಬ್ರಹ್ಮದೇವರನ್ನು ಬಿಟ್ಟು ಉಳಿದವರ ಸಾಧನವು ಬ್ರಹ್ಮದೇವರ ದಿನಕಲ್ಪಕ್ಕೆ ಸೀಮಿತವಾದುದೆಂದು ಕೆಲವರು ಹೇಳುತ್ತಾರೆ. ಇದಕ್ಕೆ ಸರ್ವಜ್ಞ ಕಲ್ಪರಾದ ಶ್ರೀಟೀಕಾಚಾರ್ಯರು ಸುಧಾದಲ್ಲಿ "ಕಲ್ಪೋಯಂ ಬ್ರಹ್ಮಣೋ ದಿವಸಃ" ಎಂದು ಹೇಳಿರುವುದನ್ನು ಉದಾಹರಿಸುತ್ತಾರೆ. ಇಲ್ಲಿ ಶ್ರೀಟೀಕಾಚಾರ್ಯರ ವಾಕ್ಯವನ್ನು ಸರಿಯಾಗಿ ಅರ್ಥೈಸಿಕೊಳ್ಳಬೇಕಾದ ಅವಶ್ಯಕತೆ ಇದೆ.

ಇತರ ಜೀವರು ಸಾಧನೆಯನ್ನು ಮಾಡಿಕೊಳ್ಳುವುದು ಬ್ರಹ್ಮನ ದಿನ ಕಲ್ಪಗಳಲ್ಲಿ ಎಂದರೆ ಬರುವ ತೊಂದರೆ ಏನೆಂದರೆ ಬ್ರಹ್ಮನು ಪದವಿಗೆ ಬಂದ ಮೇಲೆ ಒಂದು ಬ್ರಹ್ಮಕಲ್ಪ (ಎಂದರೆ ಬ್ರಹ್ಮನ ೧೦೦ ವರ್ಷ ಅಥವಾ ೩೬೦೦೦ ದಿನಗಳು) ಕಳೆದ ಮೇಲೆ ಮುಕ್ತನಾಗುತ್ತಾನೆ ಅಲ್ಲವೇ? ಹಾಗಾದರೆ ೪೦ ಕಲ್ಪಸಾಧನ ಉಳ್ಳ ಇಂದ್ರನು ಬ್ರಹ್ಮನು

ಪದವಿಗೆ ಬಂದ ಮೇಲೆ ಕೇವಲ ೪೦ ದಿನಗಳಲ್ಲೇ ಮುಕ್ತನಾಗಬೇಕು. ಬ್ರಹ್ಮನು ಮುಕ್ತನಾಗಲು ಇನ್ನೂ ೩೫೯೬೦ ದಿನಗಳು ಬಾಕಿ ಇರುತ್ತವೆ. ಆಗ ಈ ಇಂದ್ರನು ಯಾವ ಬ್ರಹ್ಮನೊಡನೆ ಮುಕ್ತನಾಗುತ್ತಾನೆ? ಇಲ್ಲ ಇಂದ್ರನು ಸಾಧನವನ್ನು ಮುಗಿಸಿಕೊಂಡು ಒಂದೆಡೆ ಕುಳಿತಿರುತ್ತಾನೆ. ಈ ಬ್ರಹ್ಮನು ಬಂದ ಕೂಡಲೇ ಆತನೊಡನೆ ಮುಕ್ತಿಯನ್ನೈದುತ್ತಾನೆ ಎಂದು ಹೇಳುತ್ತಾರೆ. ಆಗ ಬ್ರಹ್ಮನಿಗೂ ಇಂದ್ರನಿಗೂ ಕಲ್ಪನ ಸಾಧನದ ವ್ಯತ್ಯಾಸವೇ ಇಲ್ಲದಂತೆ ಆಗುತ್ತದೆ. ಲಿಂಗಶರೀರವು ಕರ್ಮ ಬೀಜವು. ಅದು ಭಂಗವಾಗದ ವಿನಃ ಕರ್ಮವು ನಿಲ್ಲುವುದಿಲ್ಲ. ಸುಮ್ಮನೇ ಕುಳಿತಿರುವುದೂ ಕೂಡ ಕರ್ಮವೆನಿಸುತ್ತದೆ. ೪೦ ದಿನದಲ್ಲಿ ಇಂದ್ರನು ಮುಕ್ತನಾದರೆ ಆಗ ಬ್ರಹ್ಮಾಂಡದಲ್ಲಿ ಇಂದ್ರ ಪದವಿಯಲ್ಲಿ ಯಾರು ಇರುತ್ತಾರೆ? ಈಗಿರುವ ಬ್ರಹ್ಮನಿಗೆ ಈಗ ೧೮೦೦೦ ದಿನಗಳಾಗಿವೆ. ಅಂದರೆ ೫೦ ವರ್ಷಗಳು ಕಳೆದು ೫೧ನೇ ವರ್ಷದಲ್ಲಿ ಇರುವನು. ಈಗ ಈ ಬ್ರಹ್ಮಾಂಡದಲ್ಲಿ ಇಂದ್ರನು ಇಲ್ಲವೇ. ಒಂದು ವೇಳೆ ನಲವತ್ತು ದಿನಕ್ಕೊಬ್ಬನಂತೆ ಇಂದ್ರನು ಮುಕ್ತನಾಗಿ ಒಂದೆಡೆ ಕುಳಿತಿದ್ದರೆ ಈ ಬ್ರಹ್ಮನು ಮುಕ್ತನಾಗುವ ವೇಳೆಗೆ ಎಷ್ಟು ಜನ ಇಂದ್ರರು ಜಮಾಯಿಸಿಕೊಂಡು ಒಂದೆಡೆ ಕುಳಿತಿರುತ್ತಾರೆ? ಒಂಭೈನೂರು ಜನ ಹೌದಾ? ಇದೇ ರೀತಿಯಾಗಿ ತೃಣಾಂತ ಜೀವರೂ ಕೂಡ ಹೌದ? ಇದುವರೆಗೆ ಎಷ್ಟು ಜನ ಶೇಷ (೩೬೦), ಗರುಡ (೩೬೦) ಇತ್ಯಾದಿಗಳು ಸೇರಿರುತ್ತಾರೆ? ಅಲ್ಲವೇ? ಆದ್ದರಿಂದ ಇದು ಹೀಗಲ್ಲ, ಸಾಧನಕ್ಕೆ ಇರುವುದು ಬ್ರಹ್ಮಕಲ್ಪವೇ ವಿನಃ ದಿನಕಲ್ಪಗಳಲ್ಲ. ತೃಣಜೀವನಿಗೆ ೧ ಕಲ್ಪ, ಬ್ರಹ್ಮನು ಪದವಿಯಲ್ಲಿ ಇರುವದು ೧ ಕಲ್ಪ. ಸಮಸ್ತ ಜೀವರು ಒಂದು ಕಲ್ಪದಲ್ಲಿ ಕಾಲ ಕಳೆದರೆ ಆ ಕಲ್ಪವು ಮುಗಿದ ಮೇಲೆ ಮುಕ್ತಿಗಾದರೂ ಹೋಗುತ್ತಾರೆ ಅಥವಾ ಮುಂದಿನ ಕಾಲಕ್ಕೆ ಸಾಗುತ್ತಾರೆ. ಬ್ರಹ್ಮಾಂಡದಲ್ಲಿ ಪ್ರತಿ ಕಲ್ಪದಲ್ಲಿಯೂ ಬ್ರಹ್ಮನನ್ನು ಒಳಗೊಂಡು ತಮ್ಮ ಕಲ್ಪಸಾಧನದ ಕೊನೆಯ ಕಲ್ಪವನ್ನು ತಲುಪಿದ ಜೀವರು ಇದ್ದೇ ಇರುತ್ತಾರೆ. ಆ ಬ್ರಹ್ಮನ ಜೊತೆಗೆ ಇವರು ಮುಕ್ತರಾಗುತ್ತಾರೆ. ಪ್ರತಿ ಕಲ್ಪದಲ್ಲಿಯೂ ಒಬ್ಬ ಬ್ರಹ್ಮನು ಇರುತ್ತಾನೆ. ಆ ಕಲ್ಪದಲ್ಲಿ ಮುಕ್ತರಾಗುವವರು ಈ ಬ್ರಹ್ಮನೊಡನೆ ಮುಕ್ತರಾಗುತ್ತಾರೆ. ನೂರು ವರುಷಾನಂತರದಲಿ ಸ । ರೋರುಹಾಸನ ತನ್ನ ಕಲ್ಪದ । ಲಾರು ಮುಕ್ತಿಯನ್ನೈದುವರೊ ಅವರವರ ಕರೆದೊಯ್ದು.... ಹರಿಯುದರ ಪ್ರವೇಶಿಸುವ (ಕ.ಸಾ೩೯)

ಸಂದರ್ಭೋಚಿತವಾಗಿ ಹಲವು ಬಗೆ ಅರ್ಥವನ್ನು ನೀಡುವ 'ಕಲ್ಪ' ಶಬ್ದಕ್ಕೆ ಇಲ್ಲಿ ಬ್ರಹ್ಮನನ್ನು ಕುರಿತು ಕಾಲಮಾನಗಳನ್ನು ಅಳೆಯುವಾಗ ಅದು ಎಷ್ಟೇ ಅಣು ಮಹತ್ಕಾಲವಾಗಿದ್ದರೂ ಅದನ್ನು ಬ್ರಹ್ಮನ ಮರ್ಯಾದಾನುಸಾರವಾಗಿ 'ಕಲ್ಪ' ಎಂದು ಕರೆಯಬೇಕೆಂಬುದೇ ಶ್ರೀಟೀಕಾಚಾರ್ಯರ ಇಂಗಿತವಲ್ಲದೆ ಕಲ್ಪಸಾಧನ ದೃಷ್ಟಿಯಿಂದ ಅಲ್ಲ. ತಿರುಕನಿಗೆ ನೀಡಿದರೆ ಅದೇ ಹಣ ಭಿಕ್ಷೆ ಎನಿಸುತ್ತದೆ. ವಿದ್ವಾಂಸರಿಗೆ ನೀಡಿದರೆ ಸಂಭಾವನೆ ಎನಿಸುತ್ತದೆ. ಗುರು-ರಾಜರಿಗೆ ನೀಡಿದರೆ ಕಾಣಿಕೆ ಎನಿಸುತ್ತದೆ. ಹಾಗೆಯೇ ಬ್ರಹ್ಮನ ಕಾಲವು ಅಣುವಾಗಿದ್ದರೂ ಅದು 'ಕಲ್ಪ' ಶಬ್ದ ವಾಚ್ಯ ಮಾತ್ರ.

ಸಾಧನ ದೃಷ್ಟಿಯಲ್ಲಿ ಆ ಬ್ರಹ್ಮಸ್ತಂಭ ಪರ್ಯಂತವಾಗಿ ಇರುವುದು ಬ್ರಹ್ಮಕಲ್ಪವೇ ಎಂಬುದನ್ನು ಈ ಕೆಳಗಿನ ಪ್ರಮಾಣಗಳು ಸಮರ್ಥಿಸುತ್ತವೆ.

> ೧. "ಕಲ್ಪಸಂಖ್ಯಾ ಬ್ರಹ್ಮ ಮಾನಾತ್। ವಿಜ್ಞೇಯಾ ಯೋಗ್ಯಚೇತನೈಃ ॥
> ಪ್ರೋಕ್ತೈಕಲ್ಪೈ ರ್ವಿಮುಚ್ಯಂತೆ ತಾವತ್ಕಲ್ಪೈಸ್ತು ಸಾಧನಂ ॥

ಬ್ರಹ್ಮಣತ್ವೇವ ತಾವತ್ವಂ ...... ಇತ್ಯಾದಿಚ ॥ ಪ್ರಕಾಶ ಸಂಹಿತಾಯಾಂ ॥"
ಇದರ ಬಗ್ಗೆ ಶ್ರೀವಿಜಯದಾಸರ ಸುಳಾದಿಯನ್ನು ನೋಡುವಾ–
೨. "ಪರಮೇಷ್ಟಿ ಮಾನದಿಂದ ತಿಳಿವುದು ತೃಣಾಂತಕೆ। ತರತಮ್ಯ
ಅಪರೋಕ್ಷ ಚರಮ ದೇಹ ಪರಿಯಂತ"...."ಇದರೊಳು ಕ್ರಮ ಉಂಟು ಒಂದೊಂದು
ಜನ್ಮ ತಮ್ಮ । ಪದವಿಸಾರಿ ವಿಲಿಂಗರಾದ ಮೇಲೆ (ಒಬ್ಬರು ಮುಕ್ತರಾದ ಮೇಲೆ)।
ಒದಗಿ ಬಾ ಹೋರು ಸಲಿಂಗರು (ಅಸೃಜ್ಯಾವಸ್ಥೆಯಿಂದ ಸೃಷ್ಟಿಗೆ ಬರುವರು) ವೇಗದಿ ।
ನದಿ ಪ್ರವಾಹದಂತೆ ಕಾಲ ವ್ಯವಧಾನ । ವಿಧಿ ಶಿವ ಮಿಕ್ಕಾದ ಜನರೆಲ್ಲ ಜತ್ತಾಗಿ ।
ಮುದದಿಂದ ಸೋಪಾನ ಬಂದಂತೆವೋ" ....

...."ಒಬ್ಬೊಬ್ಬರು ಮುಂದು । ಇದರ ತರುವಾಯ ಅಪರೋಕ್ಷ ಗಣದ ಮಧ್ಯದಲ್ಲಿಗೆ । ಸದಮಲ ಸಂಖ್ಯೆಗೆ ಒಂದೊಂದು ಕಡಮೆ ಚೇತ । ನದ ಲೆಕ್ಕವ ನೋಡು ಸ್ಪಷ್ಟತ್ವದಿಂದಲಿ ಭೇದ । ಇದರಲ್ಲಿ ಸಾಧನ, ಸಾಧ್ಯ, ಪದಸ್ಥ ತ್ರಿ । ವಿಧವೆನ್ನು ಬಿಂಬೋಪಾಸನೆ ಅಧಿಕಾಧಿಕವಾಗಿ ಮಾಡುತಲಿಪ್ಪರು ....। ಹೃದಯಸ್ಥ ಮೂರ್ತಿಯಾ ಉಚಿತ ಜನುಮದಲ್ಲಿ । ಅಧಿಕಾರತನದಿಂದ ಯೋಗ್ಯತಾನುಸಾರ ... (ಶ್ರೀವಿಜಯದಾಸರು)"

ವಾಯುದೇವರು ನೂರು ಜನ್ಮಗಳಲ್ಲಿ ಅಂದರೆ ೧೦೧ನೇ ಕಲ್ಪದಿಂದ ಇನ್ನೂರನೇ ಕಲ್ಪದವರೆಗೆ ಮಹಾಸುಖ ಪ್ರಾರಬ್ಧವನ್ನು ಭೋಗಿಸಿ ನಿರಾಯಸವಾಗಿ ಬ್ರಹ್ಮಪಟ್ಟವನ್ನು ಹೊಂದುವನು. ಇದಕ್ಕೂ ಮೊದಲು ೧ನೇ ಕಲ್ಪದಿಂದ ೧೦೦ ರವರೆಗೆ ಸಾಮಾನ್ಯಾs ಪರೋಕ್ಷ ಎನಿಸಿ ತರುವಾಯ ವಿಶೇಷವಾಗಿ ಭಗವದುಪಾಸನೆಯನ್ನು ಮಾಡುವರು. ಶತಜನ್ಮ ಪೂರ್ಣ ಮುದಿತಾಪರೋಕ್ಷ ಜ್ಞಾನೇನ (ವಾ.ಗ.) ಈ ಸಮೀರಗೆ ನೂರು ಜನ್ಮಮ । ಹಾ ಸುಖ ಪ್ರಾರಬ್ಧ ಭೋಗ ಪ್ರ । ಯಾಸವಿಲ್ಲದಲೈದಿದನು ಲೋಕಾಧಿಪತ್ಯವನು ॥ ಕ.ಸಾ ॥೩೧ ॥ ಪ್ರತಿಯೊಬ್ಬ ಸಾಧಕನೂ ತನ್ನ ಕಲ್ಪ ಸಾಧನದ ಮೊದಲರ್ಧ ಭಾಗದಲ್ಲಿ ಸಾಮಾನ್ಯ ರೀತಿಯಿಂದಲೂ ಉಳಿದರ್ಧ ಸಾಧನ ಕಾಲದಲ್ಲಿ ವಿಶೇಷ ರೀತಿಯಿಂದಲೂ ಭಗವದುಪಾಸನೆಯನ್ನು ಮಾಡುತ್ತಾರೆ. ಪೂರ್ವಾರ್ಧವನ್ನು ಸಾಧನವೆಂತಲೂ ಉತ್ತರಾರ್ಧವನ್ನು ಭೋಗವೆಂತಲೂ ಕರೆಯಬಹುದು. ಸಾಮಾನ್ಯ ವಿಶೇಷ ದೃಷ್ಟಿಯಿಂದ.

ವಾಯುದೇವರಿಗೆ ಲಿಂಗ ಶರೀರವು ಇರುವುದರಿಂದಲೇ ಅವರು ಸುಖ ಪ್ರಾರಬ್ಧ ಭೋಗವನ್ನು ಅನುಭವಿಸುತ್ತಾರೆ. ಆದರೆ ಅಪರೋಕ್ಷ ಜ್ಞಾನಿಗಳೇ ಸ್ವರೂಪಾತಿರಿಕ್ತವಾದ ಪ್ರಾರಬ್ಧ ಭೋಗವನ್ನು ಉದಾಸೀನ ಮಾಡುತ್ತಿರುವಾಗ ಇನ್ನು ಈ ವಾಯುದೇವರಿಗೆ ಈ ಸುಖ ಪ್ರಾರಬ್ಧವು ಯಾವರೀತಿಯಿಂದ ಗಣನೆಗೆ ಬಂದೀತು. ಅದು ಅವರಿಗೆ ಇರುವುದು ವೀರ್ಯ ಶೂನ್ಯವಾದ ದಗ್ಧಪಟದೋಪಾಧಿಯಾದ ಲಿಂಗದೇಹ.

"ಶುದ್ಧ ಸತ್ವಾತ್ಮಕ ಶರೀರದೋ । ಳಿದ್ದ ಕಾಲಕು ಲಿಂಗದೇಹವು । ಬದ್ಧವಾಗದು ದಗ್ಧಪಟದೋಪಾದಿ ಇರುತಿಹುದು ॥ ಕ.ಸಾ. ೧೮ ॥"

ಇತರರಿಗೆ ಅಪರೋಕ್ಷಾ ನಂತರದಲ್ಲಿ ಪ್ರಾರಬ್ಧವು ಉಪಮರ್ದವಾಗುತ್ತದೆ. ದೇವತೆಗಳು ಜಾತಾಪರೋಕ್ಷಿಗಳು ಕೆಲವು ವೇಳೆ ತಿರೋಧಾನ ಉಂಟು. ಆದರೆ ಈ ದೋಷವು ವಾಯುದೇವರಿಗೆ ಇಲ್ಲ.

**॥ ಪದ ॥ ಸಂದೇಹವಿಲ್ಲದೆ । ಒಂದು ಬ್ರಹ್ಮಾಂಡದಿ ।**
**ಸಂದ ರೂಪಲಗಳಿ । ಗೊಂದಿಸುತಾ ॥**
**ಇಂದಿರೆಗಿಂತಲಿ । ಒಂದು ಕೋಟಿ ಗುಣ ।**
**ದಿಂದಲಿ ಅವರನು । ಎಂದು ಸಜಾತಿಲಿ ॥ ೪೭ ॥**

**ಅರ್ಥ:** ಸಂದೇಹವಿಲ್ಲದೆ = ಭಗವದ್ವಿಸ್ಮೃತಿ ಇರದಂತೆ; ಒಂದು ಬ್ರಹ್ಮಾಂಡದಿ = ಒಂದು (ತಾನಿರುವ) ಬ್ರಹ್ಮಾಂಡದಲ್ಲಿ ವ್ಯಾಪಿಸಿಕೊಂಡಿರುವ ಭಗವದ್ರೂಪಗಳನ್ನು; ವಂದಿಸುತಾ = ಗುಣ, ರೂಪ, ಕ್ರಿಯೆಗಳನ್ನು ತಿರೋಧಾನವಿಲ್ಲದಂತೆ ಚಿಂತಿಸುತ್ತಾ. ಇಂದಿರೆಗಿಂತಲಿ = ಲಕ್ಷ್ಮೀದೇವಿಗಿಂತಲೂ; ಸಜಾತಿಲಿ = ಹೋಲಿಕೆಗೆ ಸಾಧ್ಯವಿರುವ ಗುಣದಿಂದ; ಒಂದು ಕೋಟಿ ಗುಣದಿಂದ; ಅವರನು = ಕಡಿಮೆಯಾಗಿ ಇರುವವನು.

**ವಿಶೇಷಾರ್ಥ:** ವಾಯುದೇವರು ಸದಾಕಾಲವೂ ಭಗವದುಪಾಸನೆಗಳನ್ನು ಮಾಡುತ್ತಾ ಇರುತ್ತಾರೆ. "ಪ್ರಳಯ ಕಾಲದಿ ಬಾರದ ಜ್ಞಾನಾದಿದೋಷಗಳು (ಪ್ರಳಯ ಕಾಲೇಪಿ ಪ್ರತಿಭಾತಪರಾವರಾಯ) ವಾಯು ಜೀವೋತ್ತುಮತ್ವಕ್ಕೆ ಈ ಗುಣವೇ ಸಾಕ್ಷಿ. ಆದರೆ ಕ್ಷರಪುರುಷರಾದ, ಅಸೃಜ್ಯಾವಸ್ಥೆಯಿಂದ ಸೃಷ್ಟಿಗೆ ಒಂದು ಸಾಧನೆಯಿಂದ ಮೋಕ್ಷವನ್ನು ಪಡೆಯುವ ಯೋಗ್ಯತೆಯುಳ್ಳ ಈ ವಾಯುದೇವರು ಸೃಷ್ಟಿ ಪೂರ್ವದಲ್ಲಿ ಪ್ರಾಜ್ಞನಾಮಕ ಶ್ರೀಹರಿಯಿಂದ ಆಲಿಂಗಿತನಾಗಿ ವೃತ್ತಿಜ್ಞಾನ ರಹಿತನಾಗಿರುವುದರಿಂದ ಈತನಿಗೆ ಹಿಂದೆ ಹೋದ ಅನಂತ ಬ್ರಹ್ಮಾಂಡಗಳ ಗತ ಭವದ್ರೂಪಗಳನ್ನು ಉಪಾಸನೆ ಮಾಡಲಿಕ್ಕೆ ಸಾಧ್ಯವಿಲ್ಲ. ಹಾಗೆಯೇ ಈತನು ಮುಕ್ತನಾದ ಮೇಲೆ ಮುಂದೆ ಬರಲಿರುವ ಅನಂತ ಬ್ರಹ್ಮಾಂಡ ಗತ ಭಗವದ್ರೂಪಗಳನ್ನು ಉಪಾಸನೆ ಮಾಡಲಾಗುವುದಿಲ್ಲ. ತಾನಿರುವ ಒಂದು ಬ್ರಹ್ಮಾಂಡಗತ ಸಮಸ್ತ ಭಗವದ್ರೂಪಗಳನ್ನು ಜ್ಞಾನಾಧಿಕ್ಯದಿಂದ ಚಿಂತಿಸುತ್ತಾನೆ. ಆದರೆ ಶ್ರೀಮಹಾಲಕ್ಷ್ಮೀದೇವಿಯು ಗತಾಽಗತ ಬ್ರಹ್ಮಾಂಡ ಗತ ಭಗವದ್ರೂಪಗಳನ್ನು ಚಿಂತಿಸುತ್ತಾಳೆ. ಕೆಲವರು ಹೇಳುತ್ತಾರೆ. ವಾಯುದೇವರು ಅನಂತ ಬ್ರಹ್ಮಾಂಡಗತ ಭಗವದ್ರೂಪಗಳನ್ನು ಉಪಾಸಿಸುತ್ತಾರೆ ಎಂದು. ಸದಾ ಅಭಿವೃದ್ಧಿ ಪಥದಲ್ಲೇ ಇರುವ ಲಕ್ಷ್ಮೀಜ್ಞಾನಕ್ಕೂ, ಮೋಕ್ಷ ಪರಿಯಂತವಾಗಿ ಮಾತ್ರ ಅಭಿವೃದ್ಧಿ ಪಥದಲ್ಲಿರುವ ಋಜುಗಣಗಳ ಜ್ಞಾನಕ್ಕೂ ಬಹಳ ವ್ಯತ್ಯಾಸವಿದೆ. ವಾಯು (ಆಮುಕ್ತಿ ಕ್ರಮೇಣ ವರ್ಧಮಾನೇನ, ಅಬ್ಜಜ ಕಲ್ಪ ಪರಿಯಂತ) ಜ್ಞಾನಾಭಿವೃದ್ಧಿಯು ಸೀಮಿತವಾದುದು. ಋಜುಗಣಕೆ ಭಕ್ತ್ಯಾದಿ ಗುಣಸಾ। ಹಜವೆನಿಸುವವು ಕ್ರಮದಿ ವೃದ್ಧ್ಯಾಬ್ಜಜ ಪದವಿ ಪರಿಯಂತ ಬಿಂಬೋಪಾಸನವು ಅಧಿಕ ॥ ಕ.ಸಾ.೧೨॥ ಸಾಧನ ಜೇಷ್ಠರಿಗಿಂತ ಕಿಂಚಿತ್ ಕಡಿಮೆ ಜ್ಞಾನ ಉಳ್ಳವರು. ಋಜುಗಳು (ಇತರೆ ಸಾಧನ ತತ್ವರರಲ್ಲೂ ಹೀಗೆಯೇ ವ್ಯತ್ಯಾಸವಿದೆ) ಗತಾಽಗತ ಅನಂತ ಬ್ರಹ್ಮಾಂಡಗಳಲ್ಲಿ ವಾಯುದೇವರ ವ್ಯಾಪ್ತಿತ್ವವು ಇಲ್ಲವಾದುದರಿಂದ ಅನಂತ ಬ್ರಹ್ಮಾಂಡ ಗತ ಭಗವದುಪಾಸೆಯು ವಾಯುದೇವರಿಗೆ ಅನ್ವಯಿಸುವುದಿಲ್ಲ. ಕೆಲವರು ಕಕ್ಷತಾರತಮ್ಯದ ಮೂರನೇ ಪದ್ಯವನ್ನು ಅರ್ಥೈಸುವಾಗ ಆ ಪದ್ಯವನ್ನು ವಾಯುಪರ ಅರ್ಥಮಾಡಲು ಯತ್ನಿಸುವುದೇ ಈ ತಪ್ಪಾರ್ಥಕ್ಕೆ ಎಡೆಯಾಗುತ್ತದೆ. ಮೇಲಾಗಿ ಆ ಪದ್ಯವನ್ನು ವಾಯುಪರ ಅರ್ಥ ಮಾಡಲು ಆಗುವುದೂ ಇಲ್ಲ. ಆ ಪದ್ಯವು ಲಕ್ಷ್ಮೀದೇವಿಯ ಜ್ಞಾನವನ್ನು ವರ್ಣಿಸುತ್ತದೆಯೇ ಹೊರತು ಬ್ರಹ್ಮ, ವಾಯುಗಳ ಜ್ಞಾನವನ್ನಲ್ಲ.

**"ರೋಮ ಕೂಪಗಳೊಳಗೆ ಪೃಥಕ್ಪೃಥ । ಕಾ ಮಹಾಪುರುಷನ ಸ್ವಮೂರ್ತಿಯ ।**
**ತಾಮರಸ ಜಾಂಡಗಳ ತದ್ಗತ ವಿಶ್ವರೂಪಗಳ ॥**

ಶ್ರೀ ಮಹಿಳೆ, ರೂಪಗಳ ಗುಣಗಳ । ಸೀಮೆಗಾಣದೆ ಯೋಚಿಸುತ ಮಮ ।
ಸ್ವಾಮಿ ಮಹಿಮೆ ಎಂತುಟೆಂದಡಿಗಡಿಗೆ ಬೆರಗಾದ ॥ ೩೨ – ೩ ॥"

ಈ ಪದ್ಯದ ಅನ್ವಯ ಹೀಗಿದೆ–

"ರೋಮ ಕೂಪಗಳೊಳಗೆ ಪೃಥ ಪೃಥ। ಕಾ ಮಹಾ ಪುರುಷನ
ಸ್ವಮೂರ್ತಿಯ । ತಾಮರಸ ಜಾಂಡಗಳ ತದ್ಗತ ವಿಶ್ವರೂಪಗಳ ।
ರೂಪಗಳ ಗುಣಗಳ ಸೀಮೆಗಾಣದೆ ಶ್ರೀಮಹಿಳೆ ಯೋಚಿಸುತ ಮದು ।
ಸ್ವಾಮಿ ಮಹಿಮೆ ಎಂತುಟೆಂದಡಿಗಡಿಗೆ ಬೆರಗಾದ ॥ ೩ ॥

ಪರಮಾತ್ಮನಿಗೆ ಸಮದೇಶವ್ಯಾಪ್ತಳಾದ ಯಾವ ಶ್ರೀಮಹಿಳೆಯು ತನ್ನ ಒಂದೊಂದು ರೋಮಕೂಪದಲ್ಲಿಯೂ ಅಡಗಿರುವ ಅನಂತ ಬ್ರಹ್ಮಾಂಡಗತ ಭಗವದ್ರೂಪ, ಗುಣ, ವಿಶ್ವರೂಪಗಳಿಗೆ ಕೊನೆ ಮೊದಲಿಲ್ಲದುದನ್ನು ಕಾಣುತ್ತ ಆಶ್ಚರ್ಯಾನಂದ ಭರಿತಳಾಗಿ ತನ್ನ ಪತಿಯು ಎಷ್ಟೊಂದು ಮಹಿಮೆಗಳಿಂದ ಯುಕ್ತನಾಗಿರುವನಲ್ಲಾ ಎಂದು ಹೇಳುತ್ತಿರುವ, ಅಂಥಾ ಅನಂತ ಕೋಟಿ ಬ್ರಹ್ಮಾಂಡಗಳಲ್ಲಿ

ಬಂದ ಜಾಂಡದೊಳುಳೊಂದು ರೂಪದೊ । ಳೊಂದ ವಯದೊಳೊಂದು ನಖದೊಳ।
ಗೊಂದು ಗುಣಗಳ ಪಾರಗಣದೆ ಕೃತಪುಟಾಂಜಲಿಯಿಂ ॥
ಮಂದಜಾಸನ ಪುಳಕ ಪುಳಕಾ । ನಂದ ಭಾಷ್ಪತೊದಲ್ನುಡಿಗಳಿಂ ।
ದಿಂದಿರಾ ವಲ್ಲಭನ ಮಹಿಮೆ ಗಂಭೀರ ತರವೆಂದೆ ॥ ೪ ॥

"ಏನುಧನ್ಯರೊ ನಮ್ಮ ಗುರು ಪವ । ಮಾನರೀರ್ವರು ಈ ವಿಧರ ।
ಮೂನಿವಾಸನ ವಿಮಲಲಾವಣ್ಯಾತಿಶಯಗಳನು ॥
ಸಾನುರಾಗದಿ ತುತಿಸಿ ಹಿಗ್ಗುವಮ । ಹಾನುಭಾವರ ಭಾಗ್ಯವೆಂತೊ ಭ ।
ವಾನಿಧವನಿಗಸಾಧ್ಯವೆನಿಸಲು ನರರ ಪಾಡೇನು ॥ ೫ ॥"

ಹೀಗೆ ಬ್ರಹ್ಮವಾಯುಗಳು ಚಿಂತಿಸುತ್ತಿರುವುದು ಕೇವಲ ಒಂದು ಬ್ರಹ್ಮಾಂಡಗತ ಭಗವದ್ರೂಪಗಳೆಂದು ಇದ್ದುದನ್ನು ಇದ್ದಂತೆ ಅರ್ಥೈಸಬೇಕು.

ಇನ್ನು ಗುಣತಾರತಮ್ಯದಲ್ಲಿ ವಾಯುವಿನ ಪಾತ್ರವನ್ನು ಹೀಗೆ ಚಿಂತಿಸಬೇಕು.

ಜಗದೀಶನಾದ ಶ್ರೀಮನ್ನಾರಾಯಣನು ಅಗಣಿತ ಗುಣಗಣಮಯ ಶರೀರನು. ಈತನಿಗಿಂತ ಶ್ರೀಲಕ್ಷ್ಮೀದೇವಿಯು ಅನಂತಾನಂತ ಗುಣಗಳಿಂದ ಅವರಳಾಗಿದ್ದಾಳೆ. ಚಿದಾನಂದಾತ್ಮಕನಾದ ಶ್ರೀಹರಿಯು ಸ್ವಗತಭೇದ ವಿವರ್ಜಿತನಾದುದರಿಂದ ಈತನಲ್ಲಿ ಸಜಾತಿ – ವಿಜಾತಿ ಎಂಬ ಭೇದಕ್ಕೆ ಆಸ್ಪದವಿಲ್ಲ. ಸುಗುಣಪೂರ್ಣನಾಗಿದ್ದಾನೆ. ಆದರೆ ಶ್ರೀಲಕ್ಷ್ಮೀದೇವಿಯು ಸಜಾತಿ – ವಿಜಾತಿ ಎಂಬ ಗಣಿತ ಮಾನಿತಳಾಗಿ ಬ್ರಹ್ಮ ವಾಯುಗಳಿಗಿಂತ ಸಜಾತಿ ಗುಣವಾನವಲ್ಲಿ ಒಂದು ಕೋಟಿ ಗುಣಗಳಿಂದ ಅಧಿಕತೆಯುಳ್ಳವಳಾಗಿದ್ದಾಳೆ. ವಿಜಾತಿ ಗುಣದಿಂದ ಅಗಣಿತ ಗುಣಶ್ರೇಷ್ಠಳಾಗಿದ್ದಾಳೆ. ಪಾರತಂತ್ರ್ಯವು ಸರ್ವಸಾಮಾನ್ಯ.

**"ಕಮಲಸಂಭವ ಪವನರೀರ್ವರು। ಸಮರು ಸಮವರ್ತಿಗಳು ರುದ್ರಾ ।**
**ದ್ಯಮರ ಗಣ ಸಂಸೇವಿತ ಪರಬ್ರಹ್ಮನಾಮಕರು ॥**
**ಯಮಳರಿಗೆ ಮಹ ಲಕುಮಿತಾನು । ತ್ತಮಳು ಕೋಟಿ ಸಜಾತಿ – ಗುಣದಿಂ ।**
**ದಮಿತ ಸುವಿಜಾತ್ಯಧಮರೆನಿಪರು ಬ್ರಹ್ಮ ವಾಯುಗಳು ॥ ಗು.ತಾ.೫॥**
**"ಘೋಟಕಾಶ್ಯನ ಮಡದಿಗಿಂದಲಿ । ಹಾಟಕೋದರ ಪವನರೀರ್ವರು ।**
**ಕೋಟಿಗುಣದಿಂದಧಮರೆನಿಪರು ಆವಕಾಲದಲಿ ॥ ಬೃ.ತಾ ॥ ೫ ॥**

ಸಜಾತಿ – ವಿಜಾತಿ ಎಂದರೇನು? ಎಂದರೆ ಒಂದು ದೃಷ್ಟಾಂತವನ್ನು ಔಪಚಾರಿಕವಾಗಿ ಇಲ್ಲಿ ತಿಳಿಸಬಯಸುತ್ತೇನೆ. ಬಂಗಾರ ಮತ್ತು ಬೆಳ್ಳಿಯ ಗಟ್ಟಿಗಳನ್ನು ತೆಗೆದು ಕೊಂಡರೆ ಬಂಗಾರವು ಹತ್ತು ತೊಲ ಮತ್ತು ಬೆಳ್ಳಿಯು ಎಂಟು ತೊಲ ಭಾರವಿದೆ ಎಂದು ಇಟ್ಟು ಕೊಳ್ಳುವ ಇಲ್ಲಿ ಭಾರವು ಸಜಾತಿ ಗುಣ ಎನಿಸುತ್ತದೆ. ಎರಡೂ ಭಾರಗಳನ್ನು ಹೊಂದಿದ್ದು ಬಂಗಾರವು ಬೆಳ್ಳಿಗಿಂತ ಎರಡು ತೊಲ ಅಧಿಕ ಭಾರವನ್ನು ಹೊಂದಿದೆ ಎಂದಾಯಿತು. ಆದರೆ ಬಂಗಾರ ಬೆಳ್ಳಿಗಳ ಗುಣಗಳು ವಿಜಾತಿ ಎನಿಸುತ್ತವೆ. ಬಂಗಾರವು ದ್ರಾವಕದಲ್ಲಿ ನಶಿಸುವುದಿಲ್ಲ. ಆದರೆ ಬೆಳ್ಳಿಯು ನಶಿಸಿ ಹೋಗುತ್ತದೆ. ಇಲ್ಲಿ ಇವರೆಡರ ತೂಕದಲ್ಲಿ ಗಣಿತವನ್ನು ಹೊಂದಬಹುದೇ ವಿನಃ ಗುಣತುಲನೆಯು ಸಾಧ್ಯವಿಲ್ಲ. ಇದೇ ಸಜಾತಿ – ವಿಜಾತಿ.

ವಾಯುದೇವರು ಲಕ್ಷ್ಮೀದೇವಿಗಿಂತ ಒಂದು ಕೋಟಿ ಸಜಾತಿ ಗುಣದಿಂದ ಕಡಿಮೆ ಎಂಬುದು ನಿರ್ಣಯವಾಗಿದೆ. ಇನ್ನು ಬ್ರಹ್ಮ, ವಾಯು ಮತ್ತು ಋಜುಗಣಸ್ಥರ ಸಂಬಂಧವನ್ನು ಅವಶ್ಯವಾಗಿ ತಿಳಿಯಬೇಕು.

ಸಾಮಾನ್ಯ ದೃಷ್ಟಿಯಲ್ಲಿ ಋಜುಗಣಸ್ಥರೆಲ್ಲರೂ ಸಮಾನವಾದ ಸ್ಥಾನ, ಮಾನ, ಜ್ಞಾನಗಳನ್ನು ಹೊಂದಿರುವರು. ಎಲ್ಲರೂ ಬ್ರಹ್ಮ ಪದವಿಗೆ ಬರುವವರೇ. ಎಲ್ಲರಿಗೂ ೨೦೦ ಬ್ರಹ್ಮಕಲ್ಪ ಸಾಧನವಿದೆ ಎಲ್ಲರೂ ಜೀವೋತ್ತಮರೇ. ಎಲ್ಲರೂ ಸುಖ ಪ್ರಾರಬ್ಧ ಭೋಗಿಗಳೇ ಮತ್ತು ದಗ್ಧ ಪಟಾಯಮಾನವಾದ ಲಿಂಗಶರೀರ ಉಳ್ಳವರೇ.

**"ಶುದ್ಧ ಸತ್ವಾತ್ಮಕ ಶರೀರದೊ । ಳಿದ್ದ ಕಾಲಕು ಲಿಂಗ ದೇಹವು ।**
**ಬದ್ಧವಾಗದು ದಗ್ಧ ಪಟದೋಪಾದಿ ಇರುತಿಹುದು ॥ ಕ.ಸಾ. ॥ ೧೮ ॥**
**ಬ್ರಹ್ಮವಾಯುದೇವರು ಸಮರೆಂದು ಈ ಪ್ರಮಾಣವಿರುತ್ತದೆ.**

"ವಾಯೋರ್ಮಮಮಾಂತರಂ ನಾಸ್ತಿ । ಹರಿತತ್ವಸ್ಯನಿರ್ಣಯೇ ॥
ಅವತಾರೇಷು ವಾಯೋಸ್ತು । ಹ್ಯಂತರಂ ಯೇವಿಧೋ ಪ್ರಭೋ ॥
ತೇಂಧಂತಮ ಪ್ರವಿಶ್ಯಂತಿ ದೈತ್ಯೋsಸ್ತು ನಚತೇಸುರಾ ॥ ಗಾರುಡೇ ಬ್ರಕಾಂ ॥
"ಕಮಲ ಸಂಭವ ಪವನರೀರ್ವರು । ಸಮರು ಸಮವರ್ತಿಗಳು ರುದ್ರಾ ।
ದ್ಯಮರ ಗಣ ಸಂಸೇವಿತರು ಪರಬ್ರಹ್ಮನಾ ಮಕರು ॥ ಗು.ತಾ. ೫ ॥"

ಇತ್ಯಾದಿಯಾಗಿ ಹಲವು ಪ್ರಮಾಣಗಳು ಮೇಲಿನ ತತ್ವಗಳನ್ನು ಸಾರುತ್ತಿವೆ. ಈ ಗಣದವರಲ್ಲಿ ಪರಸ್ಪರ ವ್ಯತ್ಯಾಸವಿಲ್ಲವೆಂದು ಭಾವಿಸಿದರೆ ಅದು ಸ್ವರೂಪ ನಿಶ್ಚಯದಲ್ಲಿ ಸಾಧುವಾದುದೇ. ಆದರೆ ಸಾಧನ ಕಾಲದಲ್ಲಿ ಪರಸ್ಪರ ವೈವಿಧ್ಯತೆಯು ಉಂಟು.

ಋಜುಗಣಸ್ಥರಿಗೆ ಪ್ರತಿಪ್ರತೀ ಕಲ್ಪದಲ್ಲಿ ಸಾಗುತ್ತ ಬ್ರಹ್ಮಪದವಿಗೆ ಬರುವ ವೇಳೆಗೆ ೨೦೦ ಬ್ರಹ್ಮಕಲ್ಪಗಳಾಗಿರುತ್ತವಲ್ಲವೇ? ಹಾಗೆ ಸಾಗಿದ ಕಾಲಾವಧಿಯಲ್ಲಿ ಅವರ ಜ್ಞಾನವು ವೃದ್ಧಿಯಾಗುತ್ತಾ ಇರುತ್ತದೆಂಬುದನ್ನು ಈ ಮೊದಲೇ ಹೇಳಿಯಾಗಿದೆ. ಆಗ ಒಂದನೇ ಕಲ್ಪಕ್ಕೆ ಕಾಲಿರಿಸಿದವರಿಗಿಂತ ಎರಡನೇ ಕಲ್ಪಕ್ಕೆ, ಇದೇ ರೀತಿಯಾಗಿ ೨೦೦ ನೇ ಕಲ್ಪಕ್ಕೆ ಹೋದವರ ಜ್ಞಾನವು ಅಧಿಕಾಧಿಕವಾಗಿ ಇರುತ್ತದೆ. ಎಲ್ಲರಿಗಿಂತಲೂ ಬ್ರಹ್ಮನ ಜ್ಞಾನವು ಅತ್ಯಧಿಕವಾಗಿರುತ್ತದೆ. ಸದ್ಯಕ್ಕೆ ಬ್ರಹ್ಮ, ವಾಯುಗಳ ವೈವಿಧ್ಯತೆಯನ್ನು ಇಲ್ಲಿ ವಿವರಿಸಲಾಗಿದೆ. ( ಒಂದು ಬ್ರಹ್ಮಾಂಡದಲ್ಲಿ ಏಕಕಾಲದಲ್ಲಿ ೨೦೦ ಜನರಿರುವುದನ್ನು ಮರೆಯಬಾರದು. ಬ್ರಹ್ಮನು 'ಋಜುಗಣದರಸ'ನು)

ವಾಯುದೇವರು ೧೯೯ ಕಲ್ಪಸಾಧನ ಮಾಡಿರುವುದರಿಂದ ೨೦೦ ಕಲ್ಪ ಸಾಧನ ಮಾಡಿದ ಬ್ರಹ್ಮನಿಗಿಂತ ಸ್ವಲ್ಪಗುಣ ಕಡಿಮೆ ಇರುತ್ತದೆ. ಒಂದು ಕಲ್ಪಸಾದನ ಕಡಿಮೆ.

ಜ್ಞಾನಭಕ್ತ್ಯಾದ್ಯ ಖಿಲ ಗುಣ ಚತು । ರಾನನನೊಳಿಪ್ಪಂತೆ ಮುಖ್ಯ
ಪ್ರಾಣನಲಿ ಚಿಂತಿಪುದು। ಯತ್ಕಿಂಚಿತ್ಕೊರತೆಯಾಗಿ ॥
ನ್ಯೂನ ಋಜುಗಣ ಜೀವರಲಿ ಕ್ರಮೇಣ . . . ॥ ಕ.ಸ. ೩೭ ॥"

ಪರಮಾತ್ಮನು ತನ್ನಲ್ಲಿರುವ ಅಪಾರ ಗುಣಗಳಲ್ಲಿ ನಾನ್ನೂರು ಗುಣಗಳನ್ನು ಗಣನೆಗೆ ತಂದು ಶ್ರೀಲಕ್ಷ್ಮಿಯಲ್ಲಿ ೬೭-೨೫ನ್ನು ಇತ್ತು ತನ್ನಲ್ಲಿ ೧೩೨-೭೫ ನ್ನು ಉಳಿಸಿ ಕೊಂಡನು. ಅಲ್ಲಿಗೆ ೨೦೦ ಆಯಿತು. ಇನ್ನು ಉಳಿವ ೨೦೦ರಲ್ಲಿ ಬ್ರಹ್ಮನಿಗೆ ೫೨ ಗುಣಗಳನ್ನೂ, ವಾಯುದೇವನಿಗೆ ೪೮ ಗುಣಗಳನ್ನೂ ಇತ್ತು ಉಳಿದ ನೂರು ಗುಣಗಳನ್ನು ದೇವ ದಾನವರಿಗೆ ಹಂಚಿದನು. ವಿಭಜ್ಯಶ ತಥಾ ಭೂಯೋಷ್ಟಾ ಚತ್ವಾರಿಂಶದಂಶಕಾನ್ ॥

ಪ್ರಾಣೇಸ್ವಾತಂತ್ರ್ಯಮಾಧಾಯ । ದ್ವಿ ಪಂಚಾಸ್ತು ವೇಧಸಿ ॥ ವಿ.ಕ.ಹಸ್ಯ ೨೧-೩೩ ॥
"ಸತ್ಯಲೋಕಾಧಿಪನೊಳಗೆ ಐ। ವತ್ತೆರಡು ಪವಮಾನನೊಳುನಾ ।
ಲ್ವತ್ತು ಮೇಲೆಂಟಧಿಕ ಶಿವನೊಳಗಿಟ್ಟ ನಿಪ್ಪತ್ತು ॥ ದ.ಸ್ವಾ. ೨ ॥"

ಇದರಿಂದ ಬ್ರಹ್ಮನು ವಾಯುವಿಗಿಂತ ನಾಲ್ಕು ಗುಣ ಅಧಿಕ ಉಳ್ಳವನೆನಿಸಿದನು ಮತ್ತು ಸ್ವಾತಂತ್ರ್ಯ ವಿಭಾಗದಲ್ಲಿಯೂ ಸಹ ಪರಮಾತ್ಮನು ಪ್ರಾಣನಲ್ಲಿ "ಪಾದೂನ ಪಂಚೇ ಪ್ರಾಣೌ । ಸಪಾದಂ ಬ್ರಹ್ಮಣಿದದೌ" ಎಂದರೆ ಹತ್ತರಲ್ಲಿ ಪ್ರಾಣನಿಗೆ ೪.೭೫ ಸ್ವಾತಂತ್ರ್ಯವನ್ನೂ ಬ್ರಹ್ಮನಿಗೆ ೫.೨೫ ನ್ನೂ ಇತ್ತನು.

"ಅಗಣಿತ ಸ್ವಾತಂತಿಯವ ನಾ । ಲ್ಗಗೆ ವಿಭಾಗವ ಮಾಡಿ ಬಂದನು ತೆಗೆದು ದಶವಿಧಗೈಸಿ ಪಾದರೆ ಪಂಚ ಪ್ರಾಣನಲಿ ॥

**ಮೊಗಚತುಷ್ಟಯನೊಳು ಸಪಾದೈ । ದು ಗುಣವಿರಿಸಿದ ಮತ್ತೆ . . . . ॥ಸ್ವ..ಸ್ವಾಸಂ ೪॥"**

ಇಲ್ಲಿಯೂ ಪ್ರಾಣ – ಬ್ರಹ್ಮರಿಗೆ ೦.೫೦ ಸ್ವಾತಂತ್ರದ ವ್ಯತ್ಯಾಸವಾಯಿತು. ಪ್ರಾಣದೇವರು ೪೮ ಗುಣಗಳನ್ನೂ ಬ್ರಹಮನು ೫೨ ಗುಣಗಳನ್ನೂ ಉಪಾಸಿಸಿದರೆ ಪತಿಗಳಿಂದ ಅರ್ಧದಷ್ಟು ಭಾರತಿ – ವಾಣಿಯರು ಗುಣೋಪಾಸನೆಯನ್ನು ಮಾಡುತ್ತಾರೆ. ಅಂದರೆ ಭಾರತಿ ದೇವಿಯು ೨೪ ಗುಣಗಳನ್ನೂ, ಸರಸ್ವತಿ ದೇವಿಯು ೨೬ ಗುಣಗಳನ್ನೂ ಉಪಾಸಿಸುತ್ತಾರೆ.

**"ವಾಸುದೇವ ಸ್ವತಂತ್ರವ ಸರೋ । ಜಾಸನಾದ್ಯಮರಾಽಸುರರಿಗೀಯ ।**
**ಲೋಸುಗರ್ಧವತೆಗೆದದ ರೊಳರ್ಧವ ಚತುರ್ಭಾಗ ॥**
**ಗೈಸಿ ಬಂದನು ಶತ ವಿಧ ದ್ವಿಪಂ । ಚಾಶತಾಬ್ಜಜಗಷ್ಟಚತ್ವಾ ।**
**ರಿಂಶದನಿಲನಿಗಿತ್ತ ವಾಣೀ ಭಾರತೀಗರ್ಧ ॥ ಕ್ರೀ.ವಿ.ಸಂ. ೧೧ ॥"**

**"ಅತಿಶಯಳು ವಾಗ್ದೇವಿ ಶ್ರೀ ಭಾ। ರತಿಗೆ ಪದದ ಪ್ರಯುಕ್ತ ವಿಧಿಮಾ ।**
**ರುತರ ಪೋಲ್ ಚಿಂತಿಪುದು ಸದ್ಭಕ್ತಿಯಲಿ ಕೋವಿದರು ॥ ಗು.ತಾ ೬ ॥"**

ಬ್ರಹ್ಮ, ವಾಯುಗಳಲ್ಲಿ ಈ ಪರಿಯಾದ ವ್ಯತ್ಯಾಸಗಳಲ್ಲದೆ ಬ್ರಹ್ಮನು ಮುಕ್ತನಾದರೆ ವಾಯುವು ಬ್ರಹ್ಮಪದವಿಗೆ ಬರುತ್ತಾನೆ. ವಾಯುವು ಸ್ತ್ರೀಯರಲ್ಲಿ ಅವತರಿಸಿದರೆ ಬ್ರಹ್ಮನು ಶ್ರೀಹರಿಯನಾಭಿಕಮಲದಲ್ಲಿ ಜನಿಸುತ್ತಾನೆ. ಬ್ರಹ್ಮನಿಗೆ ಅವತಾರವಿಲ್ಲ. ಚತುರ್ಮುಖ, ಕಮಲಾಸನ ಇತ್ಯಾದಿ ಕಿಂಚಿತ್ ವ್ಯತ್ಯಾಸಗಳು ಇವೆ. ಇವು ಇರುವುದು ಪದದ ಪ್ರಯುಕ್ತವಾಗಿ ಮಾತ್ರ ಸಾಧ್ಯ ಕಾಲದಲ್ಲಿ.

## ಸೃಷ್ಟಿ ಪ್ರಳಯಗಳಲ್ಲಿ ವಾಯುದೇವರ ಪಾತ್ರ

ಒಂದು ಬ್ರಹ್ಮಾಂಡವು ಇರುವುದು ಒಂದು ಬ್ರಹ್ಮಕಲ್ಪ ಪರಿಯಂತವಾಗಿ ಮಾತ್ರ. ಈ ಬ್ರಹ್ಮಾಂಡದಲ್ಲಿ ಜೀವೋತ್ತಮನಾದ ಬ್ರಹ್ಮನಿಂದಾಂಭಿಸಿ ಜೀವಾಧಮನಾದ ಕಲಿ ಪರಿಯಂತವಾಗಿ ಎಲ್ಲಾ ಜೀವರಾಶಿಗಳು ಇರುತ್ತವೆ. ಈ ಬ್ರಹ್ಮಾಂಡವು ಸೃಷ್ಟಿಗೆ ಬರುವಾಗ ಅಸೃಜ್ಯಾವಸ್ಥೆಯಿಂದ ಸೃಷ್ಟಿಗೆ ಆಗ ತಾನೇ ಬಂದ ಒಂದನೇ ಕಲ್ಪದವರಿಂದ ಆರಂಭಿಸಿ ೨೦೦ ನೇ ಕಲ್ಪವನ್ನು ತಲುಪಿದ ಬ್ರಹ್ಮನವರೆಗಿನ ವಿವಿಧ ಕಲ್ಪಗಳ ಸಾಧನ ಉಳ್ಳ ಜೀವರಾಶಿಗಳು ಇಲ್ಲಿ ಇರುತ್ತವೆ.

ಈ ಬ್ರಹ್ಮಾಂಡವು ಇರುವುದು ಬ್ರಹ್ಮನ ೧೦೦ ವರ್ಷ (ಕಲ್ಪ) ಗಳವರೆಗೆ. ಈ ನೂರು ವರ್ಷಗಳಲ್ಲಿ ಎಪ್ಪತ್ತೈದು (ಪಾದ ನ್ಯೂನ ಶತಾಬ್ದ) ವರ್ಷಗಳಾಗುತ್ತಲೇ ಅಲ್ಲಿಂದ ಹನ್ನೆರಡುವರೆ ವರ್ಷಗಳು ವಿರಾಮ ಕಾಲವು. ಇದು ಕಳೆಯುತ್ತಲೇ ಪ್ರಳಯ ಕಾಲವು ಆರಂಭವಾಗಿ ಅದು ಹನ್ನೆರಡುವರೆ ವರ್ಷಗಳವರೆಗೆ ಸಾಗುತ್ತದೆ. ಹೀಗೆ ೭೫+೧೨.೫೦+೧೨.೫೦ ಅಲ್ಲಿಗೆ ೧೦೦ ವರ್ಷಗಳಾದ ಮೇಲೆ ಬ್ರಹ್ಮಾಂಡವು ಶಿಥಿಲವಾಗಿ ಬಿಡುತ್ತದೆ. ಆಗ ಪರಮಾತ್ಮನು ವಾಯುದೇವನನ್ನು ಹತ್ತಿರ ಕರೆದು ಈ ಬ್ರಹ್ಮಾಂಡದಲ್ಲಿ ಇದ್ದ ಮುಕ್ತಾ ಮುಕ್ತ ಜೀವರನ್ನು ವಿಭಾಗ ಮಾಡಿ ನಿಲ್ಲಿಸಲು ಆಜ್ಞಾಪಿಸುತ್ತಾನೆ. ಆಗ್ಗೆ ಬ್ರಹ್ಮನ ಸಾಧನವು ಮುಗಿದಿರುವುದರಿಂದ, ಆತನು ಮೋಕ್ಷಕ್ಕೆ ಹೋಗಲಿರುವುದರಿಂದ ಈ ಕಾರ್ಯವನ್ನು ಆತನಿಗೆ ವಹಿಸದೆ ಕಾರ್ಯಧ್ಯಕ್ಷನಾಗಿ ಇನ್ನೂ ಒಂದು ಕಲ್ಪ ಸಾಧನವು ವಾಯುದೇವನಿಗೆ ಉಳಿದಿರುವುದರಿಂದ ಶ್ರೀಹರಿಯು ಈ ವಾಯುವನ್ನೇ ಈ ಕಾರ್ಯಕ್ಕೆ ಆರಿಸಿಕೊಳ್ಳುತ್ತಾನೆ. ಬ್ರಹ್ಮದೇವರು ಮುಕ್ತನಾಗಲಿರುವುದರಿಂದಲೂ ಮತ್ತು ಕರ್ಮ ಶೇಷರಹಿತನಾಗಿರುವುದರಿಂದಲೂ ಜಾಗ್ರತನೂ, ಒಂದು ಕಲ್ಪ ಕರ್ಮಶೇಷಯುತನೂ ಆದ ವಾಯುದೇವರನ್ನು ಪರಮಾತ್ಮನು ನೇಮಿಸುತ್ತಾನೆ.

ವಾಯುದೇವನು ನಿಷ್ಕರ್ಮಿಗಳಾದ ಬ್ರಹ್ಮ, ಪುರಂಜನ, ಕಲಿ ಮತ್ತು ಈ ತ್ರಿವಿಧರ ಪರಿವಾರದವರನ್ನು ಒಟ್ಟುಗೂಡಿಸಿ ಒಂದು ಕಡೆ ಸಾಧನ ಶೇಷರಾಗಿ ಉಳಿದಿರುವ ಜೀವರನ್ನು ಮತ್ತೊಂದು ಕಡೆ ನಿಲ್ಲಿಸಿ ಶ್ರೀಹರಿಯ ಸಮ್ಮುಖದಲ್ಲಿ ಕೈಜೋಡಿಸಿಕೊಂಡು ನಿಂದು ಪ್ರಾರ್ಥನಾತತ್ಪರನಾಗುತ್ತಾನೆ. ಆಗ ಪರಮಾತ್ಮನು ಮುಕ್ತ ಜೀವರನ್ನು ನುಂಗಿ ತನ್ನ ಮೂರು ಗಂಟಲಗಳ ದ್ವಾರ ಅವರನ್ನು ಯೋಗ್ಯತಾನುಸಾರವಾಗಿ ಮುಕ್ತಿ, ಸಾಂತಾನಿಕ ಲೋಕ ಮತ್ತು ತಮಸ್ಸುಗಳಿಗೆ ದೂಡುತ್ತಾನೆ. ಎಲ್ಲಾ ಲೋಕಗಳೂ ಆತನ ಉದರದಲ್ಲೇ ಅಡಗಿವೆ. ಸಮುದ್ರವು ಜಲಚರಗಳಿಗೆ ಸುಖವಾಗಿ ಕಂಡರೆ ಭೂಚರಗಳಿಗೆ ಮೃತ್ಯುಪ್ರಾಯವಾಗಿರುತ್ತದೆ. ಈ ಜೀವನ್ಮರಣಗಳಿಗೆ ಆಯಾ ಜೀವರ ಸ್ವಭಾವವು ಕಾರಣವೇ ಹೊರತು ಸಮುದ್ರವಲ್ಲ. ಹಾಗೆಯೇ ಪರಮಾತ್ಮನ ಉದರವು ತ್ರಿವಿಧರಿಗೆ ಅವರವರ ಸ್ವಭಾವನುಸಾರವಾಗಿ ಸುಖ, ದುಃಖಗಳಾಗಿ ಕಾಣುತ್ತದೆ. ಇದಾದ ತರುವಾಯ ಪರಮಾತ್ಮನು ಈ ಬ್ರಹ್ಮಾಂಡದಲ್ಲಿ ಎಷ್ಟು ಜನರನ್ನು ನುಂಗಿದನೋ ಅಷ್ಟೇ ಸಂಖ್ಯಾಕ ಜೀವರನ್ನು ಅಸೃಜ್ಯಾವಸ್ಥೆಯಿಂದ ಸೆಳೆದು ತಂದು ಬ್ರಹ್ಮಾಂಡದಲ್ಲಿ ಮೊದಲನೇ ಸಂಖ್ಯೆಗೆ ತಂದು ನಿಬಿಡಗೊಳಿಸುತ್ತಾನೆ. ತರುವಾಯ ಈ ವಾಯುದೇವನನ್ನೂ ಒಳಗೊಂಡು ಎಲ್ಲರನ್ನೂ ನುಂಗಿ ತನ್ನ ನಾಭಿಕಮಲದ ಮುಖಾಂತರವಾಗಿ ಈ ವಾಯುವಿಗೆ ಜನ್ಮವನ್ನು ನೀಡಿ ಆತನನ್ನು ಬ್ರಹ್ಮನೆನಿಸುತ್ತಾನೆ. ಹೀಗೆ ಜನಿಸಿದ ಬ್ರಹ್ಮನು ಜಲಮಯವಾದ ಕತ್ತಲೆಯನ್ನು ಕಂಡು ಭಯದಿಂದ ರೋದಿಸುತ್ತಾನೆ. ಆಗ ಈ ಪರಬ್ರಹ್ಮನು ಈ ಚತುರ್ಮುಖನಿಗೆ "ತಪತಪ" ಎಂದು ಉಪದೇಶವನ್ನು ನೀಡಿ ಧೈರ್ಯಶಾಲಿಯನ್ನಾಗಿ ಮಾಡುತ್ತಾನೆ ಮತ್ತು ಬ್ರಹ್ಮನ ಪ್ರಾರ್ಥನೆಯಂತೆ ಕ್ಷರಜೀವರಾಶಿಗಳ ಸಾಧನಕ್ಕಾಗಿ ಹೊಸ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿ ಅಲ್ಲಿ ಬ್ರಹ್ಮನನ್ನು ಒಳಗೊಂಡು

ಸಕಲ ಜೀವರಾಶಿಗಳನ್ನು ಇರಿಸುತ್ತಾನೆ. ಯಥಾಪ್ರಕಾರವಾಗಿ ಈ ಬ್ರಹ್ಮಾಂಡವು ೧ ಕಲ್ಪದ (ಬ್ರಹ್ಮನ ೧೦೦ ವರ್ಷ) ವರೆಗೆ ಸಾಗಿದ್ದು ಪ್ರಳಯವನ್ನು ಹೊಂದುತ್ತದೆ. ಇದೇ ಪ್ರಕಾರವಾಗಿ ಸೃಷ್ಟಿ, ಸ್ಥಿತಿ, ಲಯಗಳು ಅನಾದ್ಯನಂತ ಕಾಲದಿಂದ ಕಾಲದವರೆಗೆ ಅವ್ಯಾಹತವಾಗಿ ಸಾಗಿದೆ, ಸಾಗುತ್ತಿದೆ, ಸಾಗುತ್ತವೆ.

**"ಅನಾದ್ಯನಂತ ಕಾಲೇಷು । ಪ್ರವಾಹೈಕ ಪ್ರಕಾರತಃ ।**
**ನಿಯಮೇನೈವ ಸಸೃಜೇ । ಭಗವಾನ್ಪುರುಷುತ್ತೋಮಃ ॥ ಈ.ವಾ.ಭಾಷ್ಯ ॥**

ಒಂದು ಕಲ್ಪಕ್ಕೆ ಒಂದು ಬ್ರಹ್ಮಾಂಡವು ಹೊಸದಾಗಿ ಸೃಷ್ಟಿಯಾಗುತ್ತದೆ. ಹಳೇ ಬ್ರಹ್ಮಾಂಡವು ಭಗ್ನ ಘಟವತ್ ಚೂರ್ಣೀಕೃತವಾಗಿ ವಿರಜಾ ನದಿ ತಟದಲ್ಲಿ ಹಳೇ ರಾಶಿಯನ್ನು ಸೇರುತ್ತದೆ. ಪರಮಾತ್ಮನು ಹೊಸ ಬ್ರಹ್ಮಾಂಡ ಸೃಷ್ಟಿಗಾಗಿ ಲಕ್ಷ್ಮೀದೇವಿಯಿಂದ ಅಭಿಮಾನ್ಯವಾದ ಜಡ ಪ್ರಕೃತಿ ಎನಿಸಿದ ಶುದ್ಧ ಸತ್ವಾತ್ಮಕವಾದ ಜಡ ಭಾಗವನ್ನು ಸೂಜಿ ಮೊನೆಗೆ ಹತ್ತುವಷ್ಟನ್ನು ಮಾತ್ರ ಸ್ವೀಕರಿಸಿ ಅದನ್ನು ಬ್ರಹ್ಮಾಂಡವನ್ನಾಗಿ ನಿರ್ಮಿಸುತ್ತಾನೆ. ಈ ಶುದ್ಧ ಸತ್ವಾತ್ಮಕವಾದ ಮೂಲ ಜಡ ಪ್ರಕೃತಿಯ ಪ್ರಮಾಣವು ಶ್ರೀಲಕ್ಷ್ಮಿಯಂತೆ ಅವ್ಯಕ್ತಮಯವಾದುದು. ಜೀವರಾಶಿಗಳಂತೆ ಅಗಣಿತವಾದುದು.

ಜೀವರುಗಳು ತಮ್ಮ ಯೋಗ್ಯತಾನುಸಾರವಾಗಿ ಅಸೃಜಾವಸ್ಥೆಯಿಂದ ಸೃಷ್ಟಿಗೆ ಬಂದಮೇಲೆ ತಮಗೆ ಎಷ್ಟು ಕಲ್ಪಗಳ ಸಾಧನವಿರುತ್ತದೋ ಅಷ್ಟು ಬ್ರಹ್ಮಾಂಡಗಳಲ್ಲಿ ಸಾಗಿ ಮುಕ್ತಿಯನ್ನು ಹೊಂದುತ್ತಾರೆ. ತೃಣ ಜೀವರು ಒಂದೇ ಕಲ್ಪದಲ್ಲಿ ಒಂದೇ ಬ್ರಹ್ಮಾಂಡದಲ್ಲಿ ಸಾಧನೆಯನ್ನು ಮಾಡಿಕೊಂಡು ಮುಕ್ತರಾಗುತ್ತಾರೆ. ಇಂದ್ರನಿಗೆ ೪೦ ಕಲ್ಪ, ೪೦ ಬ್ರಹ್ಮಾಂಡ, ರುದ್ರನಿಗೆ ೧೦೦ ಕಲ್ಪ – ೧೦೦ ಬ್ರಹ್ಮಾಂಡ, ಬ್ರಹ್ಮ ಪುರಂಜನ, ಕಲಿ ಇವರಿಗೆ ೨೦೦ ಕಲ್ಪ – ೨೦೦ ಬ್ರಹ್ಮಾಂಡಗಳಲ್ಲಿ ಬರುತ್ತಾರೆ. ಹೀಗೆ ಸಾಧನಗಳ ವಿವರ.

ಈ ವಿಷಯಗಳನ್ನು ವಿಷ್ಣು ರಹಸ್ಯದಲ್ಲಿ ವಿಸ್ತಾರವಾಗಿ ಕಾಣಬಹುದು ಜಡವಾದ ಬ್ರಹ್ಮಾಂಡವು ಒಂದೊಂದು ಬ್ರಹ್ಮಕಲ್ಪಕ್ಕೆ ಒಂದೊಂದರಂತೆಯೂ ಹೊಸ ಹೊಸದಾಗಿ ಸೃಷ್ಟಿಗೆ ಬಂದು ಹೋಗುತ್ತದೆ. ಈ ವಿಷಯದಲ್ಲಿ ಶ್ರೀವಿಷ್ಣು ರಹಸ್ಯದಲ್ಲಿ ಹೇಳಿರುವ ಪ್ರಮಾಣಗಳನ್ನು ನೋಡಬಹುದು.

**"ತಮವೋಂಚ ತತಃ ಪ್ರಾಣ । ಮಸ್ಮಿನ್ ಕಲ್ಪೇತ್ವಯಾ ಸಹ ॥**
**ಮೋಕ್ಷಾಣಾಂಶ್ಚ ತಾನ್ ಜೀವಾನ್ । ಪೃಥಕ್ ಕುರು ಮಹಾಮತೇ" ॥ಅ.೨-೪೪ ॥**
**"ಏವಂ ಮದಾಜ್ಞಿಯಾ ಪ್ರಾಣೋ । ಜೀವಾನ್ ಸವಾಂಶತಾ ದೃಶಾನ್ ॥**
**ಉದ್ಬೋಧಯಿತ್ವಾ ಪುರತಃ । ಸ್ಥಾಪಯಾಮಾಸ ಸರ್ವವಿತ್" ॥ ೪೫ ॥**

**"ಮಹತತ್ತ್ವೇನ ಕೃತವಾನ್ । ಪೂರ್ವಂ ಯಾಂ ಪುರುಷಾಕೃತಿಂ ॥**
**ತತ್ವೇನ ಭೂಮ ಸಾಭೂಯೋ । ಭಾವಿನಾಂ ಸ್ವಯಮೇವಹಿ ॥ ೫೩ ॥**

**"ತತ್ರಾದೌ ಯಚ್ಚುಕಾದಾಪ್ತಂ । ಶ್ರೋಯತಾಂ ಕಥಯಾಮಿತತ್ ॥**
**ಸೃಷ್ಟ್ಯಾದೌ ನಿರ್ಮಿತೋ ಬ್ರಹ್ಮಾ । ವಿಷ್ಣುನಾ ಪ್ರಭವಿಷ್ಣುನಾ " ॥ ೧ – ೧೫ ॥**

ಕ್ಷರ ಪುರುಷರಾದ ಬ್ರಹ್ಮ, ವಾಯು ತಥಾ ತೃಣಾಂತ ಜೀವರ ಗಣ ಭೇದವು ಹೀಗಿದೆ–

೧. ಬ್ರಹ್ಮ, ವಾಯು, ವಾಣಿ ಭಾರತಿಯರು ೩ ಮತ್ತು ೪ನೇ ಕಕ್ಷದವರು – ಸಾಂತರು, ಉತ್ತಮೋತ್ತಮ ಭಕ್ತಿ ಯೋಗಿಗಳು, ಅಚ್ಛಿನ್ನಭಕ್ತರು.

೨. ಗರುಡ ಶೇಷರಿಂದಾರಂಭಿಸಿ ಕಕ್ಷ ೫ ರಿಂದ – ಗಣಪತಿ ಕರ್ಮಜ ದೇವತೆಗಳು, ಗಂಗಾದಿ ೨೦ನೇ ಕಕ್ಷದವರೆಗೆ ವಿಜ್ಞಾನ ಯೋಗಿಗಳು ಛಿನ್ನ ಭಕ್ತರು, ಸಾಂತರು ಅಪ್ರ ತ್ರೀಕಾಲಾಂಬನರು.

೩. ಅಜಾನಜರಿಂದ (೨೧ ರಿಂದ ೨೯ ನೇ ಕಕ್ಷೆ)ದ ದೇವಗಂಧರ್ವರವರೆಗೆ ಸಾಂತರು, ಜ್ಞಾನಯೋಗಿಗಳು. ಛಿನ್ನ ಭಕ್ತರು ಅಪ್ರತೀಕಾಲಂಬನರು. ಜಿವಾಚ್ಛಾದಿಕ ಪರಮಾಚ್ಛಾವಿಕ ರಹಿತರು. ಜಾತಾಪರೋಕ್ಷಗಳು.

೪. ಮನುಷ್ಯಗಂಧರ್ವರಿಂದ ತೃಣಾಂತ ಜೀವರು (ಕಕ್ಷ ೩೦ ರಿಮದ ೩೨ ರವರೆಗೆ) ನಿರಂತರು, ಕರ್ಮಯೋಗಿಗಳು, ಛಿನ್ನಭಕ್ತರು ಪ್ರತೀಕಾಂಬನರು. ಅಚ್ಛಾದಿಕ ದ್ವಯಯುತರು, ಅರ್ಧಕಲ್ಪೋತ್ತರ ಅಪರೋಕ್ಷಿಗಳು.

॥ ಪದ ॥ ಲಕ್ಷಿ ಸದಲೆ ಸರ್ವ । ಭಕ್ಷಕನನು ಬಿಟ್ಟು ।
ಲಕ್ಷ್ಮೀ ಪತಿಯನು । ಅರ್ಚಿಸಲು ॥
ರಾಕ್ಷಸರೊಯ್ವರು । ಕೊಚ್ಚಿ ದ್ವಿಶೋಡಶ ।
ಲಕ್ಷಣ ಗಾತ್ರನು । ಪೇಕ್ಷಿ ಸಲ್ಲದು ಎಂದು ॥ ೪೮ ॥

**ಅರ್ಥ:** ಲಕ್ಷಿ ಸದಲೆ = ಗಣನೆಗೆ ತಾರದೆ, ಉಪೇಕ್ಷೆ ಮಾಡಿದರೆ, ಉದಾಸೀನ ಮಾಡಿದರೆ; ಸರ್ವ ಭಕ್ಷಕನನು ಬಿಟ್ಟು = ಸರ್ವಸಾರ ಭೋಕ್ತನಾದ ವಾಯುವನ್ನು ಸ್ಮರಣೆಗೆ ತಾರದೆ; ಲಕ್ಷ್ಮೀ ಪತಿಯನ್ನು = ಶ್ರೀ ಹರಿಯನ್ನು; ಅರ್ಚಿಸಲು = ಪೂಜೆ, ಧ್ಯಾನ, ಜಪ, ತಪಾದಿಗಳನ್ನು ಮಾಡಿದರೆ; ರಾಕ್ಷಸರೊಯ್ವರು ಕೊಚ್ಚಿ = ಮಾಡಿದ ಫಲಗಳನ್ನೆಲ್ಲ ಸ್ವಲ್ಪವನ್ನೂ ಬಿಡದಂತೆ ರಾಕ್ಷಸರು ಸತ್ಕರ್ಮ ಫಲಗಳನ್ನು ಅಪಹರಿಸಿ ಬಿಡುವರು; ಆದ್ದರಿಂದ; ದ್ವಿಷೋಡಶ = ಮೂವತ್ತೆರಡು; ಲಕ್ಷಣ ಗಾತ್ರನ = ಸುಲಕ್ಷಣ ದೇಹವನ್ನು ಹೊಂದಿದ ವಾಯುದೇವರ ಉಪೇಕ್ಷೆ ಸಲ್ಲದು = ಆತನನ್ನು ಮರೆಯಬಾರದು.

**ವಿಶೇಷಾರ್ಥ:** ಪರಶುಕ್ಲ ತ್ರಯರನ್ನು ಬಿಟ್ಟು ಉಳಿದ ದೇವಾನುದೇವತೆಗಳು ಮಾಡುವ ಕರ್ಮಗಳನ್ನು ದಾನವರು ಅಪಹರಿಸಿ ಬಿಡುತ್ತಾರೆ. ಅದಕ್ಕೆ ತಕ್ಕ ಉಪಾಯವು ಇರುವುದು ಒಂದೇ ಒಂದು. ಅದು ವಾಯು ಸ್ಮರಣೆ ಪೂರ್ವಕವಾಗಿ ಕರ್ಮಗಳನ್ನು ಮಾಡುತ್ತ ಆ ಕರ್ಮಗಳನ್ನು "ಭಾರತೀ ರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು" ಎಂದು ಹೇಳಿ ಹರಿಗೆ ಅರ್ಪಿಸಿ ಬಿಟ್ಟರೆ ಅಲ್ಲಿಗೆ ದಾನವರ ಉಪಟಳಕ್ಕೆ ಕಲ್ಲು ಬಿದ್ದಂತೆ. ಶ್ರೀಹರಿಗೆ ಅರ್ಪಿಸಿದ ತತ್ರಾಪಿ ವಾಯ್ವಾಂತರ್ಗತನೆನ್ನದೆ ಬರೀ ಕೃಷ್ಣಾರ್ಪಣವೆಂದರೂ ಆ ಕರ್ಮ ಫಲಗಳು ಅಸುರರ ಪಾಲಾಗುತ್ತದೆ. "ದಾನವರು ಸೆಳೆದೊಯ್ವರಲ್ಲದೆ । ಶ್ರೀನಿವಾಸನು ಸ್ವೀಕರಿಸ ಮ । ದ್ದಾನೆ ಪಕಪಿತ್ಥ ಫಲಭಕ್ಷಿಸಿದ ಓಲಹುದು ॥ ಹ.ಕ.ಸಾ॥"

ವಾಯುದೇವರಿಗೆ ದೈತ್ಯರಲ್ಲಿ ದ್ವೇಷ ಉಂಟು. ಪರಮಾತ್ಮನಿಗೆ ದ್ವೇಷಾಸೂಯಾದಿ ಗುಣಗಳಿಲ್ಲ. ದೈತ್ಯರಿಗೆ ಶ್ರೀಹರಿ ವಾಯುಗಳಲ್ಲಿ ದ್ವೇಷ ಉಂಟು. ಆದ್ದರಿಂದಲೇ ವಾಯುದೇವರು ಶ್ರೀಹರಿ ಪ್ರೀತ್ಯರ್ಥವಾಗಿ ದೈತ್ಯರನ್ನು ನಾಶಪಡಿಸುತ್ತಾನೆ. ಇಷ್ಟಾದರೂ ದೈತ್ಯರ ಮೇಲೆ ಅವರು ಒಲ್ಲದ ಪ್ರೀತಿಯನ್ನು ಪರಮಾತ್ಮನು ತೋರಿಸುತ್ತಾನೆ. ಹೇಗೆಂದರೆ ದೇವ, ದಾನವರಲ್ಲೂ ಅಂತರ್ಯಾಮಿಯಾಗಿರುವ ಶ್ರೀಹರಿಗೆ ನಾವು ವಾಯು ಸ್ಮರಣೆಯನ್ನು ಬಿಟ್ಟು ಅರ್ಪಿಸಿದ ಕರ್ಮಗಳು ದೈತ್ಯರಿಗೆ ಯಾಕೆ ಸಲ್ಲಬಾರದು? ನೀವೇನೂ ಅಸುರರಿಗೆ ಕೊಡಬೇಡವೆಂದು ಹೇಳಿಲ್ಲವಲ್ಲ? ಎಂದು ತತ್ಫಲಗಳಿಗೆ ಅಸುರರನ್ನು ಭಾಗಿಗಳನ್ನಾಗಿ ಮಾಡುತ್ತಾನೆ. "ನಾವು ವಾಯ್ವಂತರ್ಗತ" ನೆಂದು ಸ್ಮರಿಸಿ ಅರ್ಪಿಸಿದರೆ ನಮ್ಮ ಅಭಿಲಾಷೆಯಂತೆ ಅವನ್ನು ಸ್ವೀಕರಿಸುತ್ತಾನೆ. ಯಾಕೆಂದರೆ ನಮ್ಮ ಅಭಿಲಾಷೆಯು ನಿರ್ದಿಷ್ಟವಾಗಿ ವಾಯುಪರವಾಗಿರುತ್ತದೆ. ವಾಯುವಿನ ಹೆಸರಿನಿಂದಲೇ ದೈತ್ಯರು ನಾಶವಾಗುವುದರಿಂದ ನಮ್ಮ ಕರ್ಮಗಳು ಸುರಕ್ಷಿತ ಹಾಗೂ ಸ್ವರ್ಗ, ಮೋಕ್ಷಾದಿಗಳಿಗೆ ಕಾರಣವಾಗುತ್ತದೆ.

"ಮುಖ್ಯ ಪ್ರಾಣಗತಂ ವಿಷ್ಣುಂ । ಚಿಂತಯೇನ್ಮಸಾ ಬುಧಃ ।
ತಂ ವಿನಾ ಹರಿ ಧ್ಯಾನಂತು । ವೃಥಾ ಭವತಿ ॥"

ಶ್ರೀವಿಜಯದಾಸರು ಹೇಳುತ್ತಾರೆ.
"ಗುರುಮುನಿದರೆ ಕಾಯಲರಿಯ ಹರಿ ಎಂಬೋರು ।
ಹರಿ ಮುನಿದರೆ ಗುರು ಪರಿಹರಿಸುವನೆಂದು ।
ಚರಾಽಚರದಲಿ ಇದೆ ಸ್ಥಿರವಾಗಿ ಇರಲಿಕ್ಕೆ ।
ಹರಿಯೇ ನಿನ್ನ ನೆನಸಿ ವೃಕೋದರರನ ಸ್ಮರಿಸದವನು ।
ಹಿರಿಯನಾದರೆ ಏನು ಕಿರಿಯನಾದರೆ ಏನು ।
ಥರನಲ್ಲ ಮನ್ನಣೆಗೆ ಪರಕೆ ದೂರನು ಕಾಣೊ ।
ಸರಿವೆ ಅವನಲ್ಲಿ ಕುಳ್ಳಿರೆ ಮನವಾಗದು ।
ಕರುಣವಾರಿಧಿ ನಮ್ಮ ವಿಜಯ ವಿಠ್ಠಲರೇಯ ।
ಗುರುವೇಷವ ಮಾನನೆಂದು ಬರಿದೆ ಡಂಗುರವು ಸಾರುತಿದೆ ॥"

ಶ್ರೀಹರಿವಾಯುಗಳ ಅಂತರ್ಯಾಮಿತ್ವವನ್ನು ಬಿಟ್ಟು ಗಣಪತಿ, ಈಶ್ವರ, ಇಂದ್ರಾದಿ ಇತರ ದೇವತೆಗಳ, ಅಗ್ನಿ, ನವಗ್ರಹ ಪೂಜೆಗಳನ್ನು ಪೃಥಕ್, ಪೃಥಕ್ಕಾಗಿ ಮಾಡುವವನು ದೈತ್ಯನೇ ಸರಿ. ಅಂಥವರಿಗೆ ತಾಮಸ ಫಲಗಳಲ್ಲದೆ ಸಾತ್ವಿಕ ಫಲಗಳು ಸಿಕ್ಕುವುದಿಲ್ಲ.

"ವಿತತ ಮಹಿಮನ ಬಿಟ್ಟು ಸುರರಿಗೆ । ಪೃಥಕು ವಂದನೆ ಮಾಳ್ಪ ಮನುಜನು ।
ದಿತಿಜನೇ ಸರಿಹರಿಯುತಾ ಸಂಸ್ಥಿತ ನೆನಿಸನಲ್ಲಿ" ॥ ಹ.ಕ.ಸಾ. ॥"
ವಾಯೋರ್ವಿರುದ್ಧಂ ನಕರೋತಿದೇವಃ । ಸಮುದ್ವಿರುದ್ಧಂ ನಕರೋತಿ ನಿತ್ಯಂ ॥
ಹರೇರ್ವಿರುದ್ಧಂ ನಕರೋತಿ ವಾಯುಃ । ವಾಯೋರ್ವಿರುದ್ಧಂ ನಕರೋತಿ ವಿಷ್ಣುಃ ॥
ಗಾರುಡೇ ॥
"ಹನುಮನ ಮತವೇ ಹರಿಯಾ ಮತವು । ಹರಿಯ ಮತವೇ ಹನುಮನ ಮತವು ॥"

ವಾಯುದೇವರಿಗೆ ಸಂಕರ್ಷಣನೆಂದು ಹೆಸರು. ಸಕಲ ಜೀವರು ಮಾಡುವ ಕರ್ಮಗಳನ್ನು (ಅವರು ಅರ್ಪಿಸಲಿ – ಅಥವಾ ಬಿಡಲಿ) ಸೆಳೆದು ಅವನ್ನು ಶ್ರೀಹರಿಗೆ ಅರ್ಪಿಸುತ್ತಾನೆ.ಅರ್ಪಿಸಿದರೆ ಕರ್ಮಗಳನ್ನು ಸ್ವೀಕರಿಸಿ ಫಲಗಳನ್ನು ಕೊಡುತ್ತಾನೆ. ಅರ್ಪಿಸದಿದ್ದರೆ ಕರ್ಮಗಳನ್ನು ಸೆಳೆದು ಕೊಂಡು ಫಲಕಗಳನ್ನು ನೀಡುವುದಿಲ್ಲ. ದುಃಖ ಪ್ರಾಪ್ತಿಯಾಗುತ್ತದೆ.

"ತದ್ಧಾವತೋ ಅನ್ಯಾನತ್ಯೇತಿತಿಷ್ಠತ್ತ ಸ್ಮಿನ್ನಪೋ ಮಾತರಿಶ್ವಾ ದಧಾತಿ ॥
"ದ್ರವತೇತ್ಯೇತಿ ಸಂತಿಷ್ಠಸ್ತತಸ್ಮಾನ್ ಕರ್ಮಾಣ್ಯಧಾನ್ಮರುತ್ ॥
ಮಾರುತ್ಯೇವ ಯಥಾಶ್ವೇಷ್ಟಾಂ । ಸರ್ವತಾಂ ಹರಯೇರ್ಪಯೇತ್ ॥"

ವಾಯುದೇವರು ಸರ್ವ ಸಾರ ಭೋಕ್ತರು. ಜೀವರ ಯೋಗ್ಯತೆ, ಕರ್ಮಗಳನ್ನು ಅನುಸರಿಸಿ ಭೋಗಪ್ರದರು. ಅಯೋಗ್ಯರಿಗಾಗಿ ಆಯೋಗ್ಯರಸಗಳನ್ನು ಯೋಗ್ಯರಿಗಾಗಿ ಯೋಗ್ಯರಸಗಳನ್ನು ಸ್ವೀಕರಿಸಿ ಫಲಗಳನನು ಉಣಿಸುತ್ತಾನೆ.

**"ಸರ್ವಸಾರ ಭೋಕ್ತಾಯ । ಭೋಗ್ಯ ಭೋಕ್ತೃರೂಪಾಯ (ವಾ.ಗ)"**
**"ಸರ್ವ ತತ್ವಾಭಿಮಾನೀಚ । ಸರ್ವ ಪ್ರಾಣಿ ಗಣಾಧಿಪಃ ।**
**ಸರ್ವತಃ ವಿನಿವಿಷ್ಟನ್ । ಸರ್ವ ಭೋಕ್ತಾ ಚತುರ್ಮುಖಃ ॥**

ವಾಯುದೇವರು ಮೂವತ್ತೆರಡು ಲಕ್ಷಣಗಳುಳ್ಳವರು.

**"ಷಣವತ್ಯಂಗುಲೋಯಸ್ತು । ನ್ಯಗ್ರೋಧ ಪರಿಮಾಣತಃ ॥**
**ಸಪ್ತಪಾದ ಚತುರ್ಹಸ್ತ । ದ್ವಾತ್ರಿಂಶರ್ಲ್ಲಕ್ಷಣೈರ್ಯುತಃ ॥**

**ಇಂಥಾ ಮಹಾಮಹಿಮನನ್ನು ಸ್ಮರಿಸದೆ ಇರಲಾದೀತೇ?**

॥ ಪದ ॥ ಪ್ರಾಣೋಹ ಪಿತಾ । ಪ್ರಾಣೋ ಮಾತಾ ।
ಪ್ರಾಣೋ ಭ್ರಾತಾ । ಪ್ರಾಣೋ ಬ್ರಾಹ್ಮಣ ॥
ಪ್ರಾಣನು ರವಿಯೊಳು । ರಾಣಿಯು ಚಂದ್ರನೊಳು ।
ಠಾಣವ ಗೈದು । ಪ್ರಾಣಿಗಳುದಿಸಲು ॥ ೪೯ ॥

**ಅರ್ಥ**: ಪ್ರಾಣನೇ ತಂದೆ, ತಾಯಿ, ಸಹೋದರ, ಗುರು; ಪ್ರಾಣನು = ವಾಯು ದೇವರು; ರವಿಯೊಳು = ಸೂರ್ಯಾಂತರ್ಯಾಮಿಯಾಗಿ; ರಾಣಿಯು = ಭಾರತೀದೇವಿಯು; ಚಂದ್ರನೊಳು = ಚಂದ್ರಾಂತರ್ಯಾಮಿಯಾಗಿ; ಠಾಣವಗೈದು = ಅವರಲ್ಲಿ ನೆಲೆಸಿದ್ದು; ಪ್ರಾಣಿಗಳುದಿಸಲು = ಜೀವರಾಶಿಗಳು ಹುಟ್ಟುತ್ತವೆ.

**ವಿಶೇಷಾರ್ಥ**: ಸಕಲ ಪ್ರಾಣಿಗಳು ಪ್ರಾಣನಿಂದ ಹುಟ್ಟಿ ಆತನಿಂದಲೇ ಪೋಷಿಸಲ್ಪಡುತ್ತಿರುವುದರಿಂದ ಆತನೇ ತಂದೆ, ತಾಯಿ, ಸುಖವನ್ನು ನೀಡುವುದರಿಂದ ಸಹೋದರ ಜ್ಞಾನವನ್ನು ನೀಡುವುದರಿಂದ ಆಚಾರ್ಯ, ಗುರು ಮತ್ತು ಪೂಜ್ಯನೀಯನು ಕ್ಷಣಬಿಟ್ಟು ಅಗಲದಿರುವ ಸನ್ಮಿತ್ರನು.

"ಹನುಮ ನಮ್ಮ ತಾಯಿ, ತಂದೆ, ಭೀಮ ನಮ್ಮ ಬಂಧು ಬಳಗ ಆನಂದ ತೀರ್ಥರೆ ನಮಗೆ ಗತಿ ಗೋತ್ರೂ॥ ಶ್ರೀಪ್ರಸನ್ನ ವೆಂಕಟದಾಸರು)

ಹನುಮಂತನು ತಂದೆಯಾಗಬಹುದು. ಈ ಪುರುಷನು ತಾಯಿ ಹೇಗಾಗುತ್ತಾನೆ? ಎಂದರೆ ತಾಯಿಯಲ್ಲಿ ಅಂತರ್ಯಾಮಿಯಾಗಿದ್ದು ಬಾಹ್ಯಾಂತ ಗರ್ಭಸ್ಥನಾಗಿ ಜೀವರನ್ನು ಪ್ರೀತಿಯಿಂದ ಸಲಹುವವನು ಪ್ರಾಣದೇವನೇ. ತಾಯಿಯಲ್ಲಿ ಇದ್ದು ಪ್ರೀತಿಯನ್ನು ಹೊಮ್ಮಿಸುವವನೂ ಪ್ರಾಣನೆ. ಪ್ರಾಣನಿಲ್ಲವಾದರೆ ತಾಯಿಯೂ ಇಲ್ಲ ತಂದೆಯೂ ಇಲ್ಲ.

"ಅಗ್ನಿಮೂರ್ಧ್ನಾಚಕ್ಷುಷೀ । ಚಂದ್ರ ಸೂರ್ಯಾದಿಕಾಃ ॥
ಶ್ರೋತ್ರೇ ವಾಗ್ವಿವೃತಾಶ್ಚವೇದಾಃ ॥ ವಾಯುಃ ಪ್ರಾಣೋ ಹೃದಯಂ ವಿಶ್ವಸ್ಯ ಪದ್ಭ್ಯಾಂ ।
ಪೃಥವಿ ಹೇಷ ಸರ್ವಭೂತಾಂತರಾತ್ಮ ॥ ಅಥರ್ವಣ ॥"

ಎಲ್ಲರಲ್ಲಿಯೂ ವಾಯುವು ವ್ಯಾಪ್ತನು.

"ಇಂದ್ರಃಸ್ತ್ವ ಪ್ರಾಣತೇಜಸಾ । ರುದ್ರಃ ಅಸಿಪರಿ ರಕ್ಷಿತಾ ।
ತ್ವಂ ಅಂತರಿಕ್ಷೇ ಚರಸಿ । ಸೂರ್ಯಸ್ತ್ವಂ । ಜೋತಿಷಾಂ ಪ್ರತಿಃ ॥
ಯದಾತ್ವಂ ಅಭಿವರ್ಷಸಿ । ಅಥ ಇಮಾಃ ಪ್ರಾಣತೇ ಪ್ರಜಾಃ ॥

ಆನಂದ ರೂಪಾತಿಷ್ಠತಿ ॥ ಕಾಮಾಯ ಅನ್ನಃ । ಭವಿಷ್ಯತಿ । ಇವ್ರಾತ್ಯತ್ವಂ ಪ್ರಾಣಃ ॥ ಏಕರ್ಷಿಃ ಅತ್ತಾ ವಿಸತ್ಪತಿಃ । ವಯಃ ಅದ್ಯಸ್ಯ ದಾತಾರಃ ಪಿತಾತ್ವಂ ಮಾತರಿಶ್ವನಃ ॥ ಪ್ರಾಣಸ್ಯೈ ತದ್ವಶೇ ಸರ್ವಂ

**। ತ್ರಿದಿವೇಯ ತ್ವತಿಷ್ಠಿತಂ ॥ ಮಾತೇವ ಪುತ್ರಾನ್ ರಕ್ಷಸ್ವ । ಶ್ರೀಶ್ಚ ಪ್ರಜ್ಞಾಂಚ ವಿದೇಹಿನ – ಇತಿ ॥ಷಟ್ಪ್ರಶ್ನ॥"**

"ಸಮಿಥುನಂ (ಭಾರತಿ – ವಾಯುಗಳು) ಉತ್ಪಾದಯತೇ । ರಯೀಚ ಪ್ರಾಣಂಚ ಇತಿ ॥ ಏತೇಮೇ ಬಹುಧಾಃ ಪ್ರಜಾ ಕರಿಷ್ಯತಿ ॥ ಇತಿ ॥ ಆದಿತ್ಯೋವೈ ಪ್ರಾಣಃ । ರಯಿರೇವ ಚಂದ್ರಮಾಃ ॥ ಷಟ್ಪ್ರಶ್ನ ॥"

ಇಂದ್ರಾದಿ ಸಕಲ ದೇವತೆಗಳಲ್ಲಿ ಆಯಾ ನಾಮಗಳಿಂದ ವಾಯುವು ಅವರಲ್ಲಿ ಇದ್ದು ಅವರು ಮಾಡುವ ಕಾರ್ಯಗಳಿಗೆ ಶಕ್ತಿ ಪ್ರದನಾಗಿ ಅವರಿಂದ ಮಾಡಿಸುತ್ತಿರುವಾಗ ವಾಯುವಿಗೆ ಎಲ್ಲಾ ತತ್ವಾಧಿಪತಿಗಳಿಗೆ ಇರುವ ಹೆಸರು ವಾಯುವಿಗೆ ಇದೆ. ನಿಜವಾಗಿ ಹೇಳುವುದಾದರೆ ವಾಯುದೇವರಿಗೆ ಈ ಎಲ್ಲಾ ಹೆಸರುಗಳು ಇರುವುದು. ಈತನ ಅಂತರ್ಯಾಮಿತ್ವದಿಂದಲೇ ಈತನ ಹೆಸರುಗಳು ಬೇರೆ ದೇವತೆಗಳಿಗೆ ಪ್ರಾಪ್ತವಾಗಿರುತ್ತವೆ.

**ಅರ್ಥ:** ವಾಯುವೇ ಇಂದ್ರನು, ಕೋಣವಾಯು, ಸೂರ್ಯ, ಪರ್ಜನ್ಯ, ಅಗ್ನಿಯು ನೀನೆ, ಪ್ರಜಾ ಸೃಜಕನು ನೀನೇ. ಅನ್ನ ಪಾನಾದಿಗಳ ದಾತನು ನೀನೇ. ಜಗದೇಕ ಜ್ಞಾನಿ, ಪಿತ, ದಾತಾರನು, ಹೇ ಪ್ರಾಣನೇ ಸರ್ವವೂ ನಿನ್ನ ವಶದಲ್ಲಿದೆ. ತಾಯಿಯಂತೆ ರಕ್ಷಿಸುವಿ, ಜ್ಞಾನ ದಾತ.

"ಸಮಿಥುನಂ" ಇಬ್ಬರಾದ ಭಾರತಿ – ವಾಯುಗಳು ಜಗದುತ್ಪಾದಕರು. ಆದಿತ್ಯದಲ್ಲಿ ವಾಯುವು – ಚಂದ್ರನಲ್ಲಿ ರಯಿ (ಭಾರತಿ) ಇರುವುದರಿಂದ ಸಕಲ ಜೀವರಾಶಿಗಳು ಹುಟ್ಟುತ್ತವೆ. ರಯಿ ಎಂದರೆ ಭಾರತಿ. ಭಾ = ಪ್ರಕಾಶಮಾನನಾದ ಸೂರ್ಯ ಶಬ್ದವಾಚ್ಯನಾದ ವಾಯುವು. ಈತನಲ್ಲಿ ರತಿ = ಭಕ್ತಿ ಉಳ್ಳವರಾದುದರಿಂದ ರಯಿಗೆ ಭಾರತಿ ಎಂದು ಹೆಸರು ಬಂದಿತು. (ಷಟ್ಪ್ರಶ್ನ).

ತತ್ವಾಭಿಮಾನಿಗಳು ಸ್ತೋತ್ರ ಮಾಡಿದರು (ಛಾಂದ್ಯೋಗ್ಯದಲ್ಲಿ)

**"ಪ್ರಾಣೋವಾ ಆಶಯಾ ಭೂಯವ್ಯಥಾ । ಅರಾನಾಭೌ ಸಮರ್ಪಿತಾ**

**ಏವಮಸ್ಮಿನ್ ॥ ಪ್ರಾಣೇ ಸರ್ವ ಸಮರ್ಪಿತಂ । ಪ್ರಾಣಃ ಪ್ರಾಣೇ ನಯಾತಿ (ಮುಕ್ತಿ) । ಪ್ರಾಣಃ ಪ್ರಾಣಂ ದದಾತಿ ಪ್ರಾಣಾಯದದಾತಿ । ಪ್ರಾಣೋಹ ಪಿತಾ । ಪ್ರಾಣೋಮಾತಾ । ಪ್ರಾಣೋ ಭ್ರಾತಾ । ಪ್ರಾಣಃ ಸ್ವಸಃ ॥ ಪ್ರಾಣ ಆಚಾರ್ಯಃ ಪ್ರಾಣೋಬ್ರಾಹ್ಮಣಃ ॥"**

ಈ ಉಪನಿಷತ್ತನ್ನೇ ಈ ಪದ್ಯದಲ್ಲಿ ಇಟ್ಟಿರುವ ಕಾರಣವೇನೆಂದರೆ ಶ್ರೀವಾಯುದೇವನನ್ನು ವರ್ಣಿಸಲು ಸಾಧ್ಯವಾಗದೇ ವಾಗ್ಗದ್ಗದಿತನಾಗಿ ಆವೇ ವೇದ ವಾಣಿಗಳನ್ನೇ ಇಲ್ಲಿ ಇರಿಸಿರುತ್ತೇನೆ.

ವಾಯುದೇವರಿಗೆ ಅನಂತ ನಾಮಾವಳಿ (ಬಿರುದು)ಗಳಿವೆ. ಆ ಬಿರುದುಗಳಿಗೆ ತಕ್ಕಂತೆ ಆತನಲ್ಲಿ ಕರ್ಮಗಳಿವೆ. ಕರ್ಮಗಳಿಗೆ ತಕ್ಕಂತೆ ಬಿರುದುಗಳಿವೆ. ಯಾವ ವ್ಯರ್ಥನಾಮವೂ ಅವನಿಗೆ ಇಲ್ಲ. ಎಲ್ಲಾ ನಾಮಗಳೂ ಸಾರ್ಥಕವಾದುವುಗಳೇ.

"ಸವಾಯುಃ ಪ್ರಥಮಜ್ಞೇಯೋ । ಪ್ರಧಾನೇತಿ ಕೀರ್ತಿತಃ ॥
ಲೋಕ ಚೇಷ್ಟಾ ಪ್ರದಾತ್ವಾತ್ಸ । ಸೂತ್ರ ನಾಮೇತಿ ಕೀರ್ತಿತಃ ॥
ಬದರ್ಯಾಂ ಸ್ಥಿತಂ ವಿಷ್ಣುಂ । ಧೈರ್ಯೇಣ ಸ್ತೋತ್ತು ಮೇವನಃ ॥
ಧೃತಿರೂಪಂ ಯಯೌ ವಾಯು । ಸ್ತಸ್ಮಾತ್ ಧೃತಿರಿತಿ ಸ್ಮೃತಃ ॥
ಯೋಜ್ಞಾನಾಂ ಹರಿ ಭಕ್ತಾನಾಂ । ಧೃತಿರೂಪೇಣ ಸಂಸ್ಥಿತಃ ॥
ಅತೋ ಹೃದಿಸ್ಥಿತೋವಾಯು । ರತೊಸೌ ಧೃತಿ ಸಂಜ್ಞಿಕಃ ॥
ಸರ್ವೇಷಾಂ ಹೃದಿಸ್ಥಿತ್ವಾ । ಸ್ಮರ್ಯತೇ ಸರ್ವದಾ ಹರಿಂ ॥
ಅತೋ ವಾಯು ಸ್ಮೃತಿರ್ನಾಮ । ಆ ಪಾಪ ಪಕ್ಷಿಸತ್ತಮ ॥
ಅಥವಾ ವಾಯುರೇವೈಕೋ । ಶ್ವೇತ ದ್ವೀಪಗತಂ ಹರಿಂ ॥
ಸ್ಮರ್ಯತೇಚ ಸದಾ ವೀಂದ್ರ । ಅತೋ ಸೌಸ್ಮೃತಿ ಸಂಜ್ಞಕಃ ॥
ಸರ್ವೇಷಾಂಚ ಹೃದಿ ಸ್ಥಿತ್ವಾ । ಜ್ಞಾನಂ ವಿಷ್ಣೋರುದೀರಣಾತ್ ॥
ಅತೋ ಮೇಧೇತಿ ನಾಮಾಭೂ । ದ್ವಾಯುರೇವ ನಸಂಶಯಃ
ಜ್ಞಾನದ್ವಾರೇಣ ಭಕ್ತಾನಾಂ । ಮುಕ್ತಿದೋಹ ಯದಾಜ್ಞೆನೂ ॥
ಯತೋತೋ ವಾಯುರೇವೈಕೋ । ಮುಕ್ತಿ ನಾಮಾ ಬಭೂವಹ ॥
ವಿಷ್ಣೋರ್ಭಕ್ತಿಂ ವರ್ಧಯತಿ । ಭಕ್ತಾನಾಂ ಹೃದಿ ಸಂಸ್ಥಿತಂ ॥
ಅತೋಸೌ ವಿಷ್ಣುಭಕ್ತಿಶ್ಚ । ಕೀರ್ತ್ಯತೇ ನಾತ್ರ ಸಂಶಯಃ ॥
ಯತೋಸೌ ಸರ್ವ ದೇವಾನಾಂ । ಚಿತ್ತಸ್ಥಂ ಜ್ಞಾತ್ವಮೇವತು ॥
ಚಿತ್ತರೂಪಂ ಯಯೌ । ವಾಯುರಶ್ಚಿತ್ತಮಿತಿ ಸ್ಮೃತಂ ॥
ಪ್ರಭುಃ ಪ್ರಭೂಣಿಂ ಗರುಡ । ಸ್ವದಾರಾಣಾಂಚ ಸರ್ವಶಃ ॥
ಅತಸ್ತು ವಾಯುರೇವೈಕೋ । ಮಹಾ ಪ್ರಭುರಿತಿ ಸ್ಮೃತಃ ॥
ಸರ್ವೇಷಾಂಚ ಹೃದಿಸ್ಥಿತ್ವಾ । ದದಾತಿ ಬಲ ಮುತ್ತಮಂ ॥
ಅತೋ ಬಲ ಇತಿ ಹ್ಯಾಖ್ಯಾ । ಮವಪ ವಿನುತಾಸುತ ॥
ಸರ್ವೇಷಾಂಚ ಹೃದಿ ಸ್ಥಿತ್ವಾ । ಪುತ್ರ ಪೌತ್ರಕಾದಿಕಾನ್ ಜನಾನ್ ॥
ಪಾಲನಂ ಕುರುತೇ ನಿತ್ಯಂ । ಅತೋಸೌ ಸ್ಥಿತಿ ಸಂಜ್ಞಿಕಃ ॥
ಅನಂತ ಕಲ್ಪ ಮಾರಭ್ಯ । ವಾಯುಪರ್ಯಂತ ಮೇವಚ ॥
ವಕ್ರತ್ವಂ ನಾಸ್ತಿ ಯೋಗಸ್ಯ । ಋಜುಯೋಗರತಃ ಸ್ಮೃತಃ ॥
ಅನಾದ್ಯನಂತಕಾಲೇಪಿ । ಕಾಮ್ಯೇನ ಹರಿ ಪೂಜನಂ ॥

ಯತೋನಾಸ್ತಿಹ್ಯತೋ ವಾಯುಃ । ಋಜುಯೋಗ ಪ್ರಕೀರ್ತಿತಃ ॥
(ಕಾಮ್ಯ ಕರ್ಮವರ್ಜಿತಾಯನಮಃ ॥ ವಾ.ಗದ್ಯ ॥
ಅನ್ಯೇಷಾಂ ಸರ್ವದಾ ನಾಸ್ತಿ । ಅತೋನ ಋಜವಃ ಸ್ಮೃತಾ ॥
ಹರಿಂ ವಾಯುರ್ದರ್ಶಯತಿ । ಅಪರೋಕ್ಷೇಣಚಾಂಡಜ ॥
ಮೋಕ್ಷಾಧಿಕಾರಿಣಾಂ ಕಾರೇ । ಅತಃ ಪ್ರಾಜ್ಞೇತಿ ಸಸ್ಮೃತಃ ॥
ಪರೋಕ್ಷೇಣಾವಿ ಸರ್ವೇಷಾಂ । ಹರಿಂ ದರ್ಶಯತೇ ಸದಾ॥
ಅತೋ ವಾಯುಃ ಸದಾ ವೀಂದ್ರ । ಜ್ಞಾನಮಿತ್ಯೇವ ಕೀರ್ತಿತಃ ॥
ಹಿತಾಽಹಿತೋಪದೇಷ್ಟತ್ವಾ । ಧ್ಭಕ್ತಾನಾಂ ಹೃದಿ ಸಂಸ್ಥಿತಃ ॥
ಅತೋಗುರುತ್ವ ಸಂಜ್ಞಾಂ ವೈ । ಅವಾಪಚ ಸಮಾರುತಿಃ ॥
ಯೋಗಿನಾಂ ಹೃದಯೇ ಸ್ಥಿತ್ವಾ । ಸದಾ ಧ್ಯಾತಿ ಹರಿಂಪರಂ ॥
ಪಾರ್ಥಕ್ಯೇನಾಪಿತಂಧ್ಯಾತಿ । ಮಹಾ ಧ್ಯಾತೇತಿ ಸಂಸ್ಕೃತಃ ॥
ಯೋವಾಯೋಗ್ಯಾನುಸಾರೇಣ । ವಿಜಾನಾತಿ ಸ್ವಯಂ ಹರಿಂ ॥
ರುದ್ರಾದ್ಯವಿದ್ಯಮಾನಾಂಶ್ಚ । ಗುಣಾನ್ ಜಾನಾತಿ ಸರ್ವದಾ ॥
ಅತೋ ವಿಜ್ಞಾನ ನಾಮಾಸೌ । ಪ್ರಾಪ್ತವಾನ್ ವಾಯುಸತ್ತಮಃ ॥
ಕಾಮ್ಯಾನಾಂ ಕರ್ಮಣಾಂ ತ್ಯಾಗಾ । ದ್ವೈರಾಗ್ಯ ಇತಿಚ ಸ್ಮೃತಃ ॥
ಅಥವಾ ಯೋಗಿನಾಂ ನಿತ್ಯಂ । ಹೃದಿ ಸ್ಥಿತ್ವಾ ಚ ಮಾರುತಿ ॥
ವೈರಾಗ್ಯಂ ಸಜನಯತಿ । ವೈರಾಗ್ಯ ಇತಿ ಸ್ಮೃತಃ ॥
ದೇವಾನಾಂಚ ಋಷೀಣಾಂಚ । ಉತ್ತಮಾನಾಂ ನೃಣಾಂ ತಥಾ ॥
ಸುಂಶಂಭುಂಜತೇ ವಾಯು । ರತೋಸೌ ಸುಖ ಸಂಜ್ಞಿಕಃ ॥
(ಸುಖೀ) ಅತಃ ಕಲಿಃ ಸದಾ ದುಃಖೀ ಸುಚೀ । ವಾಯೋಸ್ತು ಸರ್ವದಾ ॥
ಮನುಷ್ಯಾಣಾಂ ಋಷೀಣಾಂಚ । ಸುಖಂ ದುಃಖಃ ಖಗೇಶ್ವರ ॥
ಭವಂತಿ ಪುಣ್ಯ ಪಾಪಾಭ್ಯಾಂ । ಪುಣ್ಯಭಾಗೀಚ ಮಾರುತಿಃ ॥
ಪಾಪ ಭಾಗೀಕಲಿರ್ಜ್ಞೇಯೋ । ನಾತ್ರಕಾರ್ಯಾ ವಿಚಾರಣಾ ॥ ಗಾರುಡ ಬ್ರಕಾಂಡ)"
ಅಧ್ಯಾಯ ೧೬॥

ವಾಯುದೇವರು ಪರಮಾತ್ಮನ ಪ್ರೀತ್ಯರ್ಥವಾಗಿ ಸಕಲ ಜೀವತತಿ ನಿಯಾಮಕನಾಗಿ ಜಗದ್ವ್ಯಾಪಾರವನ್ನು ಮಾಡುತ್ತ ಶ್ರೀಲಕ್ಷ್ಮೀನಾರಾಯಣರ ಪರಮ ಪ್ರೀತಿಗೆ ಪಾತ್ರನಾಗಿ ತನ್ನ ಈ ಮಾತಾ ಪಿತೃಗಳ ಪ್ರೇಮಪುತ್ರನಾಗಿ ಬಹು ಸಂತೋಷದಿಂದ ತನ್ನ ಈ ಪರಿಯಾದ ಬಾಲಲೀಲೆಗಳನ್ನು ಆತನಿಗೆ ಅರ್ಪಿಸಿ ಆತನೊಡನೆ ಸರಸವಾಡುತ್ತಿರುವನು.

ಆತನಂತೆ ತಾನೂ ವೇಷಧಾರಿಯಾಗಿ ಸಾದೃಶ್ಯ (ಪ್ರತಿಬಿಂಬ) ನೆನಿಸಿ ಧನ್ಯನೆನಿಸಿರುವನು. ಶ್ರೀಹರಿಯ ಸಮ್ಮುಖದಲ್ಲಿ ಶ್ರೀ ಹನುಮಂತನ ಈ ಜಗತ್ಸೃಷ್ಟಿ, ಸ್ಥಿತಿ, ಲಯ, ವ್ಯಾಪಾರಗಳು ಬಾಲಾಲೀಲೆಗಳು. ಅತನಿಗೆ ಹುಡುಗಾಟ ತ್ರಿವಿಧರಿಗೆ ಕಲ್ಪಸಾಧನ. ಪರಮಾತ್ಮನು ಲಕ್ಷ್ಮೀದೇವಿಯ ಗಲ್ಲವನ್ನು ಪಿಡಿದು ಮುಗುಳು ನಗೆ ಬೀರುತ್ತ "ಏ ಲಕ್ಷ್ಮೀ, ಸನ್ನ ಕಡೆ ಏನು ನೋಡುತ್ತೀ. ಅಲ್ಲಿ ನೋಡು ನಮ್ಮ (ಜಯಾ–ಸಂಕರ್ಷಣ) ಕಂದಡನು ಎಷ್ಟು ಚೆನ್ನಾಗಿ ಚಂಡಿನ (ಬ್ರಹ್ಮಾಂಡದ) ಆಟವನ್ನು ಆಡುತ್ತಿದ್ದಾನೆ. ಆತನನ್ನು ಬಿಟ್ಟು ನನ್ನ ದೃಷ್ಟಿಯು (ಬಿಟ್ಟವರ ಕಡೆಗೂ) ಅನ್ಯತ್ರ ಚಲಿಸದು. ಮಮಪ್ರಾಣಃ ಪ್ರಾಣಃ" ನನ್ನ ಕಣ್ಮಣಿ" ಎಂದನು.

॥ ಪದ ॥ ನಾರಿಗಿರೀಧಾರಿ । ಮೂರವತಾರೀ ।
ಕ್ರೂರ ಕುಠಾರೀ । ಗರಳಪಹಾರೀ ॥
ಪರ ಉಪಕಾರೀ । ಹರಿಯಂತೆ ತೋರೀ ।
ಚರಿಸಿದನೀಪರಿ । ಧೊರೆಕೃಪೆ ಕೋರೀ ॥೫೦॥

**ಅರ್ಥ:** ನಾರಿ=ಸ್ತ್ರೀರೂಪ, ಗಿರಿಧಾರಿ = ಪರ್ವತವನ್ನು ಧರಿಸಿದವನು; ಮೂರವತಾರಿ= ಮೂರು ರೂಪಗಳನ್ನು ತೋರಿದನು. ಕ್ರೂರ ಕುಠಾರಿ = ದುಷ್ಟರ ಪಾಲಿಗೆ ಕೊಡಲಿಯಂತಿರುವನು; ಪರ ಉಪಕಾರಿ = ಸುಜೀವಿಗಳಿಗೆ ಹಿತವನ್ನುಂಟು ಮಾಡುವವನು; ಹರಿಯಂತೆ = ಪರಮಾತ್ಮನಿಗೆ ಪ್ರತಿಬಿಂಬನಾಗಿ; ಚರಿಸಿದ ನೀಪರಿ = ಹೀಗೆ ತನ್ನ ವ್ಯಾಪಾರವನ್ನು ನಡೆಸಿದವನು; ಧೊರೆ ಕೃಪೆ ಕೋರಿ = ಸರ್ವೋತ್ತಮನಾದ ಶ್ರೀಹರಿಯ ಪ್ರೀತ್ಯರ್ಥವಾಗಿ ಮಾತ್ರ ಈತನ ವ್ಯಾಪಾರಗಳು. ಫಲಾಪೇಕ್ಷೆ ರಹಿತವಾದುವುಗಳು.

**ವಿಶೇಷಾರ್ಥ:** ಜಗತ್ತಿನಲ್ಲಿ ಶ್ರೀಹರಿಯು ದುಷ್ಟಶಿಕ್ಷಣ, ಶಿಷ್ಟಪರಿಪಾಲನಾರ್ಥವಾಗಿ ನಾನಾವತಾರಗಳನ್ನು ಮಾಡುವನು. ಅದೇ ರೀತಿಯಾಗಿ ಆತನ ಸೇವಾರ್ಥವಾಗಿ ವಾಯುದೇವರೂ ಸಹ ಅವತಾರಗಳನ್ನು ಮಾಡಿರುತ್ತಾನೆ. ಕೆಲವು ಹೀಗಿವೆ.

| | ಶ್ರೀಹರಿ | ವಾಯುದೇವರು |
|---|---|---|
| ೧ | ನಾರಿ – ಮೋಹಿನೀ ರೂಪ (ಅಮೃತವನ್ನು ಹಂಚುವಾಗ – ಭಸ್ಮಾಸುರನನ್ನು ಧ್ವಂಸ ಮಾಡುವಾಗ | ಕೀಚಕನನ್ನು ಸಂಹರಿಸುವಾಗ |
| ೨ | ಗಿರೀಧಾರಿ – ಗೋವರ್ಧನಗಿರಿ | ಸಂಜೀವನ ಗಿರಿ |
| ೩ | ಮೂರವತಾರಿ – ವ್ಯಾಸ, ಪರಶುರಾಮ, ಕೃಷ್ಣ (ರಾಮ–ಪರಶುರಾಮನಾಗಿ, ದೈತ್ಯರಿಗೆ ಭೇದ ಕಲ್ಪಿಸಿದ) | ಹನುಮ, ಭೀಮ, ಮಧ್ವ (ಹನುಮ, ಭೀಮನಾಗಿ ದ್ವಾಪರದಲ್ಲಿ ಭೇದ ಕಲ್ಪಿಸಿದ) |
| ೪ | ಕ್ರೂರ ಕುಠಾರಿ – ಕಂಸ, ಶಿಶುಪಾಲ ದಂತವಕ್ರ ಇತ್ಯಾದಿಗಳ ಸಂಹಾರ | ದುರ್ಯೋಧನ, ದುಶ್ಯಾಸನ ಕೀಚಕ ಇತ್ಯಾದಿಗಳ ಸಂಹಾರ |
| ೫ | ಗರಳಪಹಾರಿ – ಪೂತನಿಯ ವಿಷ ಮೊಲೆಯನುಂಡನು | ಹಾಲಾಹಲ ಮತ್ತು ವಿಷದ ಲಡ್ಡುಗೆಗಳನ್ನು ನುಂಗಿದನು |

| | | |
|---|---|---|
| ೬ | ಪರಉಪಕಾರಿ – ಪ್ರಹ್ಲಾದ, ಧೃವ, | ಲಕ್ಷ್ಮಣ, ರಾಜಕುಮಾರರು, |
| | ಪಾಂಡವರಾದಿಯಾಗಿ ಸಕಲ ದೇವ | ಮುಕ್ತಿ ಯೋಗ್ಯರಿಗೆ |
| | ಋಷಿ, ಸಾಧು ಕುಲ ಸಂರಕ್ಷಕನು | ಜ್ಞಾನಾದಿಗಳನ್ನಿತ್ತು ರಕ್ಷಿಸಿದನು. |
| | ಸಕಲ ಜೀವರಕ್ಷಕ | ತಥಾ–ತದಧೀನ ತ್ವೇನ |

ಹೀಗೆ ಅನೇಕ ದೃಷ್ಟಾಂತಗಳು ಶಾಸ್ತ್ರ ಭಂಡಾರದಲ್ಲಿ ತುಂಬಿ ತುಳುಕುತ್ತಿವೆ. ನಮ್ಮ ಯೋಗ್ಯತಾನುಸಾರವಾಗಿ ನಮ್ಮ ಧ್ಯಾನಕ್ಕೆ ಇವು ಲಭಿಸುತ್ತವೆ.

**॥ ಪದ ॥ ಕರಿವರದನ ಭಕ್ತ । ಶಿರೋಮಣಿ ಚರಿತೆಯು ।**
**ಸುರರಿಗೆ ಸರಿ ಚಿಪ್ಪ । ಶಿರಿಯಪ್ಪಂದಯದಿ ॥**
**ಬರೆದಿಟ್ಟುಕೊಂಡೆನಷ್ಟೆ । ದುರಿತೋಪಶಮನಕೆ ।**
**ಅರಣ್ಯಕಷ್ಟಾದಶ । ವರಗ್ರಂಥಗಳಲಿ ॥ ೫೧ ॥ ಶ್ರೀಃ ॥**

**ಅರ್ಥ:** ಕರಿವರದ = ಗಜರಾಜನ ಸಂರಕ್ಷಕ, ವಿಷ್ಣು; ಭಕ್ತಶಿರೋಮಣಿ = ವಾಯುದೇವರು (ಪ್ರಸಿದ್ಧನಾಮ ಹನುಮಂತ ಭೀಮ, ಶ್ರೀಮಧ್ವರಾಯರು); ಚರಿತೆಯು = ವರ್ಣನೆ; ಸುರರಿಗೆ ಸರಿ = ದೇವತೆಗಳಿಗೆ ಸಾಧ್ಯ; ಚಿಪ್ಪಗಿರಿಯಪ್ಪ = ಶ್ರೀವಿಜಯದಾಸರು; ದಯದಿ = ಆತನ ಅನುಗ್ರಹದಿಂದ; ಬರೆದಿಟ್ಟು ಕೊಂಡೆ = ಕವಿತೆಯಲ್ಲಿ ಬಣ್ಣಿಸಿದೆ; ದುರಿತೋಪಶಮನಕೆ = ಬರಬಹುದಾದ ಕಷ್ಟ ನಿಷ್ಠೂರಗಳ ಪರಿಹಾರಕ್ಕಾಗಿ; ಅರಣ್ಯಕ = ಉಪನಿಷತ್ತುಗಳು; ಅಷ್ಟಾದಶ = ಹದಿನೆಂಟು ಪುರಾಣಗಳಲ್ಲಿ; ವರಗ್ರಂಥಗಳಲಿ = ಶ್ರೀಮಧ್ವವಿಜಯ, ಶ್ರೀಹರಿಕಥಾಮೃತಸಾರ, ಶ್ರೀವಿಜಯದಾಸರೇ ಮೊದಲಾದವರ ಪದ, ಪದ್ಯ, ಸುಳಾದಿಗಳಲ್ಲಿ ತೋರಿದ ಲೀಲಾ = ವಾಯುದೇವರು ತೋರಿದ ಲೀಲೆಗಳನ್ನು ವರ್ಣಿಸಿರುವುದನ್ನು ಸಂಗ್ರಹಿಸಿ ಆತ್ಮ ತೃಪ್ತಿಗಾಗಿ ಬರೆದಿರುವೆನು.

**ವಿಶೇಷಾರ್ಥ:** ಈ "ಭಾರತೀಶ ವಿಲಾಸ"ವೆಂಬ ಗ್ರಂಥವನ್ನು ಗುರುದತ್ತವಾದ (ಶ್ರೀಸೋಸಲೆವ್ಯಾಸರಾಜ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರಿಂದ ದತ್ತವಾದ) 'ಕರಿವರದ' ಎಂಬ ಅಂಕಿತದಿಂದ ಐವತ್ತೊಂದು ನುಡಿಗಳಿಂದ ಯುಕ್ತವಾಗಿ ಅಕ್ಷರ ಮಾಲಿಕಾಸ್ತೋತ್ರ ರೂಪವಾಗಿ ಶ್ರೀಹರಿ, ವಾಯು, ಗುರುಗಳು ಪ್ರೇರಿಸಿದ ರೀತಿಯಲ್ಲಿ ಬರೆದು ಅವರ ಅಡಿದಾವರಗಳಿಗೆ ಅರ್ಪಿಸಿರುತ್ತೇನೆ.

ಅನೇಕ ವಿದ್ವತ್ಸಭೆಗಳಲ್ಲಿ, ಲೇಖನಗಳಲ್ಲಿ ಶ್ರೀವಾಯುದೇವರ ಮಹಿಮೆಗಳನ್ನು ಚರ್ಚಿಸಲಾಗಿದೆ. ಇವು ನನ್ನ ಗಮನವನ್ನು ವಿಶೇಷವಾಗಿ ಸೆಳೆದು ಈ ಕೃತಿಯನ್ನು ರಚಿಸಲು ಪ್ರೇರಣೆಯಾಯಿತು. ಅದರಲ್ಲೂ ಶ್ರೀವಿಜಯದಾಸರಾಯರ ಸುಳಾದಿಗಳ ಮುಖಾಂತರವಾಗಿ ಲಭಿಸಿದ ಜ್ಞಾನವೆಂದರೆ ಶ್ರೀವಾಯುದೇವರು ಅವತಾರತ್ರಯಗಳಲ್ಲಿ ತೋರಿಸಿರುವ ಲೀಲೆಗಳು 'ಅಬ್ಬಬ್ಬಾ' ಎನಿಸಿದ್ದರೂ ಅವು ಶ್ರೀವಾಯುದೇವರ ಸ್ವರೂಪ ಶಕ್ತಿಯ ಲೇಶಾಂಶವು ಮಾತ್ರವೇ ಹೊರತಾಗಿ ಶಕ್ತಿತಃವಾದುದಲ್ಲ ಎಂಬುದು ಪರಮ ಮುಖ್ಯ ಇಲ್ಲವಾದರೆ ಶ್ರೀವಾಯುವಿನ ಶಕ್ತಿಯು, ಭಕ್ತಿಯು, ಜ್ಞಾನದ ಸೀಮೆಯು ಇಷ್ಟೇ ಎಂದು ತಿಳಿದುಬಿಟ್ಟರೆ ತಪ್ಪಾಗುತ್ತದೆ. ಅದು ಅಸುರರಿಗೆ ಇತರರಂತೆ ವಾಯುವು "ಯತ್ನ ಶೀಲ' ನೆಂಬ ಜ್ಞಾನಕ್ಕೆ ಸೀಮಿತ. ಆದರೆ ಶ್ರೀವಿಜಯದಾಸರು ಬಿಡಿಸಿದ ಒಗಟು ಶ್ರೀವಾಯುವಿಗೆ ಈ ಲೀಲೆಗಳು ನಿರಾಯಾಸವಾದುವುಗಳು. ಅಸುರ ಮೋಹನಾರ್ಥವಾಗಿ ಮಹಾಶ್ರಮಪಟ್ಟವನಂತೆ ವರ್ತಿಸಿದನೇ ಹೊರತಾಗಿ ಬೇರೆಯಲ್ಲ. ಮತ್ತು ದೇವತೆಗಳಿಗೆ ತನ್ನ ದೃಷ್ಟಿಯಲ್ಲಿ ತನ್ನ ಈ ಕಾರ್ಯಗಳು ಶ್ವಾಸೋಚ್ಛ್ವಾಸಕ್ಕಿಂತಲೂ ಕಡಿಮೆಯಾದ ಪ್ರಯತ್ನಗಳು ಅಸುರ ಕುಲವನ್ನೇ ಧ್ವಂಸ ಮಾಡಬಲ್ಲವೆಂಬುದನ್ನು ತೋರಿಸಲು ಉದ್ಧರಿಸಿದನು ಎಂಬುದು.

**"ಜಲಜಸಂಭವನ ಪಟ್ಟಕ್ಕೇರುವ ಗುರುವೆ । ಇಳೆಯೊಳು ಕೋತಿ । ರೂಪಾದದ್ದೇನೋ**
**"ಸರಸಿಜಜಾಂಡವ ಕರದಲ್ಲಿ ಕಾಂಬುವ । ಇರುಳೊಳು ಸೀತೆಯ ಪುಡಿಕಿದ್ದೇನೋ ॥**
ಶ್ರೀ ವಿ. ದಾಸರು)

ಮೂವತ್ತೆರಡು ಲಕ್ಷಣಗಳಿಂದ ಯುಕ್ತನಾದ ಶ್ರೀವಾಯುದೇವರಿಗೆ ಕುರೂಪಿಯಾದ ಕೋತಿ ರೂಪವೇ? ಅಂಗೈಯಲ್ಲಿ ಬ್ರಹ್ಮಾಂಡವನ್ನು ಅವಲೋಕಿಸುವ ಹನುಮಂತನು ಭಯಗ್ರಸ್ಥನಾಗಿ ರಾತ್ರಿ ಎಲ್ಲಾ ಆ ತಾಯಿ ಸೀತಾ (ಕೃತಿ) ದೇವಿಯು ಎಲ್ಲಿರುವಳೋ ಏನೋ ಎಂದು ಮಿಡುಕಿ ಮಿಡುಕಿ ಆಯಾಸಗೊಂಡನಂತೆ!

ವಾಯುದೇವರು ಭಕ್ತಶಿರೋಮಣಿ ಎಂದು ಹೇಳಿರುವಲ್ಲಿ ಈತನು ಭಕ್ತಿಯೋಗಿಗಳಲ್ಲಿ ಮಾನಿತನು. ಅಚ್ಛಿನ್ನ ಭಕ್ತನು. ಸಾಂಶನು. ಅಪ್ರತೀಕಾಲಂಬನನು. ವ್ಯಾಪ್ತ್ಯೋಪಾಸಕನು. ಆಖಣಾಶ್ಮಸಮನು. ಈ ಪರಿಯಾದ ವಾಯುಲೀಲಾಽಮೃತಧಾರೆಯು ಹರಿಯುತ್ತಿರುವಾಗ ಅದರಲ್ಲಿ ಒಂದು ಬೊಗಸೆಯನ್ನು ಸವಿದು ಮಿತ್ರ ಪರಿವಾರಕ್ಕೂ ನೀಡಬೇಕೆಂಬ ಹೆಬ್ಬಯಕೆಯ ಪ್ರೇರಣೆ ಆಯಿತು. "ಯಂತ್ರಾರೂಢಾನಿಮಾಯೆಯಾ" ಎಂಬಂತೆ ಈ ಕೆಲಸಕ್ಕೆ ಕೈ ಹಾಕಿದೆ. ಜ್ಞಾನ, ಶಕ್ತಿ, ವ್ಯವಧಾನ, ಸಮಾಧಾನಗಳನ್ನು ಇತ್ತು ಕೆಲಸ ಮಾಡಿ ಮಾಡಿಸಿದವರು ಶ್ರೀಹರಿ, ವಾಯು ತತ್ತ್ವಾಭಿಮಾನಿಗಳು ಹಾಗೂ ಗುರುಗಳು ಮತ್ತು ಸಾತ್ವಿಕವಿಪಶ್ಚಿತರು.

ದೇವಾಂಶ ಸಂಭೂತರಾದ ಮಹಾಮಹಿಮರು ಅವತಾರಗಳಿಂದಲೂ, ತಮ್ಮ ಮೂಲ ರೂಪಗಳಿಂದಲೂ ವೇದ ಪ್ರತಿಪಾದ್ಯನಾದ ಶ್ರೀವಾಯುದೇವರನ್ನು ಸಾಕಲ್ಯೇನ ವರ್ಣಿಸಲಾರರೆಂದ ಮೇಲೆ ಇನ್ನು ಈ ಇರುವೆಯು ಯಾವ ಲೆಕ್ಕ? ಆದರೆ ದೇವರು ಇರುವೆಗೂ ಹೊಟ್ಟೆಯನ್ನು ಕೊಟ್ಟಿದ್ದಾನಲ್ಲವೆ? ಯಾಕೆ? ತಿನ್ನಲಿಕ್ಕೇನೆ. ಹೀಗಿರುವಾಗ ತಿನ್ನದೇ ಉಪವಾಸವಿರಲಂತೂ ಸಾಧ್ಯವಿಲ್ಲ ತಾನೆ? ಆನೆಯು ಐದು ಮಣ ಕಬ್ಬನ್ನು ಅಗಿದು ನುಂಗಿದರೆ ಇರುವೆಯು ಒಂದು ಕಣ ಸಕ್ಕರೆಯನ್ನಾದರೂ ತಿಂದು ಬದುಕುತ್ತದಲ್ಲವೇ?

೧. ಹಾಗೆಯೇ ವೇದ, ಉಪನಿಷತ್ತು, ಪುರಾಣಗಳಲ್ಲದೆ ಪಂಡಿತಾಚಾರ್ಯದ್ವಯರು, ಶ್ರೀವಾದಿರಾಜರು, ಶ್ರೀ ಶ್ರೀಪಾದರಾಯರು, ಶ್ರೀವ್ಯಾಸರಾಯರು, ಶ್ರೀರಾಘವೇಂದ್ರ ಸ್ವಾಮಿಗಳು, ಬಿದರಹಳ್ಳಿ ಶ್ರೀನಿವಾಸ ತೀರ್ಥರು, ಶ್ರೀಪುರಂದರದಾಸರು, ವಿಜಯದಾಸರು, ಶ್ರೀಗೋಪಾಲ ದಾಸರು, ಶ್ರೀಜಗನ್ನಾಥದಾಸರು, ಶ್ರೀಶೇಷದಾಸರೇ ಮೊದಲಾದ ಐರಾವತಗಳು ಶಾಸ್ತ್ರೇಕ್ಷು ದಂಡಕ್ಷೇತ್ರಗಳನ್ನೆ ಕಬಳಿಸಿರುವಾಗ ಈ ಇರುವೆಯ ಈ ಸಾಹಸವು ಅವರ ಒಂದು ಉಚ್ಛಿಷ್ಟಬಿಂದು ಮಾತ್ರವೆಂದು ತಿಳಿಯಬೇಕು. ಬ್ರಹ್ಮನ ಉಸಿರಾಟವೆನಿಸಿದ ವಾಯುದೇವರು ಇರುವೆಯ ಉಸಿರಾಟದಲ್ಲಿ ಇಲ್ಲವೆ? ಬದುಕಲು ಇರುವೆಯೂ ಉಸಿರಾಡಲೇಬೇಕು. ಹಾಗೆ ಮುಮುಕ್ಷುವಾದವನು ಎಷ್ಟೇ ಚಿಕ್ಕವನಾಗಿದ್ದರೂ ಶ್ರೀವಾಯುದೇವರ ಲೀಲಾ ವಿಶೇಷಗಳನ್ನು ತಿಳಿದು ಕೊಂಡಾಡಲೇ ಬೇಕು.

೨. ಈ ಗ್ರಂಥದಲ್ಲಿ ವರ್ಣಿಸಲಾದ ವಿಷಯಗಳು ಸುಪ್ರಮಾಣಬದ್ಧವಾಗಿಯೇ ಸಾಕಷ್ಟು ಎಚ್ಚರಿಕೆಯಿಂದ ಭಯಗ್ರನಾಗಿಯೇ ಬರೆದಿರುವೆನು. ತತ್ತ್ವಾಭಿಮಾನಿಗಳು ದಾರಿ ತಪ್ಪಿಸಿಲ್ಲವೆಂಬ ಭರವಸೆ ನನಗೆ ಇದೆ. ಯಾಕೆಂದರೆ ಅವರೆಲ್ಲಾ ಶ್ರೀವಾಯುದೇವರ ಪ್ರೀತ್ಯಾಸ್ಪದರೇ, ವಿಶೇಷವಾಗಿ ನನ್ನ ಆತ್ಮತೃಪ್ತಿಗಾಗಿ ಈ ಕಾರ್ಯವನ್ನು ಮಾಡಿರುತ್ತೇನೆ. ಪಾಂಡಿತ್ಯ ಪ್ರದರ್ಶನ, ಗರ್ವಕ್ಕೆ ಅವಕಾಶವಿಲ್ಲ. ಬಹುರತ್ನಾವಸುಂಧರ. ಇಷ್ಟೇ. ಗ್ರಂಥವನ್ನು ದೇವರು ಬರೆಸಿದನಲ್ಲಾ ಎಂಬ ಸಂತೋಷವನ್ನು ತುಂಬಿಕೊಂಡಿದ್ದೇನೆ. ಇದರಿಂದ ಪಾಪಸಂಕ್ಷಯದ ನಂಬಿಕೆ ನನಗಿದೆ

೩. ಇನ್ನು ಈ ಕೃತಿಂಯ ಬಗ್ಗೆ ಹೇಳುವುದಾದರೆ ಕಥಿತೆಂಯ ಮೂಲಕವಾಗಿ ರಚಿತವಾದ ಗ್ರಂಥಗಳು ಮನನವಾಗುವುದು ಸುಲಭ ಮತ್ತು ಆಕರ್ಷಣೀಯ. ಮನರಂಜನೆಯ ಮೂಲಕವಾಗಿ ಮಾನಸಿಕ ಶ್ರಮವು ಶಮನವಾಗುತ್ತದೆ. ಚೌಪದಿಯಾದ ಈ ಕೃತಿ ರಚನೆಯಲ್ಲಿ ಅಷ್ಟಭುಜಯುಕ್ತವಾಗಿ ಅಂದರೆ 'ಪಾದ-ಪಾದಾರ್ಧ ಪ್ರಾಸಗಳಿಂದ ವ್ಯಾಕರಣ ನಿಯಮಕ್ಕೆ ಭಂಗಬಾರದಂತೆ ರಾಗ, ತಾಳ, ಪ್ರಮೇಯ, ಸಿದ್ಧಾಂತ, ಸಾಹಿತ್ಯ ಮರ್ಯಾದೆಗಳಿಗೆ ಚ್ಯುತಿಯಾಗದಂತೆ ಎಚ್ಚರಿಕೆಯನ್ನು ವಹಿಸಲಾಗದೆ. ಎಲ್ಲದಕ್ಕೂ ಬುಧ್ಯಾಭಿಮಾನಿ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಕೃತಿ ಪತಿಪ್ರದ್ಯುಮ್ನನೇ ನಿಜವಾದ ಈ ಕೃತಿ ಕರ್ತೃವೆಂದು ಭಾವಿಸಿ ಈ ಕೃತಿಯನ್ನು ಆತನ ಅಡಿದಾವರೆಗಳಿಗೆ ಅರ್ಪಿಸಿರುತ್ತೇನೆ. "ಮನೋ ವಿಶುದ್ಧೈಶ್ಚರಿತಾನುವಾದಃ".

# ಗ್ರಂಥ ರಚನಾಧಿಕಾರ ಮತ್ತು ಅರ್ಪಣೆ

ಈ ಗ್ರಂಥವು 'ಕರಿವರದ' ಅಂಕಿತದಿಂದ ರಚಿತವಾಗಿದೆ. 'ಅಂಕಿತಿಲ್ಲದ ಹಾಡು ಎಷ್ಟಿದ್ದರೇನು। ಹೋತಿನಾ ಕೊರಳೊಳಗೆ ಮೊಲೆ ಇದ್ದರೇನು ?'' ಪ್ರಯೋಜನವಿಲ್ಲೆಂದು ಅರ್ಥ. ಅಂಕಿತವಿಲ್ಲದೆ ಮಾನಿತವಾದ ಗ್ರಂಥಗಳೆಂದರೆ ಅಪೌರುಷೇಯವಾದ ವೇದಗಳು ಮಾತ್ರ. ಪುರಾಣಗಳೇ ಪೌರುಷೇಯವಾಗಿರುವಾಗ ಇನ್ನು ಉಳಿದ ವಾಂಙ್ಮಯಗಳು ಪೌರುಷೇಯುಗಳೆಂದು ಹೇಳಬೇಕಾದುದೇನಿದೆ? ಶ್ರೀವ್ಯಾಸಪ್ರಣೀತ, ಪುರಾಣಗಳು ಆದಿಮದಲ್ಲಿ 'ಶ್ರೀವ್ಯಾಸಂ ತತೋಮುದೀರಯೇತ್' ಎಂದು ವ್ಯಾಸಾಂಕಿತದಿಂದ ಯುಕ್ತವಾಗಿವೆ. ಅಲ್ಲಿಂದ ಶ್ರೀಮಧ್ವಾಚಾರ್ಯರು ಸಹ ತಮ್ಮ ಗ್ರಂಥಗಳಲ್ಲಿ 'ಆನಂದ ತೀರ್ಥ' 'ಸುಖತೀರ್ಥ' ಹೀಗೆ ಅಂಕಿತಗಳನ್ನಿಟ್ಟೇ ಗ್ರಂಥಗಳನ್ನು ರಚಿಸಿರುತ್ತಾರೆ. ಇದೇ ಪದ್ಧತಿಯನ್ನು ಬಹುಪರಿ ವಿದ್ವಾಂಸರು (ವಿಮತೀಯರು ಸಹ), ವಿಶೇಷತಃ ಶ್ರೀಹರಿದಾಸರು ಅಂಕಿತಗಳನ್ನು ಇಟ್ಟು ಕೃತಿ ರಚನೆಯನ್ನು ಮಾಡಿರುತ್ತಾರೆ.

ಒಂದು ಗ್ರಂಥವು ಯಾರಿಂದ ರಚಿತವಾಗಿದೆ, ಅವರ ಹಿನ್ನೆಲೆ ಏನು? ಅವರ ಉಪಾಸನಾಕ್ರಮಗಳು ಯಾವುವು. ಅವರ ಸ್ಥಾನ, ಮಾನಗಳು ಏನು? ಎಂಬುದನ್ನು ಅಂಕಿತವು ಧ್ವಜಸ್ಥಾನದಲ್ಲಿದ್ದು ಸೂಚಿಸುತ್ತದೆ. ಅಂಕಿತವು ಗ್ರಂಥ ವಾಚಕರ ಮೇಲೆ ಪ್ರಭಾವವನ್ನು ಬೀರುತ್ತದೆ.

ಅಂಕಿತವು ಯೋಗ್ಯರಾದ ಸೋತ್ತುಮ ಗುರುಗಳಿಂದ ದತ್ತವಾಗಿರಬೇಕು. ಸ್ವೇಚ್ಛೆಯಿಂದ ಪ್ರಯೋಗಿಸಿದ ಅಂಕಿತವು ನಿಷ್ಫಲ.

ಅಂಕಿತವನ್ನು ಪಡೆದ ಮಾತ್ರಕ್ಕೆ ಕೃತಿಗಳನ್ನು ರಚಿಸಲೇ ಬೇಕೆಂಬ ನಿರ್ಬಂಧವೇನೂ ಇರುವುದಿಲ್ಲ. ಉತ್ತಮರ ಕೃತಿಗಳನ್ನು ಅವಲೋಕಿಸುತ್ತ ಆತ್ಮೋದ್ಧಾರವನ್ನು ಮಾಡಿಕೊಳ್ಳಬಹುದು.

ಅಪರೋಕ್ಷ ಜ್ಞಾನಿಗಳು ಮಾಡಿದ ಹಾಡುಗಳನ್ನು ಮಾತ್ರ ಹಾಡಬೇಕು. ಉಳಿದವನ್ನು ಹಾಡಲೂ ಬಾರದು, ಕೇಳಲೂ ಬಾರದು ಎಂಬ ಪದಂತಿ ಇದೆ. ಇದಕ್ಕೆ ಕಾರಣಗಳು ಎರಡು. ಒಂದು, ಅನೇಕ ಅಸ್ಮದಾದಿಗಳು ಕವಿತೆಯನ್ನು ಬರೆಯುವಾಗ ಅವರ ಕೃತಿಗಳಲ್ಲಿ ವ್ಯಾಕರಣ, ನಿಯಮ, ಪ್ರಾಸ, ಸಿದ್ಧಾಂತ, ಪ್ರಮೇಯ, ರಾಗ, ತಾಳ, ವಿಭಕ್ತಿ ಇತ್ಯಾದಿಗಳು ಇಲ್ಲದೆ (ಬರೀ ಕೀರ್ತಿಕಾಮಿತ್ವ ಇರಬಹುದು) ಶುಷ್ಕ ಶಬ್ದಗಳಿಂದ ತನ್ನದೇ ಮಾರ್ಗದಲ್ಲಿ ಸಾಗಿ ಬರೆದ ಗ್ರಂಥಗಳು ಬಹಳಷ್ಟಿವೆ. ಧೀರ್ಘ ಹ್ರಾಸ, ಅಲ್ಪ ಪ್ರಾಣ, ಮಹಾಪ್ರಾಣಗಳ ಪರಿಜ್ಞಾನವೂ ಇಲ್ಲದೆ ವೈದಿಕ ಶಬ್ದಗಳಿಂದ ಕೂಡಿರದ ಕೃಗಳೂ ಬಹಳಷ್ಟು ಇವೆ. ಕೃತಿಗಳು ಹಾಗಿರಬಾರದು ಎಂದೇ ಅಪರೋಕ್ಷ ಜ್ಞಾನಿಗಳ ಹಾಡುಗಳನ್ನು ಹಾಡಬೇಕು ಎನ್ನುತ್ತಾರೆ ಅಷ್ಟೆ.

ವರ್ಣಾಭಿಮಾನಿಗಳು ನೊಂದರೆ ಅನಿಷ್ಟಫಲ ಉಂಟು ಇಂಥವುಗಳನ್ನು ಕಂಡರೆ ವಿದ್ವಾಂಸರು ರೇಗುವುದು ಸಹಜ. ನಮ್ಮವರ ಕೃತಿಗಳು ಅನ್ಯರ ಅಪಹಾಸ್ಯಕ್ಕೆ ಗುರಿಯಾಗಬಾರದೆಂಬ ಕಳಕಳಿಯೇ ಈ ನಿರ್ಧಾರಕ್ಕೆ ಕಾರಣ. ಇನ್ನು ಎರಡನೆಯ ಕಾರಣ ತನ್ನ ಮುಂದೆ ಮತ್ತೊಬ್ಬರು ತಲೆಎತ್ತಬಾರದು ಎಂಬುದೂ ಇರಬಹುದು.

ಇನ್ನು ಅಪರೋಕ್ಷ ಜ್ಞಾನಿಗಳು ಬರೆದವುಗಳನ್ನು ಮಾತ್ರ ಹಾಡಬೇಕು ಎಂದರೆ ಶ್ರೀಪುರಂದರ, ಕನಕ ದಾಸರಾದಿಯಾಗಿ ಸಮಸ್ತ ಹರಿದಾಸರನ್ನು ಅವರವರ ಕಾಲದಲ್ಲಿನ ಯಾವ ವಿದ್ವಾಂಸರೂ ಅವರನ್ನು ಅಪರೋಕ್ಷ ಜ್ಞಾನಿಗಳೆಂದು ಕರೆಯಲಿಲ್ಲ. ಕಾಲವು ಅವರನ್ನು ಅವರ ಕೃತಿಗಳಿಂದ ಗುರುತಿಸುತ್ತದೆ. ರಚಿತವಾದ ಗ್ರಂಥಗಳು ಮಾತ್ರ ನಿಯಮ ಬಾಹಿರವಾಗಿರಬಾರದು. ಇದು ಕಡ್ಡಾಯ. ವರ್ತಮಾನ ಕಾಲದಲ್ಲಿ ನಮ್ಮನ್ನು ಉದ್ಧರಿಸಿದ ಗುರುಸ್ಥಾನಾಪನ್ನರಾದವರನ್ನು ನಾವಲ್ಲದೆ ಮತ್ತಾರು ಕೊಂಡಾಡಬೇಕು? ಕೊಂಡಾಡದೆ ಇರಬಾರದು. ಯೋಗ್ಯತೆಯನ್ನು ಗಳಿಸಿಕೊಂಡು ಕೃತಿ ರಚನೆಯನ್ನು ಮಾಡಬೇಕು. ಹಾಗೆ ಮಾಡಿದರೆ, ಮಾಡಿದುದನ್ನು ಹಾಡಿದರೆ ತಪ್ಪಿಲ್ಲ. ಪ್ರಾಸಾದಿಕ ವಾಣಿಗಳಿಂದ ಗ್ರಂಥಗಳನ್ನು ರಚಿಸಿದರೆ ಶಬ್ದ ಭಂಡಾರವು ಅಭಿವೃದ್ಧಿಯಾಗುತ್ತದೆ. ಗ್ರಂಥರಚನೆ ಕಾರ್ಯವು ಬ್ರಾಹ್ಮಣ ಕುಲಕ್ಕೆ ಭೂಷಣವೇ ಆದುದು.

"ಹರಿಯೆ ಪಂಚಾಶದ್ವರ್ಣಸು । ಸ್ವರಉದಾತ್ತಾನು ದಾತ್ತ ಪ್ರಚಯ ।
ಸ್ವರಿತ ಸಂಧಿ ವಿಸರ್ಗಬಂದುಗಳೊಗೆ ತದ್ವಾಚ್ಯ ॥
ಇರುವ ತತ್ತನ್ನಾಮ ರೂಪಗ ।ಳರಿತು ಪಾಸನೆ ಗೈವರಿಳೆಯೊಳು ।
ಸುರರೆ ಸರಿ ನರರಲ್ಲ ಅವರಾಡುವುದೆ ವೇದಾರ್ಥ ॥ ೯-೧ ॥" ಹ.ಕ.ಸಾ ॥

ಈ ಬಗ್ಗೆ ಶ್ರೀವಿಜಯದಾಸರು ವಿಷವಾಕ್ಯದೋಷ ನಿವಾರಣಾ ಸುಳಾದಿಯಲ್ಲಿ ನಿಷ್ಕಾಮನಾಗಿ ಭಕ್ತಿಯಿಂದ ಎಂದರೆ ವಾಙ್ಮಯ ನಿಯಮಗಳಿಗೆ ತಲೆ ಬಾಗಿ ಕೃತಿಗಳನ್ನು ರಚಿಸಿದರೆ ದೋಷವಿಲ್ಲವೆಂದು ತಿಳಿಸಿರುತ್ತಾರೆ.

ಇನ್ನು ಸುಜನ ಸಂದೋಹಕ್ಕೆ ತಲೆ ಬಾಗಿ ಅವರ ಅನುಗ್ರಹಾಕಾಂಕ್ಷಿಯಾಗಿ ಈ ಕೃತಿಯೊಂದನ್ನು ರಚಿಸಿ ಗ್ರಂಥ ಮುಕ್ತಾಯವನ್ನು ಮಾಡಿರುತ್ತೇನೆ.

ರಾಗ ಶಂಕರಾಭರಣ - ಆದಿತಾಳ
ಹರಿ ನಾಮವನು ಬರೆದರೇನಂತೆ । ಬರೆದರೆ ಆಗುವ ತಪ್ಪೇನು ॥ ಪ ॥
ಹಿರಿಯರಿಗೊಂದಿಸಿ । ಕೃತಿ ಚೋರನಾಗದೆ
ಹರುಷದಿ ಮನದಲಿ ನಲಿನಲಿದಾಡುತ ॥ ಅ.ಪ ॥
ಯತಿಗಣ ಪ್ರಾಸಸು ತತ್ವ ವಿಭಕ್ತಿಯ । ಗತಿ ತಪ್ಪದೆ ತಾಳ ಪಂಕ್ತಿಗಳಾ ॥
ಅತಿಶಯದಲಿ ವಾಕ್ಪತಿಗಳ ನಿಲಿಸುತ । ಶೃತಿ ಪ್ರತಿಪಾದ್ಯನ ಸ್ಮೃತಿಯೊಳಗಿಟ್ಟು ॥ ೧ ॥
ಭಾರತಿದೇವಿಯ ಬುದ್ಧಿಲಿನೆನೆದು । ಶಾರದೆ ನುಡಿಗಳಲಿಹಳೆಂದು ॥
ಹೇರಂಬನು ರವಮಾನಿತನೆಂದು । ನಾರದ ತುಂಬುರ ವಂದಿತನಾದ ॥ ೨ ॥
ಬರೆದನು ದಕ್ಷನು ಒರೆದನು. ಅಗ್ನಿಯು । ಅರವಿಂದ ಸಖತಾ ನೋಡಿದನು ॥
ಸುರಪತಿ ಷಣ್ಮುಖ ನವರಸ ಭಾಂಡವ । ಸುರಿವರು ಶ್ರೀಹರಿ ಚರಣಕೆ ಎಂದು ॥ ೩ ॥

ಬರೆದವ ನಾನಲ್ಲ ಬರೆಸಿದ ಹರಿ ಎನೆ । ಶಿರಿತನ ಬರುವುದು ವಾಙ್ಮಯದಿ ॥
ಗರನುಡಿ ದೋಷವು ಬರದೆಂದು ಚಿಪ್ಪ । ಗಿರಿಯಲಿ ಪೇಳ್ದರು ದಾಸರ ದಾಸರು ॥ ೪ ॥
ನರ ನಾರಿಯರನು ವರಣಿಸದೇಕೋ । ತ್ತರ ಪಂಚಾಶದ್ವರ್ಣಗಳಾ ॥
ಕರಿವರದನ ಪರ ವಹಿಸುತ ಲೌಕಿಕ । ಹರಟೆಂಗಳಿಗಾಸ್ಪದವನುನೀಡದೆ ॥ ೫ ॥ ಶ್ರೀಃ ॥

"ಪೂರ್ಣಶಕ್ತಿ ಚಿದಾನಂದ ಶ್ರೀತೇಜಃ ಸ್ಪಷ್ಟಮೂರ್ತಯೇ ॥
ಮಮಾಭ್ಯದಿಕ ಮಿತ್ರಾಯ । ನಮೋ ನಾರಾಯಣಾಯತೇ ॥
ಸಮಸ್ತ ಗುಣ ಪೂರ್ಣಾಯ । ದೋಷ ದೂರಾಯ ವಿಷ್ಣವೇ ॥
ನಮಃ ಶ್ರೀಪ್ರಾಣನಾಥಾಯ । ಭಕ್ತಾಭೀಷ್ಟ ಪ್ರದಾಯಿನೇ ॥

ಶ್ರೀಗಿರಿಪುರನಿವಾಸಿ ಶ್ರೀಮಾರುತೀವಲ್ಲಭ ಪಾದ ಪದ್ಮಾರಾಧಕ ಜೋಡೀದಾರಾನ್ವಯ ಅಸ್ಮನ್ಮಾತಾ ಕಮಲಾಬಾಯಿ ಪಿತಾ ರಾಘವೇಂದ್ರಾಚಾರ್ಯಾಂತರ್ಗತ ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಕರಿಗಿರಿ ಲಕ್ಷ್ಮೀನೃಸಿಂಹ ಪ್ರೀಯತಾಂ ಪ್ರೀತೋವರದೋಭವತು.

ಶಾಂಶಕ ೧೯೨೯ ಸರ್ವಜಿತು ನಾಮಸಂ ॥ ಫಾಲ್ಗುಣ ಬ ॥ ದ್ವಾದಶಿ ಗುರುವಾರ, ಶತಭಿಷನಕ್ಷತ್ರ (ಕ್ರಿ.ಶ ೩-೪-೨೦೦೮) ಇಂದು ಗ್ರಂಥ ಸಮಾಪ್ತಿಯಾಗಿದೆ (ವರ್ಧಂತಿ ವಿಶೇಷ)

"ಶ್ರೀಕೃಷ್ಣಾರ್ಪಣಮಸ್ತು"

## 151. ರಾಗ ಮೋಹನ - ಅಟ್ಟತಾಳ

ಸುಕೃತೀಂದ್ರರನು ಭಜಿಸೋ । ಭಕುತಿಯಿಂದ ।
ಸುಕೃತೀಂದ್ರರನು ಭಜಿಸೋ ॥ ಪ॥

ಸುಕೃತೀಂದ್ರರನು ಭಜಿಸೀ । ಸುಕೃತಾರ್ಥವನು ಪೊಂದು ।
ಅಕ್ರೂರಕ್ತ ವರದನ । ಭಕ್ತ ಶಿರೋಮಣಿ ಎಂದು ॥ಅ.ಪ.॥

ಷಾಷ್ಟೀಕ ಸದ್ವಂಶದೀ । ಬೀಗಮುದ್ರೆ ।
ಶ್ರೇಷ್ಠ ಗೌತುಮ ಗೋತ್ರದೀ ॥
ಧಿಟ್ಟ ಶ್ರೀ ರಾಘವೇಂದ್ರ । ಜೇಷ್ಠಕುವರರೆನಿಸಿ ।
ಅಷ್ಟ ಮದಾರಭ್ಯ । ನಿಷ್ಠೆಯ ಬಿಡದೆ ॥
ಎಷ್ಟು ಪೇಳಲಿ ಸರ್ವ ಮೂಲಕೆ ।
ಇಟ್ಟರೈ ಮನವಚನ ಕಾಯವ ।
ಗಟ್ಟಿಗರ ಮಧ್ಯದಲಿ ಕುಳಿತು ।
ಗುಟ್ಟುಗಳ ಬಹು ರಟ್ಟು ಮಾಡಿದ ॥ 1 ॥

ವೇಣುಗೋಪಾಲರೆಂಬೋ । ಸನ್ನಾಮದಿ ।
ಕ್ಷೋಣೆಯೊಳಗೆ ಮೆರೆದು ॥
ಗಿಣಿಗಿರಿಯಲಿ ವಿದ್ವ । ನ್ಮಣಿಗಳು ಭರದಿಂದ ।
ಸೆಣೆಸಲು ಬರಲವರ । ಮಣಿಸಿದ ಮಹಿಮ ॥
ಜಾಣತನದಲಿ ಸುಪ್ರಜ್ಞೇಂದ್ರರ ।
ಪಾಣಿ ಸುಮ ಸಂಜಾತರೆನಿಸುತ ।
ಪಾಣಿಯಲಿ ಪುಸ್ತಕವ ಪಿಡಿಯದೆ ।
ವಾಣಿ ಮಾತ್ರದಿ ಗ್ರಂಥ ಪೇಳಿದ ॥2॥

ಆಸೇತು ಹಿಮ ಪರ್ವತಾ । ಪರಿಯಂತವಾಗಿ ।
ತಾ ಸಂಚಾರವನು ಮಾಡುತಾ ॥
ಕಾಶಿ ಕೋಸಲ ಕಂಚಿ । ದೇಶ ಪುರಿಜಗನ್ನಾಥ ।
ಶ್ರೀ ಶೈಲ ಶ್ರೀ ಮುಷ್ಣ । ವಾಸಿ ವಾದದಲೀ ॥
ಬೇಸರಿಲ್ಲದೆ ಮಧ್ವರಾಯರ ।
ಭಾಷ್ಯಟೀಕಾದಿಗಳ ತೋರಿಸಿ ।
ಶ್ರೀಶನೇ ಜಗದೀಶ ಜೀವರು ।
ದಾಸರೆಂಬುದ ಸಾರಿದಂಥಾ ॥ 3॥

ಕುಂಭ ಕೋಣ ಕ್ಷೇತ್ರಕೇ । ಬಿಜಯಗೈದು ।
ತುಂಬಿದ ಸಭೆಯೊಳಗೇ ॥
ಸಂಭ್ರಮದಲಿ ವಾದಾ । ರಂಭವ ಮಾಡಲು ।
ಶಂಭೂ ತಲೆ ತೂಗಿದ । ನೆಂಬುದಚ್ಚರಿಯೇ ॥
ತಾಂಬ್ರವರ್ಣಾವರಣ ದಂಡ ।
ಅಂಬುಧರ ಶ್ರೀತುಲಶಿ ಗಂಧ ।
ದುಂಬಿ ಚಿನ್ಹೆಗಳಿಂದ ಶೋಭಿಪ ।
ಕುಂಭಿಣೀ ಸುರ ಪೂಜ್ಯರಾದ ॥ 4 ॥

ಗುರುರಾಯರನುಗ್ರಹದೀ । ಚತುರ್ಯುಗ ।
ಪರಮೇಷ್ಠಿ ನುತನರ್ಚಿಸೀ ॥
ಪರಿ ಪರಿ ಯತಿಗಳ । ಸರಸ ಸಲ್ಲಾಪದಿ ।
ಕರೆದು ಸುಶೀಲೇಂದ್ರರ । ಶಿರದಿ ಕರವನಿಟ್ಟು ॥
ಗರಳಗೆನೊರಳನ ಪುರದಿ ಪರಿಧವಿ ।
ವರುಷ ಆಶ್ವೀಜ ಶುದ್ಧ ದಶಮಿಯ- ।
ಲಿರಿಸಿ ಒಂದಂಶವನು ಜಗದೊಳು ।
ಕರಿವರದ ಸಂಪ್ರಿಯನು ಸಾರಿದ ॥ ಶ್ರೀಃ ॥ 5 ॥

ಕಠಿಣ ಶಬ್ದಾರ್ಥ : ಗಿಣಿಗಿರಿ - ತೋತಾದ್ರಿ, ದುಂಬಿಚಿನ್ಹೆ - ಅಂಗಾರ, ಅಕ್ಷತೆ.

# ಶ್ರೀ ಶ್ರೀ ಸುಕೃತೀಂದ್ರ ತೀರ್ಥ ಶ್ರೀ ಪಾದಂಗಳವರ ಸ್ತೋತ್ರ ಸುಳಾದಿ

## ಧೃವತಾಳ :

ಸ್ಮರಣೆ ಮಾಡುವೆ ಸತತ । ಸುಕೃತೀಂದ್ರ ತೀರ್ಥರ ।
ದರುಶನ ಮಾತ್ರದಿ । ದುರಿತ ಹರವೋ ॥
ಸುರನದಿ ಮಿಕ್ಕಾದ । ಸರೋವರ ಸ್ನಾನಕ್ಕೆ ।
ಸರಿಮಿಗಿಲು ಇದರಲಿ ಸಂದೇಹವಿಲ್ಲಾ ॥
ಸುರರೇ ಸರಿ ಸುಜನರ । ಪೊರೆಯಬೇಕೆನುತಲಿ ।
ಧರೆಯೊಳಗವತರಿಸಿ । ಮಿರುಗುತಿಹರೋ ॥
ಎರಗು ಎರಗು ಮತ್ತೆ । ಎರಗಿದವನೆ ಧನ್ಯ ।
ಪುರುಷಾರ್ಥ ಕರಗತ । ವೆರಗೀದವಗೆ ॥
ದುರಳ ಕಲಿ ಬಾಧೆಯು । ದೂರಾಗುವದು ಸತ್ಯ ।
ಹರುಷವಿಮ್ಮಡಿಪುದು । ಶರಣಾಗತಗೇ ॥
ಚರಣಾಗ್ರ ಮೊದಲಾಗಿ ಶಿರಪರಿಯಂತ ಸ್ಮರಿಸು ।
[1] ಅರುಣಾವರಣ ದಂಡ । ಭೂರಿ [2]ಕಲಶಾ ॥
[3] ಎರಡಾರು ಪುಂಡ್ರ ಮುದ್ರೆ । ಶಿರಿತುಲಶಿ ಮಣಿಮಾಲೆ ।
[4] ಕರಿಬೊಟ್ಟು ಗೆರೆಸ್ಮಿತ । ಸ್ಮರಿಸುವದನಾ ॥
ಹರಿಯನು ಕಂಡಂಥ । ನರಿಯು ಓಡುವಂತೆ ।
ದರಿದ್ರ ದುಮ್ಮಾನಗಳು । ಸರಿಯುವವೋ ॥
ಮರುತಾಗಮ ಸಿಂಧು [5]ಶ । ಫರ ಶಫರ ಕೇತು ।
[7]ಹರ ವೈರಾಗ್ಯ ನಿಧಿ । ಕರುಣಾ ಜಲಧೀ ॥
[8]ಅರಿಗಳ [9]ಅರಿ [10]ಅರಿ । [11]ದರ ಧರ **ಕರಿವರದ** ।
ಕರುಣಾದಿಂದಲಿ ಇವರ ಕರಪಿಡಿದಾ ॥ 1 ॥

## ಮಟ್ಟತಾಳ :

[12]ಪೌಷ್ಠಿಕರೊಳಗತಿ । ನಿಷ್ಠರೆನಿಸುತಿಹ ।
[13]ಪೆಟ್ಟಿಗೆ ಭದ್ರ ವೆಂ । ಕಟ್ಟ ರಾಘವ ಸೂರಿ ।
ಜ್ಯೇಷ್ಠ ಕುವರ ವೇಣು । ಕೊಟ್ಟೆಗೆ ಪಾಲನೆ ।
ಕಷ್ಟವೆನ್ನದೆ ಗ್ರಂಥ । ಕಟ್ಟುಗಳನೆ ಬಿಚ್ಚಿ ।
ಇಟ್ಟುಕೊಂಡು ಮುಂದೆ । ದೃಷ್ಟಿ ಚಲಿಸದಂತೆ ।
[15]ಅಷ್ಟ ದಶೋಪ ಸೂತ್ರ । ಷಟ್ಟಿ ಮಾಡಿಕೊಂಡು ।
ಶ್ರೇಷ್ಠರೊಳಗತಿ । ಶ್ರೇಷ್ಠರನಿಸೆಗುರು ।
ತುಷ್ಟರಾಗಿ ತುರಿಯ । ಪಟ್ಟದಲಿಟ್ಟರು ।
ಕೊಟ್ಟರು ಸಂಸ್ಥಾನ । ದಿಟ್ಟ ಸುಕೃ-ತೀಂದ್ರರೆಂದು ।
ಇಷ್ಟ ಮೂರುತಿ ನಮ್ಮ **ಕರಿವರದ**ನೂ ದಯಾ ।
ದೃಷ್ಠ ಇವರೊಳಗಿಟ್ಟ । ನಲಿದು ನಲಿದಾಡು ತಾ ॥ 2 ॥

## ತ್ರಿಪುಟ ತಾಳ :

ತುರಿಯಾ ಶ್ರಮವನುಕೊಂಡ । ಗುರು ಸುಕೃ-ತೀಂದ್ರರು ।
ಹರಿ ಸರ್ವೋ‌ತ್ತುಮನೆಂದು । ಸಾರಿದರೂ ॥
ಅರುಣೋದಯಕೆ ಪ್ರಣವ । ಮಂತ್ರವ ಜಪಿಸುತ ।
ಪರಮಾತ್ಮನನು ಒಲಿಸಿ ನಿಲಿಸಿದರೂ ॥
ಹರಿಮಯ ಮಾಣಿಕ್ಯ । ವಜ್ರ ಮಂಟಪದಲ್ಲಿ ।
[17]ಹಿರಣ್ಯ ಗರ್ಭಾರ್ಚಿತನ । ಮೆರೆಸಿದರೂ ॥
ಪರಮಾನ್ನ ಪಂಚ ಭಕ್ಷ್ಯ । ಭೂರಿ ದಕ್ಷಿಣೆ ಸಹಿತ ।
ಕರೆದು ಕೊಟ್ಟರು ಜರಿ ಶಾಲುಗಳನೂ ॥
ಕರಿ ತುರಗ ಬೆಳ್ಗೊಡೆ । ಛತ್ರ ಚಾಮರ ಧ್ವಜ ।
ಬಿರುದು ಬಾವಲಿ ಭಾರೀ । ಭೇರಿ ಸಹಿತಾ ॥
ಧರೆಯೊಳು ಚರಿಸುತ್ತ । ಧರ್ಮದಿಗ್ವಿ ಜಯದಿ ।
ಮರುತಾಗಮಗಳ । ನರುಹಿದರೂ ॥
[18]ಹರವಿಕೊಣದಲಂದು । ನೆರೆದ ವಿದ್ವಾಂಸರಿಗೆ ।
ಬರಿ ಬಾಯಿಂದಲಿ ಸರ್ವ । ಗ್ರಂಥ ಪೇಳೀ ॥

ಬೆರಗುಗೊಳಿಸಿದರೆಂಬು । ದರಿಯದ ಮಾತಲ್ಲ ।
ಗುರುರಾಘವೇಂದ್ರರ । ಕರುಣೆ ಇರಲೂ ॥
ಭರತ ಖಂಡದಿ ಪುಣ್ಯ । ಕ್ಷೇತ್ರಗಳನು ಮೆಟ್ಟಿ ।
ದರುಶನಗೈದರು । ಭರದಿ ಮಿಂದೂ ॥
ಬಿರುಗಾಳಿ ಬೀಸಲು । ತರಗೆಲೆ ಪೋದಂತೆ ।
ದುರುವಾದಗಳನೆಲ್ಲ । ತರಿದು ಬಿಸುಟೂ ॥
ತರತಮ್ಯ ಪಂಚಭೇದ । [19]ಇರುವದು ಸತ್ಯವೆಂದು ।
ಧರೆಯೊಳು ಸ್ಥಾಪಿಸಿ । ಮೆರೆದರಯ್ಯಾ ॥
ಗುರುಗಳಂತರ್ಯಾಮಿ । **ಕರಿವರದ** ನಡಿಗಳ ।
ಭರದಿ ಪೂಜಿಪ ಸುಪ್ರ । ಜ್ಞೇಂದ್ರ ಶಿಷ್ಯರಿಗೆ ನಮಿಪೆ ॥ 3 ॥

**ಅಟ್ಟತಾಳ :**

ಹಂಸ ನಾಮಕ ಹರಿಯ ವಂಶದಿ ಬರುತಷ್ಟ ।
ವಿಂಶತಿ ಮಾಧ್ವ ಸು । ಸಂಸ್ಥಾನಾಧಿಪರ ಪ್ರ ।
ಶಂಶೆಯ ಪಡೆಯುತ । ಸಂಸ್ನೇಹಾದಿಂದ ವಿ ।
ದ್ವಾಂಸರ ಮಧ್ಯ [20]ಹೀಮಾಂಶು ವಂದದಿ ಬೆಳಗಿ ।
ಸಂಶಯ ಭರಿತೇಕ । ವಿಂಶತಿ ವಾದಗಳ ।
ಧ್ವಂಸವ ಮಾಡಿ[21]ನ । ರಾಂಸದಿ ಚರಿಸುತ ।
ಸಂಶೋಧ ಮಾಡಿ ಮೀಮಾಂಸ ಶಾಸ್ತ್ರವ ತೋರಿ ।
ಕಂಸಾರಿ ಪರ ಮರು । ದಂಶರೆ ಗುರುಪಾದ ।
ಪಾಂಸುವೆ ನವ ನಾವೆ । ಸಂಸಾರಾಬ್ದಿಗೆ ಎಂದು ।
ಸಂಪ್ಥಾಪಿಸಲು [22]ಪ್ರಹ್ಲ । ದಾಂಶರು ಮೆಚ್ಚಿದರು ।
[23]ಹಂಸಗಮನ ಕುಲ । ಸಂಸೇವ್ಯ ಶ್ರೀಕರಿವರದನ ।
ಸಂಸ್ಕೃತಿಯಿಂದಲಿ । [24]ಸಂಸ್ಕೃತಿಯ ನಳಿದಾ ॥ 4 ॥

**ಆದಿತಾಳ :**

ಗುರುಪಾದವನು ಸ್ಮರಿಸು । ಗುರುವಿಗೆ ನಮಸ್ಕರಿಸು ।
ಹರಿವಾರ್ತೆಯನು ಮೆರೆಸು । ದುರುವಾರ್ತೆಯನು ಉರಿಸು ।
ಹರಿಯಲ್ಲಿ ಮನವಿರಿಸು । ದುರುಬುದ್ಧಿಯನ್ನು ಸರಿಸು ।
ಸರಿದುಪೋದುದ ಮರೆಸು । ಧರುಮದಿ ಸಂಚರಿಸು ।
ಮರುತನ ಅನುಸರಿಸು । ಹರುಷಾಶ್ರುಗಳ ಸುರಿಸು ।
[25]ಎರಡಾರು [26]ಮುದ್ರೆ ಧರಿಸು । ಅರಿವರ್ಗವನು ಮುರಿಸು ।
ಪರಿಧಾವಿ ವತ್ಸರದಿ । ಶರತ್ಕಾಲಾ ಶ್ವಿಜ ಸಿತ ।
[27]ಹರಿದಿನ ಪೂರ್ವದಲ್ಲಿ । ಗುರು ಸುಶೀಲೇಂದ್ರರ ।
ಶಿರದಿ ಹಸ್ತವನಿಟ್ಟು । [28]ಗರಳ ಭುಕ್ತನ ಪುರದಿ ।
ಸ್ಥಿರವಾಗಿ ನಿಂತ ಶ್ರೀ । ಗುರು ಸುಕೃತೀಂದ್ರರೊಲಿಯೆ ।
ಸರುವವು ಕರಗತ । ದುರಿತಾಳಿಗಳ ಹತ ।
ನರಜನ್ಮ ಸಾರ್ಥಕ । ನರಜನ್ಮ ಸಾರ್ಥಕ ।
ಕರುಣಾವಾರಿಧಿ ಶಿರಿ । ಕರಿವರದ ನಿವರ ।
ಕರವಶನಾಗಿ ಸುರುವಾ । ಭೀಷ್ಟಗಳ ಗರವಾ ॥ 5 ॥

**ಜತ್ತೆ :**

ಗುರು ಸುಶೀಲೇಂದ್ರರ । ಕರ ಕಮಲ ಪೂಜಿತ ।
ಸುಕೃತೀಂದ್ರರ ಸ್ಮರಿಸೆ । **ಕರಿವರದ**ನೊಲಿವಾ ॥ 6 ॥ ಶ್ರೀಃ ॥

**ಕಠಿಣ ಶಬ್ದಾರ್ಥ** : 1. ಕಾಷಾಯ ವಸನ, 3. ದ್ವಾದಶ ನಾಮ, 2. ಕಮಂಡಲು, 4. ಅಂಗಾರ-ಅಕ್ಷತೆ, 5. ಮೀನ, 6. ಮನ್ಮಥನಿಗೆ ಶತ್ರು-ಹರ (ಜಿತೇಂದ್ರಿಯರೆಂದರ್ಥ), 7. ಶಂಕರ, 8. ಕಾಮಕ್ರೋಧಾದಿ ಅರಿಷಡ್ವರ್ಗಗಳಿಗೆ, 9. ಶತ್ರು (ಜೈಸಿದವರು -ಶಾಂತರು ), 10. ಚಕ್ರ, 11. ಶಂಖ, 12. ಅರವತ್ತೊಕ್ಕಲ ಮನೆತನ, 13. ಬೀಗಮುದ್ರೆಯವರು, 14. ವೇಣುಗೋಪಾಲಾಚಾರ್ಯರು, 15. ಗೀತ, ಉಪನಿಷತ್ತು ಸೂತ್ರಗಳೆಂಬ ಪ್ರಸ್ಥಾನ ತ್ರಯಗಳನ್ನು 16. ಬಾಯಿಪಾಠಮಾಡಿ, 17. ಬ್ರಹ್ಮಕರಾರ್ಚಿತ, 18. ಕುಂಭಕೋಣ, 19. ಜಗತ್ತು 20. ಚಂದ್ರ, 21. ಪಲ್ಲಕ್ಕಿ, 22. ಶ್ರೀ ರಾಘವೇಂದ್ರರು, 23. ಬ್ರಾಹ್ಮಣರು, 24. ಜನನ ಮರಣಗಳ ಪ್ರವಾಹ ರೂಪವಾದ ಸಂಸಾರ, 25. ದ್ವಾದಶನಾಮ, 26. ಪಂಚಮುದ್ರೆ, 27. ದಶಮಿ, 28. ನಂಜನಗೂಡು.

# ಗ್ರಂಥಕರ್ತರು



## ವಿದ್ವಾನ್ ಶ್ರೀ ಬಿ. ಸತ್ಯನಾರಾಯಣಾಚಾರ್ ದಂಪತಿಗಳು

ಶ್ರೀಯುತ ಬಿ. ಸತ್ಯನಾರಾಯಣಾಚಾರ್ಯರು ನಾಡಿನ ಶ್ರೇಷ್ಠ ವಿದ್ವಾಂಸರುಗಳಲ್ಲಿ ಒಬ್ಬರು. ವ್ಯಾಸ ಸಾಹಿತ್ಯ, ದಾಸ ಸಾಹಿತ್ಯಗಳಲ್ಲಿ ವಿಶೇಷ ಪರಿಣಿತಿಯನ್ನು ಪಡೆದವರು. ಶ್ರೀಯುತರಿಗೆ ಅನೇಕ ಸಂಘ, ಸಂಸ್ಥೆಗಳು ಶ್ರೀಹರಿದಾಸ ಸಾಹಿತ್ಯ ಪ್ರವಚನ ಚತುರ, ಶ್ರೀಹರಿದಾಸ ಶಿರೋಮಣಿ, ಶ್ರೀವ್ಯಾಸದಾಸ ಸಾಹಿತ್ಯ ಭಾಸ್ಕರ ಕವಿ ಕುಲಭೂಷಣ ಮುಂತಾದ ಬಿರುದುಗಳನ್ನಿತ್ತು ಗೌರವಿಸಿದ್ದಾರೆ.

ಇವರು ವ್ಯಾಸ-ದಾಸ ಸಾಹಿತ್ಯದ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಕರಿವರದ ಎಂಬ ಅಂಕಿತದಿಂದ ಅನೇಕ ಸುಳಾದಿ, ಕೀರ್ತನೆಗಳನ್ನು ರಚಿಸಿ ಖ್ಯಾತರಾಗಿದ್ದಾರೆ. ಪ್ರಕೃತ ಶ್ರೀಯುತರು ರಚಿಸಿರುವ ಭಾರತೀಶ ವಿಲಾಸವೆಂಬ ಐವತ್ತೊಂದು ನುಡಿಗಳಿಂದ ಯುಕ್ತವಾದ ಅಕ್ಷರಮಾಲಿಕಾ ಸ್ತೋತ್ರ ಹಾಗೂ ಅದರ ವ್ಯಾಖ್ಯಾನವನ್ನೊಳಗೊಂಡ ಈ ಗ್ರಂಥವು ನಮ್ಮ ಸಂಸ್ಥೆಯವತಿಯಿಂದ ಪ್ರಕಾಶನಗೊಳ್ಳುತ್ತಿದೆ. ಆಚಾರ್ಯರ ಲೇಖನಿಯಿಂದ ಇನ್ನೂ ಅನೇಕ ಕೃತಿಗಳು ಹೊರಬರಲೆಂಬ ಸದಾಶಯವನ್ನು ವ್ಯಕ್ತಪಡಿಸುತ್ತೇವೆ.

– ಪ್ರಕಾಶಕರು

Published by :
Raja. G. Sudheendracharya
Sanchalak :
SRI SUYAMI RAGHAVENDRA RESEARCH CENTRE
Nanjangud - Bangalore. Ph: 9945348633